# ಪಂಚಗಣಾಧೀಶ್ವರರು : ಸಾಂಸ್ಕೃತಿಕ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕ
ಸತೀಶ್ ಪಾಟೀಲ್

ಮಾರ್ಗದರ್ಶಕರು
ಡಾ. ರಾ. ವೆಂಕಟೇಶ ಇಂದ್ವಾಡಿ
ಅಧ್ಯಾಪಕರು





ಕನ್ನಡ ಸಾಹಿತ್ಯಾಧ್ಯಯನ ವಿಭಾಗ
ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಏಪ್ರಿಲ್ ೨೦೦೪

## ಮಾರ್ಗದರ್ಶಕರ ಪ್ರಮಾಣ ಪತ್ರ

ಸತೀಶ ಪಾಟೀಲ್ ಅವರು ಪಂಚಗಣಾಧೀಶ್ವರರು : ಸಾಂಸ್ಕೃತಿಕ ಅಧ್ಯಯನ ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ಸಾಹಿತ್ಯಾಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ವೆಂಕಟೇಶ್

**ಡಾ. ರಾ.ವೆಂಕಟೇಶ್ ಇಂದ್ವಾಡಿ**
ಮಾರ್ಗದರ್ಶಕರು ಮತ್ತು ಅಧ್ಯಾಪಕರು
**ಕನ್ನಡ ಸಾಹಿತ್ಯಾಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ

**ದಿನಾಂಕ :** 14/06/2004
**ಸ್ಥಳ :** ವಿದ್ಯಾರಣ್ಯ

# ಸಂಶೋಧಕರ ಪ್ರಮಾಣ ಪತ್ರ

**ಪಂಚಗಣಾಧೀಶ್ವರರು : ಸಾಂಸ್ಕೃತಿಕ** ಅಧ್ಯಯನ ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪಿಎಚ್.ಡಿ.ಪದವಿಗಾಗಿ ಡಾ.ರಾ.ವೆಂಕಟೇಶ್ ಇಂದ್ವಾಡಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ಸಾಹಿತ್ಯಾಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ದಿನಾಂಕ** : 14/06/2004
**ಸ್ಥಳ** : ವಿದ್ಯಾರಣ್ಯ .

**ಸತೀಶ್ ಪಾಟೀಲ್**
ಸಂಶೋಧಕ
ಕನ್ನಡ ಸಾಹಿತ್ಯಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕತ್ತಲ ಹಾದಿಗೆ ದೀಪ ಹಚ್ಚಿದವರು

ನಾನು ಚಿಕ್ಕವನಾಗಿದ್ದಿನಿಂದಲೂ ನಮ್ಮೂರ ದೇವರು ಕೊಟ್ಟೂರ ಗುರುಬಸವನನ್ನು ಪೂಜಿಸುತ್ತಾ-ಬೈಯುತ್ತಾ ಬೆಳೆದವನು. ಹೀಗಾಗಿ ದೇವರನ್ನೆಂದೂ ಮರೆತಿರಲಿಲ್ಲ. ಪಿಎಚ್.ಡಿ. ಅಧ್ಯಯನಕ್ಕೆಂದು ವಿಷಯವನ್ನು ಆಯ್ಕೆ ಮಾಡಿಕೊಳ್ಳುವಾಗ ನಮ್ಮೂರ ದೇವರನ್ನೊಳಗೊಂಡಂತೆ ಮಧ್ಯಕರ್ನಾಟಕದಲ್ಲಿ ಜನಸಮೂದಾಯಗಳ ಆರಾಧ ದೈವಗಳ ಕುರಿತು ಅಧ್ಯಯನ ಮಾಡಬೇಕೆನಿಸಿತು. 'ಪಂಚಗಣಾಧೀಶ್ವರರು: ಸಾಂಸ್ಕೃತಿಕ ಅಧ್ಯಯನ' ಎನ್ನುವ ವಿಷಯದ ಕುರಿತು ನೋಂದಣಿ ಮಾಡಿಸಿದೆನು. ಆಗ ಅದೊಂದು ಕತ್ತಲ ಹಾದಿಯಾಗಿತ್ತು. ಅಧ್ಯಯನಕ್ಕೆ ತೊಡಗಿಸಿಕೊಂಡಂತೆಲ್ಲ ಸಲಹೆ, ಸೂಚನೆ, ಸಹಕಾರದ ಮೂಲಕ ಕತ್ತಲ ಹಾದಿಗೆ ದೀಪ ಹಚ್ಚಿದವರು ಬಹಳಷ್ಟು ಮಂದಿ. ಅವರನ್ನೆಲ್ಲಾ ಕೃತಜ್ಞತೆಯಿಂದ ನೆನೆಯುತ್ತೇನೆ.

ಮೊದಲಿಗೆ ಪಿಎಚ್.ಡಿ. ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಅಂದಿನ ಕುಲಪತಿಗಳಾದ ಡಾ.ಎಂ.ಎಂ.ಕಲಬುರ್ಗಿಯವರಿಗೆ, ಕುಲಸಚಿವರಾದ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರಿಗೆ ನಂತರ ಬಂದ ಕುಲಪತಿಗಳಾದ ಡಾ. ಎಚ್.ಜೆ.ಲಕ್ಕಪ್ಪಗೌಡ ಅವರಿಗೆ, ಕುಲಸಚಿವರಾದ ಡಾ.ಕೆ.ವಿ.ನಾರಾಯಣ ಅವರಿಗೆ, ಅಧ್ಯಯನಾಂಗದ ನಿರ್ದೇಶಕರಾದ ಡಾ.ಕರೀಗೌಡ ಬೀಚನಹಳ್ಳಿ ಅವರಿಗೆ ಕೃತಜ್ಞತೆಗಳು.

ನನ್ನ ಪ್ರಬಂಧದ ಮಾರ್ಗದರ್ಶಕರಾಗಿ ಸಲಹೆ ಸೂಚನೆಗಳನ್ನು ನೀಡಿ ನನ್ನ ಅರಿವನ್ನು ವಿಸ್ತರಿಸಿದ ಡಾ.ರಾ.ವೆಂಕಟೇಶ್ ಇಂದ್ವಾಡಿಯವರಿಗೆ, ವಿಭಾಗದ ಮುಖ್ಯಸ್ಥರಾದ ಡಾ.ಅಮರೇಶ ನುಗಡೋಣಿ, ಡಾ.ರಮಹತ್ ತರೀಕೆರೆ, ಡಾ.ಬಿ.ಎಂ.ಪುಟ್ಟಯ್ಯ, ಡಾ.ಶಿವಾನಂದ ಎಸ್.ವಿರಕ್ತಮಠ, ನಮ್ಮೂರಿನ ಕತೆಗಳ ಕಣಜ ಕುಂ.ವೀ.ಯವರಿಗೆ,

ಅಧ್ಯಯನಕ್ಕೆ ಸಹಾಯ ಮಾಡಿದ ಗದುಗಿನ ತೋಂಟದಾರ್ಯಮಠದ ಡಾ.ಸಿದ್ಧಲಿಂಗ ಮಹಾಸ್ವಾಮಿಗಳಿಗೆ, ಕೊಟ್ಟೂರಿನ ಡೋಣೂರು ಚಾನುಕೋಟಿ ಮಠದ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳಿಗೆ, ಕೂಲಹಳ್ಳಿ ಮಠದ ಮಲ್ಲಿಕಾರ್ಜುನ ಮತ್ತು ಚಿನ್ಮಯಾನಂದ ಸ್ವಾಮಿಗಳಿಗೆ, ಗುಮ್ಮಗೋಳದ ದಿವಾಕರ್ ಮತ್ತು ಪ್ರಭಾಕರ್ ಸ್ವಾಮಿಗಳಿಗೆ, ಅರಸೀಕೆರೆಯ ಕಾಶಿನಾಥಸ್ವಾಮಿಗಳಿಗೆ, ಕೊಟ್ಟೂರು ಮತ್ತು ನಾಯಕನಟ್ಟಿಯ ಅರ್ಚಕರು, ಧರ್ಮದರ್ಶಿಗಳಿಗೆ,

ಬರವಣಿಗೆಗೆ ಸಹಕರಿಸಿದ ಡಾ.ಎ.ರವೀಂದ್ರನಾಥ, ಡಾ.ಎಫ್.ಟಿ.ಹಳ್ಳಿಕೇರಿ, ಎ.ಎಸ್.ಪ್ರಭಾಕರ್, ರಮೇಶನಾಯ್ಕ ಹಾಗೂ ಬಾಗಲಕೋಟೆಯ ಡಾ.ಬಿ.ಕೆ.ಹೀರೇಮಠ ಅವರಿಗೆ,

ಎರಡು ರಾತ್ರಿ ಹಾಡಿದ ಬಾಲಬಸವರ ತುಮನೆಪ್ಪನಿಗೆ ಮತ್ತು ಕುಟುಂಬ ವರ್ಗಕ್ಕೆ, ಕೊಟ್ಟೂರಿನ ಹರಿಜನಕೇರಿಯ ಹೆಂಗಸರಿಗೆ, ಕೆಳಗೇರಿಯ ಕೋಲಾಟ ತಂಡಕ್ಕೆ, ಜಿ.ಬಿ.ಚಂದ್ರಶೇಖರ ಅವರಿಗೆ, ಬಯಲು ಸಾಹಿತ್ಯವೇದಿಕೆಯ ಸದಸ್ಯರಿಗೆ, ನಾವು-ನಮ್ಮಲ್ಲಿಯ ಗೆಳೆಯರಿಗೆ, ಕೊಟ್ಟೂರಿನ ಚಿಕ್ಕೇನಕೊಪ್ಪ ಶರಣರ ಬಳಗ, ಥಿಯಾಸಫಿಕಲ್ ಸೊಸೈಟಿಯ ಹಿರಿಯರಿಗೆ,

ಸಾಹಿತ್ಯಾಸಕ್ತಿ ಮೂಡಿಸಿದ ಕುಸುಮ ಮೇಡಂಗೆ, ಪುಸ್ತಕ ಒದಗಿಸಿದ ಗ್ರಂಥಾಲಯಾಧಿಕಾರಿಗಳಾದ ಎಸ್.ಡಿ.ಈರಗಾರ್, ಹಿರಿಯರಾದ ನಾಗನಗೌಡ್ರು, ಲಿಂಗಾರೆಡ್ಡಿ ಶೇರಿ, ಬಾಗಲಕೋಟೆಯ ಬಸವೇಶ್ವರ ವಿಜ್ಞಾನ ಮಹಾವಿದ್ಯಾಲಯದ ಜಿ.ಕೆ.ಬಡಿಗೇರ, ಎಚ್.ಎಂ.ಚನ್ನಪ್ಪಗೋಳ, ಎಸ್.ಎಸ್.ಶಿರೂರ್, ಕವಿತಾ ಮೇಡಂ ಅವರುಗಳಿಗೆ,

ಗೆಳೆಯರಾದ ಮುದ್ದುವೀರಪ್ಪ, ಎಚ್.ಎಂ.ಮಲ್ಲಿನಾಥ, ಡಾ.ಮಾರುತಿ, ಡಾ.ಜಾಜೀ, ಡಾ.ಮಹೇಶ್, ಡಾ.ಎರ್ರಿಸ್ವಾಮಿ, ಡಾ.ರಾಜಕುಮಾರ್, ಡಾ.ದುರ್ಗಪ್ಪ, ಡಾ.ಉಮೇಶ ಅವರುಗಳಿಗೆ,

ನಮ್ಮೂರಿನ ಗೆಳೆಯರಾದ ಸಿದ್ದುದೇವರಮನಿ, ಎಚ್.ಎಂ.ನಿರಂಜನ, ರಫಿ, ಕೆಂಚಪ್ಪ, ಕೊಟ್ರೇಶ್ (ಪೋಸ್ಟ್), ಶಿವು, ವೀರೇಶ, ಇಷಾಕ್, ಸ್ವರೂಪ, ಅರುಣ್, ಚಂದ್ರು ಮತ್ತು ಗದಗಿಮಠದ ಗೆಳೆಯರಿಗೆ,

ಗೆಳತಿಯರಾದ ರಶ್ಮಿ ಬಿರಾದರ, ಕವಿತಾ ಕುಸುಗಲ್, ಟಿ.ಎಂ.ಉಷಾರಾಣಿ ಅವರುಗಳಿಗೆ,

ತಂದೆ, ತಾಯಿಗಳಿಗೆ, ಸಹೋದರರಾದ ರಾಜೇಶ, ಜಗದೀಶ್, ಅಕ್ಕಮಾವನವರಾದ ಅಮೃತ-ಸೂಗೂರಪ್ಪ ಮಾಡಗಿರಿ, ಮಂಜುಳಾ-ಮಹಂತೇಶ್ ಹುರಕಡ್ಲಿ ಅವರುಗಳಿಗೆ,

ಪಿಎಚ್.ಡಿ.ಪ್ರಬಂಧ ಸಲ್ಲಿಕೆಗೆ ಸಹಕರಿಸಿದ ಶ್ರೀ ಡಿ.ವಿ.ಪ್ರಕಾಶ್ ಮತ್ತು ಎ.ಎಂ.ಕೃಪಾಶಂಕರ್ ದಂಪತಿಗಳಿಗೆ ಹಾಗೂ ಪ್ರತ್ಯಕ್ಷ ಪರೋಕ್ಷ ಸಹಾಯ ಮಾಡಿದ ಎಲ್ಲರಿಗೂ

*ಕೃತಜ್ಞತೆಗಳು*

ಸತೀಶ ಪಾಟೀಲ

# ಪರಿವಿಡಿ

## ಪಂಚಗಣಾಧೀಶ್ವರರಿಗೆ ಸಂಬಂಧಿಸಿದ ಪ್ರಮುಖ ಸ್ಥಳಗಳ ನಕ್ಷೆ



## ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಆಕರ ಸಾಮಗ್ರಿ ಮತ್ತು ಈವರೆಗಿನ ಅಧ್ಯಯನಗಳು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

## ೧.೧. ಅಧ್ಯಯನದ ಉದ್ದೇಶ

ವಸಾಹತು ಆಡಳಿತ ಕಾಲದಲ್ಲಿ ರಚಿಸಲ್ಪಟ್ಟ ಸಂಸ್ಕೃತಿ ಚರಿತ್ರೆಯು ರಾಜ ಮಹಾರಾಜರ, ಪಂಡಿತರ, ರಾಜಗುರುಗಳ ಚರಿತ್ರೆಯಾಗಿದೆ. ಇಂತಹ ಚರಿತ್ರೆಯನ್ನು ಕಟ್ಟುವವರು ಮುಖ್ಯವಾಗಿ, ಲಿಖಿತ ಕೃತಿಗಳು, ಸಂಗೀತ, ವಾಸ್ತುಶಿಲ್ಪ, ಶಾಸನಗಳನ್ನು ಮುಖ್ಯ ಆಕರವನ್ನಾಗಿ ಬಳಸಿಕೊಳ್ಳುತ್ತಾರೆ. ರಾಜಾಶ್ರಯದಿಂದ ನಿರ್ಮಿತವಾಗಿರುವ ಈ ಕಲಾಪ್ರಕಾರಗಳನ್ನು ಆಧರಿಸಿ ಕಟ್ಟುವ ಚರಿತ್ರೆಯಲ್ಲಿ, ಸಂಸ್ಕೃತಿಯನ್ನು ರೂಪಿಸುವ ದುಡಿಯುವ ವರ್ಗಗಳ ಬಹುದೊಡ್ಡ ಗೈರುಹಾಜರಿ ಕಂಡುಬರುತ್ತದೆ.

ಪಾಶ್ಚಾತ್ಯರೊಂದಿಗೆ ಇಂಗ್ಲಿಷ್ ವಿದ್ಯಾಭ್ಯಾಸ ಮಾಡಿದ ಉನ್ನತ ವರ್ಗದ ಬುದ್ಧಿ ಜೀವಿಗಳು ಈ ರೀತಿ ಸಂಸ್ಕೃತಿ ಚರಿತ್ರೆಯನ್ನು ಕಟ್ಟಲು ಮುಖ್ಯ ಕಾರಣಕರ್ತರಾಗಿದ್ದಾರೆ. ಇವರ ಪ್ರಕಾರ ತಾವು ನಂಬಿದ ಶ್ರೇಷ್ಠ ಜೀವನಾದರ್ಶ ಹಾಗೂ ಮೌಲ್ಯಗಳೇ 'ಸಂಸ್ಕೃತಿ' ಎನಿಸಿಕೊಂಡವು. ಕರ್ನಾಟಕದಲ್ಲಿ ದೇವುಡು, ಡಿ.ವಿ.ಜಿ., ಮಾಸ್ತಿ, ಆ.ನ.ಕೃ. ಮುಂತಾದ ಸಂಸ್ಕೃತಿ ಚಿಂತಕರೆನಿಸಿಕೊಂಡವರೆಲ್ಲ ಈ ವರ್ಗದವರು. ಇವರ ಬರಹಗಳು ಸಾಮ್ರಾಜ್ಯ ಆಳಿದ ಅರಸರನ್ನು, ದೇವಾಲಯಗಳಿಗೆ ದಾನ ನೀಡಿದ ಮಾಂಡಲೀಕರನ್ನು, ವಿದ್ವತ್‌ಪೂರ್ಣ ಎನಿಸಿಕೊಳ್ಳುವ ಕವಿಗಳನ್ನು ಕುರಿತು ವಿವರಿಸುತ್ತಾ ಹೋಗುತ್ತವೆ. ಇವನ್ನು ಹೊರತುಪಡಿಸಿ ನೂರಾರು ಆಚರಣೆಗಳು, ಹಾಡುಗಳು, ನಂಬಿದ ದೈವಗಳು ಬಹುಸಂಖ್ಯಾತ ಜನರನ್ನು ಪ್ರಭಾವಿಸಿವೆ ಎನ್ನುವುದನ್ನು ಗಮನಿಸುವುದೇ ಇಲ್ಲ.

ವಚನ ಪರಂಪರೆಯನ್ನು ಅಧ್ಯಯನ ಮಾಡುವಾಗಲೂ ಸಹ ಉನ್ನತವರ್ಗದ ಬಸವ, ಅಕ್ಕಮಹಾದೇವಿ, ಚನ್ನಬಸವಣ್ಣ, ನೀಲಾಂಬಿಕೆಯಂತವರು ಮುಖ್ಯವಾಗುತ್ತಾರೆಯೇ ಹೊರತು ದಲಿತ ಶರಣರು, ಕೆಳವರ್ಗದ ವಚನಕಾರ್ತಿಯರು ಮುಖ್ಯವಾಗಿ ಅಧ್ಯಯನಕ್ಕೆ ಒಳಪಟ್ಟಿಲ್ಲ. ಹಾಗೆಯೇ ರಾಜಾಶ್ರಯದಲ್ಲಿದ್ದ ನೂರೊಂದು ವಿರಕ್ತರು, ದಾನದತ್ತಿಗಳನ್ನು ಪಡೆದ ತೋಂಟದ ಸಿದ್ಧಲಿಂಗಯತಿಗಳ ಪರಂಪರೆಯ ಕುರಿತು ತೋರಿದಷ್ಟು ಆಸಕ್ತಿಯನ್ನು ಮೌಖಿಕ ಪರಂಪರೆಗಳ ಬಗ್ಗೆ ವಹಿಸಿಲ್ಲ.

೧೨ನೇ ಶತಮಾನದ ಶರಣ ಚಳುವಳಿಯಲ್ಲಿಯೇ ವಿಭಿನ್ನ ಧಾರೆಗಳಿವೆ. ಅಲ್ಲಮ, ಬಸವ, ಚೆನ್ನಬಸವಣ್ಣ, ದಲಿತರು, ಸ್ತ್ರೀ ವಚನಕಾರ್ತಿಯರು, ಹೀಗೆ ತಮಗೆ ತಾವೇ ವಿಶಿಷ್ಟ ಹಾದಿಗಳನ್ನು, ಆಲೋಚನಾ ಕ್ರಮಗಳನ್ನು ಚಳುವಳಿಯೊಳಗಿದ್ದುಕೊಂಡೇ ರೂಪಿಸಿಕೊಂಡವರಾಗಿದ್ದಾರೆ. ಈ ವೈವಿಧ್ಯತೆ

೧೨ನೇ ಶತಮಾನದ ನಂತರವೂ ಶಿಷ್ಟ ಪರಿಶಿಷ್ಟ, ಲಿಖಿತ ಮೌಖಿಕ ಧಾರೆಗಳಾಗಿ ಅಭಿವ್ಯಕ್ತಿಗೊಂಡಿದೆ. ಇವುಗಳಲ್ಲಿ ಲಿಖಿತ ಧಾರೆಗಳ ಕುರಿತು (ಕಾವ್ಯ, ವಚನ, ಸ್ವರವಚನ ಇತ್ಯಾದಿ) ಫ.ಗು.ಹಳಕಟ್ಟಿ, ಶಿ.ಶಿ.ಬಸವನಾಳ, ಮಧುರಚೆನ್ನ, ಉತ್ತಂಗಿಚೆನ್ನಪ್ಪನಂತಹ ವಿದ್ವಾಂಸರು, ಗದುಗಿನ ತೋಂಟದಾರ್ಯಮಠ, ಚಿತ್ರದುರ್ಗದ ಮುರುಘಾರಾಜೇಂದ್ರ ಮಠ, ಸುತ್ತೂರು ಶಿವರಾತ್ರೀಶ್ವರ ಮಠಗಳು ಆಸಕ್ತಿವಹಿಸಿ ಸಂಗ್ರಹ, ವ್ಯಾಖ್ಯಾನ, ಸಂಪಾದನೆಗಳನ್ನು ಮಾಡಿದರು. ಆದರೆ ಲಿಖಿತ ಧಾರೆಗಳಾದ ಮಂಟೇಸ್ವಾಮಿಪರಂಪರೆ, ಕೊಡೇಕಲ್‌ಪರಂಪರೆ, ಮಲೆಮಾದೇಶ್ವರ ಪರಂಪರೆ ಇತ್ಯಾದಿಗಳ ಕುರಿತು ಗಂಭೀರವಾದ ಅಧ್ಯಯನಗಳು ಈ ಮೊದಲು ನಡೆದಿರಲಿಲ್ಲ. ಇತ್ತೀಚೆಗೆ ವಿವಿಧ ವಿದ್ವಾಂಸರು, ವಿಶ್ವವಿದ್ಯಾಲಯಗಳು ಇಂಥಹ ಮೌಖಿಕ ಪಂಥ ಪರಂಪರೆಗಳ ಅಧ್ಯಯನ, ಸಂಗ್ರಹ, ದಾಖಲೀಕರಣಗಳಲ್ಲಿ ಆಸಕ್ತಿ ವಹಿಸುತ್ತಿದ್ದಾರೆ. ಜಿ.ಶಂ.ಪ ಅವರಂಥ ಹಿರಿಯ ವಿದ್ವಾಂಸರಿಂದ ಮೌಖಿಕ ಪರಂಪರೆಗಳ ಅಧ್ಯಯನ ಗಂಭೀರವಾಗಿ ಆರಂಭಗೊಂಡರೂ ('ದಕ್ಷಿಣ ಕರ್ನಾಟಕದ ಕಾವ್ಯ ಪ್ರಕಾರಗಳು' ೧೯೭೮) ನಂತರದ ದಿನಗಳಲ್ಲಿ ಈ ಬಗ್ಗೆ ಅಧ್ಯಯನ ನಡೆದಿದ್ದು ಕಡಿಮೆ. ೯೦ರ ದಶಕದಲ್ಲಿ ಬಸವಲಿಂಗ ಸೊಪ್ಪಿನಮಠ, ಪಿ.ಕೆ.ರಾಜಶೇಖರ್, ಬಿ.ಎಸ್.ಸ್ವಾಮಿ, ಡಿ.ಆರ್.ನಾಗರಾಜ್, ಕೇಶವನ್ ಪ್ರಸಾದ್, ಹಿ.ಚಿ.ಬೋರಲಿಂಗಯ್ಯ, ವೆಂಕಟೇಶ್ ಇಂದ್ವಾಡಿ, ರಹಮತ್ ತರೀಕೆರೆ, ಮಹದೇವ ಶಂಕನಪುರ, ಪಡಶೆಟ್ಟಿ, ಶಿವಾನಂದ ಎಸ್.ವಿರಕ್ತಮಠ ಮುಂತಾದ ವಿದ್ವಾಂಸರು ಕಾವ್ಯಗಳ ಸಂಪಾದನೆ, ತಾತ್ವಿಕ ಚಿಂತನೆಗಳ ಮೂಲಕ ಮಂಟೇಸ್ವಾಮಿ, ಮಲೆಮಾದೇಶ್ವರ, ಕೊಡೇಕಲ್ ಪರಂಪರೆ, ತಿಂಥಿಣಿ ಮೋನಪ್ಪಯ್ಯನ ಪರಂಪರೆ, ಕರ್ನಾಟಕದಲ್ಲಿನ ಸೂಫಿಗಳ ಬಗ್ಗೆ ಅಧ್ಯಯನ ಮಾಡಿ ಜನಸಮುದಾಯಗಳು ನಂಬಿರುವ ಮೌಖಿಕ ಪರಂಪರೆಗಳ ಬಗ್ಗೆ ಬೆಳಕು ನೀಡಿದ್ದಾರೆ.

ಈ ಎಲ್ಲ ಅಧ್ಯಯನಗಳು ಕರ್ನಾಟಕದ ಉತ್ತರ ಮತ್ತು ದಕ್ಷಿಣ ಭಾಗಗಳಿಗೆ ಸಂಬಂಧಿಸಿದ್ದಾಗಿವೆ. ಆದರೆ ಮಧ್ಯಕರ್ನಾಟಕ ಭಾಗದ ಕುರಿತು ಇದುವರೆಗೂ ಗಂಭೀರ ಅಧ್ಯಯನಗಳು ನಡೆದಿಲ್ಲ. ಮಧ್ಯ ಕರ್ನಾಟಕದ ಭಾಗದ ಜನಸಮುದಾಯಗಳ ಆರಾಧ್ಯ ದೈವಗಳ ಅಧ್ಯಯನವು ನಡೆಯದೆ ಹಾಗೆಯೇ ಉಳಿದಿದೆ. ಈ ಪ್ರಬಂಧದ ಮೂಲಕ ಆ ಕೊರತೆಯನ್ನು ತುಂಬಲು ಪ್ರಯತ್ನಿಸಲಾಗಿದೆ.

ಪಂಚಗಣಾಧೀಶ್ವರರ ಪಂಥದಲ್ಲಿನ ಕೊಟ್ಟೂರು ಗುರುಬಸವ ಲಿಖಿತ ಪರಂಪರೆಯ ಜೊತೆ ಗುರುತಿಸಿಕೊಂಡವನು. ಬಸವಲಿಂಗ ಕವಿ 'ಕೊಟ್ಟೂರು ಬಸವೇಶ್ವರ ಚಾರಿತ್ರ್ಯ'(೧೬೭೮) ಎನ್ನುವ ಕೃತಿ ಬರೆದಿದ್ದಾನೆ. ಅಲ್ಲದೆ 'ಗುರುರಾಜ ಚಾರಿತ್ರ', 'ಚೆನ್ನಬಸವಪುರಾಣ', 'ಮಳೆಯರಾಜ ಚಾರಿತ್ರ್ಯ' ಮುಂತಾದ ಕೃತಿಗಳು ಈತನ ಬಗ್ಗೆ ಉಲ್ಲೇಖಿಸುತ್ತವೆ. ಹಲವಾರು ಸ್ವರವಚನಗಳು ಪಂಚಗಣಾಧೀಶ್ವರರಲ್ಲಿನ ಸಂತರ ಬಗ್ಗೆ ರಚಿತವಾಗಿವೆ. ಲಿಖಿತ ಪರಂಪರೆಯ ಜೊತೆ ಇವರು ಗುರುತಿಸಿಕೊಂಡರೂ ಇವರನ್ನು ಆರಾಧಿಸುವ ಸಮುದಾಯಗಳು ಮಾತ್ರ ಮೌಖಿಕ ಧಾರೆಯನ್ನು ಆಶ್ರಯಿಸಿಯೇ ಆಚರಣೆಗಳನ್ನು ರೂಢಿಸಿಕೊಂಡಿವೆ.

ಈ ಪಂಥದ ಕುರಿತು ಕೆಲವು ಲೇಖನಗಳು, ಚಿಕ್ಕ ಪುಟ್ಟ ಪುಸ್ತಕಗಳು ಬಿಟ್ಟರೆ ಸಮಗ್ರವಾಗಿ ಗಂಭೀರವಾದ ಅಧ್ಯಯನ ನಡೆದಿಲ್ಲ. ಇದಕ್ಕೆ ಮುಖ್ಯವಾಗಿ ಪೂರ್ಣಪ್ರಮಾಣದಲ್ಲಿ ಲಿಖಿತ ಮಾಹಿತಿ, ಆಧಾರಗಳು ದೊರೆಯದಿರುವುದು ಕಾರಣವಾಗಿದೆ. ಹಾಗಾಗಿ 'ಪಂಚಗಣಾಧೀಶ್ವರರು : ಸಾಂಸ್ಕೃತಿಕ ಅಧ್ಯಯನ' ಎನ್ನುವ ಈ ಪ್ರೌಢಪ್ರಬಂಧವು ಸಿಗುವ ಅಲ್ಪಸ್ವಲ್ಪ ಲಿಖಿತ ಮಾಹಿತಿಗಳ ಜೊತೆಗೆ ಕ್ಷೇತ್ರಕಾರ್ಯವನ್ನು ಆಧರಿಸಿ ಮೊಟ್ಟಮೊದಲ ಬಾರಿಗೆ ಸಮಗ್ರಮವಾಗಿ ಗಂಭೀರ ಅಧ್ಯಯನಕ್ಕೆ ಒಳಪಡಿಸಬೇಕೆನ್ನುವ ಉದ್ದೇಶದಿಂದ ರಚಿತವಾದುದಾಗಿದೆ.

ಮಧ್ಯಕರ್ನಾಟಕ ಪರಿಸರದಲ್ಲಿಯೇ ಇರುವ ಹಂಪಿಯು ನೂರೊಂದು ವಿರಕ್ತರ ಕೇಂದ್ರ ಸ್ಥಳವಾಗಿತ್ತು. ಪ್ರೌಢದೇವರಾಯನ ಕಾಲದಲ್ಲಿ ೧೨ನೇ ಶತಮಾನದ ಶರಣಚಳುವಳಿಗೆ ಸಾಂಸ್ಥಿಕ ರೂಪನೀಡಲು ಲಕ್ಕಣ್ಣದಂಡೇಶನ ನೇತೃತ್ವದಲ್ಲಿ ನೂರೊಂದು ವಿರಕ್ತರು ಸಾಂಘಿಕವಾಗಿ ಪ್ರಯತ್ನಿಸಿದರು. ನಂತರದಲ್ಲಿ ವೈಷ್ಣವ ಧರ್ಮದ ಪ್ರಾಬಲ್ಯ ಹಾಗೂ ರಕ್ಕಸತಂಗಡಿಗಿ ಯುದ್ಧದಿಂದ ಉಂಟಾದ ಕ್ಷೋಭೆಯಿಂದಾಗಿ ವೀರಶೈವ ಧರ್ಮದ ಸಾಂಸ್ಥೀಕರಣ ಪ್ರಕ್ರಿಯೆಯು ದಕ್ಷಿಣದ ಎಡೆಯೂರಿಗೆ ವರ್ಗಾವಣೆಯಾಯಿತು. ಇದೇ ಸಂದರ್ಭದಲ್ಲಿ ಶೈವ-ನಾಥ ಹಾಗೂ ಸೂಫಿಸಂನ ಪ್ರಭಾವದಿಂದಾಗಿ ಸಂಕರಶೀಲ ಪಂಥಗಳಾದ ಕೊಡೇಕಲ್ ಬಸವಣ್ಣ, ತಿಂಥಿಣಿಮೋನಪ್ಪಯ್ಯ, ಶಿರಹಟ್ಟಿ ಪಕ್ಕೀರೇಶ, ಮಂಟೇಸ್ವಾಮಿ ಮುಂತಾದ ಅನುಭವಿ ಮೌಖಿಕ ಪರಂಪರೆಗಳು ವೀರಶೈವ ಧರ್ಮದ ಸಾಂಸ್ಥಿಕ ಪ್ರಕ್ರಿಯೆಗೆ ಪ್ರತಿರೋಧವನ್ನು ವ್ಯಕ್ತಪಡಿಸಿ ಜಲದುರ್ಗ, ತಿಂಥಿಣಿ, ಚಿಕ್ಕಲೂರು ಬೊಪ್ಪೇಗೌಡನಪುರ, ಕಪ್ಪಡಿ, ಶಿರಹಟ್ಟಿ, ನಾಗಾವಿ ಮುಂತಾದ ಸ್ಥಳಗಳಲ್ಲಿ ನೆಲೆಪಡೆದುಕೊಂಡರು. ಈ ಎಲ್ಲ ಪ್ರಕ್ರಿಯೆಗೆ ಮೂಲ ಕಾರಣವಾದ ಮಧ್ಯಕರ್ನಾಟಕ ಭಾಗದ ಪರಿಸರದಲ್ಲಿ ಪಂಚಗಣಾಧೀಶ್ವರರು ಹೇಗೆ ಬದುಕಿದರು? ಬದುಕುವಾಗ ಮಾಡಿಕೊಂಡ ಒಪ್ಪಂದಗಳಾಗಲಿ, ಒಕ್ಕಲುಗಳಾಗಲಿ, ಸಂಘರ್ಷಗಳಾಗಲಿ ಯಾವ ಸ್ವರೂಪದ್ದು ಎನ್ನುವುದನ್ನು ತಿಳಿಯುವ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಅಲ್ಲದೆ ಮಧ್ಯಕಾಲದಲ್ಲಿ ದಕ್ಷಿಣದ ಎಡೆಯೂರು (ಸಿದ್ಧಲಿಂಗಯತಿ ನೇತೃತ್ವ), ಕಪ್ಪಡಿ, ಚಿಕ್ಕಲೂರು (ಮಂಟೇಸ್ವಾಮಿ ನೇತೃತ್ವ) ಹಾಗೂ ಉತ್ತರದ ಗುಲಬರ್ಗಾ, ಬೀದರ್, ರಾಯಚೂರು, ಬಿಜಾಪುರ (ಸೂಫಿಗಳ ನೇತೃತ್ವ) ಭಾಗಗಳಲ್ಲಿ ೧೨ನೇ ಶತಮಾನದ ಶರಣ ಚಳುವಳಿಯ ಆಶಯಗಳನ್ನು ಬದಲಾದ ಸಂದರ್ಭಕ್ಕನುಗುಣವಾಗಿ, ಶಿಷ್ಟ ಹಾಗೂ ಮೌಖಿಕ ಪರಂಪರೆಗಳ ನಾಯಕರು, ಜನ-ಜೀವನಕ್ಕೆ ಅಳವಡಿಸಲು ಪ್ರಯತ್ನಿಸಿದರು. ಈ ಕೆಲಸವನ್ನು ಮಧ್ಯಕರ್ನಾಟಕದಲ್ಲಿ ಪಂಚಗಣಾಧೀಶ್ವರರು ಮಾಡಲು ಪ್ರಯತ್ನಿಸಿದ್ದಾರೆ. ಆದರೆ ಇದುವರೆಗೂ ಈ ಪಂಥದ ಕುರಿತು ಅಧ್ಯಯನವೇ ನಡೆದಿಲ್ಲ ಈಗಿರುವ ಅಧ್ಯಯನಗಳೆಲ್ಲ ಪಂಚಗಣಾಧೀಶ್ವರರಲ್ಲಿನ ಯಾರಾದರು ಒಬ್ಬ ಸಂತನನ್ನು ಕುರಿತು ಇಲ್ಲವೆ, ಕೆಲವು ಆಚರಣೆಗಳನ್ನು ಕುರಿತು ಮಾತ್ರ ನಡೆದಿವೆ. ಪ್ರಸ್ತುತ ಪ್ರಬಂಧವು ತಿಪ್ಪೇಸ್ವಾಮಿ(ನಾಯಕನಹಟ್ಟಿ),

ಗುರುಬಸವ(ಕೊಟ್ಟೂರು), ಮದ್ದಾನಸ್ವಾಮಿ ಮತ್ತು ಈತನ ಮಗ ಗೋಣಿಬಸವ(ಕೂಲಹಳ್ಳಿ), ಕೋಲಶಾಂತಯ್ಯ(ಅರಸೀಕೆರೆ), ಕೆಂಪಯ್ಯ(ಹರಪನಹಳ್ಳಿ) ಈ ಎಲ್ಲ ಸಂತರನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡುವ ಉದ್ದೇಶ ಹೊಂದಿದೆ. ಇದು ಈ ಸಂಶೋಧನೆಯ ಮಹತ್ವವನ್ನು ತಿಳಿಸುತ್ತದೆ.

ಪಂಚಗಣಾಧೀಶ್ವರರು ಮಧ್ಯಕರ್ನಾಟಕ ಭಾಗದಲ್ಲಿ ಎಲ್ಲ ಸಮುದಾಯಗಳಿಂದ ಆರಾಧನೆಗೊಳ್ಳುವ ಸಂತರಾಗಿದ್ದಾರೆ. ಅದರಲ್ಲೂ ಈ ಪರಿಸರದಲ್ಲಿ ಬೇಡರು ಮತ್ತು ಕುರುಬರು ಹೆಚ್ಚಾಗಿದ್ದಾರೆ. ಮಧ್ಯಕಾಲೀನ ಸಂದರ್ಭದಲ್ಲಿ ಈ ಜನಾಂಗಗಳು ಬೇಟೆ ಸಂಸ್ಕೃತಿ ಮತ್ತು ಪಶುಪಾಲನ ಸಂಸ್ಕೃತಿಯಿಂದ ಕೃಷಿ ಸಂಸ್ಕೃತಿಗೆ ಪರಿವರ್ತನೆ ಹೊಂದಿದವು. ಹೀಗೆ ಪರಿವರ್ತನೆ ಹೊಂದುವ ನಿರ್ಣಾಯಕ ಘಟ್ಟದಲ್ಲಿ ಪಂಚಗಣಾಧೀಶ್ವರರು ವಹಿಸಿದ ಪಾತ್ರ ಎಂತಹುದು? ಈ ಬಗ್ಗೆ ಸಂತರ ಜೀವನ ಮತ್ತು ಪವಾಡಗಳ ಹಿನ್ನೆಲೆಯಲ್ಲಿ ಮೊದಲಬಾರಿಗೆ ಅಧ್ಯಯನಕ್ಕೆ ಕೈಗೊಳ್ಳಲಾಗಿದೆ. ಸಂತರ ಜೀವನದ ಸುತ್ತಲು ಇರುವ ಪವಾಡಗಳಿಗೆ ಹಿನ್ನೆಲೆಯಾಗಿ ಕೆಲಸ ಮಾಡಿರುವ ಈ ಪರಿಸರದ ಸಾಮಾಜಿಕ, ರಾಜಕೀಯ, ಆರ್ಥಿಕ ಹಿನ್ನೆಲೆಯನ್ನು ತಿಳಿಯಲು ಉದ್ದೇಶಿಸಲಾಗಿದೆ. ಇದಕ್ಕಾಗಿ ಕ್ಷೇತ್ರಕಾರ್ಯದ ಮೂಲಕ ಮೊದಲಬಾರಿಗೆ ಬಾಲಸವರು ಹಾಡುವ ಗೋಣಿಬಸವ ಕಾವ್ಯವನ್ನು, ಕೊಟ್ಟೂರಿನಲ್ಲಿ ಗುರುಬಸವನ ಬಿಡಿಪದಗಳನ್ನು, ಕೋಲಾಟಪದಗಳನ್ನು, ಬಾಲಬಸವರ ಕಾಲಜ್ಞಾನವನ್ನು ಸಂಗ್ರಹಿಸಲಾಗಿದೆ. ಅಲ್ಲದೆ ಈಗಾಗಲೇ ಸಂಗ್ರಹವಾಗಿರುವ, ಲಿಖಿತ ರೂಪದಲ್ಲಿರುವ ಆಕರಗಳನ್ನು ಬಳಸಿಕೊಳ್ಳಲಾಗಿದೆ.

ಪಂಚಗಣಾಧೀಶ್ವರರ ಆಚರಣೆಗಳ ಹಿಂದಿರುವ ತಾತ್ವಿಕತೆಯನ್ನು ಹಾಗೂ ಲಿಖಿತ ಮೌಖಿಕ ಸಾಹಿತ್ಯ ಪ್ರಕಾರಗಳನ್ನು ವಿಶ್ಲೇಷಣೆಗೊಳಪಡಿಸಿ ಅದರ ಹಿಂದಿರುವ ಒತ್ತಡಗಳನ್ನು, ವೈರುಧ್ಯಗಳನ್ನು ಇಲ್ಲಿ ವಿವರಿಸಲಾಗಿದೆ. ಒಟ್ಟಾರೆ ದುಡಿಯುವ ವರ್ಗಗಳಿಂದಲೇ ಹೆಚ್ಚಾಗಿ ಆರಾಧನೆಗೊಳ್ಳುತ್ತಿರುವ ಪಂಚಗಣಾಧೀಶ್ವರ ಪಂಥದ ಸಾಂಸ್ಕೃತಿಕ ಅಧ್ಯಯನವನ್ನು ಈ ಪ್ರೌಢಪ್ರಬಂಧದಲ್ಲಿ ಕೈಗೊಳ್ಳಲಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಈ ಪ್ರೌಢಪ್ರಬಂಧಕ್ಕೆ ಸಂಬಂಧಿಸಿದಂತೆ ಕರ್ನಾಟಕದ ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ, ಕೊಪ್ಪಳ, ಹಾವೇರಿ, ಗದಗ ಜಿಲ್ಲೆಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಅಲ್ಲದೆ ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಗಳಿಗೆ ಅಂಟಿಕೊಂಡಿರುವ ಅನಂತಪುರ ಜಿಲ್ಲೆಯ ರಾಯದುರ್ಗ ತಾಲ್ಲೂಕು (ಆಂಧ್ರಪ್ರದೇಶ) ಹಾಗೂ ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕುಗಳನ್ನು ಇಲ್ಲಿ ಸೇರಿಸಿಕೊಳ್ಳಲಾಗಿದೆ. ಈ ಎಲ್ಲ ಸ್ಥಳಗಳು ಕರ್ನಾಟಕದ ಮಧ್ಯಭಾಗದಲ್ಲಿಯೇ ಬರುವುದರಿಂದ ಹಾಗೂ ಕರ್ನಾಟಕದ ಪರಿಸರವನ್ನೇ ಹೊಂದಿರುವುದರಿಂದ ಒಟ್ಟಾರೆಯಾಗಿ ಮಧ್ಯಕರ್ನಾಟಕ ಎಂದು ಕರೆದುಕೊಳ್ಳಲಾಗಿದೆ.

ಪಂಚಗಣಾಧೀಶ್ವರರ ಪರಿಕಲ್ಪನೆ ಪ್ರಾದೇಶಿಕವಾಗಿ ಬೇರೆ ಬೇರೆಯಾಗಿದ್ದು ನಾಯಕನಹಟ್ಟಿ ತಿಪ್ಪೇಸ್ವಾಮಿ (ಚಿತ್ರದುರ್ಗ ಜಿಲ್ಲೆ), ಕೊಟ್ಟೂರು ಗುರುಬಸವ(ಬಳ್ಳಾರಿ ಜಿಲ್ಲೆ), ಕೂಲಹಳ್ಳಿ ಮದ್ದಾನಸ್ವಾಮಿ, ಅರಸೀಕೆರೆ

ಕೋಲಶಾಂತಯ್ಯ, ಹರಪನಹಳ್ಳಿ ಕೆಂಪಯ್ಯ (ಈ ಮೂವರು ದಾವಣಗೆರೆ ಜಿಲ್ಲೆ) ಇವರನ್ನು ಮಧ್ಯ ಕರ್ನಾಟಕ ಭಾಗದಲ್ಲಿ ಪಂಚಗಣಾಧೀಶ್ವರರು ಎಂದು ಜನಸಮುದಾಯ ಕರೆಯುತ್ತಿದ್ದು, ಇವರನ್ನು ಮಾತ್ರ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಈ ಪಂಥದಲ್ಲಿ ಬರುವ ಐವರು ಸಂತರಲ್ಲಿ ಒಬ್ಬನಾದ ಕೂಲಹಳ್ಳಿಯ ಮದ್ದಾನಸ್ವಾಮಿಯ ಮಗ ಗೋಣಿಬಸವನು ಇವರೊಂದಿಗೆ ನಿಕಟ ಸಂಪರ್ಕವನ್ನು ಹೊಂದಿರುವುದರಿಂದ ಈತನನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

೧೯-೧೭ನೇ ಶತಮಾನದ ಪಂಚಗಣಾಧೀಶ್ವರರು ಅಧ್ಯಯನದ ಮುಖ್ಯ ಕೇಂದ್ರವಾದರೂ ಅಧ್ಯಯನದ ವ್ಯಾಪ್ತಿ ಈ ಕಾಲವನ್ನು ಮೀರಿ ಚಾಚಿಕೊಂಡಿದೆ. ಏಕೆಂದರೆ ರಾಜಕೀಯ, ಆರ್ಥಿಕ ಅಂಶಗಳು ಪ್ರಭಾವಿಸು ತ್ತಿರುತ್ತವೆ. ಹಾಗಾಗಿ ಸಂಸ್ಕೃತಿ ಅಧ್ಯಯನ ಮಾಡುವಾಗ ಒಂದು ನಿರ್ದಿಷ್ಟ ಕಾಲಘಟ್ಟಕ್ಕಷ್ಟೇ ಸೀಮಿತ ವಾಗುವುದು ಸಮಂಜಸವೆನಿಸುವುದಿಲ್ಲ. ಆದ್ದರಿಂದ ಪಂಚಗಣಾಧೀಶ್ವರರ ಅಧ್ಯಯನವು ಆ ಹೊತ್ತಿನ ಸಮಕಾಲೀನ ಪರಂಪರೆಗಳು, ನೂರೊಂದು ವಿರಕ್ತರು, ೧೨ನೇ ಶತಮಾನದ ಶರಣ ಚಳುವಳಿ ಹಾಗೂ ಅದಕ್ಕೂ ಹಿಂದಿನ ಶೈವಪಂಥಗಳವರೆಗೆ ವ್ಯಾಪಿಸಿಕೊಂಡಿದೆ. ಸದ್ಯದ ಆಧುನಿಕ ಸಮಾಜವು ಈ ಪಂಥದೊಂದಿಗೆ ನಡೆಸುತ್ತಿರುವ ಅನುಸಂಧಾನವನ್ನು ಇಲ್ಲಿ ಗಮನಿಸಲಾಗಿದೆ.

ಕೂಲಹಳ್ಳಿ ಮದ್ದಾನಸ್ವಾಮಿಯ ಮಗನಾದ ಗೋಣಿಬಸವನಿಂದ ಲಿಂಗದೀಕ್ಷೆಗೊಳಗಾದ ಮಾದಿಗರ ಬಾಲಬಸವಪಂಥದ ಕುರಿತು ಇದುವರೆಗೆ ಗಂಭೀರ ಅಧ್ಯಯನವೇ ಆಗಿಲ್ಲ. ಇವರು ಕಾವ್ಯ ಮತ್ತು ಕಾಲಜ್ಞಾನದ ಮೂಲಕ ಪಂಚಗಣಾಧೀಶ್ವರರ ಪಂಥವನ್ನು ವಿಸ್ತರಿಸಲು ಪ್ರಯತ್ನಿಸಿದ್ದಾರೆ. ಹಾಗಾಗಿ ನನ್ನ ಅಧ್ಯಯನಕ್ಕೆ ಸಂಬಂಧಿಸಿದ ವ್ಯಾಪ್ತಿಯೊಳಗೆ ಬಾಲಬಸವರ ಪಂಥವನ್ನು ವಿಶ್ಲೇಷಿಸಲಾಗಿದೆ.

## ೧.೩. ಅಧ್ಯಯನದ ವಿಧಾನ

ಪಂಚಗಣಾಧೀಶ್ವರರನ್ನು ಆರಾಧಿಸುವವರು ಹೆಚ್ಚಾಗಿ ದುಡಿಯುವ ವರ್ಗಗಳಾಗಿದ್ದು ಇವರು ತಮ್ಮ ಧಾರ್ಮಿಕ ಶ್ರದ್ಧೆಯನ್ನು ಜಾತ್ರೆ, ಉತ್ಸವ, ನಂಬಿಕೆ, ಆಚರಣೆ, ಹಾಡು ಮುಂತಾದ ಮೌಖಿಕ ರೂಪದಲ್ಲಿ ವ್ಯಕ್ತಪಡಿಸಿದ್ದಾರೆ. ಹೀಗಾಗಿ ಪ್ರಸ್ತುತ ಪ್ರಬಂಧವು ಮುಖ್ಯವಾಗಿ ಮೌಖಿಕ ಆಕರಗಳನ್ನೇ ಆಧರಿಸಿ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಪೂರಕವಾಗಿ ಲಿಖಿತ ಆಕರಗಳನ್ನು ಹಾಗು ಈವರೆಗಿನ ಅಧ್ಯಯನಗಳನ್ನು ಬಳಸಿಕೊಳ್ಳಲಾಗಿದೆ. ಅದರಲ್ಲೂ ಗುರುಬಸವನಿಗೆ ಸಂಬಂಧಿಸಿದಂತೆ ಬಸವಲಿಂಗ ಕವಿ ಬರೆದ 'ಕೊಟ್ಟೂರು ಬಸವೇಶ್ವರ ಚಾರಿತ್ರ್ಯ'ವನ್ನು (ಕ್ರಿ.ಶ.೧೮೭೮) ಪ್ರಮುಖ ಆಧಾರವಾಗಿಟ್ಟುಕೊಳ್ಳಲಾಗಿದೆ. ಉಳಿದಂತೆ ಯಾವ ಸಂತರ ಕುರಿತು ಶಿಷ್ಟ ಕಾವ್ಯಗಳು ರಚಿತವಾಗಿಲ್ಲ.

ಈ ಅಧ್ಯಯನ ಕೈಗೊಳ್ಳುವಾಗ ಶಿಷ್ಟ ಪಂಥಗಳ ಚಿಂತನಧಾರೆಗಳಾಚೆ ಅಸ್ತಿತ್ವದಲ್ಲಿರುವ ಸಮುದಾಯಗಳು ಹಾಗೂ ಅವು ಕಟ್ಟಿಕೊಡುವ ಬಹುಮುಖಿ ಆಯಮಗಳನ್ನು ಅಧ್ಯಯನದ ವಿಧಾನದಲ್ಲಿ ಅಳವಡಿಸಿ

ಕೊಂಡಿದ್ದೇನೆ. ಅದಕ್ಕಾಗಿ ಅಂತರ್‌ಶಿಸ್ತೀಯ ಅಧ್ಯಯನ ವಿಧಾನದ ಮೂಲಕ ಭೂಗೋಳಶಾಸ್ತ್ರ, ಮಾನವಶಾಸ್ತ್ರ, ಜಾನಪದ, ಚರಿತ್ರೆ ಮುಂತಾದ ಅನ್ಯಜ್ಞಾನಶಿಸ್ತಗಳನ್ನು ಬಳಸಿಕೊಂಡಿದ್ದೇನೆ.

ಒಟ್ಟು ಈ ಪ್ರೌಢಪ್ರಬಂಧದಲ್ಲಿ ಎಂಟು ಅಧ್ಯಾಯಗಳಿದ್ದು ಮೊದಲನೇ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನದ ಕುರಿತು ವಿವರಿಸಲಾಗಿದೆ. ಎರಡನೇ ಅಧ್ಯಾಯದಲ್ಲಿ ಪಂಚಗಣಾಧೀಶ್ವರರು ಈ ಭಾಗದಲ್ಲಿ ಆರಾಧನೆಗೊಳ್ಳಲು ಮಧ್ಯಕಾಲೀನ ಕರ್ನಾಟಕದ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಿನ್ನೆಲೆ ಹೇಗೆ ಕಾರಣವಾದವು ಎನ್ನುವುದನ್ನು ಹಾಗೂ ೧೨ನೇ ಶತಮಾನದ ಶರಣ ಚಳುವಳಿ, ನೂರೊಂದು ವಿರಕ್ತರು ಹಾಗೂ ತೋಂಟದ ಸಿದ್ಧಲಿಂಗಯತಿಗಳ ಪರಂಪರೆಯಿಂದ ಪಡೆದ ಪ್ರೇರಣೆಯನ್ನು ಕುರಿತು ವಿವರಿಸಲಾಗಿದೆ. ಅದೇ ಹೊತ್ತಲ್ಲಿದ್ದ ಮೌಖಿಕ ಪರಂಪರೆಗಳಾದ ಕೊಡೇಕಲ್ ಬಸವಣ್ಣ, ತಿಂಥಿಣಿಮೋನಪ್ಪಯ್ಯ ಶಿರಹಟ್ಟಿ ಫಕ್ಕೀರೇಶ, ಸಾವಳಗಿ ಶಿವಲಿಂಗ, ಮಂಟೇಸ್ವಾಮಿ, ಮಲೆಮಾದೇಶ್ವರ ಪಂಥಗಳ ಬಗೆಗೆ ವಿವರಿಸಲಾಗಿದೆ. ಅಧ್ಯಾಯ ಮೂರರಲ್ಲಿ ವಿವಿಧ ಪಂಥ ಪರಂಪರೆಗಳು ಪಂಚಗಣಾಧೀಶ್ವರ ಪಂಥವನ್ನು ಹೇಗೆ ಸಂಕರಶೀಲವಾಗಿಸಿದವು ಎನ್ನುವ ಕುರಿತು ವಿವರಿಸಲಾಗಿದೆ. ಏಕೆಂದರೆ ಈ ಪಂಥವು ಭಿನ್ನ-ಭಿನ್ನ ಪಂಥ-ಪರಂಪರೆಗಳನ್ನು (ಶೈವನಾಥಸಿದ್ಧ, ಸೂಫಿಸಂ) ಪೋಷಿಸಿಕೊಂಡು ಬಂದ ಮಧ್ಯಕರ್ನಾಟಕದ ಪರಿಸರದಲ್ಲಿದ್ದ ಪರಿಣಾಮವಾಗಿ ಹಲವಾರು ಸಂಕರರೂಪಿ ಲಕ್ಷಣಗಳನ್ನು ಮೈಗೂಡಿಸಿಕೊಂಡಿದೆ. ಹಾಗೂ ಒಂದು ಜೀವಂತ ಸಮುದಾಯ ಈ ಐವರು ಸಂತರೊಂದಿಗೆ ಈಗಲೂ ಕೂಡಿ ನಡೆಸುತ್ತಿರುವ ಅನುಸಂಧಾನದಿಂದಾಗಿ ಸಮಕಾಲೀನ ಸಂದರ್ಭಗಳಲ್ಲಿ ಅದೆಷ್ಟೋ ಆಚರಣೆಗಳು ಬಂದು ಸೇರುವ, ಬಿಟ್ಟು ಹೋಗುವ ಪ್ರಕ್ರಿಯೆ ನಡೆಯುತ್ತಲೇ ಇದೆ. ಇದಕ್ಕೆ ಕಾರಣವಾಗಿರುವ ರಾಜಕೀಯಾರ್ಥಿಕ ಕಾರಣಗಳನ್ನು ಇಲ್ಲಿ ವಿವರಿಸಲಾಗಿದೆ. ಅಧ್ಯಾಯ ನಾಲ್ಕರಲ್ಲಿ 'ಪಂಚಗಣಾಧೀಶ್ವರ' ಪರಿಕಲ್ಪನೆ ರೂಪುಗೊಳ್ಳಲು ಹಿನ್ನೆಲೆಯಾದ ಪ್ರಾಚೀನ 'ಗಣ' ಪದ್ಧತಿಯ ಕುರಿತು ಹಾಗೂ ಶೈವ ಪಾರಿಭಾಷಿಕ ಪದವಾಗಿ 'ಗಣ ಗಣಂಗಳು' ಹೇಗೆ ಪ್ರಯೋಗಿಸಲ್ಪಟ್ಟಿವೆ ಎನ್ನುವುದನ್ನು ವಿವರಿಸಲಾಗಿದೆ. ಶೈವ ಪರಂಪರೆಯಲ್ಲಿನ ವಿವಿಧ ಗಣ ಸಮೂಹಗಳನ್ನು (ತೇರಸಗಣ, ಪ್ರಮಥಗಣ ಇತ್ಯಾದಿ) ಮತ್ತು ೧೨ನೇ ಶತಮಾನದಲ್ಲಿನ ಗಣತತ್ವಗಳಾದ ಕಾಯಕ, ದಾಸೋಹ, ಸ್ತ್ರೀಸಮಾನತೆ, ಲಿಂಗದೀಕ್ಷೆ ಮುಂತಾದ ಅಂಶಗಳನ್ನು ವಿವರಿಸಲಾಗಿದೆ. ಈ ಎಲ್ಲ ಹಿನ್ನೆಲೆಯಲ್ಲಿ ಪಂಚಗಣಾಧೀಶ್ವರರು ಎನ್ನುವ ಪರಿಕಲ್ಪನೆಯು ಹೇಗೆ ಮೂಡಿಬಂತು ಎಂದು ಕಂಡುಕೊಳ್ಳಲಾಗಿದೆ. ಅಧ್ಯಾಯ ಐದರಲ್ಲಿ ಈ ಸಂತರ ಜೀವನದ ಕುರಿತು ವಿವರಿಸಲಾಗಿದೆ. ಈ ಸಂತರು ಮಧ್ಯಕರ್ನಾಟಕ ಭಾಗದ ಜನಸಮುದಾಯದ ಬದುಕಿನಲ್ಲಿ ವಹಿಸಿದ ಪಾತ್ರವನ್ನು, ಪವಾಡಗಳನ್ನು, ಸಾಧನೆಗಳನ್ನು ವಿವರಿಸಲಾಗಿದೆ. ಹಾಗೂ ಅವರ ಬಗೆಗಿರುವ ಚಾರಿತ್ರಿಕ ಗೊಂದಲಗಳನ್ನು ಸ್ಪಷ್ಟಗೊಳಿಸಿ ಕೊಳ್ಳಲಾಗಿದೆ. ಅಧ್ಯಾಯ ಆರರಲ್ಲಿ ಸಮುದಾಯಗಳ ಆಚರಣೆಗಳಲ್ಲಿ ಈ ಸಂತರು ಹೊಂದಿರುವ ರೂಪಾಂತರವನ್ನು, ಇದಕ್ಕೆ ಕೇಂದ್ರವಾದ ಮಠಗಳನ್ನು ಹಾಗೂ ವಿವಿಧ ಆಚರಣೆಗಳ ವೈಶಿಷ್ಟ್ಯವನ್ನು ಅದರ ಹಿಂದಿನ ತಾತ್ವಿಕತೆಯನ್ನು ವಿವರಿಸಲಾಗಿದೆ. ಅಧ್ಯಾಯ ಏಳರಲ್ಲಿ ಈ ಸಂತರ ಬಗೆಗೆ ಸಿಗುವ

ಲಿಖಿತ ಸಾಹಿತ್ಯವನ್ನು ಹಾಗೂ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮೌಖಿಕ ಸಾಹಿತ್ಯವನ್ನು ವಿಶ್ಲೇಷಿಸಲಾಗಿದೆ. ಶಿಷ್ಟ ಮತ್ತು ಮೌಖಿಕ ಪರಂಪರೆಗಳು ಸಂತರ ಚರಿತ್ರೆಯನ್ನು ಕಟ್ಟುವಾಗ ಹೊಂದುವ ಭಿನ್ನತೆಯನ್ನು ಈ ಎರೆಡು ಪ್ರಕಾರಗಳಲ್ಲಿ ಮತ್ತೆ ಮತ್ತೆ ಕಾಡುವ ಕಲ್ಯಾಣದ ನೆನಪಿನ ಕುರಿತು ಹಾಗೂ ಸಂತರ ಪಯಣದ ಹಾದಿಯನ್ನು ಕುರಿತು, ಸಾಹಿತ್ಯ ಪಠ್ಯಗಳಿಗೂ ಮತ್ತು ಆಚರಣೆಗಳಿಗೂ ಇರುವ ವೈರುಧ್ಯವನ್ನು ಕುರಿತು ವಿವರಿಸಲಾಗಿದೆ. ಅಧ್ಯಾಯ ಎಂಟರಲ್ಲಿ ಒಟ್ಟು ಅಧ್ಯಯನದ ಫಲಿತಾಂಶವನ್ನು ವಿವರಿಸಲಾಗಿದೆ. ಹಾಗೂ ಅನುಬಂಧದಲ್ಲಿ ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮೌಖಿಕ ಕಾವ್ಯಗಳನ್ನು, ಛಾಯಾಚಿತ್ರಗಳನ್ನು ಮಠ, ಗದ್ದುಗೆಗಳ ಪಟ್ಟಿಯನ್ನು, ವಕ್ತೃಗಳ ವಿವರವನ್ನು ಹಾಗೂ ಗ್ರಂಥಋಣವನ್ನು ನೀಡಲಾಗಿದೆ.

## ೧.೪. ಆಕರ ಸಾಮಗ್ರಿ ಮತ್ತು ಈವರೆಗಿನ ಅಧ್ಯಯನಗಳು

ಪಂಚಗಣಾಧೀಶ್ವರರ ಕುರಿತು ಸಂಶೋಧನಾತ್ಮಕ ಅಧ್ಯಯನಗಳು ಹೆಚ್ಚಾಗಿ ನಡೆದಿಲ್ಲ. ಆದರೆ ಪ್ರತಿಯೊಬ್ಬ ಸಂತರಿಗೂ ಸಂಬಂಧಿಸಿದಂತೆ ಆಯಾ ಕ್ಷೇತ್ರಗಳಲ್ಲಿ ಪುರಾಣ ಕಥನಗಳು, ಪವಾಡಗಳು, ಕ್ಷೇತ್ರ ಮಹಿಮೆಯನ್ನೊಳಗೊಂಡ ಗ್ರಂಥಗಳು, ಕಾವ್ಯಗಳು, ಸ್ತೋತ್ರಗಳು, ನಾಮಾವಳಿಗಳು ರಚಿತವಾಗಿವೆ. ಅವುಗಳ ಸಮೀಕ್ಷೆ ಈ ಕೆಳಗಿನಂತಿದೆ.

ನಾಯಕನಹಟ್ಟಿ ತಿಪ್ಪೇಸ್ವಾಮಿಗೆ ಸಂಬಂಧಿಸಿದಂತೆ ಬಸಪ್ಪ ಎಂ.(೧೯೫೮) 'ಅವತಾರ ಪುರುಷ ಶ್ರೀ ತಿಪ್ಪೇರುದ್ರಸ್ವಾಮಿಯವರ ಮಹಾತ್ಮೆ' ಎನ್ನುವ ಪುಟ್ಟ ಗದ್ಯ ಕೃತಿ ಮೊಟ್ಟಮೊದಲ ಬಾರಿಗೆ ರಚನೆಯಾಗಿದೆ. ಈ ಕೃತಿಕಾರರು ವದನಕಲ್ಲಿನವರಾಗಿದ್ದರಿಂದ(ಪಾವಗಡ ತಾ.) ಆ ಸ್ಥಳಕ್ಕೆ ಸಂಬಂಧಿಸಿದಂತೆ ಹೆಚ್ಚಿನ ವಿವರಣೆಯನ್ನು ನೀಡುತ್ತಾರೆ. ಬಸವರಾಜ ಮಹದೇವಪುರ(೧೯೮೬) ಅವರ 'ಶ್ರೀಗುರು ತಿಪ್ಪೇರುದ್ರಸ್ವಾಮಿ ಮಹಾತ್ಮೆ' ಎನ್ನುವ ಕಥನಕಾವ್ಯ ಕೃತಿಯು ತಿಪ್ಪೇಸ್ವಾಮಿಯ ಪವಾಡಗಳನ್ನು ಮೊದಲಬಾರಿಗೆ ಕಾವ್ಯರೂಪದಲ್ಲಿ ವಿವರಿಸಿದೆ. ಶ್ರೀ ಸಿದ್ಧವೀರಕವಿ ಸೊಕ್ಕೆ(೧೯೮೪) ರಚಿಸಿದ 'ಶ್ರೀ ಗುರು ತಿಪ್ಪೇರುದ್ರೇಶ್ವರ ಪುರಾಣಂ' ಎನ್ನುವ ಷಟ್ಪದಿ ಕೃತಿಯು ತಿಪ್ಪೇಸ್ವಾಮಿ ಜೀವನದ ಬಗೆಗಿರುವ ಬೃಹತ್ ಕೃತಿಯಾಗಿದೆ. ಮೇಲಿನ ಬರಹಗಳಿಗಿಂತ ಭಿನ್ನವಾಗಿರುವ ಇದು ಪಂಚಗಣಾಧೀಶ್ವರರನ್ನು ಹಿಮಗಿರಿಯಿಂದ ಬಂದವರು ಎಂದು ಗುರುತಿಸುತ್ತದೆ. ಒಟ್ಟು ೨೧ ಸಂಧಿಯಿಂದ ಕೂಡಿರುವ ಈ ಕೃತಿಯು ೧೭-೧೭ನೇ ಶತಮಾನದ ರಾಜಕೀಯ ಸ್ಥಿತಿಗತಿಯ ಬಗ್ಗೆ ಸಂಕ್ಷಿಪ್ತ ವಿವರವನ್ನು ನೀಡುತ್ತದೆ. ಪ್ರೊ.ಡಿ.ಟಿ.ರಂಗಸ್ವಾಮಿಯವರು (೧೯೯೧) ರಚಿಸಿದ 'ಶ್ರೀ ಗುರು ತಿಪ್ಪೇರುದ್ರಸ್ವಾಮಿ ಮಹಿಮಾಮೃತ' ಕೃತಿಯು ತಿಪ್ಪೇಸ್ವಾಮಿ ಬಗೆಗೆ ಪ್ರಮುಖ ಚರ್ಚೆಗಳನ್ನು ಎತ್ತಿಕೊಂಡರೂ ನಿಡಗಲ್ಲು ಸಂಸ್ಥಾನದ ಬಗೆಗೆ ಗೊಂದಲವುಂಟಾಗುವ ಮಾಹಿತಿಯನ್ನು ನೀಡುತ್ತದೆ. ಇನ್ನು ನಾಯಕನಹಟ್ಟಿ ದೇವಾಲಯದ ಕಾರ್ಯನಿರ್ವಹಣಾ ಅಧಿಕಾರಿಯಾಗಿ ಸೇವೆ ಸಲ್ಲಿಸಿದ ಚಂದ್ರಶೇಖರ ವಿ.ದಾವಣಗೇರಿ(೨೦೦೧) ಅವರು ರಚಿಸಿದ 'ಕಾಯಕಯೋಗಿ ಶ್ರೀಗುರು ತಿಪ್ಪೇರುದ್ರಸ್ವಾಮಿ(ಜೀವನ ಚರಿತ್ರೆ ಮತ್ತು ಕ್ಷೇತ್ರ ದರ್ಶನ)' ಎನ್ನುವ ಕೃತಿಯು ತಿಪ್ಪೇಸ್ವಾಮಿಗೆ

ಸಂಬಂಧಿಸಿದಂತೆ ಐತಿಹಾಸಿಕ ದಾಖಲೆಗಳ ಸಮೇತ ವಿವರಿಸಿದೆ. ದೇವಾಲಯಗಳ ವಾಸ್ತುಶಿಲ್ಪ ಆಚರಣೆಗಳನ್ನು ಕುರಿತು ಸಂಕ್ಷಿಪ್ತವಾಗಿ ಖಚಿತವಾಗಿ ವಿವರಿಸಲಾಗಿದೆ. ಇವರಲ್ಲದೆ ಶ್ರೀ ಶಂಕರಯ್ಯ ಅವರ 'ಪವಾಡಪುರುಷ ಶ್ರೀ ಗುರು ತಿಪ್ಪೇರುದ್ರಸ್ವಾಮಿ ಚರಿತ್ರೆ' ಮತ್ತು ಕೊಟ್ರಪ್ಪಯ್ಯಶಾಸ್ತ್ರಿ ಎಂ.ವಿ.ಎನ್. ಅವರ 'ನಾಯಕನಹಟ್ಟಿ ಶ್ರೀ ಗುರು ತಿಪ್ಪೇರುದ್ರಸ್ವಾಮಿ ಚರಿತ್ರೆ' ಎನ್ನುವ ಪುಟ್ಟ ಕೃತಿಗಳು ನಮಗೆ ದೊರೆಯುತ್ತವೆ. ವಿಶೇಷ ಈ ಪುಸ್ತಕಗಳಲ್ಲಿ ಮಾಹಿತಿಗಳು ದೊರೆಯುವುದಿಲ್ಲ. ಜನಪ್ರಿಯ ಮಾದರಿಯಲ್ಲಿ ರಚಿತವಾಗಿರುವ ಈ ಕೃತಿಗಳು ತಿಪ್ಪೇಸ್ವಾಮಿಯ ಬಗೆಗೆ ಪ್ರಥಮ ಮಾಹಿತಿಗಳನ್ನು ನೀಡಬಲ್ಲವು.

ಮೇಲ್ಲಿನ ಎಲ್ಲ ಕೃತಿಗಳನ್ನು ಹೊರತುಪಡಿಸಿ ತಿಪ್ಪೇಸ್ವಾಮಿಯ ಬಗೆಗೆ, ನಾಯಕನಹಟ್ಟಿ ಪರಿಸರದ ಬಗೆಗೆ ಸಂಶೋಧನಾತ್ಮಕ ಅಧ್ಯಯನ ಮಾಡಿದ ಕೃತಿಗಳು ಹಾಗೂ ವಿಶೇಷ ಒಳನೋಟಗಳನ್ನು ಕೊಡುವ ಲೇಖನಗಳು ಹಲವಾರು ಇವೆ. ಅವರಲ್ಲಿ ಖ್ಯಾತ ಜಾನಪದ ವಿದ್ವಾಂಸರಾದ ಡಾ.ಅಂಬಳಿಕೆ ಹಿರಿಯಣ್ಣನವರು (೧೯೭೮) ಸಂಪಾದಿಸಿದ 'ಕಾಡುಗೊಲ್ಲರ ಜನಪದ ಗೀತೆಗಳು' ಎನ್ನುವ ಕೃತಿಯು ಮುಖ್ಯವಾದುದು. ಈ ಸಂತನ ಬಗೆಗೆ ಕಾಡುಗೊಲ್ಲರು ಹಾಡಿರುವ ಕಾವ್ಯವು ತಿಪ್ಪೇಸ್ವಾಮಿಯ ಒಟ್ಟು ಜೀವನ, ಪವಾಡಗಳನ್ನು ಕುರಿತು ವಿಶಿಷ್ಟ ಮಾಹಿತಿಗಳನ್ನು ನೀಡುತ್ತದೆ. ತಿಪ್ಪೇಸ್ವಾಮಿ ಆಚರಣೆಗೆ ಹಿನ್ನೆಲೆಯಾಗಿರುವ ಘಟನೆಗಳನ್ನು ವಿವರಿಸುತ್ತದೆ. ತಿಪ್ಪೇಸ್ವಾಮಿ ಕುರಿತ ಅಧ್ಯಯನದಲ್ಲಿ ಇದೊಂದು ಪ್ರಮುಖ ಆಕರವನ್ನಾಗಿ ಬಳಸಿಕೊಳ್ಳಲಾಗಿದೆ.

ಕೃಷ್ಣಮೂರ್ತಿ ಹನೂರು(೧೯೯೩) ಅವರು 'ಮ್ಯಾಸಬೇಡರ ಸಂಸ್ಕೃತಿ' ಎನ್ನುವ ಕೃತಿಯನ್ನು ರಚಿಸಿದ್ದಾರೆ. ಇದರಲ್ಲಿ ಮ್ಯಾಸಬೇಡರ ರಾಜಕೀಯ, ಆರ್ಥಿಕ, ಧಾರ್ಮಿಕ ವಿಷಯಗಳನ್ನು ಸಮಗ್ರವಾಗಿ ಕ್ಷೇತ್ರ ಕಾರ್ಯ ಮಾಡಿ ವಿವರಿಸಿದ್ದಾರೆ. ಹಾಗೆಯೇ ತಿಪ್ಪೇಸ್ವಾಮಿಗೆ ಸಂಬಂಧಿಸಿದ ಹೊರಮಠ, ಒಳಮಠ, ರಥೋತ್ಸವಗಳ ಕುರಿತು ವಿಶ್ಲೇಷಣೆ ಮಾಡಿದ್ದಾರೆ. ಅನುಬಂಧದಲ್ಲಿ ತಿಪ್ಪೇಸ್ವಾಮಿಗೆ ಸಂಬಂಧಿಸಿದ ಜನಪದಗೀತೆಯನ್ನು ಸಂಗ್ರಹಿಸಿ ಕೊಟ್ಟಿದ್ದಾರೆ.

ರುದ್ರಪ್ಪ ಕರಿಶೆಟ್ಟಿ(೧೯೯೪)ಅವರ ಪ್ರೌಢ ಪ್ರಬಂಧ 'ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ' ಕೃತಿ ತಿಪ್ಪೇಸ್ವಾಮಿಯನ್ನು ಹಾಗೂ ಈತನನ್ನು ಆರಾಧಿಸುವ ಪ್ರಮುಖ ಜನಾಂಗವಾದ ಮ್ಯಾಸಬೇಡರ ಜನಜೀವನ, ಆಚರಣೆ, ಸಂಪ್ರದಾಯಗಳ ಕುರಿತು ಕ್ಷೇತ್ರಕಾರ್ಯದ ಆಧಾರದ ಮೇಲೆ ವಿಶಿಷ್ಟವಾಗಿ ಅಧ್ಯಯನ ಮಾಡಿದೆ. ನಂಬಿಕೆ, ಕತೆ, ಹಾಡು, ಲಾವಣಿಗಳನ್ನು ಆಧರಿಸಿ ಈ ಕೃತಿ ರಚನೆಯಾಗಿದೆ.

ಮೀರಸಾಬಿಹಳ್ಳಿ ಶಿವಣ್ಣನವರು 'ಗೊಲ್ಲಕಡಗ'(೧೯೯೯) 'ದುರುಗ ಜಾನಪದ' ಎನ್ನುವ ಕೃತಿಗಳಲ್ಲಿ ನಾಯಕನಹಟ್ಟಿ ಪರಿಸರದ ಬಗೆಗೆ ಲೇಖನಗಳನ್ನು ಬರೆದಿದ್ದಾರೆ. 'ಜಾನಪದ ನೆಲೆಯಲ್ಲಿ ಹಟ್ಟಿ ಜಾತ್ರೆ' ಎನ್ನುವ ಲೇಖನ ತಿಪ್ಪೇಸ್ವಾಮಿ ಆಚರಣೆಗಳ ಬಗೆಗೆ ಮಾಹಿತಿಗಳನ್ನು ಒದಗಿಸುತ್ತದೆ. ಡಾ.ವಿರೂಪಾಕ್ಷಿ

ಪೂಜಾರಹಳ್ಳಿಯವರು ಹಂಪಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ(೨೦೦೨) 'ಮಧ್ಯಕಾಲೀನ ಕನ್ನಡ ಕಾವ್ಯಗಳಲ್ಲಿ ನಿರೂಪಿತವಾಗಿರುವ ಬೇಟೆ ಮತ್ತು ಬೇಡರ ಸಂದರ್ಭಗಳು : ಒಂದು ಚಾರಿತ್ರಿಕ ಅಧ್ಯಯನ' ಎನ್ನುವ ಕೃತಿ ಹಾಗೂ 'ಚಿತ್ರದುರ್ಗಜಿಲ್ಲೆಯ ಬುಡಕಟ್ಟು ವೀರರು'(೨೦೦೨) ಎನ್ನುವ ಕೃತಿಗಳು ತಿಪ್ಪೇಸ್ವಾಮಿ ಮತ್ತು ಆ ಪರಿಸರದ ಆಚರಣೆ, ಹಾಡು, ಕಲೆ, ನಂಬಿಕೆಗಳ ಕುರಿತು ವಿವರಿಸಿವೆ.

'ನಾಯಕನಹಟ್ಟಿ ತಿಪ್ಪೇಸ್ವಾಮಿ : ಒಂದು ಸಾಂಸ್ಕೃತಿಕ ಅಧ್ಯಯನ' ಎನ್ನುವ ಪ್ರೌಢ ಪ್ರಬಂಧವನ್ನು ಬಿ.ಆರ್.ಸತೀಶ್(೨೦೦೧) ಅವರು ಕುವೆಂಪು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ತಿಪ್ಪೇಸ್ವಾಮಿ ಜೀವನ ಸಾಧನೆ ಪವಾಡಗಳನ್ನು ಕುರಿತು ಇಲ್ಲಿ ವಿವೇಚನೆ ಮಾಡಲಾಗಿದೆ. ನಾಯಕನಹಟ್ಟಿಯ ಭೌಗೋಳಿಕ ಪರಿಸರ, ಈ ಭಾಗದ ಜನಪದ ಹಾಡು, ಕಲೆ, ಆಚರಣೆಗಳನ್ನು ಆಧರಿಸಿ ಈ ಕೃತಿ ರಚನೆಯಾಗಿದೆ. ತಿಪ್ಪೇಸ್ವಾಮಿ ದೇವಾಲಯಗಳ ಬಗ್ಗೆ ಅಲ್ಲಿನ ಪಾಳೇಗಾರರ ಬಗ್ಗೆ ವಿವರವಾದ ಮಾಹಿತಿಯನ್ನು ಒದಗಿಸುತ್ತದೆ. ಇಲ್ಲಿ ಸಾಕಷ್ಟು ಮಾಹಿತಿಗಳನ್ನು ಸಂಗ್ರಹಿಸಿದ್ದರೂ ವಿಶ್ಲೇಷಣೆಗೆ ಒಳಪಡಿಸುವಾಗ ರಾಜಕೀಯಾರ್ಥಿಕ ಆಯಾಮದ ಬಗೆಗೆ ಗಮನಿಸಿಲ್ಲ.

ಇವರಲ್ಲದೆ ಪ್ರೊ.ಲಕ್ಷ್ಮಣ್ ತೆಲಗಾವಿ (ಜನಪದ ಸಾಹಿತ್ಯ ಚಾರಿತ್ರಿಕ ವಿವೇಚನೆ), ಬಿ.ಪಿ.ವಿರೇಂದ್ರ ಕುಮಾರ್ (ಬುಡಕಟ್ಟು ಸಂಸ್ಕೃತಿಯ ಹಿನ್ನೆಲೆಯಲ್ಲಿ ನಾಯಕನಟ್ಟಿ ಶ್ರೀ ತಿಪ್ಪೇಸ್ವಾಮಿ ಜಾತ್ರೆ), ಎಂ.ವಿ. ಚಿತ್ರಲಿಂಗಯ್ಯ (ನಾಯಕನಟ್ಟಿ ಬಖೈರು), ರಾಜಶೇಖರಪ್ಪ ಬಿ.(ನಾಯಕನಟ್ಟಿ ತಾಮ್ರಪಟ) ಮುಂತಾದವರು ತಮ್ಮ ಬರಹಗಳ ಮೂಲಕ ನಾಯಕನಟ್ಟಿ ತಿಪ್ಪೇಸ್ವಾಮಿ, ಅಲ್ಲಿನ ಪರಿಸರ, ಆಚಾರ-ಸಂಪ್ರದಾಯಗಳ ಬಗ್ಗೆ ಮಾಹಿತಿಯನ್ನು ಒದಗಿಸಿದ್ದಾರೆ.

ಕೊಟ್ಟೂರು ಗುರುಬಸವನಿಗೆ ಸಂಬಂಧಿಸಿದಂತೆ ಇರುವ ಪ್ರಮುಖ ಆಕರವೆಂದರೆ ಬಸವಲಿಂಗಕವಿ ಬರೆದ(೧೬೭೮) 'ಕೊಟ್ಟೂರು ಬಸವೇಶ್ವರ ಚಾರಿತ್ರ್ಯ' ಎನ್ನುವ ಕೃತಿ. ಇದು ೧೯ ಸಂಧಿಗಳನ್ನು ಹೊಂದಿದ್ದು ಗುರುಬಸವನು ಕೈಲಾಸದಿಂದ ಭೂಲೋಕಕ್ಕೆ ಬಂದು ಸುಜ್ಞಾನಿ ದೇವನಿಗೆ ಪಟ್ಟಕಟ್ಟಿ (ಸರಸೀಪುರದಲ್ಲಿ) ಹುಚ್ಚನಂತೆ ತಿರುಗುತ್ತ ಹಂಪಿ ಮಾರ್ಗವಾಗಿ ಕೊಟ್ಟೂರಿಗೆ ಬಂದು ಮಾಡಿದ ನಾನಾ ಪವಾಡಗಳನ್ನು ಇಲ್ಲಿಯೇ ಜೀವಂತ ಸಮಾಧಿಯಾದುದನ್ನು ವಿವರಿಸುತ್ತದೆ. ಈ ಕೃತಿಯಲ್ಲಿ ದೆಹಲಿಯ ಅಕ್ಬರ್, ಹರಪನಹಳ್ಳಿಯ ದಾದಿನಾಯಕ, ಸಾಸಲ ಭೈರವೇಂದ್ರ, ಸೊಂಡೂರು ಪರವಿನಾಯಕ ಮುಂತಾದ ಅರಸರನ್ನು ಗೌರವಾಂಕ, ಚೆನ್ನಾಂಚಾರ್ಯಕವಿಗಳನ್ನು, ಕೋಲಶಾಂತ, ಮದ್ದಾನಿಸಿದ್ಧಲಿಂಗಯ್ಯ ಇತ್ಯಾದಿ ಸಂತರನ್ನು ಕುರಿತು ವಿವರಿಸಿರುವುದರಿಂದ ಇದು ಗುರುಬಸವನ ಕಾಲ, ಪರಿಸರ, ಜೀವನ ಅರಿಯಲು ಅಧ್ಯಯನಕಾರರಿಗೆ ಪ್ರಮುಖ ಆಕರಗ್ರಂಥವಾಗಿದೆ. ಇದಕ್ಕಿಂತಲೂ ಮುಂಚೆ ಸಿದ್ದನಂಜೇಶನು(೧೬೦೦) ಬರೆದ 'ಗುರುರಾಜ ಚಾರಿತ್ರ' ಕೃತಿಯು ನೂತನ ಗಣಂಗಳನ್ನು ವಿವರಿಸುವಾಗ ಗುರುಬಸವನ ಹಲವಾರು ಪವಾಡಗಳನ್ನು ವಿವರಿಸುತ್ತದೆ. ಈ ಎರಡು ಚಾರಿತ್ರಿಕ ಕಾವ್ಯಗಳಲ್ಲದೆ ಸುತ್ತೂರು ಶಿವರಾತ್ರೀಶ್ವರ

ಗ್ರಂಥಮಾಲೆಯವರು ಸಂಪಾದಿಸಿ ಪ್ರಕಟಿಸಿದ ಸ್ವರವಚನ ಸಂಪುಟಗಳಲ್ಲಿ ಕೊಟ್ಟೂರ ಗುರುಬಸವನಿಗೆ ಸಂಬಂಧಿಸಿದ ಮಾಹಿತಿಗಳು ದೊರೆಯುತ್ತವೆ.

ಮಂಜುನಾಥಶಾಸ್ತ್ರಿಗಳು ಸಂಪಾದಿಸಿದ(೧೯೮೫) 'ಕೊಟ್ಟೂರೇಶ್ವರ ಮುತ್ತಿಗೆ ಪದ್ಯಾವಳಿಗಳು' ಎನ್ನುವ ಪುಟ್ಟ ಕೃತಿಯು ಗುರುಬಸವನು ಸಮಾಧಿಯಾದನಂತರ ಮಾಡಿದ ಪವಾಡದ ಬಗ್ಗೆ ವಿವರಿಸುತ್ತದೆ. ಷಡಕ್ಷರಾನಂದ ಶಿವಾಚಾರ್ಯಸ್ವಾಮಿ(೧೯೭೭)ಯವರು 'ಕೊಟ್ಟೂರು ಶ್ರೀ ಗುರುಬಸವರಾಜೇಂದ್ರನ ಲೀಲೆ' ಎನ್ನುವ ಕೃತಿಯು ಬಸವಲಿಂಗಕವಿಯ 'ಕೊಟ್ಟೂರ ಬಸವೇಶ್ವರ ಚಾರಿತ್ರ್ಯ' ಕೃತಿಯನ್ನು ಗದ್ಯರೂಪದಲ್ಲಿ ವಿವರಿಸಿದೆ. ಸಿದ್ದಯ್ಯ ಪುರಾಣಿಕ ಅವರು(೧೯೬೪) 'ಶರಣಚರಿತಾಮೃತ' ಕೃತಿಯಲ್ಲಿ ಹಲವಾರು ಶರಣರನ್ನು ವಿವರಿಸುವಾಗ ಕೊಟ್ಟೂರ ಗುರುಬಸವನನ್ನು ಕುರಿತು ವಿವರಣೆ ನೀಡಿದ್ದಾರೆ.

ಪ್ರಮುಖವಾಗಿ ಎಂ.ಶರಣಪ್ಪ ಅವರು(೧೯೯೬) 'ಕೊಟ್ಟೂರೇಶ್ವರ: ಒಂದು ಸಾಂಸ್ಕೃತಿಕ ಅಧ್ಯಯನ' ಎನ್ನುವ ಎಂ.ಫಿಲ್.ಪ್ರಬಂಧವನ್ನು ಧಾರವಾಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಇದು ಮೊದಲಬಾರಿಗೆ ಪೂರ್ಣಪ್ರಮಾಣದಲ್ಲಿ ಗುರುಬಸವನ ಕುರಿತು ಚಾರಿತ್ರಿಕ, ಆಚರಣಾತ್ಮಕ ವಿವರಗಳನ್ನು ಕೊಡಲು ಪ್ರಯತ್ನಿಸಿದೆ. ಆದರೆ ಇಲ್ಲಿ ಮಾಹಿತಿ ಸಂಗ್ರಹವಿದೆಯೇ ಹೊರತು ತಾತ್ವಿಕವಾದ ಚರ್ಚೆ ಕಂಡುಬರುವುದಿಲ್ಲ. ಆರ್.ಸಿ.ಹಿರೇಮಠರು(೧೯೬೧) 'ಬಸವಲಿಂಗಕವಿ ವಿರಚಿತ ಕೊಟ್ಟೂರಬಸವೇಶ್ವರ ಚಾರಿತ್ರ್ಯ' ಕೃತಿಯ ಪ್ರಸ್ತಾವನೆಯಲ್ಲಿ ಗುರುಬಸವ ಮತ್ತು ಕವಿಯ ಕಾಲ ಸ್ಥಳದ ಕುರಿತು ಚರ್ಚಿಸಿದ್ದಾರೆ. ಎಸ್.ಎಂ. ನಾಗಭೂಷಣ್ ಅವರು 'ಕೊಟ್ಟವ್ವೆಯ ಊರು ಕೊಟ್ಟೂರು' ಎನ್ನುವ ಲೇಖನ, ಗುರುಬಸವನಿಗಿಂತ ಪೂರ್ವದ ಕೊಟ್ಟೂರಿನ ಚಿತ್ರಣವನ್ನು ಕೊಡುತ್ತದೆ. ಪಿ.ವಿ.ಕೃಷ್ಣಮೂರ್ತಿಯವರು ಬರೆದ 'ಸಜ್ಜೆಯ ಸಿದ್ದಲಿಂಗಾರ್ಯನ ಮಳೆಯರಾಜ ಚಾರಿತ್ರ್ಯ-ಸುಗುಟೂರು ದೊರೆಗಳ ಶಾಸನಗಳು' ಎನ್ನುವ ಲೇಖನವು ಗುರುಬಸವನು ಕೊಟ್ಟೂರಿಗೆ ಬರುವುದಕ್ಕಿಂತ ಮುಂಚಿತವಾಗಿನ ಜೀವನವನ್ನು ವಿವರಿಸುತ್ತದೆ. ಕುಂ.ಬಾ.ಸದಾಶಿವಪ್ಪ(೧೯೯೬) ಬರೆದಿರುವ 'ಹರಪನಹಳ್ಳಿ ಪಾಳೇಗಾರರು' ಕೃತಿಯು ಗುರುಬಸವನ ಬಗ್ಗೆ ಈತನ ಪ್ರಭಾವದಲ್ಲಿದ್ದ ಹರಪನಹಳ್ಳಿ ಪಾಳೇಗಾರರ ಬಗ್ಗೆ ವಿವರಿಸುತ್ತದೆ.

ಕೂಲಹಳ್ಳಿ ಮದ್ದಾನಸ್ವಾಮಿಗೆ ಸಂಬಂಧಿಸಿದ ಪ್ರಮುಖ ಆಕರಗ್ರಂಥವೆಂದರೆ 'ಗೋಣಿಬಸವೇಶ್ವರ ಚರಿತ್ರೆ'(೧೯೯೦) ಎನ್ನುವ ಕೃತಿ. ಈಡಿಗರ ಚಂದ್ರಪ್ಪ ಎನ್ನುವ ಅನಕ್ಷರಸ್ಥ ಬೇರೆಯವರಿಗೆ ಹೇಳಿ ಬರೆಸಿದ ಈ ಕೃತಿ ಮದ್ದಾನಸ್ವಾಮಿ ಮತ್ತು ಆತನ ಮಗ ಗೋಣಿಬಸವನ ಬಗ್ಗೆ ವಿವರವಾದ ಮಾಹಿತಿಯನ್ನು ಒದಗಿಸುತ್ತದೆ. ಇದು ಪಂಚಗಣಾಧೀಶ್ವರರ ಆರಂಭಿಕ ಜೀವನದ ಬಗೆಗೆ ಕೂಡ ವಿಶಿಷ್ಟವಾದ ವಿವರಗಳನ್ನು ಕೊಡುತ್ತದೆ. ಕೂಲಹಳ್ಳಿ ಮಠದಲ್ಲಿ ನಡೆಯುವ ಆಚರಣೆಗೆ ಹಿನ್ನೆಲೆಯಾಗಿರುವ ಘಟನೆಗಳನ್ನು ವಿವರಿಸುತ್ತದೆ. ಬಾಲಬಸವ ಪಂಥದ ಮೂಲದ ಬಗ್ಗೆ ಅವರ ಜೀವನ ವಿಧಾನದ ಬಗ್ಗೆ ಮಾಹಿತಿಗಳನ್ನು ಒದಗಿಸುತ್ತದೆ. ಬಾಸಬಸವರು ಹಾಡುವ ಗೋಣಿಬಸವನ ಕಾವ್ಯವನ್ನೇ ಆಧರಿಸಿ ಈ

ಕೃತಿಯನ್ನು ರಚಿಸಲಾಗಿದೆ. ಒಟ್ಟಾರೆ ಈ ಕೃತಿ ಗೋಣಿಬಸವನನ್ನೇ ಪ್ರಮುಖವಾಗಿ ಚಿತ್ರಿಸಿದರೂ ಪಂಚಗಣಾಧೀಶ್ವರರ ಕುರಿತು ಕೊಡುವ ಆಕರಗಳು ಈ ಬಗ್ಗೆ ಅಧ್ಯಯನ ಮಾಡುವವರಿಗೆ ಮಹತ್ವದ ಕೃತಿಯಾಗಿ ಕಂಡುಬರುತ್ತದೆ. ಮಹಾಬಲೇಶ ಕಾಟ್ರಹಳ್ಳಿಯವರು ಬರೆದ(೧೯೯೩) 'ಬಾಗಿಳಿಯೆ ಬಾಗಳಿಗೆ' ಕೃತಿಯು ಪಂಚಗಣಾಧೀಶ್ವರರು ಇದ್ದರೆನ್ನಲಾದ ಬಾಗಳಿಯ ಕಲ್ಲೇಶ್ವರ ದೇವಸ್ಥಾನ ಮತ್ತು ಕೂಲಹಳ್ಳಿಯ ಮದ್ದಾನಸ್ವಾಮಿ ಹಾಗೂ ಮಠದ ಬಗೆಗೆ ವಿವರಣೆಯನ್ನು ಕೊಡುತ್ತದೆ.

ಬಿ.ಆರ್.ಮಂಜುನಾಥ ಅವರು(೨೦೦೧) 'ಬಾಲಬಸವರು ಸಾಹಿತ್ಯ ಹಾಗೂ ಸಾಂಸ್ಕೃತಿಕ ಅಧ್ಯಯನ' ಎನ್ನುವ ಎಂ.ಫಿಲ್.ಪ್ರಬಂಧವನ್ನು ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದು ಇದು ಮದ್ದಾನಸ್ವಾಮಿ ಮತ್ತು ಗೋಣಿಬಸವ ಕುರಿತು ಸಂಕ್ಷಿಪ್ತ ಮಾಹಿತಿಯನ್ನು ಹಾಗೂ ಬಾಲಬಸವರ ಆಚಾರ ನಂಬಿಕೆ ಕುರಿತು ವಿವರವನ್ನು ಒದಗಿಸುತ್ತದೆ. ಡಾ.ಯಲ್ಲಪ್ಪ ಕೆ.ಕೆ.ಪುರ ಅವರು ಬರೆದಿರುವ ಲೇಖನ 'ಕಾಲಜ್ಞಾನದ ಬಾಲಬಸವರು' ಎನ್ನುವುದು ಗೋಣಿಬಸವ ಕಾವ್ಯ ಹಾಡುವ ಬಾಲಬಸವರ ಜೀವನ ಪದ್ಧತಿ ಬಗ್ಗೆ ಅವರ ಕಾಲಜ್ಞಾನದ ಬಗ್ಗೆ ಮಾಹಿತಿ ಒದಗಿಸುತ್ತದೆ. ಸಾವಳಗಿ ನಾಗಪ್ಪ(೨೦೦೦) ಬರೆದ 'ಗೋಣಿಬಸವೇಶ್ವರ ಮಹಾತ್ಮೆ' ಕೃತಿ ಮದ್ದಾನಸ್ವಾಮಿ ಮತ್ತು ಗೋಣಿಬಸವನ ಕುರಿತು ಜನಪ್ರಿಯ ಮಾದರಿಯ ಪುಸ್ತಕವಾಗಿದೆ.

ಅರಸೀಕೆರೆ ಕೋಲಶಾಂತನಿಗೆ ಸಂಬಂಧಿಸಿದಂತೆ ಎಂ.ವೃಷಬೇಂದ್ರಸ್ವಾಮಿಗಳು(೧೯೮೪) 'ಶ್ರೀ ನಿರಂಜನ ಗಣಾಧೀಶ್ವರ ಕೋಲಶಾಂತಯ್ಯನವರ ನೂರೊಂದು ವಚನಗಳು' ಎನ್ನುವ ಕೃತಿಯನ್ನು ಸಂಪಾದಿಸಿದ್ದಾರೆ. ಈ ಕೃತಿಯ ಪ್ರಸ್ತಾವನೆಯಲ್ಲಿ ಪಂಚಗಣಾಧೀಶ್ವರರ ಬಗ್ಗೆ ಮತ್ತು ಇವರಲ್ಲೊಬ್ಬ ಸಂತನಾದ ಕೋಲಶಾಂತನ ಬಗ್ಗೆ ಚರ್ಚಿಸಿದ್ದಾರೆ. ಆದರೆ ಅರಸೀಕೆರೆ ಕೋಲಶಾಂತನೇ ಬೇರೆ ಹಾಗೂ ಈ ಕೃತಿಯಲ್ಲಿ ಸಂಪಾದಿಸಿದ ವಚನಗಳನ್ನು ಬರೆದ ಕೋಲಶಾಂತನೇ ಬೇರೆ ಎಂದು ನನ್ನ ಪ್ರಬಂಧದಲ್ಲಿ ಸ್ಪಷ್ಟಪಡಿಸಿರುವುದರಿಂದ (ಅಧ್ಯಾಯ ೫.೪.೧) ಈ ಕೃತಿಯನ್ನು ಕೋಲಶಾಂತನ ಬಗೆಗಿರುವ ಗೊಂದಲದ ಚರ್ಚೆಗೆ ಆಕರವಾಗಿ ಸೀಮಿತಗೊಳಿಸಿಕೊಳ್ಳಲಾಗಿದೆ. ಕೋಲಶಾಂತನ ಜೀವನವನ್ನು ವಿವರಿಸುವಾಗ ಈ ವಚನಗಳನ್ನು ಬಳಸಿಕೊಂಡಿಲ್ಲ. ಬಸವಲಿಂಗ ಕವಿ 'ಕೊಟ್ಟೂರ ಬಸವೇಶ್ವರ ಚಾರಿತ್ರ್ಯ' ಕೃತಿಯಲ್ಲಿ ಗುರುಬಸವನೊಂದಿಗೆ ಕೋಲಶಾಂತನ ಬಗ್ಗೆ ಕೃತಿಯುದ್ದಕ್ಕೂ ಹೆಸರಿಸಿದ್ದಾನೆ. ಹೆರೂರು ಬಸವಣ್ಣನವರು ಬರೆದ 'ಅರಸೀಕೆರೆಯ ಶ್ರೀ.ಮ.ನಿ.ಪ್ರ.ಕೋಲಶಾಂತೇಶ್ವರ ಮಹಾಸ್ವಾಮಿಗಳ ನೂರೆಂಟು ನಾಮಾವಳಿ' ಕೃತಿಯು ಜನಪ್ರಿಯ ಮಾದರಿಯಲ್ಲಿ ಕೋಲಶಾಂತನನ್ನು ವರ್ಣಿಸಿದೆ.

ಹರಪನಹಳ್ಳಿ ಕೆಂಪಯ್ಯನಿಗೆ ಸಂಬಂಧಿಸಿದಂತೆ ನಮಗೆ ಹೆಚ್ಚಿನ ಆಕರಗಳು ಸಿಗುವುದಿಲ್ಲ. ಈಡಿಗರ ಚಂದ್ರಪ್ಪ ಬರೆದ 'ಗೋಣಿಬಸವೇಶ್ವರ ಚರಿತ್ರೆ' ಕೃತಿಯಲ್ಲಿ ಬಿಟ್ಟರೆ ತೆಲುಗಿನಲ್ಲಿ ಹುಲಿಕುಂಟೆಮೂರ್ತಿ ಆರ್.ಸಿ.(೨೦೦೧) ಬರೆದ 'ಚರಿತ್ರ ವಲಗುಲೋ ರಾಯದುರ್ಗಮು' ಎನ್ನುವ ಕೃತಿಯಲ್ಲಿ ಕಂಡುಬರುತ್ತದೆ. ತೆಲುಗು ಕೃತಿಗಳು ಕೆಂಪಯ್ಯನ ಸಮಾಧಿ ರಾಯದುರ್ಗದಲ್ಲಿ (ಅನಂತಪುರ ಜಿಲ್ಲೆ) ಆಗಿದೆ ಎಂದು ತಿಳಿಸುತ್ತದೆ.

ಮೇಲಿನ ಎಲ್ಲ ಬರವಣಿಗೆಗಳು ಪಂಚಗಣಾಧೀಶ್ವರರಲ್ಲಿನ ಒಬ್ಬೊಬ್ಬ ಸಂತನನ್ನು ಕುರಿತು ಇಲ್ಲವೆ ಆ ಪ್ರದೇಶದ ಪರಿಸರವನ್ನು ಕುರಿತು ಮಾಹಿತಿಯನ್ನು ಒದಗಿಸುತ್ತವೆಯೇ ವಿನಃ ಎಲ್ಲ ಸಂತರನ್ನು ಕುರಿತು ಒಂದೆಡೆ ಚರ್ಚಿಸಿಲ್ಲ. ಒಟ್ಟು ಐವರು ಗಣಾಧೀಶ್ವರರನ್ನು ಕುರಿತು ರಚಿತವಾಗಿರುವ ಮಹತ್ವದ ಕೃತಿಯೆಂದರೆ ಎಸ್.ಎಸ್.ಹಿರೇಮಠ ಅವರು ಬರೆದಿರುವ(೧೯೯೭) ಪಂಚಗಣಾಧೀಶ್ವರರು ಒಂದು ಅವಲೋಕನ ಎನ್ನುವುದಾಗಿದೆ. ಸಂಶೋಧನಾತ್ಮಕ ಬರಹವಾಗಿರುವ ಇದು ಪಂಚಗಣಾಧೀಶ್ವರ ಪಂಥವು ರೂಪುಗೊಳ್ಳಲು ಇರುವ ರಾಜಕೀಯಾರ್ಥಿಕ ಹಿನ್ನೆಲೆಯನ್ನು ಮಠಗಳ ಬಗೆಗೆ ವಿವರಣೆಯನ್ನು, ಆಚರಣೆಗಳ ಹಿಂದಿರುವ ತಾತ್ವಿಕತೆಯನ್ನು ವಿವರಿಸುವುದಾಗಿದೆ. ಪಂಚಗಣಾಧೀಶ್ವರರಿಗೆ ಹಿನ್ನೆಲೆಯಾಗಿರುವ ವೀರಶೈವ ಪರಂಪರೆಯನ್ನು ಕುರಿತು ವಿವರಿಸಲಾಗಿದೆ. ವಿಷಯ ನಿರೂಪಣೆಯಲ್ಲಿ ಕ್ರಮಬದ್ಧತೆ ಇಲ್ಲದಿದ್ದರೂ ಹಲವಾರು ಅಂಶಗಳಿಗೆ ಉತ್ತರವನ್ನು ಕಂಡುಕೊಳ್ಳಲಾಗಿದೆ. ಉತ್ತರ ಕಂಡುಕೊಳ್ಳಲಾಗದೆ ಇರುವವುಗಳನ್ನು ಮುಂದಿನ ಅಧ್ಯಯನಕಾರರಿಗೆ ಸಹಾಯಕವಾಗಲೆಂದು ಪ್ರಶ್ನೆಗಳನ್ನು ಎತ್ತಿದ್ದಾರೆ. ಇದು ಹಿಂದಿನ ಎಲ್ಲ ಬರವಣಿಗೆಗಳಿಗಿಂತ ಮಹತ್ವದ ಕೃತಿಯಾಗಿದೆ.

ಇದಲ್ಲದೆ ಸದ್ಯೋಜಾತ ಮೂರ್ತಿಯವರು ಬರೆದ(೧೯೮೪) 'ಶ್ರೀ ಪಂಚಗಣಾಧೀಶ್ವರರು' ಎನ್ನುವ ಕೃತಿ ಐವರು ಸಂತರು ಕುರಿತು ಸಂಕ್ಷಿಪ್ತ ವಿವರಣೆ ನೀಡುತ್ತದೆ. ಆರ್.ಶಿವಶರಣ ಅವರು(೧೯೯೬) 'ಪಂಚಗಣಾಧೀಶ್ವರರು: ಒಂದು ಅಧ್ಯಯನ' ಎನ್ನುವ ಎಂ.ಫಿಲ್.ಪ್ರಬಂಧವನ್ನು ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇದು ಐವರು ಸಂತರ ಚಾರಿತ್ರಿಕ ವಿವೇಚನೆ ಮಾಡಿದೆ. ಆದರೆ ಆಚರಣೆ, ಮಠಗಳ ಬಗ್ಗೆ ವಿವರ ನೀಡವುದಿಲ್ಲ. ಇದಲ್ಲದೆ ಬಳ್ಳಾರಿ, ಚಿತ್ರದುರ್ಗ, ಜಿಲ್ಲಾ ಗೆಜೆಟೀಯರ್ ಗಳು ಪಂಚಗಣಾಧೀಶ್ವರರ ಪರಿಸರದ ಕುರಿತು ಮಾಹಿತಿಯನ್ನು ಒದಗಿಸುತ್ತವೆ.

ಈ ಮೇಲಿನವುಗಳೆಲ್ಲ ಬರಹರೂಪದಲ್ಲಿರುವ ಆಕರಗಳಾದರೆ ಬಾಲಬಸವರು ಗೋಣಿಬಸವನ ಕಾವ್ಯ ಹಾಡುವ ಹರಿಜನರು ಹಾಡುವ ಗುರುಬಸವನ ಕುರಿತ ಬಿಡಿಪದಗಳು, ಕೋಲಾಟಪದಗಳು, ಹಲವಾರು ಮಿತ್‌ಗಳು ಬರಹರೂಪದಲ್ಲಿ ಇನ್ನೂ ಪ್ರಕಟವಾಗಿರದ ಆಕರ ಸಾಮಗ್ರಿಗಳಾಗಿವೆ. ಇವಲ್ಲದೆ ನಾಯಕನಹಟ್ಟಿ, ಕೊಟ್ಟೂರು, ಕೂಲಹಳ್ಳಿ, ಹರಪನಹಳ್ಳಿ, ಅರಸೀಕೆರೆ, ರಾಯದುರ್ಗ, ಗುಮ್ಮಗೋಳದ ಮಠಗಳಲ್ಲಿ ನಡೆಯುವ ನಿತ್ಯ ಪೂಜೆಗಳು, ಕಾರ್ತಿಕೋತ್ಸವ, ಜಾತ್ರೆ ಮುಂತಾದ ವೈಶಿಷ್ಟ್ಯಪೂರ್ಣ ಆಚರಣೆಗಳು, ವೈವಿಧ್ಯಮಯ ಜೀವನ ಪದ್ಧತಿಯನ್ನು, ಹಲವಾರು ವಕ್ತೃಗಳ ಹೇಳಿಕೆಗಳು ಪಂಚಗಣಾಧೀಶ್ವರರಿಗೆ ಸಂಬಂಧಿಸಿದಂತೆ ಇರುವ ಆಕರ ಸಾಮಗ್ರಿಗಳಾಗಿವೆ. ಒಟ್ಟಾರೆ ಇವೆಲ್ಲವುಗಳನ್ನು ಈ ಪ್ರೌಢ ಪ್ರಬಂಧವನ್ನು ರಚಿಸುವ ಸಂದರ್ಭದಲ್ಲಿ ಆಕರಗಳನ್ನಾಗಿ ಬಳಸಿಕೊಳ್ಳಲಾಗಿದೆ.

# ಅಧ್ಯಾಯ ೨

# ಮಧ್ಯಕಾಲೀನ ಕರ್ನಾಟಕದ ಸಂಸ್ಕೃತಿಯಲ್ಲಿ ಪಂಚಗಣಾಧೀಶ್ವರರು

## ೨.೧. ಒತ್ತಡಗಳು

೨.೧.೧. ರಾಜಕೀಯ ಒತ್ತಡಗಳು

೨.೧.೨. ಧಾರ್ಮಿಕ ಒತ್ತಡಗಳು

೨.೧.೩. ಸಾಮಾಜಿಕ ಒತ್ತಡಗಳು

## ೨.೨. ಪ್ರೇರಣೆಗಳು

೨.೨.೧. ೧೨ನೇ ಶತಮಾನದ ಕಾಲ

೨.೨.೨. ನೂರೊಂದು ವಿರಕ್ತರ ಕಾಲ

೨.೨.೩. ತೋಂಟದ ಸಿದ್ಧಲಿಂಗಯತಿಗಳ ಕಾಲ

## ೨.೩. ಸಮಕಾಲೀನ ಪಂಥ-ಪರಂಪರೆಗಳು

೨.೩.೧. ಕೊಡೇಕಲ್ ಬಸವಣ್ಣ

೨.೩.೨. ತಿಂಥಿಣಿ ಮೋನಪ್ಪಯ್ಯ

೨.೩.೩. ಶಿರಹಟ್ಟಿ ಫಕ್ಕಿರೇಶ

೨.೩.೪. ಸಾವಳಗಿ ಶಿವಲಿಂಗ

೨.೩.೫. ಮಂಟೇಸ್ವಾಮಿ

೨.೩.೬. ಮಲೆಮಾದೇಶ್ವರ

# ಮಧ್ಯಕಾಲೀನ ಕರ್ನಾಟಕ ಸಂಸ್ಕೃತಿಯಲ್ಲಿ ಪಂಚಗಣಾಧೀಶ್ವರರು

ಮಧ್ಯಕಾಲೀನ ಕರ್ನಾಟಕದ ಸಂಸ್ಕೃತಿ ಚರಿತ್ರೆಯಲ್ಲಿ ೧೨ನೇ ಶತಮಾನದ ಶರಣ ಚಳುವಳಿಗೆ ಮಹತ್ವದ ಸ್ಥಾನವಿದೆ. ಅಷ್ಟೇ ಮಹತ್ವದ ಮಾನವೀಯವಾದ ಸಮಾನತೆ ಸಾರಿದ ಸಾಂಸ್ಕೃತಿಕ ಆಂದೋಲನಗಳು ೧೨ನೇ ಶತಮಾನದ ನಂತರವೂ ನಡೆದಿವೆ. ಅವುಗಳಲ್ಲಿ ಸೂಫಿ-ನಾಥಸಿದ್ಧ ಪಂಥಗಳಾದ ಕೊಡೇಕಲ್ ಬಸವಣ್ಣ, ತಿಂಥಿಣಿ ಮೋನಪ್ಪಯ್ಯ, ಶಿರಹಟ್ಟಿ ಫಕ್ಕೀರೇಶ, ಸಾವಳಗಿ ಶಿವಲಿಂಗ ಪಂಥಗಳು ಹಾಗೂ ಮೌಖಿಕ ಮಹಾಕಾವ್ಯವನ್ನು ಕಟ್ಟಿಕೊಂಡ ನೀಲಗಾರ ಪಂಥ(ಮಂಟೇಸ್ವಾಮಿ), ದೇವರ ಗುಡ್ಡರ ಪಂಥ(ಮಲೆ ಮಾದೇಶ್ವರ), ಬಾಲಬಸವರ ಪಂಥಗಳು(ಗೋಣಿ ಬಸವೇಶ್ವರ) ಮುಖ್ಯವಾದವುಗಳು.

ಈ ಎಲ್ಲ ಪಂಥ-ಪರಂಪರೆಗಳು ಸಮಾನತೆಯ ನೆಲೆಗಟ್ಟಿನ ಮೇಲೆ ನೂತನ ಸಮಾಜವನ್ನು ನಿರ್ಮಿಸಲು ಪ್ರಯತ್ನಿಸಿದವು. ಇದೇ ಉದ್ದೇಶವನ್ನು ಇಟ್ಟುಕೊಂಡು ಮಧ್ಯಕರ್ನಾಟಕದ ಬಳ್ಳಾರಿ, ಚಿತ್ರದುರ್ಗ, ಕೊಪ್ಪಳ, ದಾವಣಗೆರೆ, ಹಾವೇರಿ, ಗದಗ ಭಾಗದಲ್ಲಿ ಪ್ರಚಲಿತ ಇರುವ ಇನ್ನೊಂದು ಪಂಥವೆಂದರೆ ಪಂಚಗಣಾಧೀಶ್ವರರ ಪಂಥ.

೧೬-೧೭ನೇ ಶತಮಾನದಲ್ಲಿನ ಕೊಟ್ಟೂರ ಗುರುಬಸವರಾಜ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಕೂಲಹಳ್ಳಿ ಮದ್ದಾನಸ್ವಾಮಿ, ಅರಸೀಕೆರೆ ಕೋಲಶಾಂತ, ಮತ್ತು ಹರಪನಹಳ್ಳಿ ಕೆಂಪಯ್ಯ ಈ ಐವರು ಮಧ್ಯಕರ್ನಾಟಕ ಭಾಗದಲ್ಲಿ ಉತ್ಸವ ಆಚರಣೆಗಳ ಮೂಲಕ ಜನಪದರಲ್ಲಿ ಅಪಾರ ಪ್ರಭಾವವನ್ನು ಬೀರುವುದರ ಮೂಲಕ 'ಪಂಚಗಣಾಧೀಶ್ವರರು' ಎನ್ನುವ ಪರಿಕಲ್ಪನೆಗೆ ಕಾರಣರಾಗಿದ್ದಾರೆ.

ಈ ಪಂಥವು ಪೂರ್ವದ ಶರಣರ ಚಳುವಳಿಯೊಂದಿಗೆ ಹಾಗೂ ಅಂದಿನ ಸಮಕಾಲೀನ ಪರಂಪರೆಗಳೊಂದಿಗೆ ನಿಕಟ ಸಂಬಂಧವನ್ನು ಹೊಂದಿದೆ. ಅವು ಒಂದನ್ನೊಂದು ಆಧರಿಸಿಕೊಂಡು ಬಂದಿರುವುದರಿಂದ, ಪರಸ್ಪರ ಸಮರ್ಥನೆಯನ್ನು ಕಾಯ್ದುಕೊಂಡು ಬಂದಿರುವುದರಿಂದ, ಪಂಚಗಣಾಧೀಶ್ವರರನ್ನು ಮಧ್ಯಕಾಲೀನ ಶರಣ ಚಳುವಳಿಯಿಂದಾಗಲಿ ಸಮಕಾಲೀನ ಪಂಥ-ಪರಂಪರೆಗಳಿಂದಾಗಲಿ ಬೇರ್ಪಡಿಸಿ ಅರ್ಥ ಮಾಡಿಕೊಳ್ಳಲು ಆಗಲಾರದು.

ಮಧ್ಯಕಾಲದಲ್ಲಿ ದೇವಾಲಯ ಸಂಸ್ಕೃತಿಯು ಪ್ರಬಲವಾಗಿ ಬೆಳೆಯಿತು. ೭ನೇ ಶತಮಾನದ ಅವಧಿಯಲ್ಲಿ ಶೈವ ಧರ್ಮಾವಲಂಬಿಗಳಾದ ಬಾದಾಮಿ ಚಾಲುಕ್ಯರು ಐಹೊಳೆಯಲ್ಲಿಯೇ ೭೦ರಷ್ಟು

ದೇವಾಲಯಗಳನ್ನು ಕಟ್ಟಿಸಿದರು. ಪಟ್ಟದಕಲ್ಲಿನಿಂದ ದಕ್ಷಿಣದ ಗುಂಡ್ಲುಪೇಟೆಯವರೆಗೆ ಶೈವ ದೇವಾಲಯ ರಚನೆ ರಭಸದಿಂದ ನಡೆಯಿತು. ಅದರಲ್ಲೂ ರಾಷ್ಟ್ರಕೂಟರ ಕಾಲದಲ್ಲಿ ಧಾರವಾಡದಿಂದ ದಕ್ಷಿಣ ಕನ್ನಡ ಜಿಲ್ಲೆಯವರೆಗೆ ಹಬ್ಬಿರುವ ಶಿವದೇವಾಲಯಗಳನ್ನು ನೋಡಿದರೆ ದೇವಾಲಯಗಳ ನಿರ್ಮಾಣಕಾರ್ಯ ಎಷ್ಟು ತ್ವರಿತಗತಿಯಿಂದ ನಡೆಯಿತು ಎನ್ನುವುದು ತಿಳಿದುಬರುತ್ತದೆ. '೧೧ನೇ ಶತಮಾನದಲ್ಲಂತೂ ದೇವಸ್ಥಾನಗಳ ನಿರ್ಮಾಣಕ್ಕೆ ದಾನ ದತ್ತಿಗಳಿಗೆ ಇನ್ನಿಲ್ಲದ ಪುರಸ್ಕಾರ, ಅದರಲ್ಲೂ ವಿಶೇಷವಾಗಿ ಧಾರವಾಡ, ಚಿತ್ರದುರ್ಗ, ಶಿವಮೊಗ್ಗ ಜಿಲ್ಲೆಗಳಲ್ಲಿ ಶಿವದೇವಾಲಯಗಳ ಪ್ರಸಾರ ಕಾರ್ಯ ಇನ್ನಿಲ್ಲದ ಉತ್ಸಾಹದಿಂದ ನಡೆಯಿತು.(ರಮೇಂದ್ರನಾಥ ನಂದಿ, ೧೯೭೩, ಪು.೪)ಈ ಸಮಯದಲ್ಲಿ ಸ್ಥಾವರ ಪೂಜಕರು ದೇವಾಲಯಗಳ ಬೆಳವಣಿಗೆಯನ್ನು ತೀವ್ರಗತಿಯಲ್ಲಿ ಸಾಧಿಸಿಕೊಂಡು ದಾನದತ್ತಿಗಳನ್ನು ರಾಜರಿಂದಲೂ ಜನಸಾಮಾನ್ಯರಿಂದಲೂ ಪಡೆದುಕೊಂಡರು. ಶೈವದೇವಾಲಯಗಳು ವೇದಶಾಸ್ತ್ರದ ಮೂಲಕ ವೈದಿಕ ಮೌಲ್ಯಗಳನ್ನು, ಬ್ರಾಹ್ಮಣರು ಸೃಷ್ಟಿಸಿದ ಶ್ರೇಣಿ ಪದ್ಧತಿಯನ್ನು ರಕ್ಷಿಸಿಕೊಂಡು ಬಂದವು. ಇದರಿಂದಾಗಿ ಸಮಾಜದ ಬಹುಸಂಖ್ಯಾತರು ಶೋಷಣೆಗೊಳಪಟ್ಟರು.

ಇದೇ ಅವಧಿಯಲ್ಲಿ ಉಂಟಾದ ಮುಖ್ಯವಾದ ಪ್ರಕ್ರಿಯೆಯೆಂದರೆ ಸಂತೆಗಳ ನಿರ್ಮಾಣ ಹಾಗೂ ನಾಣ್ಯದ ಚಲಾವಣೆಯ ಪ್ರಮಾಣದಲ್ಲಿ ಏರಿಕೆ ೧೧ ಮತ್ತು ೧೨ನೇ ಶತಮಾನದ ಶಾಸನಗಳು ಸಂತೆಗಳ ಬಗ್ಗೆ ಪುನರಾವರ್ತಿತ ಹಾಗೂ ನಿರ್ದಿಷ್ಟ ಉಲ್ಲೇಖಗಳನ್ನು ನೀಡುತ್ತವೆ. ಈ ಸಂತೆಗಳು, ರೈತರು ಹಾಗೂ ಕಸುಬುದಾರ ಉತ್ಪಾದಕರು ತಮ್ಮ ಉತ್ಪನ್ನಗಳನ್ನು ಮಾರುವುದಕ್ಕೆ ಹಾಗೂ ಮಧ್ಯವರ್ತಿ ವ್ಯಾಪಾರಿಗಳು ಅದರೊಂದಿಗೆ ವ್ಯವಹರಿಸುವುದಕ್ಕಾಗಿ ಉಂಟುಮಾಡಿದ ಒತ್ತಾಯದ ಫಲಿತಾಂಶಗಳಾಗಿವೆ. ಇದೇ ಸಮಯದಲ್ಲಿ ಜನಸಂಖ್ಯೆಯ ಕೇಂದ್ರೀಕರಣದಿಂದ ಉಂಟಾದ ನಗರಗಳು ಸಂತೆಯ ಮೂಲಕ ಕೃಷಿಕರು ಮತ್ತು ಕುಶಲಕರ್ಮಿಗಳ ಉತ್ಪಾದನೆಗೆ ಬೇಡಿಕೆಗಳನ್ನು ಹೆಚ್ಚಿಸಿದವು. 'ಬ್ರಾಹ್ಮಣ ಒಡೆಯರಿಗೆ ಹಾಗೂ ಉಳಿಗಮಾನ್ಯ ಮುಖ್ಯಸ್ಥರಿಗೆ ಈ ಸಂತೆಗಳ ರಚನೆಯನ್ನು ಗುರುತಿಸುವುದು ಹಾಗೂ ಅವುಗಳ ಕಾರ್ಯಾಚರಣೆಯನ್ನು ಮಾನ್ಯ ಮಾಡುವುದು ಅನಿವಾರ್ಯವಾಯಿತು. ಆ ಮೂಲಕವಾಗಿ ಅವರು ರೈತರ ಹಾಗೂ ಕುಶಲಕರ್ಮಿಗಳ ಒಂದು ವಿಭಾಗದ ಹೊಸ ಬಗೆಯ ಅಸ್ತಿತ್ವವನ್ನು ಅನುಮತಿಸುವ ನಿರ್ಬಂಧಕ್ಕೆ ಗುರಿಯಾದರು(ಸಾಕಿ, ೧೯೯೮, ಪು.೨೨೬). ಈ ರೀತಿಯ ಮಾನ್ಯತೆಯಿಂದಾಗಿ ಕೃಷಿಕರು ಮತ್ತು ಕುಶಲಕರ್ಮಿಗಳು ಆರ್ಥಿಕವಾಗಿ ಪ್ರಬಲರಾದರು. ೧೨ನೇ ಶತಮಾನದ ಹೊತ್ತಿಗೆ ಕುಶಲಕರ್ಮಿಗಳು ಕೃಷಿಕ್ಷೇತ್ರದಿಂದ ಸಂಪೂರ್ಣವಾಗಿ ಬೇರ್ಪಟ್ಟು ತಮ್ಮ ಕೌಶಲ್ಯದ ಬಲದಿಂದಲೇ ಬದುಕಲಾರಂಭಿಸಿದರು. ಆದರೆ ಅಗ್ರಹಾರದ ಭೂಮಾಲೀಕ ವರ್ಗವು ತಮ್ಮ ಅಧಿಕಾರ ಬಲದಿಂದ ಹೆಚ್ಚೆಚ್ಚು ತೆರಿಗೆಗಳನ್ನು ಹಾಕುವ ಮೂಲಕ ಹಳೆಯ ಉಳಿಗಮಾನ್ಯ ವಿಧಾನದ ಶ್ರಮಕ್ಕೆ ಅವರನ್ನು ಒಳಪಡಿಸಲು ಪ್ರಯತ್ನಿಸಿದರು.

ಒಂದು ಕಡೆ ಸಾಮಾಜಿಕ ಅಸಮಾನತೆಯನ್ನು ಸಮರ್ಥಿಸುತ್ತಿದ್ದ ದೇವಾಲಯ-ಅಗ್ರಹಾರಗಳಲ್ಲಿದ್ದ ಪುರೋಹಿತಶಾಹಿ, ಇನ್ನೊಂದೆಡೆ ಉಳಿಗಮಾನ್ಯ ಪದ್ಧತಿಯನ್ನು ಪೋಷಿಸಿಕೊಂಡು ಬಂದ ಭೂಮಾಲಿಕರು,

ಅರಸರು ಒಬ್ಬರನ್ನೊಬ್ಬರು ಸಮರ್ಥಿಸುತ್ತ ಸಾಮಾಜಿಕ ಮತ್ತು ಆರ್ಥಿಕ ವೈಷಮ್ಯದಿಂದೊಡಗೂಡಿದ ಸಮಾಜ ನಿರ್ಮಾಣದಲ್ಲಿ ತೊಡಗಿದರು. ದೇವಾಲಯಗಳು ಧರ್ಮದ ಹೆಸರಿನಲ್ಲಿ ಸಾಮಾಜಿಕ ಅಸಮಾನತೆಯನ್ನು ಸಮರ್ಥಿಸುತ್ತಿದ್ದರೆ, ಅರಸರು ಪ್ರಭುತ್ವದ ಅಸ್ತಿತ್ವಕ್ಕಾಗಿ, ದೇವಾಲಯಗಳನ್ನು ಬೆಂಬಲಿಸುತ್ತಿದ್ದರು. ಹೀಗಾಗಿ ೧೨ನೇ ಶತಮಾನದ ಕಾಲಕ್ಕಾಗಲೇ ದುಡಿಯುವ ವರ್ಗ ಹಾಗೂ ಧಾರ್ಮಿಕ, ರಾಜಕೀಯ ಪ್ರಭುತ್ವಕ್ಕೂ ತಿಕ್ಕಾಟ ಶುರುವಾಯಿತು.

೧೨ನೇ ಶತಮಾನದ ಶರಣಕ್ರಾಂತಿಯಲ್ಲಿ ಪಾಲ್ಗೊಂಡವರಲ್ಲಿ ಹೆಚ್ಚು ಜನ ದುಡಿಯುವ ವರ್ಗದವರಾಗಿದ್ದರು. ಅಂಬಿಗರ ಚೌಡಯ್ಯ, ಆಯ್ದಕ್ಕಿ ಮಾರಯ್ಯ, ಜೋದರ ಮಾಯಣ್ಣ, ಮೇದಾರ ಕೇತಯ್ಯ, ಬಹುರೂಪಿ ಚೌಡಯ್ಯ, ತುರುಗಾಹಿ ರಾಮಣ್ಣ, ನುಲಿಯ ಚಂದಯ್ಯ, ಡೋಹರ ಕಕ್ಕಯ್ಯ, ಹೀಗೆ ಎಷ್ಟೊ ಹೆಸರಿನೊಂದಿಗೆ ಅವರ ವೃತ್ತಿಗಳನ್ನು ಸೂಚಿಸುತ್ತಿದ್ದ ಶರಣರ ಪಟ್ಟಿಯನ್ನು ನೋಡಿದರೆ, ಅವರೆಲ್ಲ ವಿವಿಧ ಉತ್ಪಾದಕ ವೃತ್ತಿ ಹಾಗು ಕುಲಗಳಿಂದ ಬಂದವರೆಂದು ಗೋಚರವಾಗುತ್ತದೆ. ಈ ಕಾಯಕ ಜೀವಿಗಳಿಗೆ ಬೆಂಬಲವಾಗಿ ಬಸವ, ಅಲ್ಲಮ, ಚೆನ್ನಬಸವಣ್ಣನಂತಹ ಶರಣರು ಅಕ್ಕಮಹಾದೇವಿ, ನಾಗಲಾಂಬಿಕೆ, ನೀಲಮ್ಮ, ಆಯ್ದಕ್ಕಿ ಲಕ್ಕಮ್ಮನಂತಹ ಶರಣೆಯರು ಸೇರಿಕೊಂಡರು.

ಹೀಗೆ ಒಟ್ಟುಗೂಡಿದ ಸಮಾನ ಮನಸ್ಕರಾದ ಕಾಯಕ ಜೀವಿಗಳ ಸಂಘಟನೆ ಒಂದು ಹಂತಕ್ಕೆ ತಲುಪಿ ಅದು ತನ್ನ ಉತ್ಪಾದಕ ಚಟುವಟಿಕೆಗಳ ಸಕ್ರೀಯತೆಯನ್ನು ಮೀರಿ ಒಟ್ಟು ಜನಜೀವನದ ಸಮಗ್ರ ಬದಲಾವಣೆ ಬಯಸಿ ಪಟ್ಟಭದ್ರ ಹಿತಾಸಕ್ತಿಗಳನ್ನು ಪ್ರಶ್ನಿಸತೊಡಗಿದಾಗ ಅದಕ್ಕೆ ಸಾಮಾಜಿಕ ಕ್ರಾಂತಿಯ ರೂಪ ಪ್ರಾಪ್ತವಾಯಿತು. ಇದನ್ನೇ 'ಶರಣರ ಕ್ರಾಂತಿ', 'ಕಲ್ಯಾಣ ಕ್ರಾಂತಿ' ಎಂದು ಕರೆಯಲಾಗುತ್ತದೆ.

ಶರಣರು ತಮ್ಮ ಆಲೋಚನೆಗಳನ್ನು ಪರಿಣಾಮಕಾರಿಯಾಗಿ ಅಭಿವ್ಯಕ್ತಿಸಲು ವಚನಗಳನ್ನು ಬರೆದರು. ಇವು ಭಾಷೆ, ವಸ್ತು, ಶೈಲಿಯ ದೃಷ್ಟಿಯಿಂದ ಹೊಸಪರಂಪರೆಯನ್ನೇ ಸೃಷ್ಟಿಸಿದವು. 'ಎಂತಹವನಾದಡೇನು, ಲಿಂಗ ಮುಟ್ಟಿದವನೆ ಕೀಳುಜಾತಿ' ಎನ್ನುವ ಮೂಲಕ ಹಳೆಯ ಜಾತಿಪದ್ಧತಿಯನ್ನು ಖಂಡಿಸಿ ಎಲ್ಲರನ್ನೂ ಸಮಾನರಾಗಿ ಕಾಣಲಾರಂಭಿಸಿದರು. ವೃತ್ತಿ ಆಧಾರಿತ ದುಡಿಮೆಯಲ್ಲಿ ಸಮಾನ ಸ್ಥಾನವನ್ನು ಪ್ರಜ್ಞಾಪೂರ್ವಕವಾಗಿ ನೀಡಿದರು. 'ಕಾಯಕವೇ ಕೈಲಾಸ' ಎಂಬ ತತ್ವವನ್ನು ಪ್ರತಿಪಾದಿಸಿದರು. ಕಾಯಕದಿಂದ ಬಂದ ದುಡಿಮೆಯನ್ನು ದಾಸೋಹಕ್ಕೆ ಬಳಸಿದರು. ದೇವಾಲಯ ಕೇಂದ್ರಿತ ಆರಾಧನಾ ಪದ್ಧತಿಯನ್ನು ನಿರಾಕರಿಸಿ 'ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ' ಎನ್ನುವುದರ ಮೂಲಕ ದೇವಾಲಯ ಸಂಸ್ಕೃತಿಗೆ ಬಲವಾದ ಹೊಡೆತ ನೀಡಿದರು. ಮಹಿಳೆಯರಿಗೆ ಸ್ವಾತಂತ್ರ್ಯವನ್ನು ಕಲ್ಪಿಸುವುದರ ಮೂಲಕ ಅವರೂ ಚಳುವಳಿಯಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸು ವಂತಾಯಿತು. ಈ ಸಾಮಾಜಿಕ ಬದಲಾವಣೆ ಮಧುವರಸ-ಹರಳಯ್ಯನ ಮಕ್ಕಳ ಮದುವೆಯ ವಿಷಯವಾಗಿ ಉತ್ತುಂಗ ಸ್ಥಿತಿಯನ್ನು ಮುಟ್ಟಿ ಬಿಜ್ಜಳನ ಕೊಲೆಯಲ್ಲಿ ಕೊನೆಗೊಂಡು ಶರಣರು ಕಲ್ಯಾಣವನ್ನು ಬಿಡುವಂತಾಯಿತು.

೧೩ನೇ ಶತಮಾನದಲ್ಲಾಗಲೇ ಶರಣಚಳುವಳಿ ತನ್ನ ಮೂಲ ಆಶಯದಿಂದ ಬದಲಾವಣೆ ಹೊಂದುತ್ತಿರುವುದನ್ನು ಕಾಣಬಹುದು. '೧೩ನೇ ಶತಮಾನದ ಉತ್ತರಾರ್ಧದಲ್ಲಿ ಲಿಂಗಾಯತ ಜಂಗಮರು ರಾಜಮನ್ನಣೆಯನ್ನು, ದಾನದತ್ತಿಗಳನ್ನು ಹುಡುಕಿಕೊಂಡು ಹೊರಟಿದ್ದಾರೆ. ಇಷ್ಟಲಿಂಗ ಪೂಜೆಯ ಜೊತೆಗೆ ಸ್ಥಾವರ ಲಿಂಗದ ಪೂಜೆಯನ್ನು, ದೇವಮಂದಿರಗಳ ನಿರ್ಮಾಣ ಕಾರ್ಯವನ್ನು ಅವರು ಕೈಗೊಂಡುದು ಆ ಕಾಲದ ಲಿಂಗಾಯಿತ ಧರ್ಮದಲ್ಲಿ ತಲೆದೂರಿದ್ದ ವೈಪರಿತ್ಯದ ಲಕ್ಷಣವಾಗಿದೆ.(ಹಿರೇಮಲ್ಲೂರ್ ಈಶ್ವರನ್, ೧೯೯೭, ಪು.೧೦೧)

ಬಸವನ ನಂತರಬಂದ ಶರಣರಿಗೂ ಕಾಳಮುಖ ಸನ್ಯಾಸಿಗಳಿಗೂ ವಿಶೇಷ ಸಂಬಂಧವಿದೆ. ಕಾಳಮುಖರಂತೆ ನಂತರದ ಶರಣರೂ ಲಿಂಗ ಪೂಜಕರು, ಮಠಗಳನ್ನು ಸ್ಥಾಪಿಸಿದರು. ಭಸ್ಮ, ರುದ್ರಾಕ್ಷಿ ಮುಂತಾದ ಬಾಹ್ಯ ಆವರಣಗಳಿಗೆ ಮಹತ್ವಕೊಟ್ಟರು. ಇದರಿಂದಾಗಿ ಕಾಲಕ್ರಮೇಣ ಕಾಳಮುಖ ಮಠಗಳನ್ನು ಶರಣರು ಆಕ್ರಮಿಸಿಕೊಳ್ಳುವಂತಾಯಿತು.

ಹಂಪೆಯ ದಡದಲ್ಲಿ ವಿಜಯನಗರ ಸ್ಥಾಪಿಸಿದ ಸಂಗಮ ವಂಶದ ಅರಸರು ಕಾಳಮುಖ ಧರ್ಮದ ಪೋಷಕರಾಗಿದ್ದರು. 'ಒಂದನೇ ಹರಿಹರನಿಗೆ ಕಾಶೀವಿಲಾಸಶಕ್ತಿ, ಅರಸು ವಿಜಯಭೂಪತಿಗೆ ಕ್ರಿಯಾಶಕ್ತಿ, ಎರಡನೇ ದೇವರಾಯನಿಗೆ(೧೪೧೯-೧೪೪೬) ಮಲ್ಲಿಕಾರ್ಜುನ ಕ್ರಿಯಾಶಕ್ತಿ ಎಂಬ ಹೆಸರಿನ ಕಾಳಮುಖ ಆಚಾರ್ಯರು ಗುರುಗಳಾಗಿದ್ದರು. ೧೫ನೇ ಶತಮಾನಕ್ಕಾಗಲೇ ಲಿಂಗಾಯತ ಧರ್ಮ ಮತ್ತು ಕಾಳಮುಖ ಧರ್ಮ ಒಂದರೊಳಗೊಂದು ಲೀನವಾಗಿ ಹೋದವು'.(ಅದೇ, ಪು.೧೦೨)

ಇದಕ್ಕೆ ಪ್ರಮುಖವಾಗಿ ೧೨ನೇ ಶತಮಾನದ ನಂತರ ಬಂದ ಹೊಯ್ಸಳ(೧೯೨೨-೧೩೪೬) ಹಾಗೂ ವಿಜಯನಗರ ಕಾಲದ ಅರಸರು ಕಾರಣರಾಗಿದ್ದಾರೆ. ಇವರು ಜೈನ, ಕಾಳಮುಖ, ವೈಷ್ಣವ ಧರ್ಮಗಳಿಗೆ ಪ್ರೋತ್ಸಾಹ ನೀಡಿದರು. ಹೀಗೆ ಏಕಾಏಕಿ ಬಂದ ರಾಜಕೀಯ ವಿಪ್ಲವ, ಹಿಂದೂ ಬ್ರಾಹ್ಮಣ ಧರ್ಮಗಳ ಪ್ರಭಾವ ಮತ್ತು ಆ ಕಾಲದ ಸಾಮಾಜಿಕ, ಆರ್ಥಿಕ ಪರಿಸರಗಳ ಒತ್ತಡದಿಂದಾಗಿ ಲಿಂಗಾಯತ ಧರ್ಮವು ಹಿಂದೂ-ಬ್ರಾಹ್ಮಣ ಧರ್ಮದ ಪಲವಾರು ಗುಣಗಳನ್ನು ಅಂಗೀಕರಿಸುವಂತಾಯಿತು. ದೇವಾಲಯಗಳ ನಿರ್ಮಾಣಕಾರ್ಯ, ಶರಣರ ಕೃತಿಗಳಲ್ಲಿ ಕಾಳಮುಖ ಆಚಾರ್ಯರ ಪ್ರಶಂಸೆ ಹಾಗೂ ಕಾಳಮುಖ ಆಚಾರ್ಯರಿಗೆ ದಾನದತ್ತಿಗಳನ್ನು ಕೊಡುವ ಮೂಲಕ ಕಾಳಮುಖ ಧರ್ಮದೊಂದಿಗೆ ಲಿಂಗಾಯತ ಧರ್ಮ ಲೀನವಾಗಿ ಪ್ರೌಢದೇವರಾಯನ ಕಾಲಕ್ಕೆ ಪ್ರವರ್ಧಮಾನಕ್ಕೆ ಬಂತು.

ಪ್ರೌಢದೇವರಾಯನ ದಂಡನಾಯಕನಾದ ಲಕ್ಕಣ್ಣ ದಂಡೇಶನ ನೇತೃತ್ವದಲ್ಲಿ ೧೦೧ ವಿರಕ್ತರು ಪೂರ್ವದ ಶರಣರ ಆಲೋಚನೆಗಳಿಗೆ ಸಾಂಸ್ಥಿಕ ರೂಪವನ್ನು ನೀಡಲು ಪ್ರಯತ್ನಿಸಿದರು. ಲಕ್ಕಣ್ಣ ದಂಡೇಶ(ಶಿವತತ್ವ ಚಿಂತಾಮಣಿ), ಕರಸ್ಥಲದ ವೀರಣ್ಣೊಡೆಯ (ಇಷ್ಟಲಿಂಗ ಚರಿತ್ರೆ, ಕರಸ್ಥಲ ವೀರಣ್ಣಗಳ

ವಚನ, ಲಿಂಗಸೂತ್ರಗಳ ವಚನ), ಕರಸ್ಥಲದ ನಾಗಿದೇವ(ಕರಸ್ಥಲದ ನಾಗಿದೇವ ತ್ರಿಪದಿ, ಏಕವಿಂಶತಿ ದೀಕ್ಷಾ ವಿಧಾನ, ಅಕ್ಷರ ಚೌಪದಿ), ಗುರುಬಸವ(ಶಿವಯೋಗಿ ಭೂಷಣ, ಸದ್ಗುರು ರಹಸ್ಯ, ಸ್ವರೂಪಾಮೃತ, ಕಲ್ಯಾಣೇಶ್ವರ), ಬತ್ತಲೇಶ್ವರ(ಬತ್ತಲೇಶ್ವರ ಹಾಡುಗಳು), ಮಲಿಂಗದೇವ (ಏಕೋತ್ತರ ಶತಸ್ಥಲ), ಕಲ್ಲುಮಠದ ಪ್ರಭುದೇವ (ಲಿಂಗಲೀಲಾವಿಲಾಸ ಚಾರಿತ್ರ್ಯ) ಮುಂತಾದವರು ಸಾಹಿತ್ಯವನ್ನು ರಚಿಸುವುದರ ಮೂಲಕ ವಚನಗಳ ಸಂಕಲನ, ಸ್ಥಲ ಕಟ್ಟುಗಳ ಸಂಯೋಜನೆ, ಸಿದ್ಧಾಂತ ಮಂಡನೆ, ಸೂತ್ರರಚನೆ ಮಾಡಿದರು. ಆ ಮೂಲಕ ೧೫ನೇ ಶತಮಾನದ ಶರಣ ಚಳುವಳಿಗೆ ಕಾಲಮಾನಕ್ಕನುಗುಣವಾಗಿ ಹೊಂದಿಕೊಳ್ಳುವಂತೆ ಸಾಂಸ್ಥಿಕ ರೂಪವನ್ನು ನೀಡಿದರು.

ಸಂಗಮವಂಶದ ನಂತರ ಬಂದ ವಿಜಯನಗರದ ಅರಸರು ವೈಷ್ಣವ ಧರ್ಮದತ್ತ ತಿರುಗಿದುದರಿಂದ ಹಂಪೆಯ ಶರಣ ಸಮುದಾಯ ಕರ್ನಾಟಕ ರಾಜ್ಯದ ದಕ್ಷಿಣದ ಕಡೆ ಸಾಗಿತು. ತುಂಗಭದ್ರೆಯನ್ನು ದಾಟಿ ವಿಶಾಲವಾದ ಕರ್ನಾಟಕದ ತುಂಬೆಲ್ಲಾ ಪಸರಿಸಿತು. ಉತ್ತರದ ಬಹುಮನಿ ಸುಲ್ತಾನರ ದಾಳಿಯಿಂದ ವಿಜಯನಗರ ಪತನವಾಗಿದ್ದು ಮತ್ತು ಪಾಳೇಗಾರರ ಆಳ್ವಿಕೆಯಿಂದ ಉಂಟಾದ ಅನಾಯಕತ್ವದಿಂದಾಗಿ, ಶರಣರು ಪಟ್ಟಣದ ಆಶ್ರಯವನ್ನು ಬಯಸದೆ ಹಳ್ಳಿಗಳಲ್ಲಿಯೇ ಸ್ಥಿರವಾಗಿ ಉಳಿದರು. ಉತ್ತರದ ಹಂಪಿಯಿಂದ ಚದುರಿ ಗುಬ್ಬಿ, ಎಡೆಯೂರು, ಗುಮ್ಮಳಾಪುರ, ಗೂಳೂರು, ಹರದನಹಳ್ಳಿಯಂತಹ ಗ್ರಾಮಗಳು ಶರಣರ ಕೇಂದ್ರಸ್ಥಳಗಳಾದವು.

ಎಡೆಯೂರಿನಲ್ಲಿ ತೋಂಟದ ಸಿದ್ಧಲಿಂಗಯತಿಯ ನೇತೃತ್ವದಲ್ಲಿ ೭೦೧ ಜನ ವಿರಕ್ತರು ಲಿಂಗಾಯತ ಧರ್ಮದ ಪ್ರಸಾರ ಕಾರ್ಯದಲ್ಲಿ ತೀವ್ರ ನಿಷ್ಠೆಯನ್ನು ತೋರಿದರು. ಸಿದ್ಧಲಿಂಗಯತಿಯ ಪ್ರಭಾವದಿಂದಾಗಿ ಗುಮ್ಮಳಾಪುರದ ಸಿದ್ಧಲಿಂಗಯತಿ, ಗೂಳೂರು ಸಿದ್ಧವೀರಣ್ಣೊಡೆಯರು ಶೂನ್ಯಸಂಪಾದನೆಗಳನ್ನು, ವಿರೂಪಾಕ್ಷ ಪಂಡಿತ(ಚೆನ್ನಬಸವಪುರಾಣ), ಸಿದ್ಧನಂಜೇಶ(ಗುರುರಾಜಚಾರಿತ್ರ), ಶಾಂತಲಿಂಗ ದೇಶಿಕ (ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ), ಅದೃಶ್ಯಕವಿ(ಪ್ರೌಢದೇವರಾಯನ ಕಾವ್ಯ), ಮೋದಿಯ ರುದ್ರ(ನೂರೊಂದು ವಿರಕ್ತರ ಕಾವ್ಯ), ಗುಬ್ಬಿಯ ಮಲ್ಲಣಾರ್ಯ (ವೀರಶೈವ ಮಹಾಪುರಾಣ), ಇಮ್ಮಡಿ ತೋಂಟದಾರ್ಯ(ವಜ್ರಬಾಹು ಚರಿತೆ), ಸಿದ್ಧಲಿಂಗ ಶಿವಯೋಗಿ(ಭೈರವೇಶ್ವರ ಪುರಾಣ), ಹರೀಶ್ವರ (ಪ್ರಭುದೇವರ ಪುರಾಣ), ಸಂಪಾದನೆಯ ಸಿದ್ಧವೀರಣ್ಣಾರ್ಯ, ಸಂಪಾದನೆಯ ಬೋಳಬಸವ, ಸಂಪಾದನೆಯ ಗುರುಲಿಂಗದೇವ ಹೀಗೆ ನೂರಾರು ಜನ ಕವಿಗಳು ನೂರೊಂದು ವಿರಕ್ತರ ಕಾರ್ಯಕ್ಕೆ ಇನ್ನಷ್ಟು ವ್ಯವಸ್ಥಿತ ರೂಪ ಕೊಡುವುದರ ಮೂಲಕ ಶರಣ ಚಳುವಳಿಗೆ ಸ್ಪಷ್ಟವಾದ ಧಾರ್ಮಿಕ ಸ್ವರೂಪವನ್ನು ನೀಡಿದರು. ವಚನಗಳ ಸಂಕಲನ, ಪರಿಷ್ಕರಣೆ, ಸಿದ್ಧಾಂತ ಪ್ರತಿಪಾದನೆ, ವ್ಯಾಖ್ಯಾನ ಗ್ರಂಥಗಳು, ಸ್ಥಲಗಳ ನಿರ್ದೇಶನಗಳ ಮೂಲಕ ಧಾರ್ಮಿಕ ರೂಪ ನೀಡುವಲ್ಲಿ ಅವಶ್ಯಕವಾದ ಕ್ರಮಗಳನ್ನು ಕೈಗೊಂಡರು.

೧೨ನೇ ಶತಮಾನದ ಶರಣರ ಆದರ್ಶಗಳು ಮರೆಯಾಗಿ ಸಾಂಸ್ಥಿಕ ರೂಪ ಪಡೆಯುತ್ತಿದ್ದ ಹೊತ್ತಲ್ಲಿ ಆರೂಢ ಪಂಥ ಬೆಳೆಯುತ್ತಿದ್ದುದು ಕಂಡುಬರುತ್ತದೆ. ವಿಜಯನಗರದಲ್ಲಿ ೧೦೧ ವಿರಕ್ತರ ಆಶ್ರಯದಲ್ಲಿ ನಡೆದ ಕಾರ್ಯಚಟುವಟಿಕೆಗಳೆಲ್ಲವೂ ವೀರಶೈವರಿಗೆ ಒಂದು ಧಾರ್ಮಿಕ ಚೌಕಟ್ಟನ್ನು ನಿರ್ಮಿಸಿ ಮಿತಿಯನ್ನು ಹೇರುತ್ತಿದ್ದರೆ, ಕೊಡೇಕಲ್ ಬಸವಣ್ಣನು(೧೪೪೯) ಧರ್ಮ, ಜಾತಿ, ಅವುಗಳನ್ನು ಪ್ರತಿನಿಧಿಸುತ್ತಿದ್ದ ಸಂಕೇತಗಳನ್ನು ನಿರಾಕರಿಸಿ ಹಂಪೆಯಿಂದ ಕೃಷ್ಣಾನದಿ ಪ್ರದೇಶದ ಕೊಡೇಕಲ್ ಕಡೆಗೆ ಹೋದನು. ಕೃಷ್ಣಾನದಿಯ ಉತ್ತರ ಭಾಗದಲ್ಲಿ ಶಾಹಿ ರಾಜ್ಯಗಳ ಆಳ್ವಿಕೆಯಲ್ಲಿ ಇಸ್ಲಾಂ ಧರ್ಮದ ಬೆಳವಣಿಗೆಗಳು ತೀವ್ರವಾಗಿದ್ದವು. 'ಅತ್ತ ಹಂಪೆಯಲ್ಲಿ ಜಡವಾಗುತ್ತಿದ್ದ ವೀರಶೈವ ಧರ್ಮವನ್ನು ಕೈಬಿಟ್ಟು ಇತ್ತ ಮೂಲ ಇಸ್ಲಾಂ ಧರ್ಮವನ್ನು ಎದುರಿಸಿದ ಕೊಡೇಕಲ್ ಬಸವಣ್ಣ ತನ್ನ ಆರೂಢ ಮತ್ತು ಉತ್ತರದಿಂದ ಬಂದು ನೆಲೆಯೂರುತ್ತಿದ್ದ ಸೂಫಿ ಪಂಥದ ಜೊತೆ ಸಖ್ಯ ಬೆಳೆಸಿಕೊಂಡು ಆಧ್ಯಾತ್ಮಿಕ ಬದುಕನ್ನು ಕಟ್ಟಿಕೊಂಡಿರಬೇಕು. (ಅಮರೇಶ ನುಗುಡೋಣಿ, ೨೦೦೩, ಪು.೩೧) ಈ ಆರೂಢ ಪಂಥವಾಗಲಿ, ಸೂಫಿ ಪಂಥವಾಗಲಿ ನಿಗೂಢತೆಯನ್ನು ಹೊಂದಿವೆ. ವ್ಯಕ್ತಿಗತ ಬೆಳವಣಿಗೆಗೆ ಬೆಂಬಲವನ್ನು ನೀಡುತ್ತವೆ. ಜಾತಿ ಧರ್ಮವನ್ನು ನಿರಾಕರಿಸುವ ಗುರು-ಶಿಷ್ಯತನವನ್ನು ರೂಢಿಸಿಕೊಂಡಿವೆ. ಕೊಡೇಕಲ್ ಬಸವಣ್ಣನ ಗುರು ಸಂಗಮನಾಥ, ಸಂಗಮನಾಥನ ಗುರು ಪರಮಾನಂದ ಪ್ರಭು ಇವರೆಲ್ಲ ಆರೂಢ ಪಂಥಕ್ಕೆ ಸೇರಿದವರು. ಮುಂದೆ ಕೊಡೇಕಲ್ ಬಸವಣ್ಣನ ಶಿಷ್ಯರಾಗಿ ಮಂಟೇಸ್ವಾಮಿ, ವಡಬಾಳ ನಾಗನಾಥ, ತಿಂಥಿಣಿ ಮೋನಪ್ಪಯ್ಯ, ಮಳೆಯ ಪ್ರಭು, ನಾಗಾವಿ ಈರಪ್ಪಯ್ಯ, ಸಾಲೋಟಗಿ ಶಿವಯೋಗಿ ಹಾಗೂ ಕೊಡೇಕಲ್ ಪರಿವಾರಕ್ಕೆ ಸೇರಿದ ರಾಚಪ್ಪಯ್ಯ, ವೀರಸಂಗಪ್ಪಯ್ಯ, ನೀಲಮ್ಮ ಮುಂತಾದವರೆಲ್ಲ ಸಾಹಿತ್ಯವನ್ನು ರಚಿಸಿದರು. 'ಕೊಡೇಕಲ್ ಪರಿವಾರದವರು ರಚಿಸಿದ ಸಾಹಿತ್ಯ ಐದುಸಾವಿರ ಪುಟಗಳಷ್ಟಿರಬಹುದು.'(ಅದೇ, ಪು.೩೨)

ಪ್ರೌಢದೇವರಾಯ ಮತ್ತು ಸಿದ್ಧಲಿಂಗಯತಿಗಳ ಕಾಲದಲ್ಲಿ ೧೨ನೇ ಶತಮಾನದ ಶರಣರ ಆಚಾರ ಮಾರ್ಗವನ್ನು ಕೇಂದ್ರವಾಗಿಸಿಕೊಂಡು ವೀರಶೈವ ಧರ್ಮಕ್ಕೆ ಒಂದು ಸಿದ್ಧಾಂತದ ರೂಪಕೊಡಲು ಪ್ರಯತ್ನಿಸಿದರು. ವಚನಗಳನ್ನು ಒಂದು ನಿರ್ದಿಷ್ಟ ಪಂಗಡದ ಆಸ್ತಿಯಾಗಿಸುವ ಅಥವಾ ಒಂದು ಧಾರ್ಮಿಕ ಸೈದ್ಧಾಂತಿಕತೆಗೆ ಅಳವಡಿಸುವ ಪ್ರಕ್ರಿಯೆ ನಡೆದರೆ ಅದೇ ವಚನಗಳ ಮೂಲ ಆಶಯಗಳನ್ನು ಆರೂಢ ಮತ್ತು ಸೂಫಿ ಪಂಥಗಳು ಆಚರಣೆಗಳ ಮೂಲಕ, ಮೌಖಿಕ ಸಾಹಿತ್ಯದ ಮೂಲಕ ಮತ್ತೊಮ್ಮೆ ಜನಸಮುದಾಯದಲ್ಲಿ ಪ್ರಚಾರಕ್ಕೆ ತಂದರು. ಸ್ಥಾವರ ಲಿಂಗವನ್ನು ನಿರಾಕರಿಸಿದ ಇವರು ಜ್ಯೋತಿರ್ಲಿಂಗ(ಆತ್ಮಲಿಂಗ) ಪರಿಕಲ್ಪನೆಯನ್ನು ತಂದರು. ಕಾಯಕಕ್ಕೆ ಮಹತ್ವವನ್ನು ಕೊಟ್ಟರು. ಮಂಟೇಸ್ವಾಮಿ ಕಾವ್ಯದ ಪ್ರಕಾರ, ಕಲ್ಯಾಣದಲ್ಲಿನ ನಿಜವಾದ ಲಿಂಗಾಯಿತರೆಂದರೆ ಕೆಳವರ್ಗದಿಂದ ಬಂದ ಕಾಯಕ ಜೀವಿಗಳಾದ ಕುರುಬರ ಬೀರಯ್ಯ, ಮಡಿವಾಳ ಮಾಚಯ್ಯ, ಹೊಲಾರ ಹೊನ್ನಯ್ಯ, ಹಡಪದ ಅಪ್ಪಣ್ಣ, ಕುಂಬಾರ ಗುಂಡಯ್ಯ, ಮಾದಾರ ಚೆನ್ನಯ್ಯ, ದೇವಾಂಗ ದಾಸಯ್ಯ, ಮೇಲು ಸಕ್ಕರೆ ಶೆಟ್ಟಿ, ಗಂಗಡಕಾರ ಗೌಡ ಇವರು ಮಾತ್ರ.

೧೨ನೇ ಶತಮಾನದ ಶರಣರು ಕುಲೇಳು ಹದಿನೆಂಟು ಜಾತಿಗಳು ಒಂದೇ ಎಂದು ಸಾರಿದ್ದ ಆಶಯ ಅವರ ನಂತರ ಸಾಂಸ್ಥಿಕ ಪ್ರಕ್ರಿಯೆಯಿಂದ ಒಡೆದು ಜಾತಿ ಅಸಮಾನತೆ ಕಂಡಬಂತು. ಇಂತಹ ಸಮಯದಲ್ಲಿ ಕೆಳವರ್ಗದ ಕಾಯಕ ಜೀವಿಗಳ ಸಾಂಸ್ಕೃತಿಕ ನಾಯಕರಾಗಿ ಉತ್ತರದ ಕೊಡೇಕಲ್ ಬಸವಣ್ಣ, ತಿಂಥಿಣಿ ಮೋನಪ್ಪಯ್ಯ, ಸಾಲೋಟಗಿ ಶಿವಯೋಗಿ, ಶಿರಹಟ್ಟಿ ಫಕ್ಕೀರೇಶ್ವರ, ದಕ್ಷಿಣದ ಮಂಟೇಸ್ವಾಮಿ, ಮಲೆಮಾದೇಶ್ವರ ರೂಪುಗೊಂಡರು. ಹೀಗೆ ರೂಪುಗೊಂಡ ಮಧ್ಯಕರ್ನಾಟಕ ಭಾಗದಲ್ಲಿನ ಪಂಥವೇ ಪಂಚಗಣಾಧೀಶ್ವರರ ಪಂಥ.

ಪಂಚಗಣಾಧೀಶ್ವರರು ರೂಪುಗೊಳ್ಳಲು ಅಂದಿನ ರಾಜಕೀಯ, ಧಾರ್ಮಿಕ, ಸಾಮಾಜಿಕ ಒತ್ತಡಗಳು ಕಾರಣವಾಗಿದ್ದರೆ, ೧೨ನೇ ಶತಮಾನದ ಶರಣ ಚಳುವಳಿ, ನೂರೊಂದು ವಿರಕ್ತರು, ಸಿದ್ದಲಿಂಗಯತಿಗಳು ಹಾಗೂ ಸಮಕಾಲೀನ ಪಂಥ-ಪರಂಪರೆಗಳು ಪ್ರೇರಣೆಯನ್ನು ನೀಡಿವೆ. ಈ ಎಲ್ಲವುಗಳಿಂದ ಪಡೆದ ಪಂಚಗಣಾಧೀಶ್ವರ ಸಂಕರಶೀಲ ಪಂಥವಾಗಿ ಇಂದಿಗೂ ಆಚರಣೆಯ ಮೂಲಕ ಮಧ್ಯಕರ್ನಾಟಕ ಭಾಗದಲ್ಲಿ ಜನಪದರಿಗೆ ಆರಾಧ್ಯದೈವವಾಗಿದ್ದಾರೆ. ಈ ಕುರಿತು ಅಧ್ಯಯನ ಮಾಡುವುದಕ್ಕಿಂತ ಮುಂಚೆ ಅವರಿಗಿದ್ದ ಒತ್ತಡ ಮತ್ತು ಪ್ರೇರಣೆಗಳನ್ನು ಗಮನಿಸಬೇಕಿದೆ.

## ೨.೧. ಒತ್ತಡಗಳು

### ೨.೧.೧. ರಾಜಕೀಯ ಒತ್ತಡಗಳು

ರಾಜಕೀಯವಾಗಿ ೧೨ನೆಶತಮಾನದ ಕೊನೆಯಿಂದ ಕರ್ನಾಟಕ ಪ್ರಾಂತ್ಯದಲ್ಲಿ ಅರಾಜಕತೆ ಪ್ರಾರಂಭವಾಯಿತು. ಕರ್ನಾಟಕದ ಉತ್ತರಭಾಗದಲ್ಲಿ ಸೇವುಣರು, ದಕ್ಷಿಣದಲ್ಲಿ ಹೊಯ್ಸಳರು, ಕಾಕತೀಯರು, ಚೋಳರು, ಪಾಂಡ್ಯರು ಅಧಿಕಾರಕ್ಕೆ ಬಂದರು. ಇವರೆಲ್ಲರ ನಡುವೆ ಯುದ್ಧಗಳು ನಿರಂತರವಾಗಿ ನಡೆದವು. ಇದನ್ನು ಸದುಪಯೋಗಪಡಿಸಿಕೊಂಡ ಅಲ್ಲಾವುದ್ದೀನ ಖಿಲ್ಜಿ ೧೨೯೬ರಲ್ಲಿ ಸೇವುಣರ ಮೇಲೆ ದಾಳಿ ಮಾಡಿದ. ಸೇವುಣರು ಅಪಾರ ಸಂಪತ್ತು ಉಳ್ಳವರಾಗಿದ್ದರು. 'ಕಬ್ಬು ಕದಂಬಕ, ತೆಂಗು, ಅಡಿಕೆ, ನಿಂಬೆ, ಹಲಸು, ಸೇಬು, ಕಿತ್ತಳೆ, ಲವಂಗ, ವೀಳ್ಯೆದೆಲೆ, ಸುರಹೊನ್ನೆ, ಪಾರಿಜಾತ, ಪುನ್ನಾ ಮುಂತಾದವುಗಳನ್ನು ಹೇರಳವಾಗಿ ಬೆಳೆಯುತ್ತಿದ್ದರು.' ಸಂಪತ್ತಿಗಾಗಿ ದಕ್ಷಿಣ ಭಾರತದ ಮೇಲೆ ಅದರಲ್ಲೂ ಕರ್ನಾಟಕದ ಉತ್ತರದ ಮೇಲೆ ಸೈನಿಕ ದಾಳಿಗಳು ಆರಂಭವಾದವು. ಖಿಲ್ಜಿಯ ಸೇನಾಪತಿ ಮಲ್ಲಿಕಾಫರನು ೧೩೦೭ರಲ್ಲಿ ಸೇವುಣರ ಮೇಲೆ, ೧೩೦೯ರಲ್ಲಿ ಕಾಕತೀಯರ ಮೇಲೆ ೧೩೧೧ರಲ್ಲಿ, ಹೊಯ್ಸಳರ ಮೇಲೆ ದಾಳಿ ಮಾಡಿ ದಕ್ಷಿಣ ಭಾರತದ ಸಂಪತ್ತನ್ನೆಲ್ಲ ದೋಚಿದನು. ನಂತರದಲ್ಲಿ ಎರಡನೇ ಹಂತದ ದಾಳಿ ಆರಂಭವಾಯಿತು. ಸೇವುಣರು, ಕಾಕತೀಯರು, ಹೊಯ್ಸಳರು ಪೂರ್ತಿ ಸೋತು ಹೋದರು.

ದೇವಗಿರಿಯ ಯಾದವರು, ಕಂಪಿಲಿಯ ಕಂಪಿಲಿರಾಯ, ವಾರಂಗಲ್ಲಿನ ಪ್ರತಾಪರುದ್ರ, ಮಲಬಾರಿನ ವೀರಪಾಂಡ್ಯ ಸೇರಿದಂತೆ ತೆಲಂಗಾಣ, ಮರಾಠವಾಡ ಪ್ರದೇಶಗಳು ಉತ್ತರದ ದಾಳಿಗೆ ತತ್ತರಿಸಿದವು. ವಿಜಯನಗರ-ಬಹಮನಿ ರಾಜ್ಯ ಸ್ಥಾಪನೆಯಾಗುವವರೆಗೂ ಕರ್ನಾಟಕವು ಅನ್ಯಭಾಷೆ ಮತ್ತು ಸಂಸ್ಕೃತಿಯನ್ನು ಹೊಂದಿದ್ದ ಉತ್ತರದ ದಾಳಿಗೆ ತಲ್ಲಣಿಸಿದವು.

೧೩೩೬ರಲ್ಲಿ ತುಂಗಭದ್ರೆಯ ದಡದಲ್ಲಿ ವಿಜಯನಗರ ಸ್ಥಾಪನೆಯಾಯಿತು. ಹೆಚ್ಚು ಕಡಿಮೆ ಇದೇ ಅವಧಿಯಲ್ಲಿ ಬಹುಮನಿ ರಾಜ್ಯ(೧೩೪೭) ಸ್ಥಾಪನೆಯಾಗಿ ಕೃಷ್ಣನದಿಯ ಮೇಲಿನ ಕಲ್ಬುರ್ಗಿ ಬೀದರ್ ಗಳನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡರು. ಕೆಲವು ವರ್ಷಗಳಲ್ಲಿ ಬಹುಮನಿ ರಾಜ್ಯ ಒಡೆದು ಆದಿಲ್‌ಶಾಹಿ(ವಿಜಾಪುರ), ಇಮಾಮ್‌ಶಾಹಿ(ಅಹಮದ್ ನಗರ), ನಿಜಾಮ್‌ಶಾಹಿ(ಗೊಲ್ಕೊಂಡ), ಕುತುಬ್ ಶಾಹಿ(ಗುಲ್ಬರ್ಗಾ) ಹಾಗೂ ಬರೀದ್‌ಶಾಹಿ(ಬೀದರ್) ಎಂಬ ಐದು ರಾಜ್ಯಗಳಾದವು. ವಿಜಯನಗರ ಅರಸರು ಮತ್ತು ಶಾಹಿಸುಲ್ತಾನರ ಮಧ್ಯ ಕೃಷ್ಣ-ತುಂಗಭದ್ರೆ, ನಡುವೆ ಇದ್ದ 'ದೋ-ಆಬ್' ಎನ್ನುವ ಪ್ರದೇಶಕ್ಕಾಗಿ ನಿರಂತರವಾಗಿ ಯುದ್ಧಗಳು ಸಂಭವಿಸಿದವು. ಈ ಪ್ರದೇಶ ಫಲವತ್ತಾಗಿ ವಿಶಾಲವಾಗಿದ್ದು, ಆಹಾರ ಧಾನ್ಯಗಳು, ಎಣ್ಣೆ ಬೀಜಗಳು, ಖನಿಜ ಸಂಪತ್ತಿನಿಂದ ಕೂಡಿ ಸಮೃದ್ಧವಾಗಿತ್ತು. ಅಲ್ಲದೆ ಇಲ್ಲಿನ ರೇಷ್ಮೆ, ಹತ್ತಿ ಬಟ್ಟೆಗಳು ವಿದೇಶಗಳಿಗೆ ರಫ್ತಾಗುತ್ತಿದ್ದವು. ಇರಾನ್, ಮೊಜಾಂಬಿಕ್, ಅರೇಬಿಯಾ ಮತ್ತು ಪೂರ್ವ ಆಫ್ರಿಕಾಗಳಲ್ಲಿ ಇವುಗಳಿಗೆ ಅಪಾರವಾದ ಬೇಡಿಕೆ ಇತ್ತು. ಹುಬ್ಬಳ್ಳಿ ಲಕ್ಷ್ಮೇಶ್ವರಗಳು ಬಟ್ಟೆ ನೇಯುವ ದೊಡ್ಡ ಕೇಂದ್ರಗಳಾಗಿದ್ದವು. ರಾಯಭಾಗ ಅಥಣಿಯಿಂದ ಪೋರ್ಚಗಲ್ಲಿಗೆ ಮೆಣಸು ರಫ್ತಾಗುತ್ತಿದ್ದು ದೋ-ಆಬ್ ಪ್ರದೇಶದಲ್ಲಿ ವಜ್ರದ ಗಣಿಗಳಿದ್ದವು. ರಾಯಚೂರು ಜಿಲ್ಲೆಯ ರಾವುಲಕೊಂಡದ ಬಳಿ ದೊಡ್ಡ ವಜ್ರದ ಗಣಿ ಇತ್ತು. ವಜ್ರದ, ಚಿನ್ನದ, ಕಬ್ಬಿಣದ ನಿಕ್ಷೇಪಗಳಿಗಾಗಿಯೇ ಯುದ್ಧಗಳು ಮೇಲಿಂದ ಮೇಲೆ ಸಂಭವಿಸುತ್ತಿದ್ದವು. ಗೋಲ್ಕೊಂಡವು ವಜ್ರ ನಿಕ್ಷೇಪವನ್ನು ಹೊಂದಿತ್ತು. 'ಜಗತ್ತಿನಲ್ಲಿಯೇ ಅತ್ಯಂತ ದೊಡ್ಡ ವಜ್ರವಾದ ಕೋಹ್-ಎ-ನೂರ್ ವಜ್ರ ಗೋಲ್ಕೊಂಡದಿಂದ ಬಂದದ್ದು.'(ಬಿ.ಷೇಕ್ ಅಲಿ(ಸಂ), ಸಂಪುಟ ೪, ೧೯೯೭, ಪು.೨೧೯) ಇಂತಹ ದೋ-ಅಬ್ ಮತ್ತು ಸುತ್ತಮುತ್ತಲಿನ ಪ್ರದೇಶ ಕ್ಕಾಗಿ ಮಧ್ಯಕರ್ನಾಟಕ ಭಾಗದಲ್ಲಿ ನಿರಂತರವಾಗಿ ಯುದ್ಧಗಳು ಸಂಭವಿಸಿದವು. ೧೩೫೧ ರಿಂದ ೧೫೦೫ರವರೆಗೆ ಈ ಪ್ರದೇಶದಲ್ಲಿ ೫೦ಕ್ಕೂ ಹೆಚ್ಚು ಯುದ್ಧಗಳು ಚರಿತ್ರೆಯಲ್ಲಿ ದಾಖಲಾಗಿವೆ.

ವಿಜಯನಗರ ಪತನಾನಂತರ ಕರ್ನಾಟಕದಲ್ಲಿ ಸ್ಥಿರವಾದ ನಾಯಕತ್ವವಿಲ್ಲದೆ, ಪಾಳೇಗಾರರ ವ್ಯವಸ್ಥೆ ಪ್ರಾರಂಭವಾಯಿತು. ವಿಜಯನಗರದ ಅರಸರ ಕಾಲದಲ್ಲಿ ಒಂದು ನಿರ್ದಿಷ್ಟ ಪ್ರದೇಶವನ್ನು ಆಳುತ್ತಿದ್ದವರಿಗೆ ಅಮರನಾಯಕರು ಎನ್ನುತ್ತಿದ್ದರು. ಉಪಸಾಮಂತೀಕರಣ ಪ್ರಕ್ರಿಯೆಯು ವಿಜಯನಗರ ಸಾಮ್ರಾಜ್ಯದ ಕಾಲಘಟ್ಟದಲ್ಲಿ ಬಹುವಿಸ್ತೃತ ರೂಪವನ್ನು ಪಡೆದುಕೊಂಡಿತ್ತು. ಈ ಅಮರನಾಯಕರು ತಮ್ಮ ನಿರ್ದಿಷ್ಟ ಕ್ಷೇತ್ರಗಳ ವ್ಯಾಪ್ತಿಯಲ್ಲಿ, ಕೃಷಿ, ನೀರಾವರಿ, ಸರಕುಗಳ ಉತ್ಪಾದನೆ, ರಸ್ತೆ ಕಾಮಗಾರಿ ಮುಂತಾದವುಗಳನ್ನು

ವಿಜಯನಗರ ಸಾಮ್ರಾಜ್ಯದ ಕೇಂದ್ರಾಡಳಿತ ಮಾದರಿಯಲ್ಲಿಯೇ ನಡೆಸುತ್ತಿದ್ದರು. ಇದೊಂದು ಅಧೀನ ಒಕ್ಕೂಟ ವ್ಯವಸ್ಥೆಯೆಂಬಂತೆ ನಿರ್ವಹಿಸುತ್ತಿದ್ದವು. ಯಾವಾಗ ವಿಜಯನಗರ ಪತನವಾಯಿತೋ ಈ ಅಮರನಾಯಕರು ಸ್ವತಂತ್ರರಾದರು. ಹಾಗೆ ಸ್ವತಂತ್ರಗೊಂಡವರಲ್ಲಿ, ಕೆಳದಿ ಅರಸರು, ಯಲಹಂಕನಾಡ ಪ್ರಭುಗಳು, ಮಧುಗಿರಿಯ ಅರಸರು, ಹಾಗಲವಾಡಿ ಪಾಳೇಗಾರರು, ಹದಿನಾಡಿನ ಪಾಳೇಗಾರರು, ಕರಾವಳಿಯ ಪ್ರದೇಶದ ಬಾರಕೂರು-ಮಂಗಳೂರಿನ ದೊರೆಗಳು, ಉಮ್ಮತ್ತೂರಿನ ಪಾಳೇಗಾರರು, ಸಿರಿಯಾ ಪಟ್ಟಣದ ಚಂಗಾಳ್ವರರೂ, ಬೇಲೂರಿನ ನಾಯಕರು ಪ್ರಮುಖರಾಗಿದ್ದಾರೆ. ಮಧ್ಯಕರ್ನಾಟಕದಲ್ಲಿನ ಹರಪನಹಳ್ಳಿ ಪಾಳೇಗಾರರು, ಚಿತ್ರದುರ್ಗ ಪಾಳೇಗಾರರು, ಜರಿಮಲೆ ಪಾಳೇಗಾರರು, ಗುಡೇಕೋಟೆ ಪಾಳೇಗಾರರು, ನಾಯಕನಹಟ್ಟಿ ಪಾಳೇಗಾರರು, ಹಾಗೇ ಸ್ವಾತಂತ್ರ್ಯ ಅಸ್ತಿತ್ವವನ್ನು ಪಡೆದುಕೊಂಡ ಕೆಲವು ಪಾಳೇಗಾರರ ಮನೆತನಗಳು.

ಹೀಗೆ ಅಸ್ತಿತ್ವ ಪಡೆದುಕೊಂಡ ಪಾಳೇಗಾರರ ನಡುವೆ ಮೇಲಿಂದ ಮೇಲೆ ಯುದ್ಧಗಳಾಗತೊಡಗಿದವು. ಇದಕ್ಕಾಗಿ ಪಾಳೇಗಾರರಿಗೆ ಅಪಾರ ಜನಮನ್ನಣೆ ಅವಶ್ಯಕವಾಗಿದ್ದಿತು. ಅದಕ್ಕಾಗಿ ಸಮಾಜದಲ್ಲಿ ಜನಪ್ರಿಯರಾಗಿದ್ದ ಧಾರ್ಮಿಕ ಸಂತರನ್ನು ಗೌರವಿಸುವುದರ ಮೂಲಕ ಜನಬೆಂಬಲ ಪಡೆಯುತ್ತಿದ್ದರು. ಹರಪನಹಳ್ಳಿ ಪಾಳೇಗಾರ ದಾದಿನಾಯಕನು(೧೫೬೫-೧೫೯೨) ೩೭ ಎಕರೆ ಎರೆಹೊಲ ೮ ಎಕರೆ ಗದ್ದೆಯನ್ನು ಕೊಟ್ಟೂರಿನ ಮಠಕ್ಕೆ ದಾನವಾಗಿ ಕೊಟ್ಟಿದ್ದಾನೆ. ಕೊಟ್ಟೂರಿನ ಹಿರೇಮಠ ಗೋಪುರವನ್ನು ಸೋಮಶೇಖರ ರಾಜ(೧೭೪೨-೧೭೬೬) ಕಟ್ಟಿಸಿಕೊಟ್ಟಿದ್ದಾನೆ. ಚಿತ್ರದುರ್ಗದ ಭರಮಣ್ಣನಾಯಕನ ಕಾಲದಲ್ಲಿ(೧೬೮೯-೧೭೨೧) ನಾಯಕನಹಟ್ಟಿ ಹೊರಮಠ ಕಟ್ಟಲಾಗಿದೆ.

ಗೋಣಿಬಸವ ಹಮ್ಮಿಗಿ ದೇಸಾಯಿಯ ತೋಟದಲ್ಲಿ ತೆಂಗಿನ ಮರ ಬಗ್ಗಿ ತೆಂಗಿನಕಾಯಿ ಕೊಡುವಂತೆ ಪವಾಡ ಮಾಡುವ ಮೂಲಕ ದೇಸಾಯಿಯ ಗೌರವಕ್ಕೆ ಪಾತ್ರನಾಗುತ್ತಾನೆ. ಈಗಿನ ಗುಮ್ಮಗೋಳದಲ್ಲಿನ ಗೋಣಿ ಬಸವನ ಮಠವನ್ನು ಹಮ್ಮಿಗಿ ದೇಸಾಯಿ ಕಟ್ಟಿಸಿಕೊಟ್ಟಿದ್ದಾನೆ. ದೆಹಲಿಯ ಅಕ್ಬರನ(೧೫೫೬-೧೬೦೫) ಅರಮನೆಯಲ್ಲಿ ಗುರುಬಸವರಾಜ ಕಾಣಿಸಿಕೊಂಡು ಪವಾಡ ಮಾಡಿರುವುದನ್ನು 'ಕೊಟ್ಟೂರು ಬಸವೇಶ್ವರ ಚಾರಿತ್ರ್ಯ'(೧೫ನೇ ಸಂಧಿ) ವಿವರಿಸುತ್ತದೆ. ಗುರುಬಸವನನ್ನು ಗೌರವಿಸಲಿಕ್ಕಾಗಿ 'ಗುರುರಾಯ ನೊಲಿದಿರ್ಪ ಪರಮ ಪುಣ್ಯಕ್ಷೇತ್ರಮಂ ನೋಡಿ ಪಾದಪಂ ಕುರುಹುಂಗಳಂ ವಿಲಸಿತೊತ್ತವ ರಂಗದೊಳಲಂಕರಿಸಿ ಬದುಕುವೆನೆನ್ನುತ್ತೆ' ಅಕ್ಬರ ಕೊಟ್ಟೂರಿಗೆ ಬರುತ್ತಾನೆ. ಏಳುದಿನಗಳ ತನಕ ಕಾದು ಸಂತನ ದರ್ಶನ ಪಡೆದು ಮಂಚ ಮತ್ತು ಖಡ್ಗ ಕೊಡುತ್ತಾನೆ. ಈಗಲೂ ಇವುಗಳನ್ನು ತೋರಿಸಲಾಗುತ್ತದೆ. ಹಾಗೆಯೇ ಕೋಲ ಶಾಂತಯ್ಯನ(ಅರಸೀಕೆರೆ) ಮಠದಲ್ಲಿ ಕೂಡ ಅಕ್ಬರ್ ಕೊಟ್ಟ ಮಂಚವನ್ನು ತೋರಿಸಲಾಗುತ್ತದೆ. 'ಶ್ರೀಗುರು ಕೊಟ್ಟೂರೇಶ್ವರ ಸ್ವಾಮಿಯ ಅಷ್ಟೋತ್ತರ(೧೦೮) ಬಿಲ್ವಾರ್ಚನೆ' ಸಮಯದಲ್ಲಿ ಗುರುಬಸವನನ್ನು 'ದಿಲ್ಲಿಪಾಚ್ಛಸೇವಿತಾರ್ಥಯ ನಮಃ' ಎಂದು ಸ್ತುತಿಸಲಾಗುತ್ತದೆ.

ಸೂಫಿ ನಾಥಸಿದ್ಧರಾದ ತಿಂಥಿಣಿ ಮೋನಪ್ಪಯ್ಯ, ಕೊಡೇಕಲ್ ಬಸವಣ್ಣ, ಸಾವಳಗಿ ಶಿವಯೋಗಿ, ಕಾಡಸಿದ್ದೇಶ್ವರ, ಮಳೆಯ ಮಲ್ಲೇಶ, ಶಿರಹಟ್ಟಿ ಫಕ್ಕೀರೇಶನಂತಹ ಮದ್ಯಕಾಲೀನ ಕರ್ನಾಟಕದ ಸಂತರು ತುರುಕಾಣ್ಯದ ಯಾವನಾದರೂ ಒಬ್ಬ ಪಾಚ್ಛಾ(ಬಾದಶಹ)ನನ್ನು ಎದುರಿಸಿ ಅವನ ಮುಂದೆ ಪವಾಡ ಮಾಡುವುದನ್ನು ಕಾಣುತ್ತೇವೆ. ಶಿರಹಟ್ಟಿ ಫಕ್ಕೀರೇಶನಂತೂ ಅಕ್ಬರನಿಂದ 'ಶೇಲಿಸಿಕೆಗಳನ್ನಾಧರಿಪ ರಣಬಿಲ್ಲೆಯಂ' ಪಡೆದುಕೊಳ್ಳುತ್ತಾನೆ. ರಾಜಪ್ರಭುತ್ವ ಈ ರೀತಿ ಧಾರ್ಮಿಕ ಸಂತರನ್ನು ಗೌರವಿಸುವ ಹಿಂದೆ ಬರೀ ಧಾರ್ಮಿಕ ಶ್ರದ್ಧೆ ಮಾತ್ರ ಕಾರಣವಾಗಿರಲಿಲ್ಲ. ಈ ಧಾರ್ಮಿಕ ಸಂತರು ರಾಜಕೀಯ ಅಧಿಕಾರಕ್ಕೆ ಸಮನಾಂತರವಾಗಿ ತಮ್ಮದೇ ಆದ ಅಧಿಕಾರವನ್ನು ಸಮಾಜದಲ್ಲಿ ಗಳಿಸಿಕೊಂಡಿದ್ದರು. ಮೇಲ್ವರ್ಗ ಕೆಳವರ್ಗವೆನ್ನದೆ, ಬಹುಸಂಖ್ಯಾತರನ್ನು ಪ್ರಭಾವಿಸಿದ್ದರು. ಈ ಸಂತರನ್ನು ಗೌರವಿಸುವ ಮೂಲಕ ಅವರ ಪ್ರಭಾವದಲ್ಲಿನ ಜನರ ಒಲವನ್ನು ರಾಜರು ಪಡೆಯುತ್ತಿದ್ದರು.

ಈ ಲೌಕಿಕ ಆಲೋಚನೆ ಬರೀ ರಾಜಪ್ರಭುತ್ವಕ್ಕಷ್ಟೇ ಸೀಮಿತವಾಗಿರಲಿಲ್ಲ. ಸಂತರಿಗೂ ಅನಿವಾರ್ಯವಾಗಿತ್ತು. ಪ್ರಭುತ್ವದ ಆಶ್ರಯದ ಮೂಲಕ ಇವರು ವ್ಯಾಪಕವಾಗಿ ಬೆಳೆಯುತ್ತಾ, ಅಧಿಕೃತಗೊಳ್ಳುತ್ತಾ ಹೆಚ್ಚುಕಾಲ ಉಳಿಯಲು ಸಾಧ್ಯವಾಗುತ್ತಿತ್ತು. ಕೊಟ್ಟೂರ ಗುರುಬಸವನನ್ನು ಒಬ್ಬ ಹುಟ್ಟುಕುರುಡ ಬಂದು ಕಣ್ಣುಗಳನ್ನು ಕೇಳಿದಾಗ 'ಕಂಗಳಂ ನಿನಗೀವೊಡೀ ನಾಳನಾಳ್ವರಾ| ಜಾಂಗವೆಮಗುಂಟೆ ಕೊಡುವೆಂ ದಾದಿನಾಯಕಂ| ಪಿಂಗು ಪೆರತೊಲಗೆಂದು'(ಆರ್.ಸಿ.ಹಿರೇಮಠ, ೨೦೦೧, ಪು.೧೪೩) ದಾದಿನಾಯಕನ ಬಳಿ ಕಳಿಸುತ್ತಾನೆ. ಆ ದಾದಿನಾಯಕನು ಗುರುಬಸವನನ್ನು ಸ್ಮರಿಸಿ ತನ್ನ ಬಳಿ ಬಂದ ಹುಟ್ಟು ಕುರುಡನಿಗೆ ಕಣ್ಣುಗಳನ್ನು ಬರುವಂತೆ ಮಾಡುತ್ತಾನೆ.

ಬಾಲಬಸವರು ಹಾಡುವ ಗೋಣಿಬಸವನ ಕಾವ್ಯವು ಚಿಗಟೇರಿಯ ದೊರೆ ಶಿವನಪ್ಪನಾಯಕ ಮತ್ತು ಮದ್ದಾನಸ್ವಾಮಿಯ ಮಗನಾದ ಗೋಣಿಬಸವನ ಮಧ್ಯದ ಸಂಘರ್ಷವನ್ನು ವಿವರಿಸುತ್ತದೆ. ಒಬ್ಬ ಧಾರ್ಮಿಕ ಸಂತನಾಗಿ ಗೋಣಿಬಸವನು ಚಿಗಟೇರಿಯ ದೊರೆಯೊಂದಿಗೆ ಸಂಘರ್ಷಕ್ಕಿಳಿಯುವುದು, ಹಮ್ಮಿಗಿ ದೇಸಾಯಿಯ ಜೊತೆಗೂಡಿ ಯುದ್ಧಮಾಡುವುದು ನೋಡಿದರೆ, ಧಾರ್ಮಿಕ ಸಂತರಿಗೂ ಪ್ರಭುತ್ವದಷ್ಟೇ ಲೌಕಿಕ ಆಶೋತ್ತರಗಳಿದ್ದವು ಎನ್ನುವುದು ಸ್ಪಷ್ಟವಾಗುತ್ತದೆ. 'ಕೊಟ್ಟೂರ ಗುರುಬಸವರಾಜನು ಹರಪನಹಳ್ಳಿಯ ಸೋಮಶೇಖರ ರಾಜನ ಪರವಾಗಿ ಸಿದ್ದೋಜಿ ಮುರಾರಿ ಮತ್ತು ಚಿತ್ರದುರ್ಗದ ಮದಕರಿ ನಾಯಕನನ್ನು ಸೋಲಿಸುತ್ತಾನೆ'(ಎ.ಎಂ.ಮಂಜುನಾಥಶಾಸ್ತ್ರಿ(ಸಂ), ೧೯೮೫, ಪು.೪-೧೨).

ಯುದ್ಧ ಮತ್ತು ಪವಾಡಗಳ ಮೂಲಕ ಈ ಧಾರ್ಮಿಕ ಸಂತರು ರಾಜ್ಯಕ್ಕೆ ಅನುಕೂಲವಾದ ಲೋಕದೃಷ್ಟಿಯನ್ನು ಬೆಳೆಸಿ, ಮಾನ್ಯತೆಯನ್ನು ಸೃಷ್ಟಿಸುವ ಪರಿಣಾಮಕಾರಿ ಮಾಧ್ಯಮಗಳಾಗಿದ್ದರು ಎನ್ನುವುದು ತಿಳಿಯುತ್ತದೆ. ಆ ಮೂಲಕ ಅವರು ಪ್ರಭುತ್ವದ ಅಲೌಕಿಕ ನೆಲೆಯನ್ನು ಗಟ್ಟಿ ಮಾಡುತ್ತಿದ್ದರು.

ಪ್ರತಿಫಲವಾಗಿ ಪ್ರಭುತ್ವವು ದಾನ-ದತ್ತಿಗಳನ್ನು ನೀಡುವ ಮೂಲಕ ಅಧಿಕೃತವಾಗಿ ವ್ಯಾಪಕವಾಗಿ ಧಾರ್ಮಿಕ ಸಂತರು ಬೆಳೆಯಲು ಅವಕಾಶ ಮಾಡಿಕೊಡುತ್ತಿದ್ದರು.

ಈ ಧಾರ್ಮಿಕ ಸಂತರಿರುವ ಪ್ರದೇಶದ ಹರಪನಹಳ್ಳಿ, ಚಿತ್ರದುರ್ಗ, ಜರ್ಮಲಿ, ಗುಡೇಕೋಟೆ, ರಾಯದುರ್ಗ, ಮೊಳಕಾಲ್ಮೂರು ಪಾಳೇಗಾರರ ಮಧ್ಯೆ ನಿರಂತರವಾಗಿ ಯುದ್ಧಗಳು ನಡೆದಿವೆ. ಹರಪನಹಳ್ಳಿ ಪಾಳೇಗಾರರ ಎರಡುನೂರು ವರ್ಷಗಳ ಆಳ್ವಿಕೆಯಲ್ಲಿ ಚಿತ್ರದುರ್ಗ, ಮೈಸೂರು, ಬಸವಾಪಟ್ಟಣ, ಹುಲಿಗಿ, ಹಾಲಗಟ್ಟಿ, ಹನಸಿ, ಬೆಳ್ಳಾಡು, ಹೊಳಲು, ಬಿದರಳ್ಳಿಯಂತಹ ದೊಡ್ಡ-ಚಿಕ್ಕ ಸಂಸ್ಥಾನಗಳೊಂದಿಗೆ ಯುದ್ಧ ಮಾಡಿದ್ದಾರೆ.(ಕುಂ.ಬಾ.ಸ, ೧೯೯೮, ಪು.೭-೩೮) ಅದೇ ರೀತಿ ಚಿತ್ರದುರ್ಗದ ದೊರೆಗಳು ಮೈಸೂರು, ಹರಪನಹಳ್ಳಿ, ನಾಯಕನಹಟ್ಟಿ, ರಾಯದುರ್ಗ, ಕೆಳದಿಯೊಂದಿಗೆ ಯುದ್ಧ ಮಾಡಿದ್ದಾರೆ. ಇಂತಹ ಯುದ್ಧಗಳಿಂದಾಗಿ ನಾಯಕನಹಟ್ಟಿ, ಜರ್ಮಲಿ, ಗುಡೇಕೋಟೆ, ಹೊಳಲು, ಹುಲಿಗಿ, ಬಸವಾಪಟ್ಟಣ, ಹಾಲಗಟ್ಟಿ, ಹನಸಿಯಂತ ಪಾಳೇಗಾರ ವ್ಯವಸ್ಥೆಯಲ್ಲಿನ ಜನರು ತುಂಬಾ ತೊಂದರೆಗಳಿಗೆ, ಕಷ್ಟ-ನಷ್ಟಗಳಿಗೆ ಈಡಾದರು.

ಈ ಪಾಳೇಗಾರ ವ್ಯವಸ್ಥೆಯಲ್ಲಿ ಪ್ರತಿ ಹತ್ತಿಪ್ಪತ್ತು ಹಳ್ಳಿಗಳ ಗುಂಪೂ ಕೂಡ ಒಂದೊಂದು ಪುಟ್ಟ ರಾಜಾಸ್ಥಾನದ ಮಾದರಿಯ ಖರ್ಚುಗಳನ್ನು ಭರಿಸಬೇಕಾದ ದುಬಾರಿ ವೆಚ್ಚಕ್ಕೆ ಗುರಿಯಾಯಿತು. ಅಲ್ಲದೆ ಅಕ್ಕ-ಪಕ್ಕದ ಪಾಳೇಪಟ್ಟುಗಳ ಜೊತೆಯಲ್ಲಿ ಯುದ್ಧ ಮಾಡಬೇಕಾದ ಪ್ರಮೇಯ ಬಂದೊದಗುತ್ತಿದ್ದುದರಿಂದ ರೈತರಿಗೆ ಅಪಾರವಾದ ತೆರಿಗೆಗಳನ್ನು ನಿಗಧಿಪಡಿಸಲಾರಂಭಿಸಿದರು. ಅಲ್ಲದೆ ಪ್ರತಿ ಪ್ರಾಂತ್ಯವು ತನ್ನ ವಿರೋಧಿ ಪಾಳೆಪಟ್ಟಿನ ಸೈನಿಕರಿಂದ ಯಾವಾಗಬೇಕಾದರೂ ಲೂಟಿಗೆ ಹಾಗೂ ಧ್ವಂಸಕ್ಕೆ ಗುರಿಯಾಗುವಂತಹ ಆತಂಕವನ್ನು ಎದುರಿಸಬೇಕಾಯಿತು.

ಪಾಳೆಪಟ್ಟುಗಳ ನಡುವಿನ ದಿನನಿತ್ಯದ ಯುದ್ಧಕಲಹ ಒಬ್ಬರ ಪ್ರಾಂತ್ಯವನ್ನು ಮತ್ತೊಬ್ಬರು ಲೂಟಿ ಮಾಡುವುದು, ಬಲತ್ಕಾರದ ತೆರಿಗೆ-ಕಾಣಿಕೆಗಳ ಸಂಗ್ರಹ ಮುಂತಾದವು ಜನತೆಯನ್ನು ದಿವಾಳಿ ಎಬ್ಬಿಸಿದವು. ಮಧ್ಯಕಾಲೀನ ಸಂದರ್ಭದಲ್ಲಿನ ಯುದ್ಧಗಳಿಂದ, ಅನಾಯಕತ್ವದಿಂದ, ರಾಜಕೀಯ ಸ್ಥಿತ್ಯಂತರಗಳಿಂದ ಜನಸಮುದಾಯಗಳು ಅನೇಕ ಬಗೆಯಲ್ಲಿ ಕಷ್ಟ-ನಷ್ಟಗಳನ್ನು ಅನಿವಾರ್ಯವಾಗಿ ಅನುಭವಿಸುವಂತಾಯಿತು. ಹೊರಗಿನವರ ಆಕ್ರಮಣದಿಂದ ಅನ್ಯಭಾಷೆ, ಧರ್ಮ-ಸಂಸ್ಕೃತಿಗಳು ಜನಸಮುದಾಯದೊಳಗೆ ಪ್ರವೇಶಿಸಿದವು. ಪರಿಣಾಮವಾಗಿ ಈ ಪ್ರಾಂತ್ಯದ ಬದುಕು ಒಂದು ಬಗೆಯ ಸಂಕರ ಸಂಸ್ಕೃತಿಗೆ ನೆಲೆಯಾಯಿತು.

ಈ ರಾಜಕೀಯ ಚರಿತ್ರೆಯ ಹಿನ್ನಲೆ ಪಂಚಗಣಾಧೀಶ್ವರರ ಅವಲೋಕನದ ದೃಷ್ಟಿಯಿಂದ ತುಂಬ ಅವಶ್ಯಕವಾದುದು. ಏಕೆಂದರೆ ಜನಸಮುದಾಯಗಳ ಸಾಂಸ್ಕೃತಿಕ ಏಳು-ಬೀಳುಗಳು ಅಧಿಕಾರ ಸ್ವರೂಪವನ್ನು ಅವಲಂಬಿಸುತ್ತವೆ. ಯುದ್ಧಗಳ ನೆರಳಲ್ಲೇ ಬದುಕು ಸವೆಸುತ್ತಿರುವ ಜನಸಮುದಾಯಗಳ ಇಂತಹ ಒತ್ತಡದಲ್ಲಿಯೇ ಪಂಚಗಣಾಧೀಶ್ವರರು ರೂಪುತಳೆದರು.

## ೨.೧.೨. ಧಾರ್ಮಿಕ ಒತ್ತಡಗಳು

ಪಂಚಗಣಾಧೀಶ್ವರರ ಪಂಥಕ್ಕೆ ಪೂರ್ವದಲ್ಲಿ ಧಾರ್ಮಿಕವಾಗಿ ವೀರಶೈವದ ಬಹುದೊಡ್ಡ ಪರಂಪರೆ ಇದೆ. ಅದರ ಆರಂಭಕಾಲವನ್ನು ವೇದ ಉಪನಿಷತ್ತುಗಳ ಕಾಲದವರೆಗೂ ಕೊಂಡೊಯ್ಯುವ ಪ್ರಯತ್ನಗಳು ನಡೆದಿವೆ. 'ಪ್ರತಿಯೊಂದು ಯುಗದಲ್ಲೂ ಐವರು ಆರಾಧ್ಯರು ಅವತಾರ ಮಾಡಿ ಲಿಂಗಾಯತ ಧರ್ಮವನ್ನು ಎತ್ತಿ ಹಿಡಿಯುವರೆನ್ನುವ ಕಾಲ್ಪನಿಕ ಕತೆಯೊಂದು ಜನಬಳಕೆಯಲ್ಲಿದೆ.(ಎಂ.ಎಂ.ಕಲ್ಬುರ್ಗಿ, ೧೯೭೮, ಪು.೪೮-೫೩)

'ಕಲಿಯುಗದಲ್ಲಿ ರೇವಣಾರಾಧ್ಯ(ಬಾಳೆಹೊನ್ನೂರು), ಮರುಳಾರಾಧ್ಯ(ಉಜ್ಜಿನಿ), ಏಕೋರಾಮರಾಧ್ಯ(ಶ್ರೀ ಶೈಲ), ಪಂಡಿತಾರಾಧ್ಯ(ಕೇದಾರ), ಮತ್ತು ವಿಶ್ವಾರಾಧ್ಯ(ಕಾಶಿ) ಈ ಐವರು ಐದು ಮಠಗಳನ್ನು ಸ್ಥಾಪಿಸಿ ವೀರಶೈವ ಧರ್ಮವನ್ನು ಉಳಿಸಿ ಬೆಳಸಿದರೆಂದು ಹೇಳಲಾಗುತ್ತದೆ.'(ಹಿರೇಮಲ್ಲೂರ್ ಈಶ್ವರನ್, ೧೯೯೭, ಪು.೮೩) ಈ ಐವರಲ್ಲಿ ರೇವಣಾರಾಧ್ಯ ಮತ್ತು ಮರುಳಾರಾಧ್ಯ ೧೨ನೇ ಶತಮಾನದಲ್ಲಿ ಜೀವಿಸಿದ್ದರು ಎನ್ನುವುದಕ್ಕೆ ಹಲವಾರು ಸಾಕ್ಷ್ಯಧಾರಗಳು ಸಿಗುತ್ತವೆ. ಉಜ್ಜಿನಿಯ ಮರುಳಾರಾಧ್ಯರ ಕೇಂದ್ರವು ಮಧ್ಯಕರ್ನಾಟಕದ ಬಳ್ಳಾರಿ ಜಿಲ್ಲೆಯಲ್ಲಿದೆ. ಹಾಗೆಯೇ ಬಾಳೆಹೊನ್ನೂರಿನ ರೇವಣಾರಾಧ್ಯರ ಕೇಂದ್ರವು ಮಂಗಳೂರಿನಲ್ಲಿದೆ. ಕರ್ನಾಟಕದಲ್ಲಿ ಅಪಾರ ಪ್ರಭಾವವನ್ನು ಹೊಂದಿರುವ ಈ ಪೀಠಗಳು ಪ್ರಾಚೀನ ಕಾಲದಿಂದಲೂ ಅರಸರಿಂದ ದಾನದತ್ತಿಗಳನ್ನು ಪಡೆದುಕೊಂಡಿವೆ. ಇವುಗಳು ಸಮುದಾಯದ ಧಾರ್ಮಿಕ ಮತ್ತು ನೈತಿಕ ಬದುಕನ್ನು ನಿಯಂತ್ರಿಸುವುದರ ಜೊತೆಗೆ ಕೃಷಿ ಮತ್ತು ಹಣಕಾಸು ಚಟುವಟಿಕೆಗಳನ್ನು ನಿಯಂತ್ರಿಸುತ್ತಿದ್ದವು.

ವೀರಶೈವ ಗುರುವರ್ಗದಲ್ಲಿ ಐದು ಪೀಠಗಳಿರುವಂತೆ, ವಿರಕ್ತ ವರ್ಗದಲ್ಲಿಯೂ ಐದು ಸಮಯ ಪರಂಪರೆಗಳಿವೆ. 'ಧರ್ಮ ಶಾಸ್ತ್ರದಲ್ಲಿ 'ಸಮಯ' ಎಂದರೆ ಕುಲ, ಜಾತಿ, ಶ್ರೇಣಿ, ಮುಂತಾದವುಗಳು ಹಾಕಿಕೊಂಡ ನಿಯಮಗಳು ಎಂದು ಸೂಚಿಸಲಾಗಿದೆ. ಆದರೆ ಈ ಸಮಯಗಳನ್ನು 'ಪೂಜೆ'ಯ ಸಂದರ್ಭದಿಂದಲೂ ಗುರುತಿಸುವುದು ಕಂಡುಬರುತ್ತದೆ.'(ರಾಜಾರಾಮ ಹೆಗಡೆ, ೨೦೦೧, ಪು.೬) ಒಟ್ಟು ಹದಿನಾರು ಸಮಯಗಳನ್ನು ಮಹಲಿಂಗೇಂದ್ರ ವಿಜಯ ಕೃತಿ ಸೂಚಿಸುತ್ತದೆ. ಇವುಗಳಲ್ಲಿ ಮುಖ್ಯವಾದವು ಐದು ಮಾತ್ರ ಅವುಗಳೆಂದರೆ ಕೆಂಪಿನ ಸಮಯ, ಕುಮಾರ ಸಮಯ, ಸಂಪಾದನಾ ಸಮಯ, ಚೀಲಾಳ ಸಮಯ, ಮುರುಘಾ ಸಮಯ.

'ಚಿತ್ರದುರ್ಗದ 'ಶ್ರೀ ಚಿನ್ಮೂಲಾದ್ರಿ ಮಠವು ಮುರಿಘಾ 'ಸಮಯ'ಕ್ಕೆ ಸೇರಿದ್ದು ಮುರಿಗಾ ಶಾಂತವೀರರ ಐವರು ಶಿಷ್ಯರಲ್ಲಿ ಭಿನ್ನಾಭಿಪ್ರಾಯಗಳು ಮೂಡಿ ಮೊದಲ ನಾಲ್ವರು ವಿರಕ್ತ ಸಂಪ್ರದಾಯದ ಅವರ ಹೆಸರಿನ 'ಸಮಯ'ಗಳಿಗೆ ಕಾರಣಕರ್ತರಾದರೆಂದೂ ಚಿತ್ರದುರ್ಗದ ಮಠಸ್ಥಾಪಕರಾದ ಮುರಿಘಾ

ಶಾಂತವೀರರ ಶಿಷ್ಯ ಮುರಿಗಾ ಗುರುಸಿದ್ಧರು ಗುರುಗಳ ಬಳಿಕ ಅಲ್ಲಿನ ಪೀಠಕ್ಕೆ ಅಧಿಕಾರಿಗಳಾಗಿ 'ಮುರಿಗಾ ಸಮಯ'ಕ್ಕೆ ಕಾರಣರಾದರೆಂದೂ ಹೇಳಲಾಗಿದೆ.'(ಎಂ.ಚಿದಾನಂದಮೂರ್ತಿ, ೧೯೯೩, ಪು.೩೧೯)

ಗುರುಸ್ಥಲದ ಸಂಪ್ರದಾಯದಂತೆ ವಿರಕ್ತರು ಪ್ರಾಚೀನ ಕಾಲಕ್ಕೆ ತಮ್ಮ ಚರಿತ್ರೆಯನ್ನು ಒಯ್ಯುವುದಿಲ್ಲ. ಆದರೆ ಇವರು ತಮ್ಮ ಮೂಲವನ್ನು ೧೨ನೇ ಶತಮಾನದ ಕಲ್ಯಾಣದಲ್ಲಿನ ಅಲ್ಲಮನ ಶೂನ್ಯ ಸಿಂಹಾಸನದ ಜೊತೆ ಸಮೀಕರಿಸುತ್ತಾರೆ. ಪ್ರತಿಯೊಂದು ಸಮಯಗಳಿಗೆ ಸೇರಿದ ಸಂಪ್ರದಾಯಗಳನ್ನು ಸೂಚಿಸುವುದಕ್ಕೆ ತಕ್ಕ ಆಧಾರಗಳು ದೊರೆಯುವುದಿಲ್ಲವಾದರೂ, ಅವುಗಳನ್ನು ಸಮಕಾಲೀನ ವಿರಕ್ತ ಮಠಗಳು ಬೆಂಬಲಿಸುತ್ತವೆ. ಮಧ್ಯಕರ್ನಾಟಕದಲ್ಲಿ ಇರುವ ಚಿತ್ರದುರ್ಗ, ಧಾರವಾಡ, ಮುಳುಗುಂದ ಮೊದಲಾದ ಊರುಗಳಲ್ಲಿಯೂ ಮುರುಘಾ ಸಮಯದ ಮಠಗಳು. ಹುಬ್ಬಳ್ಳಿ, ಹಾನಗಲ್ಲಿನಲ್ಲಿರುವುದು ಕುಮಾರ ಸಮಯದ ಮಠಗಳು. ಗದುಗಿನ ತೋಂಟದಾರ್ಯ ಮಠ, ಇಳಕಲ್ಲಿನ ಚಿತ್ತರಗಿ ಮಠ ಕೊಪ್ಪಳದ ಗವಿಮಠ, ಉರವಕೊಂಡದ ಗವಿಮಠ ಇವೆಲ್ಲ ಚೀಲಾಳ ಸಮಯದ ಮಠಗಳು.

ಗುರುವರ್ಗದ ಪಂಚಪೀಠಗಳು ಮತ್ತು ಸಮಯ ಪರಿಕಲ್ಪನೆಯ ವಿರಕ್ತಮಠಗಳು ಶರಣ ಸಮುದಾಯವನ್ನು ಒಡೆದು ಬೇರೆ ಮಾಡಿದವು. ಮೊದಲನೆಯವರು ಪಂಚಾಚಾರ್ಯರ ನಿಷ್ಠರಾದರೆ, ಎರಡನೆಯವರು ಬಸವಣ್ಣ ಅಲ್ಲಮಪ್ರಭುವಿನಲ್ಲಿ ನಿಷ್ಠೆ ಹೊಂದಿದ್ದಾರೆ. ತಮ್ಮ ಅಸ್ತಿತ್ವಕ್ಕಾಗಿ ಇಬ್ಬರೂ ಶಾಖಾಮಠಗಳನ್ನು ಕಟ್ಟಿಕೊಂಡು ದಾನದತ್ತಿಗಳನ್ನು ಪಡೆದರು. 'ಚಿತ್ರದುರ್ಗದ ಮುರುಘಾಸ್ವಾಮಿ ಮಠ ಮತ್ತು ಹುಬ್ಬಳ್ಳಿಯ ಮೂರು ಸಾವಿರ ಮಠಗಳು(ಇವು ಮುರಿಗಾ ಸಮಯ ಮತ್ತು ಕುಮಾರ ಸಮಯ ಮಠಗಳು) ತಮ್ಮ ಅಧಿಪತ್ಯದಲ್ಲಿ ಒಂದೊಂದಕ್ಕೆ ಮೂರು ಸಾವಿರ ಮಠಗಳು ಇವೆಯೆಂದೂ ಶಾಖಾಮಠಗಳ ಜಂಗಮರು ತಮ್ಮ ಮಠದ ಲೆಕ್ಕಪತ್ರಗಳನ್ನು ಅವುಗಳಿಗೆ ಒಪ್ಪಿಸಬೇಕಾಗುವುದೆಂದೂ ಹೇಳಲಾಗುತ್ತದೆ.(ಹಿರೇಮಲ್ಲೂರ್ ಈಶ್ವರನ್, ೧೯೯೭, ಪು.೧೬೨) ಅಲ್ಲದೆ ಜಾತಿಗಳನ್ನು ವಿರೋಧಿಸಿ ಬೆಳೆದ ಲಿಂಗಾಯತ ಧರ್ಮದಲ್ಲಿ ಜಾತಿ ಉಪಜಾತಿಗಳ ನಿರ್ಮಾಣಕ್ಕೆ ಪ್ರೋತ್ಸಾಹಕೊಟ್ಟರು. ೧೨ನೇ ಶತಮಾನದ ಶರಣರು ಕುಲೇಳು ಹದಿನೆಂಟು ಜಾತಿಗಳು ಒಂದೇ ಎಂದು ಸಾರಿದ್ದ ಆಶಯ ಗುರು-ವಿರಕ್ತರ ಮಧ್ಯದ ತಿಕ್ಕಾಟದಿಂದ ಒಡೆದು ಹೋಯಿತು. ಇದರಿಂದಾಗಿ ವೀರಶೈವದಿಂದ ಅನೇಕ ದುಡಿವ ವರ್ಗಗಳು ಹೊರಗುಳಿದವು. ಈ ಸಂದರ್ಭದಲ್ಲಿ ದುಡಿವ ವರ್ಗದ ಆರಾಧ್ಯ ದೈವಗಳಾಗಿ ಪಂಚಗಣಾಧೀಶ್ವರರು ಮಧ್ಯಕರ್ನಾಟಕದಲ್ಲಿ ಕಾಣಿಸಿಕೊಂಡರು.

ಈ ಗಣಾಧೀಶ್ವರರು ಮಧ್ಯಕರ್ನಾಟಕಕ್ಕೆ ಬರಲು ಪ್ರೇರಣೆಯಾಗಿ ೭೦೧ ಗಣಗಳನ್ನು ಹೊಂದಿದ್ದ ತೋಂಟದ ಸಿದ್ಧಲಿಂಗಯತಿ ಮತ್ತು ಆತನ ಶಿಷ್ಯರ ಪ್ರಭಾವ ಕಂಡುಬರುತ್ತದೆ. ತೋಂಟದ ಸಿದ್ಧಲಿಂಗಯತಿಗಳು ಹರದನಹಳ್ಳಿಯ ಗೋಸಲಪೀಠದಿಂದ ಹೊರಟು ಗದಗ-ಡಂಬಳ ಸ್ಥಳಕ್ಕೆ ಬಂದು ಹೆಚ್ಚು ಪ್ರಭಾವ ಬೀರಿದ್ದಾರೆ. ಅದರಲ್ಲೂ ಶೂನ್ಯ ಸಂಪಾದನಕಾರರೆಲ್ಲ ದಕ್ಷಿಣದಿಂದ ಉತ್ತರಕ್ಕೆ ಚಲಿಸಿ

ಮಧ್ಯಕರ್ನಾಟಕಕ್ಕೆ ಬಂದು ನೆಲೆಸಿದ್ದಾರೆ. 'ಹಲಗೆಯಾರ್ಯ ಗುಬ್ಬಿಯವರು, ಗುಮ್ಮಳಾಪುರದ ಸಿದ್ದಲಿಂಗಯತಿ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಹೊಸೂರಿನವರು, ಗೂಳೂರು ಸಿದ್ಧವೀರಣ್ಣೊಡೆಯರು ತುಮಕೂರು ಜಲ್ಲೆಯ ಗೂಳೂರಿನವರು. ಬಹುಶಃ ಪ್ರಸಾದಿ ಮಹಾದೇವಯ್ಯನು ಗುಮ್ಮಳಾ ಪುರದವರಿರಬೇಕು.'(ಎಂ.ಎಂ.ಕಲ್ಬುರ್ಗಿ, ೧೯೯೧, ಪು.೧೫೫) 'ಕೊಟ್ಟೂರ ಗುರುಬಸವೇಶ್ವರರು ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಹೊಸೂರಿನವರು'(ಎಂ.ಶರಣಪ್ಪ, ೧೯೯೬, ಪು.೨೬) ಅಲ್ಲಿಂದ ಎಡೆಯೂರಿಗೆ ಬಂದು ನಂತರ ಈಗಿರುವ ಸ್ಥಳ ಕೊಟ್ಟೂರಿಗೆ ಬಂದರೆಂದು ಕೊಟ್ಟೂರ ಗುರುಬಸವೇಶ್ವರ ಚಾರಿತ್ರ್ಯ(ಬಸವಲಿಂಗಕವಿ) ಹೇಳುತ್ತದೆ.

ಈ ಎಲ್ಲಾ ಶರಣರು ಮಧ್ಯಕರ್ನಾಟಕವನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಆರಿಸಿಕೊಳ್ಳಲು ಇದ್ದ ಒತ್ತಡವೆಂದರೆ, ದಕ್ಷಿಣದ ಕಡೆ ಮಂಟೇಸ್ವಾಮಿ, ಮಾದೇಶ್ವರ ಪರಂಪರೆಗಳು ೧೨ನೇ ಶತಮಾನದ ಶರಣರ ಆಶಯಗಳನ್ನು ಪ್ರಚಾರಪಡಿಸಿದರೆ, ಉತ್ತರದ ಕಡೆ ಮುಸ್ಲಿಂ ಪ್ರಭಾವದಿಂದಾಗಿ ಸೂಫಿಸಂತರು ಈ ಕೆಲಸವನ್ನು ಮಾಡಿದರು. ಮಧ್ಯಕರ್ನಾಟಕ ಭಾಗದಲ್ಲಿ ಅದರಲ್ಲೂ ನೂರೊಂದು ವಿರಕ್ತರಿದ್ದ ಹಂಪೆಯ ಪರಿಸರದ ಜನಸಮುದಾಯದಲ್ಲಿ ಶರಣರ ಆದರ್ಶಗಳು ತನ್ನ ಪ್ರಭಾವವನ್ನು ಕಳೆದುಕೊಳ್ಳುತ್ತಲಿದ್ದು ಅದನ್ನು ಬದಲಾದ ಕಾಲಮಾನದ ಪರಿಸ್ಥಿತಿಗನುಗುಣವಾಗಿ ಪುನರುಜ್ಜೀವನಗೊಳಿಸಲಿಕ್ಕೆ ಪಂಚಗಣಾಧೀಶ್ವರರು ಪ್ರಯತ್ನಿಸಿದರು.

### ೨.೧.೩. ಸಾಮಾಜಿಕ ಒತ್ತಡಗಳು

ಪ್ರಾಚೀನ ಜೀವನ ಪದ್ಧತಿಯಲ್ಲಿ ಮನುಷ್ಯ ಸಂಘಜೀವಿಯಾಗಿದ್ದನು. ಏನನ್ನೇ ಉತ್ಪಾದಿಸಲಿ, ಬೇಟೆಯಾಡಲಿ, ಎಲ್ಲವೂ ಸಾಂಘಿಕವಾಗಿಯೇ ನಡೆದು ಬರುತ್ತಿತ್ತು. ಏಕೆಂದರೆ ಒಬ್ಬನೇ ಪ್ರಕೃತಿಯ ವಿರುದ್ಧ ಹೋರಾಡಲು ಅಶಕ್ತನಾಗಿದ್ದ. ಹಾಗಾಗಿ ಅಲ್ಲಿ ಜಾತಿ ವ್ಯವಸ್ಥೆಯಾಗಲಿ, ಶೋಷಕ-ಶೋಷಿತ ಸಂಬಂಧವುಳ್ಳ ಸಮಾಜ ವ್ಯವಸ್ಥೆಯಾಗಲಿ ಇರಲಿಲ್ಲ. ಬೆಳವಣಿಗೆಯ ಮುಂದಿನ ಹಂತದಲ್ಲಿ ಬೆಂಕಿಯ ಉಪಯೋಗ ಮತ್ತು ಪ್ರಾಣಿಗಳನ್ನು ಪಳಗಿಸುವುದರ ಮೂಲಕ ಒಂದೆಡೆ ನೆಲೆನಿಲ್ಲುವುದನ್ನು, ಸಂಪತ್ತಿನ ಉತ್ಪಾದನೆಯನ್ನು, ಪಶುಸಾಕಾಣಿಕೆಯನ್ನು ಪ್ರಾರಂಭಿಸಿದ. ಇದರಿಂದಾಗಿ ಹೊಸ ಸಮಾಜ ರಚನೆ ನಿರ್ಮಾಣವಾಯಿತು. ಉತ್ಪಾದನೆಯಲ್ಲಿ ವೈವಿಧ್ಯತೆ ಇಲ್ಲದಿದ್ದಕ್ಕಾಗಿ ಉತ್ಪಾದಿಸಿದ್ದೆಲ್ಲವೂ ನೇರವಾಗಿ ಉಪಯೋಗಿಸಲ್ಪಡುತ್ತಿದ್ದವು. ವಸ್ತುಗಳನ್ನು ಕೊಂಡುಕೊಳ್ಳುವ ಪ್ರಶ್ನೆಯೇ ಇರಲಿಲ್ಲ. ಸಾಮೂಹಿಕ ಶ್ರಮ ಮತ್ತು ಸಾಮೂಹಿಕ ಅನುಭೋಗ ಮಾತ್ರ ಇತ್ತು. ಈ ಸಮಾಜದ ಸಂಘಟನೆಗಳು 'ಗಣ'ರೂಪದಲ್ಲಿದ್ದವು. 'ಏಂಜಲ್ಸ್‌ರ ಪ್ರಕಾರ 'ಶಕ್ತಿಯುತವಾದ', ಕ್ರಿಯಾಶಾಲೀ ಸ್ವಾವಲಂಬಿ ಗುಂಪು ಎನ್ನಬಹುದು. ಇದಕ್ಕೆ ತನ್ನ ಕೆಲಸಗಳನ್ನು ಸುಸೂತ್ರವಾಗಿ ನಡೆಸಲು ಪ್ರತ್ಯೇಕವಾದ ರಾಜ್ಯವ್ಯವಸ್ಥೆ ಇರಲಿಲ್ಲ. ಯಾಕೆಂದರೆ ಆಗ

ಸ್ವಂತ ಆಸ್ತಿಯ ಮೇಲೆ ನಿಂತ, ಪರಸ್ಪರ ವೈರುದ್ಯಗಳಿಂದ ಕೂಡಿದ ವರ್ಗವ್ಯವಸ್ಥೆ ಇರಲಿಲ್ಲ.'(ಎಂ.ಎ.ಹೆಬ್ಬಾರ್, ಎನ್.ಆರ್.ಉಡುಪ(ಅನು), ೧೯೮೩, ಪು.೩೮)

ಪ್ರಾಣಿಗಳನ್ನು ಪಳಗಿಸುವುದರ ಮೂಲಕ ಸಾಕುವುದನ್ನು ಕಲಿತ ಮನುಷ್ಯ ಅವುಗಳ ಹಾಲು, ಕರು, ಚರ್ಮ, ಉಣ್ಣೆ, ಮಾಂಸ ಮೊದಲಾದ ಸೌಲಭ್ಯಗಳನ್ನು ಪಡೆಯಲಾರಂಭಿಸಿದ. 'ಇಂತಹ ದನಗಾಹೀ ಗುಂಪುಗಳು ಇತರ ಅನಾಗರಿಕರ ದೊಡ್ಡ ಮೊತ್ತದಿಂದ ಬೇರೆಯಾದವು. ಇದೇ ಜಗತ್ತಿನ ಮೊತ್ತ ಮೊದಲನೇ ಶ್ರಮ ವಿಭಜನೆ.'(ಅದೇ, ಪು.೭೮-೭೯) ದನಕುರಿಗಳ ಸಂಖ್ಯೆ ಜಾಸ್ತಿ ಆದಂತೆ ಸೌಲಭ್ಯಗಳ ಬಳಕೆ ಹೆಚ್ಚಾಗಿ ಒಬ್ಬರಿಗೊಬ್ಬರು ವಿನಿಮಯ ಮಾಡಿಕೊಳ್ಳಲಾರಂಭಿಸಿದರು. ಇದೇ ಹೊತ್ತಲ್ಲಿ ಬದುಕಿಗೆ ಅವಶ್ಯಕವಾದ ಆಯುಧಗಳನ್ನು, ಕರಕುಶಲ ವಸ್ತುಗಳನ್ನು ಉತ್ಪಾದಿಸಲಾರಂಭಿಸಲಾಯಿತು. 'ಇಂದ್ರನ ವಜ್ರಾಯುಧವನ್ನು ಮಾಡಿದವರು ಅಥವಾ ವೇದಗಳಲ್ಲಿ ಆಗಾಗ ಪ್ರಸ್ತಾಪಿಸಲ್ಪಟ್ಟ ತಕ್ಷನ(Takshan) ಮತ್ತು ರಥಕಾರ(Rathnakar)ರು ಮೊದಲಾದ ಕರಕುಶಲ ಕೆಲಸಗಾರರು ಆ ಕಾಲದಲ್ಲಿ ಕೆಲಸ ಮಾಡಿದ್ದು ಕಂಡುಬರುತ್ತದೆ.'(ಅದೇ, ಪುಟ.೭೯) ಹೀಗೆ ಇಡೀ ಗಣದ ಸದಸ್ಯರು ಬೇರೆ ಬೇರೆ ಕೆಲಸಗಳಿಗೆ ನಿಯುಕ್ತರಾಗಿ ಕೊನೆಗೆ ಈ ವಿವಿಧ ಗುಂಪುಗಳೇ ವರ್ಣಗಳಾದವು.

ನಿಧಾನವಾಗಿ ಉತ್ಪಾದನಾ ರೀತಿಯ ಮೇಲೂ ಶ್ರಮ ವಿಭಜನೆ ಪರಿಣಾಮ ಬೀರಲು ಪ್ರಾರಂಭಿಸಿತು. ಇದು ಸಾಮೂಹಿಕ ಉತ್ಪಾದನೆ ಮತ್ತು ಉಪಯೋಗದ ರೀತಿಯನ್ನು ಕೆಡಹಿತು. ಇಲ್ಲಿಂದ ಉತ್ಪಾದನೆಯ ಮೇಲೆ ವೈಯಕ್ತಿಕ ಹತೋಟಿ ಇರುವುದು ಒಂದು ಕಾನೂನಾಗಿ ಬಂದಿತು. ಇದರಿಂದ ವಿನಿಮಯವು ಕೂಡ ಒಬ್ಬ ವ್ಯಕ್ತಿಯ ಹತೋಟಿಗೆ ಬಂತು. ಸಮಾಜ ಈ ಹಂತ ತಲುಪಿದಾಗ ಸ್ವಂತ ಆಸ್ತಿ ವ್ಯವಸ್ಥೆ ಮತ್ತು ವರ್ಣಬೇಧಗಳು ಹುಟ್ಟಿಕೊಂಡವು. ವರ್ಣವಿಭಜನೆ ಸಾಮೂಹಿಕ ಶ್ರಮ ಮತ್ತು ಸಾಮೂಹಿಕ ಅನುಭೋಗವನ್ನು ನಶಿಸಿ ಹಾಕಿತು. ವೈಯಕ್ತಿಕ ಉತ್ಪಾದನೆ ಮತ್ತು ಬಳಕೆ, ಸಂಪತ್ತಿನ ಅಸಮಾನ ಹಂಚಿಕೆಗೆ ದಾರಿ ಮಾಡಿಕೊಟ್ಟಿತು. ಅಂದರೆ ಗಣಗಳು ವರಡು ವರ್ಗಗಳಾಗಿ ವಿಭಜಿಸಲ್ಪಟ್ಟವು. ಬಡವ-ಬಲ್ಲಿದ, ಶೋಷಕ-ಶೋಷಿತ ಕ್ರಮೇಣ ಗುಲಾಮ-ಒಡೆಯ.

'ಬೆಳೆಯುತ್ತಿರುವ ಗಣಗಳು ತಮ್ಮ ಶ್ರಮವಿಭಜನೆಯ ಹಂತದಲ್ಲಿ ಯುದ್ಧ ನಡೆಸುವುದು ಮತ್ತು ಸ್ವರಕ್ಷಣೆಯಂತಹ ಜವಾಬ್ದಾರಿಯನ್ನು ಆರಿಸಲ್ಪಟ್ಟ ಕೆಲವು ವ್ಯಕ್ತಿಗಳಿಗೆ ಕೊಟ್ಟರು ಇವರೇ ಕ್ಷತ್ರಿಯರಾದರು. ಅಂತೆಯೇ ಉತ್ಪಾದನೆಯ ಮೇಲೆ ಪರಿಣಾಮ ಬೀರುವಂತಹ ಹವಾಮಾನದ ವೈಪರೀತ್ಯಗಳು, ನೆರೆ, ನದಿ ಮೊದಲಾದವುಗಳ ಬಗ್ಗೆ ಪೂರ್ವಭಾವೀ ಮಾಹಿತಿಗಳನ್ನು ಸಂಗ್ರಹಿಸುವ ಜವಾಬ್ದಾರಿಯನ್ನು ಇನ್ನು ಕೆಲವರಿಗೆ ಕೊಟ್ಟರು. ಇವರೇ ಬ್ರಾಹ್ಮಣರಾದರು. ಉಳಿದ ಅಪಾರ ಜನ ಸ್ತೋಮವೇ ವಿಶಸ, ದನಸಾಕುವವರು, ಕರಕುಶಲ ಕೆಲಸಗಾರರು ಮತ್ತು ವ್ಯವಸಾಯ ಮಾಡುವವರು ಈ ವರ್ಗಕ್ಕೆ ಸೇರಿದರು.'(ಅದೇ, ಪು.೮೬)

ಮೊದಲಿಗೆ ಗಣಗಳ ಮಧ್ಯ ಯುದ್ಧ ಅಥವಾ ಕಲಹವಾದಾಗ ಯುದ್ಧ ಬಂಧಿಗಳನ್ನು ಕೊಲ್ಲಲಾಗುತ್ತಿತ್ತು. ಆದರೆ ವೈಯಕ್ತಿಕ ಉತ್ಪಾದನೆಯ ಹೆಚ್ಚಳದಿಂದಾಗಿ ಬಂಧಿತರನ್ನು ಹೆಚ್ಚುವರಿ ಸಂಪತ್ತನ್ನು ಉತ್ಪಾದಿಸಲು ಬಳಸಿಕೊಳ್ಳಲಾಯಿತು. ಹೀಗಾಗಿ ದುಡಿಯುವದಕ್ಕೆ ಒಂದು ವರ್ಗ ನಿರ್ಮಾಣವಾಯಿತು. ಇದನ್ನು ಸಮಾಜದಲ್ಲಿ ಶೂದ್ರ ವರ್ಣವೆಂದೂ, ನಾಲ್ಕನೇ ವರ್ಣವೆಂದು ಗುರುತಿಸಲಾಯಿತು. ಆರಂಭದಲ್ಲಿ ಬ್ರಾಹ್ಮಣವರ್ಣದಲ್ಲಿ ಯಾರಾದರೂ ಸೇರಬಹುದಿತ್ತು. ಕಾಲಾಂತರದಲ್ಲಿ 'ಯುದ್ಧಗಳ ಆಚರಣೆಗಳಿಗೆ ಸಂಬಂಧಿಸಿದ ಮಂತ್ರಗಳನ್ನು ಲಿಪಿ ಬದ್ಧಗೊಳ್ಳಲು ಬಿಡದೆ, ಕೆಲವರ ಗುತ್ತಿಗೆಯಲ್ಲಷ್ಟೇ ಉಳಿಸಿಕೊಳ್ಳಲು ಮಾಡಿದ ಉಪಾಯದಿಂದಲೇ ಪುರೋಹಿತರಿಗೆ ಸಮಾಜದಲ್ಲಿ ಅಸಮಾನವಾಗಿ ಉನ್ನತ ಸ್ಥಾನ ಲಭಿಸುವುದು ಸಾಧ್ಯವಾಯಿತು. ನಂತರದ ಕಾಲದಲ್ಲಿ ಇಡೀ ಚರಿತ್ರೆಯನ್ನೇ ತನ್ನ ಪ್ರಭಾವದಲ್ಲಿ ಸಿಲುಕಿಸಿಕೊಂಡ ಬಲವಾದ ಶಕ್ತಿಯ ವರ್ಗವಾಗಿ ಇದು ಬೆಳೆದುಬಿಟ್ಟಿತು.'(ಎಚ್ .ಎಸ್ .ಶ್ರೀಮತಿ(ಅನು), ೧೯೯೮, ಪು.೮)

ಬಸವ ಮತ್ತು ಅವನ ಸಮಕಾಲೀನ ಶಿವಶರಣರಿದ್ದ ೧೨ನೇ ಶತಮಾನಕ್ಕಾಗಲೇ ಸಮಾಜವು ಜಾತಿ ವ್ಯವಸ್ಥೆಯಿಂದ ಸುತ್ತುವರಿಯಲ್ಪಟ್ಟಿತ್ತು. ಬ್ರಾಹ್ಮಣರು ಧಾರ್ಮಿಕ, ಆರ್ಥಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ತಮ್ಮ ಪ್ರಶ್ನಾತೀತ ಅಧಿಕಾರವನ್ನು ಸ್ಥಾಪಿಸಿದ್ದರು. ಜಾತಿವ್ಯವಸ್ಥೆಯ ವರ್ಣಶ್ರೇಣಿಯಲ್ಲಿ ಉನ್ನತವಾದ ಧಾರ್ಮಿಕ-ಸಾಮಾಜಿಕ ಸ್ಥಾನಕ್ಕೇರಲು ಕೆಳಜಾತಿಗಳಿಗೆ ಸಾಧ್ಯವೇ ಇರಲಿಲ್ಲ. ಸಾಮಾಜಿಕವಾಗಿ ಗೌರವಗಳಿಸಿಕೊಳ್ಳಲು ಇದ್ದ ಏಕೈಕ ಮಾರ್ಗವೆಂದರೆ ಸಂಪತ್ತುಗಳಿಸುವುದಾಗಿತ್ತು. ಇದೇ ಸಮಯದಲ್ಲಿ ರಚಿತವಾದ 'ಪ್ರಸಿದ್ಧ ಶಾಸ್ತ್ರವೇತ್ತ ವಿಜ್ಞಾನೇಶ್ವರನ 'ಮಿತಾಕ್ಷರ' ಗ್ರಂಥವು ಒಂದು ಜಾತಿಗೆ ನಿಗಧಿಪಡಿಸಿದ್ದ ಸಾಂಪ್ರದಾಯಿಕ ಕಸುಬನ್ನು ಬಿಟ್ಟು ಬೇರೆ ಕಸುಬು ಕೈಗೊಂಡು ಆಸ್ತಿ ಸಂಪಾದನೆ ಮಾಡುವುದನ್ನು ಬೆಂಬಲಿಸಿತು.'(ಟಿ.ಆರ್.ಚಂದ್ರಶೇಖರ್ (ಅನು), ೨೦೦೦, ಪು.೧೨೫)

ಇದೇ ಕಾಲಘಟ್ಟದಲ್ಲಿ ಸಂತೆಗಳ ನಿರ್ಮಾಣ, ನಾಣ್ಯಗಳ ಚಲಾವಣೆ, ನಗರಗಳ ಬೆಳವಣಿಗೆ ಉಂಟಾಗಿ ಸಾಮಾಜಿಕ ಕೀಳು ಸ್ಥಾನಪಡೆದಿದ್ದ ಕರಕುಶಲ ಕಸುಬುಗಳು ಹೆಚ್ಚಾಗಿ ಲಾಭದಾಯಕವಾಗಿ ಪರಿಣಮಿಸಿದವು. ಈ ಕಸುಬುದಾರರು ತಮ್ಮ ಹಿತಾಸಕ್ತಿಗಳನ್ನು ರಕ್ಷಿಸಿಕೊಳ್ಳುವ ಸಲುವಾಗಿ ಸಂಘಗಳನ್ನು ಕಟ್ಟಿಕೊಂಡರು. 'ಐಹೊಳೆಯ ಐದುನೂರು ಸ್ವಾಮಿಗಳು' ಎಂಬುದು ಅಂತಹ ಒಂದು ಪ್ರಭಾವಶಾಲಿ ಸಂಘವಾಗಿತ್ತು. 'ಇದು ವೀರಶೈವ ಚಳುವಳಿಯ ಜೊತೆ ನಿಕಟ ಸಂಬಂಧವನ್ನು ಇಟ್ಟುಕೊಂಡು ಮಹತ್ವದ ಪಾತ್ರವನ್ನು ನಿರ್ವಹಿಸುತ್ತಿದ್ದ ಬಣಜಿಗ ಜಾತಿಯೊಂದಿಗೆ ಸಂಬಂಧವನ್ನು ಇರಿಸಿಕೊಂಡಿತ್ತು.' ಬಣಜಿಗರು ಆ ಕಾಲದಲ್ಲಿನ ವೀರಶೈವ ಸಮುದಾಯದಲ್ಲಿಯೇ ಪ್ರಬಲ ಜಾತಿಯಾಗಿ ರೂಪುಗೊಂಡರು.

ವಿಜಯನಗರ ಕಾಲಕ್ಕಾಗಲೇ ವಾಣಿಜ್ಯ ಚಟುವಟಿಕೆಗಳ ಹಾಗೂ ಸರಕು ಉತ್ಪಾದನೆಯ ಬೆಳವಣಿಗೆಯ ಜೊತೆ ಸಮಾಜದಲ್ಲಿ ಎಡಗೈ-ಬಲಗೈ ಎಂಬ ಶ್ರೇಣೀಕರ ಪ್ರಚಲಿತಗೊಂಡಿತು. ಹಲವಾರು ವರ್ತಕ ಜಾತಿಗಳು ಹಾಗು ವಾಣಿಜ್ಯದಲ್ಲಿ ತೊಡಗಿಕೊಂಡಿದ್ದ ಜಾತಿಗಳು ಬಲಗೈಶ್ರೇಣಿಗೆ ಸೇರಿದರೆ 'ಸರಕು

ಉತ್ಪಾದಕರ ಸಮುದಾಯವು ತನ್ನನ್ನು ತಾನು ಮತ್ತೊಂದು ಶ್ರೇಣಿಯಾಗಿ ಉತ್ಪಾದಕರ ಚಟುವಟಿಕೆಯ ಸೌಹಾರ್ದತೆ ಆಧಾರದಲ್ಲಿ ಜಾತಿ ಎಲ್ಲೆಗಳಾಚೆ ರೂಪಿಸಿಕೊಂಡಿತು. ಇದು ಎಡಗೈ ಶ್ರೇಣಿಯಾಯಿತು.' (ಬಂಜಗೆರೆ ಜಯಪ್ರಕಾಶ್, ೨೦೦೦. ಪು.೧೬೯) ಸಮಾಜದ ಒಳಗಡೆ ಇರುವ ಉತ್ಪಾದನೆಯ ಹೊಸ ಸನ್ನಿವೇಶಗಳು ಹೇಗೆ ಹೊಸ ಸಾಮಾಜಿಕ ಬದಲಾವಣೆಗೆ ಕಾರಣವಾಗುತ್ತದೆ ಎನ್ನುವುದಕ್ಕೆ ಎಡಗೈ-ಬಲಗೈ ಶ್ರೇಣೀಕರಣ ಸಾಕ್ಷಿಯಾಗಿದೆ.

ಈ ಹೊತ್ತಲ್ಲಿಯೇ ಕೃಷಿಯೇತರ ಉತ್ಪಾದನಾ ಚಟುವಟಿಕೆಗಳು ವೃದ್ಧಿಹೊಂದಿ ಹತ್ತಿ ನೂಲುವುದು, ಬಟ್ಟೆ ನೇಯುವುದು, ಎಣ್ಣೆ ತೆಗೆಯುವುದು, ಬೆಲ್ಲ ಮತ್ತು ಸಕ್ಕರೆ ತಯಾರಿಸುವುದು, ಅದಿರು ಕರಗಿಸಿ ಕಬ್ಬಿಣ ತಯಾರಿಸುವುದು, ಮರ ಕೆಲಸ, ಗೊಂಬೆಗಳು ಮತ್ತು ಪೌರಾತ್ಯ ಕಲಾವಸ್ತುಗಳ ತಯಾರಿಕೆ ಇವೆಲ್ಲ ಬೆಳೆದವು. ಇದರಿಂದಾಗಿ ದೇವಾಂಗ, ಪದ್ಮಸಾಲೆ, ಜೇಡ, ಸಣಗಾರರಿಗೆ, ಕಮ್ಮಾರ, ಬಡಗಿ, ಬೆಳ್ಳಿ ಕೆಲಸದವರು, ಅಕ್ಕಸಾಲಿ, ತಾಮ್ರ ಕೆಲಸದವರು ಪ್ರವರ್ಧಮಾನಕ್ಕೆ ಬಂದರು.

ವಿಜಯನಗರ ಪತನಾನಂತರ ಪಾಳೇಗಾರರು ಒಂದನ್ನೊಂದು ಮುಗಿಸುವ ಪೈಪೋಟಿಯಲ್ಲಿ ಇನ್ನಿಲ್ಲದಷ್ಟು ಪ್ರಮಾಣದ ಯುದ್ಧಗಳಲ್ಲಿ ತೊಡಗಿದವು. ಇದರಿಂದಾಗಿ ಸೇನಾಶಕ್ತಿಯ ಪ್ರಾಮುಖ್ಯತೆ ಹೆಚ್ಚಾಗಿ ಸಾಮಾಜಿಕ ರಂಗದಲ್ಲಿ ಸಮರಶೀಲ ಜಾತಿಗಳ ಪ್ರಾಮುಖ್ಯತೆಯೂ ಹೆಚ್ಚುತ್ತಾ ಹೋಯಿತು. ಅವುಗಳಲ್ಲಿ ಬೇಡ ಮತ್ತು ಕುರುಬ ಜನಾಂಗ ಪ್ರಮುಖವಾದವು. ಮಧ್ಯಕರ್ನಾಟಕದಲ್ಲಿ ಅಸ್ತಿತ್ವಕ್ಕೆ ಬಂದ ಚಿತ್ರದುರ್ಗ, ಹರಪನಹಳ್ಳಿ, ನಾಯಕನಹಟ್ಟಿ, ಗುಡೇಕೋಟೆ, ಜರಿಮಲೆ, ರಾಯದುರ್ಗದ ಪಾಳೇಗಾರರು ಬೇಡ ಜನಾಂಗದವರಾಗಿದ್ದರು. ಈಗಲೂ ಬೇಡ ಜನಾಂಗದವರು ಈ ಭಾಗದಲ್ಲಿ ಅತಿ ಹೆಚ್ಚು ವಾಸಿಸುತ್ತಿದ್ದಾರೆ. ಅದೇ ರೀತಿ ಕಬ್ಬಿಣ ಉತ್ಪಾದನೆಯ ಕೌಶಲ್ಯವನ್ನು ಹೊಂದಿರುವ ಕುರುಬ ಜನಾಂಗ ಈ ಭಾಗದಲ್ಲಿ ಹೆಚ್ಚಿದ್ದಾರೆ. ಇದರೊಂದಿಗೆ ಲಿಂಗಾಯತ ಸಮುದಾಯದವರೂ ಹೆಚ್ಚಾಗಿ ಬದುಕಿದ್ದಾರೆ.

ಇವರನ್ನೊಳಗೊಂಡ ಎಲ್ಲ ದುಡಿಯುವ ವರ್ಗಗಳಿಗೆ ಸಮಾಜದಲ್ಲಿ ಅಧಿಕೃತ ಮಾನ್ಯತೆ ಬೇಕಾಗಿತ್ತು. ಅಂದಿನ ಕಾಲದಲ್ಲಿ ಈ ಬಗೆಯ ಮಾನ್ಯತೆಯನ್ನು ಒದಗಿಸಿಕೊಡುವ ಬಹುದೊಡ್ಡ ಲೌಕಿಕ ಅಥಾರಿಟಿ ಧರ್ಮದ ಕೈಯಲ್ಲಿತ್ತು. ಈ ಹಿನ್ನಲೆಯಲ್ಲಿಯೇ ತಿಪ್ಪೇಸ್ವಾಮಿ ಬೇಡ ಜನಾಂಗಕ್ಕೆ, ಕೊಟ್ಟೂರೇಶ್ವರ-ಗೋಣಿಬಸವ ಮಾದಿಗ ಜನಾಂಗವನ್ನು ವೀರಶೈವೀಕರಿಸುವುದನ್ನು ಹಾಗು ಮದ್ದಾನಸ್ವಾಮಿ ಬೇಡರ ಕನಕವ್ವನನ್ನು ಮತ್ತು ಗೋಣಿಬಸವ ಕುರುಬರ ವಡ್ಡೆಟ್ಟವ್ವನನ್ನು ಮದುವೆಯಾಗುವುದನ್ನು ಗಮನಿಸಬೇಕಾಗುತ್ತದೆ.

ಲಿಂಗಧಾರಣೆ ಮತ್ತು ವೈವಾಹಿಕ ಸಂಬಂಧಗಳ ಮೂಲಕ ಸಮಾಜದ ವಿವಿಧ ವರ್ಗಗಳಿಗೆ ಮಾನ್ಯತೆ ಕೊಡುವುದರ ಜೊತೆಗೆ ಪಂಚಗಣಾಧೀಶ್ವರರು ಕುಲೇಳು ಹದಿನೆಂಟು ಜಾತಿಗಳನ್ನು ಸಮಾನವಾಗಿ ಕಾಣಲು

ಪ್ರಯತ್ನಿಸಿದರು. ಅಷ್ಟಲ್ಲದೆ ಕೆಲವೊಂದು ಲೌಕಿಕ ಉದ್ದೇಶಗಳನ್ನು ಇವರು ಹೊಂದಿದ್ದರು. ಅವುಗಳೆಂದರೆ, ಬೇಡ ಜನಾಂಗ ಮಧ್ಯಕರ್ನಾಟಕ ಭಾಗದಲ್ಲಿ ಪ್ರಭುತ್ವವನ್ನು ಹೊಂದಿತ್ತು. ಈ ಬೇಡ ಜನಾಂಗಕ್ಕೆ ತಿಪ್ಪೇಸ್ವಾಮಿ ಲಿಂಗಧಾರಣೆ ಮಾಡುವುದರ ಮುಖಾಂತರ ಪ್ರಭುತ್ವದ ಮೇಲೆ ಪ್ರಭಾವ ಬೀರಿದ್ದಾನೆ. ಕುರುಬರು ಕಬ್ಬಿಣ ಉತ್ಪಾದನೆ ಮಾಡುವುದರ ಮೂಲಕ ಅತ್ಯಗತ್ಯವಸ್ತುವಿನ ಕುಶಲತೆಯ ಕುಸುಬಿನ ಒಡೆಯರಾಗಿದ್ದರು. ಮದ್ದಾನಸ್ವಾಮಿ ಮಗ ಗೋಣಿಬಸವ ಕುರುಬರ ವಡ್ಡಟ್ಟವ್ವನನ್ನು ಮದುವೆಯಾಗುವ ಮೂಲಕ ಈ ಜನಾಂಗವನ್ನು ಓಲೈಸಿಕೊಳ್ಳಲು ಪ್ರಯತ್ನಿಸಿದ್ದಾನೆ.

ಯಾವುದೇ ಪಂಥ-ಧರ್ಮಗಳಿಗೆ ರಾಜಪ್ರಭುತ್ವ ಹಾಗೂ ಜನಸಮುದಾಯಗಳ ಬೆಂಬಲ, ಪ್ರೋತ್ಸಾಹ, ಆಶ್ರಯ ದೊರೆತರೆ ಅಂತಹವು ವ್ಯಾಪಕವಾಗಿ ಬೆಳೆಯುತ್ತ, ಅಧಿಕೃತಗೊಳ್ಳುತ್ತಾ ಹೆಚ್ಚು ಕಾಲ ಉಳಿದು ಬೆಳೆದು ನಿಲ್ಲುತ್ತವೆ. ಪಂಚಗಣಾಧೀಶ್ವರರ ಉಳಿವು-ಬೆಳವಣಿಗೆಗೆ ಪ್ರಭುತ್ವ ಮತ್ತು ಸಮುದಾಯಗಳ ಪ್ರೋತ್ಸಾಹ-ಪೋಷಣೆ ಮುಖ್ಯವೆನಿಸಿತ್ತು. ಪಂಚಗಣಾಧೀಶ್ವರರ ಸಮಕಾಲೀನ ಪಂಥ-ಪರಂಪರೆಗಳು ಕೂಡ ಇಂತಹ ಬೆಂಬಲ ನಿರೀಕ್ಷೆಗಳನ್ನು ಇಟ್ಟುಕೊಂಡು ಬಾಳಿವೆ.

## ೨.೨. ಪ್ರೇರಣೆಗಳು

### ೨.೨.೧. ೧೨ನೇ ಶತಮಾನದ ಕಾಲ

೧೨ನೇ ಶತಮಾನದ ಹೊತ್ತಿಗಾಗಲೇ ಕರ್ನಾಟಕದಲ್ಲಿ ಬೌದ್ಧಧರ್ಮ ಕಣ್ಮರೆಯಾಗಿತ್ತು. ಜೈನಧರ್ಮ ಅತಿಯಾದ ಅಹಿಂಸೆ, ಅದರ ಕಟ್ಟುನಿಟ್ಟಿನ ಜೀವನಕ್ರಮ ಮತ್ತು ಮಹಿಳೆಯನ್ನು ಕಡೆಗಣಿಸಿದ್ದು, ರಾಜಾಶ್ರಯವನ್ನು ಬಯಸುತ್ತಿದ್ದುದರ ಮೂಲಕ ಜನಸಾಮಾನ್ಯರಿಂದ ದೂರಾಗಲಾರಂಭಿಸಿತ್ತು. ವೈದಿಕ ಧರ್ಮ ಕಾಲಕಾಲಕ್ಕೆ ಹೊಸ ರೂಪವನ್ನು ಪಡೆಯುತ್ತಾ ಪ್ರಬಲವಾಗಿಯೇ ಇತ್ತು. ಅಲ್ಲದೆ ವರ್ಣಾಶ್ರಮ ಪದ್ಧತಿಯನ್ನು ಅನುಸರಿಸುವ ಮೂಲಕ ದುಡಿಯುವ ವರ್ಗವನ್ನು ಕೀಳಾಗಿ ಕಾಣುತ್ತಿತ್ತು. ದೇವಾಲಯಗಳು ಅದಕ್ಕೆ ಹೊಂದಿಕೊಂಡ ಪ್ರಾಚೀನ ಶೈವ ಮಠಮಾನ್ಯಗಳು ಸಂಪದ್ಭರಿತವಾಗಿ ಸಮಾಜದ ಅಧಿಕಾರವನ್ನು ತಮ್ಮಲ್ಲಿಟ್ಟುಕೊಂಡಿದ್ದವು. ಭೂಮಾಲಿಕರು ಪ್ರಭುತ್ವ ಮತ್ತು ಸಮಾಜದ ನಡುವೆ ಮಧ್ಯವರ್ತಿಗಳಾಗಿದ್ದರು. ಈ ಭೂಮಾಲಿಕ ವರ್ಗವು ರೈತರನ್ನು, ದುಡಿಯುವ ವರ್ಗವನ್ನು ಸುಲಿಯುತ್ತಿತ್ತು. ಪುರೋಹಿತಶಾಹಿ ಶಕ್ತಿ ಮತ್ತು ಭೂಮಾಲಿಕತ್ವದ ಶೋಷಣೆಯಿಂದ ಬೇಸತ್ತ ಬಹುಸಂಖ್ಯಾತ ದುಡಿಯುವ ವರ್ಗದ ರೈತರು, ಕುಶಲಕರ್ಮಿಗಳು, ಸಮಾಜದಲ್ಲಿ ಬದಲಾವಣೆಯನ್ನು ಬಯಸಿದ್ದರು.

೧೨ನೇ ಶತಮಾನದಲ್ಲಿ ಮೊಟ್ಟಮೊದಲ ಬಾರಿಗೆ ಸಮಾಜದ ದುಡಿಯುವ ವರ್ಗದಿಂದ ಪ್ರಜಾತಾಂತ್ರಿಕ ಆಶಯಗಳು ಸಾಮಾಜಿಕವಾಗಿ ಅಭಿವ್ಯಕ್ತಗೊಂಡಿದ್ದನ್ನು ಕಾಣಬಹುದು. ಬಸವಣ್ಣನ ನಾಯಕತ್ವದಲ್ಲಿ ಅಂಬಿಗರ ಚೌಡಯ್ಯ, ಡೋಹರ ಕಕ್ಕಯ್ಯ, ಮಾದರ ಚೆನ್ನಯ್ಯ, ತುರುಗಾಹಿ ರಾಮಣ್ಣ, ನುಲಿಯ

ಚಂದಯ್ಯ, ಬಹುರೂಪಿ ಚೌಡಯ್ಯ, ಮೋಳಿಗೆ ಮಾರಯ್ಯ, ಆಯ್ದಕ್ಕಿ ಮಾರಯ್ಯ, ಮೇದಾರ ಕೇತಯ್ಯನಂತಹ ತುಳಿತಕ್ಕೊಳಗಾದ ಶ್ರಮಜೀವಿಗಳು, ಚೆನ್ನಬಸವಣ್ಣ, ಸಿದ್ದರಾಮ, ಅಲ್ಲಮನಂತಹ ಕಾಯಕಜೀವಿಗಳು ಅಕ್ಕಮಹಾದೇವಿ, ನೀಲಮ್ಮ, ನಾಗಲಾಂಬಿಕೆ, ಕಾಳವ್ವೆ, ಅಮುಗೆ ರಾಯಮ್ಮ, ಆಯ್ದಕ್ಕಿ ಲಕ್ಕಮ್ಮನಂತಹ ಸ್ತ್ರೀಯರು ವಚನಗಳ ಮೂಲಕ ತಮ್ಮ ಅನುಭವಗಳನ್ನು ಹಂಚಿಕೊಂಡರು. '೧೨ನೇ ಶತಮಾನದಲ್ಲಿ ಸುಮಾರು ೧೨೦೦ ವಚನಕಾರರಿದ್ದರೆಂದು ತಿಳಿದುಬರುತ್ತದೆ.'(ಟಿ.ಆರ್. ಚಂದ್ರಶೇಖರ್ (ಅನು), ೨೦೦೦, ಪು.೧೨) ಇಷ್ಟೊಂದು ಸಂಖ್ಯೆಯಲ್ಲಿ ಜನರು ತತ್ವಸಿದ್ಧಾಂತ ಅನುಭವ ಹಾಗೂ ಆಲೋಚನೆಗಳನ್ನು ಸಾಹಿತ್ಯಿಕವಾಗಿ ಮಂಡಿಸಲು ಶಕ್ತವಾಗಿದ್ದ ಕಾಲಘಟ್ಟವನ್ನು ನಾವು ಈ ಹಿಂದೆ ನೋಡಲು ಸಾಧ್ಯವಿಲ್ಲ. ಈ ವಚನಗಳು ಭಾಷೆ ಆಲೋಚನೆ ಮತ್ತು ತಾತ್ವಿಕವಾಗಿ ಹೊಸಪರಂಪರೆಯನ್ನೇ ಸೃಷ್ಟಿಸಿದವು.

ವ್ಯಾಪಾರಸ್ಥರು, ರೈತರು, ಕಸುಬುದಾರರು ವೀರಶೈವ ಧರ್ಮದಲ್ಲಿ ಸೇರಿಕೊಂಡು ಸಮಾಜದಲ್ಲಿ ತಮ್ಮ ನಡೆಯ ಮೂಲಕ, ವಚನಗಳ ಮೂಲಕ ಹೊಸ ಸ್ವರೂಪವನ್ನು ಕೊಡಲು ಪ್ರಯತ್ನಿಸಿದರು. ಪ್ರತಿಯೊಬ್ಬನಿಗೂ ದುಡಿಮೆಯನ್ನು ಕಡ್ಡಾಯ ಮಾಡಿದರು. ವೃತ್ತಿ ಆಧಾರಿತ ದುಡಿಮೆಯಲ್ಲಿ ಸಮಾನ ಸ್ಥಾನವನ್ನು ಪ್ರಜ್ಞಾಪೂರ್ವಕವಾಗಿ ನೀಡಿದರು. ದುಡಿಮೆಗೆ ಪ್ರಾಮಾಣಿಕತೆಗೆ ಹೆಚ್ಚಿನ ಒತ್ತುಕೊಟ್ಟರು. 'ಕಾಯಕವೇ ಕೈಲಾಸ'(ಆಯ್ದಕ್ಕಿ ಮಾರಯ್ಯ) ಎನ್ನುವ ಮೂಲಕ ದುಡಿಮೆಗೆ ಧಾರ್ಮಿಕ ಆಯಾಮ ನೀಡಿದರು. ಈ ಕಾಲದಲ್ಲಿ ದೇವಾಲಯಗಳು ಶೋಷಣೆಯ ಪ್ರಮುಖ ಕೇಂದ್ರಗಳಾಗಿದ್ದವು. 'ದೇವಾಲಯಗಳಲ್ಲಿ ಬಡ್ಡಿಯದರ ಶೇಕಡಾ ೩೦ರಷ್ಟಿದ್ದುದನ್ನು, ಹೊಲಗಳನ್ನು ಅಡವು ಇಟ್ಟು ಸಾಲ ಒಯ್ಯುತ್ತಿದ್ದುದನ್ನು, ಹಣಬಾರದಿದ್ದಾಗ ದೇವಾಲಯಗಳು ಆ ಹೊಲಗಳನ್ನು ವಶಪಡಿಸಿಕೊಳ್ಳುತ್ತಿದ್ದುದನ್ನು ಅಂದಿನ ಅನೇಕ ಶಾಸನಗಳು ತಿಳಿಸುತ್ತವೆ.(ಡಾ.ಎಂ.ಎಂ.ಕಲ್ಬುರ್ಗಿ, ೧೯೯೮, ಪು.೨೭೦) ಅಲ್ಲದೆ ಜಾತಿಪದ್ಧತಿಯನ್ನು ಸಮರ್ಥಿಸುತ್ತಾ ದೇವಾಲಯಗಳು ಸಮಾಜದ ಬಹುಸಂಖ್ಯಾತರನ್ನು ಶೋಷಿಸುತ್ತಿದ್ದವು. ಇಂತಹ ದೇವಾಲಯಗಳನ್ನು ತಿರಸ್ಕರಿಸಿದ ಚಳವಳಿಯು 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ'(ಬಸವಣ್ಣ) ಎನ್ನುವ ಮೂಲಕ ದೇವಾಲಯ ಕೇಂದ್ರಿತ ಭಕ್ತಿಯನ್ನು ವ್ಯಕ್ತಿಕೇಂದ್ರಿತಗೊಳಿಸಿತು. ಆ ಮೂಲಕ ವ್ಯಕ್ತಿಯ ಔನ್ನತ್ಯಕ್ಕೆ ಪ್ರಾಧಾನ್ಯತೆ ನೀಡಿತು. ಸಮಾಜದಲ್ಲಿನ ಎಲ್ಲ ವರ್ಗಗಳಿಗೂ ಸಮಾನ ಗೌರವವನ್ನು ನೀಡಲಾಯಿತು. ಲಿಂಗದೀಕ್ಷೆಯನ್ನು ಕೆಳವರ್ಗಗಳಿಗೆ ನೀಡುವ ಮೂಲಕ 'ಹೊಲೆಯುಂಟೆ ಲಿಂಗವಿದ್ದಡೆಯಲ್ಲಿ' (ಬಸವಣ್ಣ) ಎಂದು ಅವರನ್ನು ಸಮಾನವಾಗಿ ಕಾಣತೊಡಗಿದರು. ಸ್ವಹಿತ ಪ್ರೇರಿತ ಸಂಪತ್ತಿನ ಸಂಗ್ರಹವನ್ನು ಚಳವಳಿ ಸಂಪೂರ್ಣವಾಗಿ ತಿರಸ್ಕರಿಸಿತು. ಸಂಪತ್ತಿನ ದುರಾಸೆಯೇ ಅಪಾಯಕಾರಿ ಎಂದು ತಿಳಿಯಲಾಯಿತು. ಆದ್ದರಿಂದ ಕಾಯಕದಿಂದ ಗಳಿಸಿದ್ದನ್ನು ಸಮುದಾಯದಲ್ಲಿನ ಬಡಬಗ್ಗರಿಗೆ ದೀನ ದುರ್ಬಲರಿಗೆ ವ್ಯಯಿಸುವಂತಾಗಲು ದಾಸೋಹ ಪದ್ಧತಿಯನ್ನು ಜಾರಿಗೆ ತರಲಾಯಿತು. ದಾಸೋಹ ಪದ್ಧತಿಯಿಂದ ಸಮುದಾಯದಲ್ಲಿ ಸಂಘಟನಾತ್ಮಕ ಭ್ರಾತೃತ್ವ ಬೆಳೆಯಲು ಕಾರಣವಾಯಿತು.

ಇತಿಹಾಸದಲ್ಲಿ ಮೊಟ್ಟಮೊದಲಬಾರಿಗೆ ಹೆಣ್ಣಿಗೆ ಗಂಡಸಿನ ಸರಿಸಮಾನ ಸ್ಥಾನನೀಡಲಾಯಿತು. ಹೊನ್ನು ಮಣ್ಣಿನಂತೆ ಹೆಣ್ಣನ್ನು ಭೌತಿಕ ಸಂಪತ್ತೆಂದು ಭಾವಿಸಿ ಅವಳ ಶೋಷಣೆಗೆ ಕಾರಣವಾಗಿದ್ದ ಪ್ರಾಚೀನ ಜೀವನ ಪದ್ಧತಿಯನ್ನು ತಿರಸ್ಕರಿಸಿ 'ಹೊನ್ನು ಮಾಯೆಯಲ್ಲ, ಹೆಣ್ಣು ಮಾಯೆಯಲ್ಲ, ಮಣ್ಣು ಮಾಯೆಯಲ್ಲ ಮನದ ಮುಂದಣ ಆಸೆಯೇ ಮಾಯೆ'(ಅಲ್ಲಮ) ಎನ್ನುವ ಮೂಲಕ ಸಮಾಜವು ಹೆಣ್ಣುತನಕ್ಕೆ ಆರೋಪಿಸಿದ್ದ ಅನೇಕ ನಿಷೇಧಾತ್ಮಕ ಅಂಶಗಳನ್ನೆಲ್ಲಾ ತಿರಸ್ಕರಿಸಲಾಯಿತು. ಇದರಿಂದಾಗಿ ಮಹಿಳೆಯರು ತಮ್ಮ ಪ್ರತಿಭೆಯನ್ನು ಈ ಚಳುವಳಿಗೆ ನೀಡಿ ಬಲಪಡಿಸಿದರು.

ಮೂಢನಂಬಿಕೆಗಳನ್ನು ತಿರಸ್ಕರಿಸಿದ ಚಳುವಳಿಯು ಬಾಹ್ಯ ಉತ್ಸವ, ವಿಗ್ರಹ ಪೂಜೆ ಆಡಂಬರದ ಪ್ರಕ್ರಿಯೆಗಳಿಂದಾಗಲೀ, ಜಪತಪಗಳಿಂದಾಗಲೀ ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸಲು ಸಾಧ್ಯವಿಲ್ಲವೆಂದು ಸಾರಿತು. 'ನೀರ ಕಂಡಲ್ಲಿ ಮುಳುಗುವರಯ್ಯ ಮರವ ಕಂಡಲ್ಲಿ ಸುತ್ತುವರಯ್ಯ'(ಬಸವಣ್ಣ) ಎಂದು ದೇವರ ಕೃಪೆಗಾಗಿ ಬಾಹ್ಯಾಡಂಬರದಲ್ಲಿ ಮುಳುಗಿರುವವರನ್ನು ಛೇಡಿಸಿತು. ಕೈಲಾಸಕ್ಕೆ ಹೋಗುವ ಆಸೆಯಿಂದ ದೇವರನ್ನು ಪೂಜಿಸುತ್ತಿದ್ದ ಜನರಿಗೆ 'ಕೈಲಾಸವೆಂಬುದು ಭೂಮಿಯೊಳಿರುವ ಹಾಳುಬೆಟ್ಟ ಅಲ್ಲಿರುವ ಮುನಿಗಳೆಲ್ಲರು ಜೀವಗಳ್ಳರು'(ಚೆನ್ನಬಸವಣ್ಣ) ಎಂದು ಹೇಳಿ ಈ ಮರ್ತ್ಯದ ಬದುಕಿನ ಬಗೆಗೆ ಪ್ರೀತಿ ಹುಟ್ಟುವಂತೆ ಮಾಡಲಾಯಿತು. 'ದೇವಲೋಕ ಮರ್ತ್ಯಲೋಕ ಬೇರಿಲ್ಲ ಕಾಣಿರೋ'(ಬಸವಣ್ಣ) ಎಂದು ಮುಂದಿರುವ ಬದುಕಿನ ವಾಸ್ತವತೆಯ ಅರಿವನ್ನು ಮೂಡಿಸಲಾಯಿತು.

ಪ್ರತಿಯೊಬ್ಬ ವೀರಶೈವ ಹೆಣ್ಣು-ಗಂಡು ದೇಹದ ಮೇಲೆ ಧರಿಸುತ್ತಿದ್ದ ಶಿವನ ಅಮೂರ್ತ ಸಂಕೇತವಾಗಿದ್ದ ಸಣ್ಣ ಗಾತ್ರದ ಲಿಂಗವನ್ನು ಆರಾಧಿಸುವ ಪದ್ಧತಿಯನ್ನು ರೂಢಿಗೆ ತರಲಾಯಿತು. ಇದರ ಪರಿಣಾಮವಾಗಿ ಪುರೋಹಿತರ ಹಾಗು ಕಠೋರ ನಿಯಮಗಳ ನಿಯಂತ್ರಣದಲ್ಲಿದ್ದ ಪೂಜಾ ವಿಧಿವಿಧಾನಗಳು ಇಲ್ಲಿ ಅನಗತ್ಯವಾದವು. ಅಲ್ಲದೆ ಪ್ರಾಚೀನ ಪವಿತ್ರವೆನಿಸಿಕೊಂಡ ಶಾಸ್ತ್ರಗ್ರಂಥಗಳನ್ನು ಚಳುವಳಿ ತಿರಸ್ಕರಿಸಿತು. ಸಂಸ್ಕೃತ ಭಾಷೆಯಲ್ಲಿದ್ದ ಶಾಸ್ತ್ರಗ್ರಂಥಗಳ ಮೂಲಕ ಶೋಷಣೆಗೆ ಒಳಪಡುತ್ತಿದ್ದುದನ್ನು ಖಂಡಿಸಿ 'ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ, ತರ್ಕದ ಬೆನ್ನಬಾರನೆತ್ತುವೆ, ಆಗಮದ ಮೂಗ ಕೊಯಿವೆ'(ಬಸವಣ್ಣ) ಎಂದು ಹೇಳಲಾಯಿತು. ಪುರೋಹಿತರು ಯಾವ ಗ್ರಂಥಗಳನ್ನು, ಶಾಸ್ತ್ರಗಳನ್ನು ಆಧಾರವಾಗಿಟ್ಟುಕೊಂಡು ಅನ್ಯಾಯ ಶೋಷಣೆಗಳನ್ನು ಮಾಡುತ್ತಿದ್ದರೋ ಆ ಗ್ರಂಥಗಳನ್ನು ಶಿಕ್ಷಿಸುವ ಈ ವಚನ ಅವುಗಳನ್ನು ಸ್ಪಷ್ಟವಾಗಿ ತಿರಸ್ಕರಿಸಿತು.

ಹೀಗೆ ಶಾಸ್ತ್ರಗ್ರಂಥಗಳನ್ನು, ದೇವಾಲಯಗಳನ್ನು ತಿರಸ್ಕರಿಸಿದ ಚಳುವಳಿಯು 'ಷಟ್ಸ್ಥಲ ಸಿದ್ಧಾಂತ'ವನ್ನು ಬೋಧಿಸಿತು. ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಎಂಬುದಾಗಿ ಇವುಗಳನ್ನು ಕರೆಯಲಾಗಿದೆ. 'ಬಸವಣ್ಣನ ಮಟ್ಟಿಗೆ ಇವುಗಳ ಉದ್ದೇಶ ಸಮಾಜ ಮತ್ತು ದೇವರು ಒಂದೇ ಎಂಬುದಾಗಿ ನಂಬಿ, ಅವುಗಳನ್ನು ಮೇಲಿನ ಪ್ರೇಮಕ್ಕಾಗಿ ತದೇಕ ಚಿತ್ತದಿಂದ ಓಲೈಸುತ್ತ, ಅವುಗಳಲ್ಲಿ ಒಂದಾಗುವ

ಸ್ಥಿತಿಯನ್ನು ಸಂಪಾದಿಸುವುದೂ ಆಗಿದೆ. ಭಕ್ತಸ್ಥಲದಲ್ಲಿ ದೇವರು, ದೇವರ ಸೃಷ್ಟಿ, ಶರಣರ ಪ್ರಪಂಚದ ಬಗೆಗೆ ಲಿಂಗಾಯತ ಭಕ್ತನಲ್ಲಿ ಶ್ರದ್ಧೆ ಆಳವಾಗಿ ಬೇರುಬಿಡುತ್ತದೆ. ಮಹೇಶ್ವರ ಸ್ಥಳದಲ್ಲಿ ಆ ನಿಷ್ಠೆ ಕ್ರಿಯೆಗಿಳಿದು, ಪರಿಶುದ್ಧ ಮನಸ್ಸಿನಿಂದ ಶರಣ ಸಮಾಜವನ್ನು ಓಲೈಸುವನು. ಪರಧನ, ಪರಸ್ತ್ರೀಗೆ, ಪರದೈವಕ್ಕೆ ಸೋಲದ ನಿಸ್ಸೀಮ ಭಕ್ತ ಅವನು. ಪ್ರಸಾದಿಸ್ಥಲದಲ್ಲಿ ತಾನು ತನ್ನವರು ಎಂಬ ಸ್ವಾರ್ಥ ಅಳಿದು ಪ್ರಪಂಚವೆಲ್ಲ ಶಿವಮಯವಾಗಿ ತಾನು ಮಾಡಿದ್ದೆಲ್ಲ, ಕೊಟ್ಟದ್ದೆಲ್ಲಾ ಶಿವನಿಗರ್ಪಿತವೆಂಬಂತೆ ಸಮಾಜ ಸೇವೆಯಲ್ಲಿ ತಲ್ಲೀನನಾಗುತ್ತಾನೆ. ಅವನಿಗೆ ತನ್ನ ದೇಹವೆಲ್ಲ 'ಪ್ರಸಾದ ಕಾಯ'ವಾದಂತಹ ಅನುಭವ. ಪ್ರಾಣಲಿಂಗಸ್ಥಲದಲ್ಲಿ ಶರಣನು ಸಾಮಾಜಿಕ ಧಾರ್ಮಿಕ ಮೌಲ್ಯಗಳನ್ನು ಅಂತರ್ಗತ ಮಾಡಿಕೊಂಡು ದೇವರೇ ಪ್ರಾಣ, ಸಮಾಜವೇ ಪ್ರಾಣವೆಂದು ಕಾಣುತ್ತಾನೆ. ಶರಣಸ್ಥಲದಲ್ಲಿ ಶರಣನು ಭಕ್ತಿಯನ್ನು ಆನಂದಿಸುವನು. ಸಮಾಜದ ಸೇವೆಯಲ್ಲಿ ಅನುಭಾವದ ಆನಂದವನ್ನು ಪಡೆದ ಅನುಭೂತಿ ಹೊಂದುತ್ತಾನೆ. ಕೊನೆಯದಾಗಿ ಐಕ್ಯಸ್ಥಲದಲ್ಲಿ ದೇವರನ್ನು ಸಮಾಜವನ್ನು ಒಂದೇ ಭಾವದಿಂದ ಕಂಡು ಯಾವ ದ್ವಂದ್ವವಾಗಲಿ, ಹಂಗುಗಳನ್ನು ಹರಿದು ಹಾಕಿ ಎಲ್ಲಿಯೇ ಇದ್ದರೂ ಧನ್ಯತೆಯನ್ನು ಪಡೆದಿರುವುದು(ಹಿರೇಮಲ್ಲೂರ್ ಈಶ್ವರನ್ , ೧೯೯೭, ಪು.೨೨೩-೨೨೫) ಹೀಗೆ ಷಟ್ಸ್ಥಲಗಳ ಮೂಲಕ ವ್ಯಕ್ತಿಯ ಉನ್ನತಿಗಾಗಿ ಶ್ರಮಿಸಿದ ೧೨ನೇ ಶತಮಾನದ ಚಳುವಳಿಯು ವಿಶಿಷ್ಟವಾದ, ಕ್ರಾಂತಿಕಾರಕ ಸ್ವರೂಪವನ್ನು ಒಳಗೊಂಡಿತ್ತು. ಇಲ್ಲಿ ಭಿನ್ನತೆಗೂ ಅವಕಾಶ ಇತ್ತು. ಈ ಚಳುವಳಿಯಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸಿದ ಜನವರ್ಗವು ತಮ್ಮ ತಮ್ಮ ಭಿನ್ನ ತಾತ್ವಿಕ ನಿಲುವುಗಳನ್ನು ವ್ಯಕ್ತಪಡಿಸುವ ಅವಕಾಶವನ್ನು ಮಾಡಿಕೊಡಲಾಯಿತು ಮತ್ತು ಆ ಭಿನ್ನ ತಾತ್ವಿಕ ನಿಲುವುಗಳನ್ನು ಗೌರವಿಸಲಾಯಿತು. ಮುಂದೆ ಮಧ್ಯಕಾಲದುದ್ದಕ್ಕೂ ವಿವಿಧ ಪಂಥ-ಪರಂಪರೆಗಳು ಈ ಚಳುವಳಿಯೊಂದಿಗೆ ಸಂಘರ್ಷವನ್ನು, ಪ್ರೇರಣೆಯನ್ನು ಒಪ್ಪಂದವನ್ನು ಮಾಡಿಕೊಂಡು ಬೆಳೆದವು.

೧೨ನೇ ಶತಮಾನದ ವಚನ ಸಾಹಿತ್ಯದಲ್ಲಿ ಮತ್ತೆ ಮತ್ತೆ ಮರುಕಳಿಸುವ ವಸ್ತುವೆಂದರೆ ಜಾತಿ. ಉಳಿಗಮಾನ್ಯ ವ್ಯವಸ್ಥೆಯು ಶ್ರಮದ ಮೌಲ್ಯವನ್ನು ದೋಚುವುದಕ್ಕೆ ಜಾತಿಯನ್ನೇ ಒಂದು ಮಾನದಂಡವನ್ನಾಗಿ ಬಳಸಿಕೊಂಡಿತ್ತು. ಹಾಗಾಗಿ ಜಾತಿ ಪದ್ಧತಿಯನ್ನು ಹೋಗಲಾಡಿಸಲು ಈ ಕಾಲದಲ್ಲಿ ಪ್ರಮುಖವಾಗಿ ಚಳುವಳಿ ಪ್ರಯತ್ನಿಸಿತು. ಬಸವಣ್ಣ ಬರೆದ ವಚನಗಳಲ್ಲಿ 'ಅಪ್ಪನು ನಮ್ಮ ಮಾದಾರ ಚೆನ್ನಯ್ಯ, ಬೊಪ್ಪನು ನಮ್ಮ ಡೋಹರ ಕಕ್ಕಯ್ಯ, ಚಿಕ್ಕಯ್ಯ ನಮ್ಮಯ್ಯ ಕಾಣಯ್ಯ, ಅಣ್ಣನು ನಮ್ಮ ಕಿನ್ನರ ಬೊಮ್ಮಯ್ಯ' ಎಂದು ಮತ್ತೆ ಮತ್ತೆ ಕೆಳವರ್ಗದೊಂದಿಗೆ ತನ್ನನ್ನು ಸಮೀಕರಿಸಿಕೊಳ್ಳಲು ಪ್ರಯತ್ನಿಸುವುದನ್ನು ಕಾಣಬಹುದು.

ಈ ಕಾಲದಲ್ಲಿ ಹಲವಾರು ಜಾತಿಗುಂಪುಗಳಾಗಿ ಸಮಾಜವನ್ನು ವರ್ಗೀಕರಿಸಿದ್ದ ಪೂರ್ವಾಗ್ರಹಗಳ ವಿರುದ್ಧ ಚಳುವಳಿ ದೊಡ್ಡ ಹೋರಾಟವನ್ನೇ ಸಂಘಟಿಸಿತು. ವೀರಶೈವವನ್ನು ಒಪ್ಪಿಕೊಂಡವರೆಲ್ಲ ತಮ್ಮ ಪೂರ್ವಾಶ್ರಮದ ಸಂಬಂಧಗಳನ್ನೆಲ್ಲಾ ಕಡಿದುಕೊಂಡು ಜಾತಿ ಆಧಾರಿತ ವಿಂಗಡನೆಯನ್ನು ತ್ಯಜಿಸಬೇಕಾಗಿತ್ತು.

ಕೆಳವರ್ಗಗಳಲ್ಲಿ ಆಚರಣೆಯಲ್ಲಿದ್ದ ಅನಿಷ್ಟಕಾರಿ ಪದ್ಧತಿಗಳನ್ನು ಖಂಡಿಸಲಾಯಿತು. ಆದರೆ ಕೆಳವರ್ಗದಿಂದ ಮತಾಂತರ ಹೊಂದಿ ಶರಣ ಸಮಾಜದೊಳಗೆ ಪ್ರವೇಶಿಸಿದವರು ತಮ್ಮ ಪೂರ್ವಾಶ್ರಮದ ಹಲವಾರು ಪದ್ಧತಿಗಳನ್ನು ಬಿಟ್ಟಿದ್ದರೇ ಎನ್ನುವುದು ಪ್ರಶ್ನಾರ್ಥಕವಾಗಿದೆ. ಏಕೆಂದರೆ, 'ಗಂಡ ಶಿವಭಕ್ತ, ಹೆಂಡತಿ ಮಾರಿಮಸಣಿಯ ಭಕ್ತೆ'(ಬಸವಣ್ಣ) ಎನ್ನುವಲ್ಲಿ ಚಳುವಳಿಯಲ್ಲಿದ್ದ ಎಷ್ಟೊ ಜಾತಿಗಳು ತಮ್ಮ ಮೂಲ ಆಚರಣೆ-ಪದ್ಧತಿಗಳನ್ನು ಬಿಟ್ಟಿರಲಿಲ್ಲ ಎನ್ನುವುದನ್ನು ಸೂಚಿಸುತ್ತದೆ. ವೀರಶೈವ ಸಮಾಜದ ಪಾವಿತ್ರತೆಯನ್ನು ಕಾಪಾಡುವುದೇ ತನ್ನ ಕರ್ತವ್ಯ ಎಂದು ತಿಳಿದುಕೊಂಡಿದ್ದ ಚೆನ್ನಬಸವಣ್ಣನು ಈ ಬಗ್ಗೆ ವ್ಯಕ್ತಪಡಿಸುವ ಶಂಕೆಗಳು ಅವನ ಹಲವಾರು ವಚನಗಳಲ್ಲಿ ಕಂಡುಬರುತ್ತವೆ. ಒಂದು ದೀರ್ಘ ವಚನದಲ್ಲಿ ಚೆನ್ನ ಬಸವಣ್ಣ ಕೆಳವರ್ಗಗಳ ಮೂಲ ಆಚರಣೆಗಳನ್ನು ಖಂಡಿಸುತ್ತಾ 'ಕತ್ತೆ ಭಕ್ತನಾದಡೆ ಕಿಸಕೂಳ ತಿಂಬುದ ಮಾಂಬುದೇ?, ಬೆಕ್ಕು ಭಕ್ತನಾದಡೆ ಇಲಿಗಳ ತಿಂಬುದ ಮಾಂಬುದೇ? ಹಂದಿ ಭಕ್ತನಾದಡೆ ಹಡಿಕೆಯ ತಿಂಬುದ ಮಾಂಬುದೇ? ಸೊಣಗ ಭಕ್ತನಾದಡೆ ಹಳೆಯ ಮಾಂಸ ತಿಂಬುದ ಮಾಂಬುದೆ? ಎಂದು ಕಟುವಾಗಿ ಟೀಕಿಸುತ್ತಾನೆ. ವೀರಶೈವಕ್ಕೆ ಮತಾಂತರದ ಮೂಲಕ ಪ್ರವೇಶಿಸಿದ ಮೇಲೂ ಕೆಳವರ್ಗಗಳ ಜನರ ನೈತಿಕ ಸಾಮರ್ಥ್ಯದ ಬಗ್ಗೆ ಚೆನ್ನಬಸವನಿಗೆ ಆಶಾದಾಯಕ ಭಾವನೆಯೇನೂ ಇಲ್ಲ. ವಚನದಲ್ಲಿನ ಮಾಂಸ ತಿನ್ನುವ ಅಪವಿತ್ರ ನಡಾವಳಿಯು ಕೆಳವರ್ಗಗಳಲ್ಲಿ ಅಂತರ್ಗತವಾಗಿದೆ ಎನ್ನುವುದನ್ನು ಸೂಚಿಸುತ್ತಿದೆ.

ಮಾಂಸಹಾರವನ್ನು 'ಅಪವಿತ್ರ'ವೆಂದು ನಂಬಿ ಅದನ್ನುಣ್ಣುವ ಭಕ್ತರನ್ನು ಪವಿತ್ರರಾಗಿಸುವಾಗ ಹುಟ್ಟುವ ಬಿಕ್ಕಟ್ಟಿದು, ಮಧ್ಯಕಾಲದುದ್ದಕ್ಕೂ ತಿಪ್ಪೇಸ್ವಾಮಿ, ಮಂಟೇಸ್ವಾಮಿ, ಮಲೆ ಮಾದೇಶ್ವರರಂತಹ ದುಡಿವ ವರ್ಗದ ಸಾಂಸ್ಕೃತಿಕ ವೀರರು ಕೆಳಜಾತಿಗಳ ಮಾಂಸಹಾರದಂತಹ ಕೀಳು ನಡಾವಳಿಕೆಯನ್ನು ಪವಿತ್ರಗೊಳಿಸುತ್ತಾರೆ. ಮಂಟೇಸ್ವಾಮಿ ಕಾವ್ಯವಂತೂ ಇಂತ ಕೀಳನ್ನು ಮೌಲೀಕರಿಸುವ ಆಶಯಗಳಿಂದ ತುಂಬಿಹೋಗಿದೆ. ಈಗಲೂ ನಾಯಕನಹಟ್ಟಿ ತಿಪ್ಪೇಸ್ವಾಮಿಯ ಹೊರಮಠಕ್ಕೆ ಕುರಿ ಕೋಳಿಯ ಮಾಂಸವನ್ನು ನೈವೇದ್ಯಕ್ಕೆ ಒಪ್ಪಿಸುತ್ತಾರೆ. ಜಾತ್ರೆಯ ಸಂದರ್ಭದಲ್ಲಂತೂ ಲಕ್ಷಾಂತರ ಜನ ಹೊರಮಠದ ಮುಂದೆ ಇರುವ ಆವರಣದಲ್ಲಿ ಬೀಡುಬಿಟ್ಟಿರುತ್ತಾರೆ. ಅವರೆಲ್ಲ ಮಾಂಸವನ್ನು ತಿಪ್ಪೇಸ್ವಾಮಿಗೆ ಎಡೆಯಾಗಿ ಅರ್ಪಿಸುತ್ತಾರೆ. ಈ ಕುರಿತು ಅಲ್ಲಿನ ಜನಪದ ಹಾಡುಗಾರರು

'ಬ್ಯಾಡರ ಸಂಗಾಕೆ ಹೋದಾನೆ ತಿಪ್ಪಯ್ಯ
ಮದ್ದು ಮಾಂಸಗಳ ಮಾಡಂತೆ - ಹೊರಮಠಕೆ
ಎಡಿಯೇ ತಿಪ್ಪಯ್ಯಗ ಇರಲೆಂದು'

(ಅನುಬಂಧ ೩, ತಿಪ್ಪೇಸ್ವಾಮಿ ಕಾವ್ಯ)

ಎಂದು ಹಾಡುವುದನ್ನು ಗಮನಿಸಬಹುದು. ಈ ರೀತಿ ಶಿಷ್ಟ ಸಂಸ್ಕೃತಿಯಲ್ಲಿ ಅಮುಖ್ಯವಾಗಿರುವ ಮಾಂಸವನ್ನು ಸ್ವೀಕರಿಸುವುದರ ಮೂಲಕ ನಾಯಕನಹಟ್ಟಿ ತಿಪ್ಪೇಸ್ವಾಮಿಯು ೧೨ನೇ ಶತಮಾನದ ಶರಣರ ಆಲೋಚನೆಗಳಿಗಿಂತ ಭಿನ್ನವಾಗಿ ಕೆಳವರ್ಗಗಳ ಸಾಂಸ್ಕೃತಿಕ ಅನನ್ಯತೆಯನ್ನು ಎತ್ತಿಹಿಡಿಯುತ್ತಾನೆ.

ಈ ರೀತಿ ಬೇಡರ ಸಂಗಕ್ಕೆ ಹೋಗಿ ಮದ್ದು ಮಾಂಸಗಳನ್ನು ಸ್ವೀಕರಿಸುವುದಕ್ಕೆ ಸ್ಥಳೀಯ ಪ್ರದೇಶದಲ್ಲಿದ್ದ ಸಾಮಾಜಿಕ-ರಾಜಕೀಯ, ಆರ್ಥಿಕ ಕಾರಣಗಳು ಹಿನ್ನಲೆಯಾಗಿ ಕೆಲಸ ಮಾಡಿರುತ್ತವೆ. ಮ್ಯಾಸನಾಯಕರು ಹೆಚ್ಚಾಗಿ ಕಂಡುಬರುವ ಈ ಭಾಗದಲ್ಲಿ ಆರ್ಥಿಕವಾಗಿ, ರಾಜಕೀಯವಾಗಿ ಅವರು ಪ್ರಬಲರಾಗಿದ್ದಾರೆ. ಅಲ್ಲದೆ ಯಾವುದೇ ಜಾತಿ-ಜನಾಂಗ ಒಟ್ಟಿಗೆ ಬದುಕುವಾಗ ಮತಾಂತರ ಅಥವಾ ಧಾರ್ಮಿಕ ಪ್ರಭಾವಕ್ಕೆ ಒಳಗಾಗಿ ಹೊಸ ಪಂಥ ಧರ್ಮದ ಅನುಯಾಯಿಯಾದೊಡನೆ ಹಳೆ ನಂಬಿಕೆ, ಆಚರಣೆಗಳನ್ನು ಹೊಸ ಜೀವನ ಪದ್ಧತಿಯೊಡನೆ ವಿಚಿತ್ರವಾಗಿ ಬೆರೆಸತೊಡಗುತ್ತಾರೆ.

೧೨ನೇ ಶತಮಾನದಲ್ಲಿ ಮಹತ್ವದ ಸ್ಥಾನವನ್ನು ಪಡೆದ ಮತ್ತೊಂದು ಅಂಶವೆಂದರೆ ಕಾಯಕ ತತ್ವ. ಈ ಕಾಯಕತತ್ವಕ್ಕೆ ನಾಯಕನಟ್ಟಿ ತಿಪ್ಪೇಸ್ವಾಮಿ ಹೊಸ ಆಯಾಮವನ್ನು ನೀಡುತ್ತಾನೆ. ಪಟ್ಟಿದೊರೆ ಮಲ್ಲಪ್ಪನಾಯಕ ಚೌಡಮ್ಮನ ಹಳ್ಳ, ದಾಸರಳ್ಳ, ತುರವನೂರು ಕಡೆಯಿಂದ ಹರದುಬರುವ ನೀರಿಗೆ ಅಡ್ಡಲಾಗಿ ಹಿರೇಕೆರೆಯನ್ನು, ಕಟ್ಟಲು ಯೋಚಿಸುತ್ತಾನೆ. ಆದರೆ ಅವನ ಬಳಿ ದುಡ್ಡಿರುವುದಿಲ್ಲ. ಅವನಿಗೆ ಸಹಾಯ ಮಾಡಲು ತಿಪ್ಪೇಸ್ವಾಮಿ ಒಪ್ಪಿಕೊಳ್ಳುತ್ತಾನೆ. ಸಂಜೆ ಕೆಲಸದ ಆಳುಗಳೆಲ್ಲ ಕೆಲಸ ಮುಗಿಸಿ ತಿಪ್ಪೇಸ್ವಾಮಿಯ ಹತ್ತಿರ ಕೂಲಿ ಕೇಳಲು ಬರುತ್ತಾರೆ. ತಿಪ್ಪೇಸ್ವಾಮಿ ಅವರು ನಿಂತಿರುವ ಜಾಗದಲ್ಲಿಯೇ ಕುಳಿತು ಮರಳು ಕುಪ್ಪೆ ಮಾಡಿಕೊಳ್ಳಲು ಹೇಳುತ್ತಾನೆ. ಕೂಲಿಕಾರರು ತಮ್ಮ ಮುಂದಿನ ಮರಳು ಕುಪ್ಪೆಗಳನ್ನು ಕೆದರಿ ನೋಡಿದಾಗ ತಮ್ಮ ಶ್ರಮಕ್ಕೆ ತಕ್ಕಂತೆ ಹಣವು ಇರುತ್ತದೆ. ಒಬ್ಬನಿಗೆ ತನ್ನ ಕುಪ್ಪೆಯಲ್ಲಿ ಆ ದಿನದ ಕೂಲಿ ಇದ್ದರೆ ಮತ್ತೊಬ್ಬನಿಗೆ ಕುಪ್ಪೆಯಲ್ಲಿ ಏನೂ ಇರುವುದಿಲ್ಲ. ಬರೀ ಮಣ್ಣೇ ಇರುತ್ತದೆ.

ಆಸೇನೆ ಹುಟ್ಟೀತು ರಾಸಿ ಅವ್ರು ಮಾಡ್ಯಾತು
ಬೆತ್ತ ಹಿಡ್ಕೊಂಡು ಹಟ್ಟೇನೆ ತಿಪ್ಪಯ್ಯ
ಸುತ್ತಾನೆ ಗೆರೆಯ ಕೊಯ್ದಾನು||
ಗೆರಿಯಾನೆ ಕೊಯ್ದಾನೆ ಸಿವಸಿವ ಅಂದಾನು
ಮಾಡಿದವರಿಗೆ ನೀಡು ಭಿಕ್ಷಾ ಆಗಲಿ||
ಕಷ್ಟ ಮಾಡಿದಾರೀಗೆ ಎಷ್ಟು ಭಾಗ್ಯವೈತೆ
ಕಷ್ಟ ಮಾಡ್ದಂತ ಮಯ್ಯಾಗಳ್ಳರಿಗೆ ಏಸಿವನೆ
ಗುಡ್ಡಕೆದರಿದರೆ ಬರಿಗೈಯೆ||

(ಅನುಬಂಧ ೨, ತಿಪ್ಪೇಸ್ವಾಮಿ ಕಾವ್ಯ)

ಆಗ ಅವನು 'ಸ್ವಾಮಿ ಬರೀ ಮಣ್ಣೇ ಬರುತ್ತೆ' ಎನ್ನಲು ತಿಪ್ಪೇಸ್ವಾಮಿ 'ಕಾರಣ ಇಷ್ಟೆ ನಾನು ಹರಸಿರುವುದು ಮಾಡಿದಷ್ಟು ನೀಡು ಭಿಕ್ಷೆ, ಅದರಂತೆ ಶ್ರಮಕ್ಕ ತಕ್ಕ ಪ್ರತಿಫಲ ಸಿಕ್ಕಿದೆ' ಎನ್ನುತ್ತಾನೆ.

ಮುಂದುವರೆದು 'ಕೆರೆ ಕಟ್ಟುವ ಕಾಯಕದಲ್ಲಿ ಭಾಗಿಗಳಾದ ಬಸುರಿ ಹೆಂಗಸರಿಗೆ ಹೊಟ್ಟೆಯೊಳಗಿರುವ ಮಗುವಿಗೂ ಸೇರಿದಂತೆ ಎರಡು ಪಟ್ಟು ಕೂಲಿ ದೊರೆಯುತ್ತಿತ್ತಂತೆ. ಅದರ ಪಳೆಯುಳಿಕೆ ಎಂಬಂತೆ ಈ ಕೆರೆಯ ಮಾಗಾಣೆಯಲ್ಲಿ ಕೆಲಸ ಮಾಡಿದ ಬಸುರಿ ಹೆಂಗಸರಿಗೆ 'ಬಸಿರುಪಟ್ಟು' ಎಂದು ಎರಡು ಪಟ್ಟು ಕೂಲಿಕೊಡುವ ಪರಿಪಾಠ ಇಂದಿಗೂ ನಡೆದುಕೊಂಡು ಬಂದಿರುವುದು ಕಾಣುತ್ತೇವೆ(ಹರ್ತಿಕೋಟೆ ವೀರೇಂದ್ರಸಿಂಹ, ಡಾ.ತೇಜಸ್ವಿ ಕಟ್ಟೀಮನಿ, ೨೦೦೨, ಪು.೬೭). ಹೀಗೆ ೧೨ನೇ ಶತಮಾನದ ಕಾಯಕ ತತ್ವದ ಪ್ರೇರಣೆ ಪಡೆದ ತಿಪ್ಪೇಸ್ವಾಮಿ ಅದಕ್ಕೆ ಮಾನವೀಯ ಮತ್ತು ಅಂತಃಕರಣದ ನೆಲೆಯನ್ನು ಒದಗಿಸುತ್ತಾನೆ.

/ಇನ್ನು ೧೨ನೇ ಶತಮಾನದಲ್ಲಿ ಬಸವಣ್ಣ ಮತ್ತು ಶರಣರ ಸಂಬಂಧಗಳ ಕಾರಣವಾಗಿ ಕಲ್ಯಾಣವು ಮಹತ್ವದ ಸಾಂಸ್ಕೃತಿಕ ಅಸ್ತಿತ್ವವನ್ನು ಹೊಂದಿದೆ. ಬಸವಣ್ಣನೊಂದಿಗೆ ಸೇರಿದ ನೂರಾರು ಶರಣರು 'ಕಲ್ಯಾಣ'ವನ್ನು ತಮ್ಮ ಹೋರಾಟದ ನೆಲೆಯನ್ನಾಗಿ ಮಾಡಿಕೊಂಡಿದ್ದರು. ಈ ಸಾಮೂಹಿಕ ಚಟುವಟಿಕೆಗಳಿಗೆ ಅಂದಿನ ಕಾಲದಲ್ಲಿ ವಿಪ್ಲವ ಉಂಟಾದರೂ ಕೂಡ ಕಾಲಾಂತರದ ಚರಿತ್ರೆಯ ಗತಿಯಲ್ಲಿ ಕಲ್ಯಾಣ ಕರಗಿ ಹೋಗಲಿಲ್ಲ. 'ಚದುರಿದ ಕಲ್ಯಾಣದ ಆಶಯಗಳು ಮತ್ತೆ ಚರಿತ್ರೆಯ ವಿಕಾಸದಲ್ಲಿ ಜನಮನದ ಸ್ಮೃತಿಯಲ್ಲಿ ಉಳಿದುಕೊಂಡು ಬಂದವು. 'ಕಲ್ಯಾಣ'ವು ಕೇವಲ ಒಂದು ಭೌತಿಕ ಸ್ಥಳವಾಗಿ ಪರಿಭಾವಿಸುವ ಕಲ್ಪನೆ ಮರೆಯಾಯಿತು. ವಚನಕಾರರ ಆಶೋತ್ತರಗಳ ಪ್ರತೀಕವಾಗಿ ಸಾಂಸ್ಕೃತಿಕ ಹಾಗೂ ವೈಚಾರಿಕ ಆಕೃತಿಗಳ ಮೊತ್ತರೂಪದ ಅರ್ಥವಂತಿಕೆಯನ್ನು 'ಕಲ್ಯಾಣ'ವು ಪಡೆದುಕೊಂಡಿತು. ಹೀಗಾಗಿ ಕಲ್ಯಾಣವೆಂದರೇನೆ ವಚನಗಳು ಮತ್ತು ವಚನಕಾರರು ಕಣ್ಮುಂದೆ ಬರುವಂತಾಯಿತು.

ಈ ಕಲ್ಯಾಣವು ಒಂದು ಪರಂಪರೆಯ ಅರ್ಥವನ್ನು ಪಡೆದುಕೊಂಡು ಮುಂದಿನ ಚರಿತ್ರೆಯ ಗತಿಯಲ್ಲಿ ಎದುರಾದ ಭಕ್ತಿ ಹಾಗೂ ಅನುಭಾವ ಧಾರೆಗಳಿಗೆ ಒಂದು ಶಕ್ತಿಯಾಗಿ ತನ್ನ ಪ್ರಭಾವವನ್ನು ಮಾಡಿತು. ಇವರು ವಚನಗಳೊಡಲಲ್ಲಿ ಇಟ್ಟ ಆಶಯಗಳು, ಪ್ರತಿಮೆಗಳೇ ಮಧ್ಯಕಾಲೀನ ಸಾಂಸ್ಕೃತಿಕ ವಲಯದ ಪರಿಕರಗಳಾಗಿ ಕಾಣಿಸಿಕೊಂಡ ಕಾರಣವಾಗಿ ಕನ್ನಡದಲ್ಲಿ ಶರಣರ ಕಥಾನಕಗಳು, ವಚನಗಳ ಸಂಕಲನಗಳು ಹೊಸ ಪರಿಷ್ಕಾರಗಳು ಮೂಡಿಬಂದವು. ಈ ಎಲ್ಲ ಸೃಜನಶೀಲ ಚಟುವಟಿಕೆಗಳೂ ಕಲ್ಯಾಣದೊಟ್ಟಿಗೆ ತಮ್ಮ ತಮ್ಮ ಸಂವಾದಗಳನ್ನು ಮಾಡುತ್ತಲೇ ಬಂದಿವೆ. ಹೀಗೆ ಅನುಸಂಧಾನ ಮಾಡುತ್ತಾ, ಪ್ರತಿಕ್ರಿಯಿಸುತ್ತಾ ತಮ್ಮ ಸೃಷ್ಟಿಶೀಲ ಪ್ರಕ್ರಿಯೆಗಳಿಗೂ ಕೂಡ 'ಕಲ್ಯಾಣ'ವೆಂಬ ಹೆಸರನ್ನೇ ಕೊಟ್ಟು ಮರುಕಲ್ಯಾಣಗಳ ಸೃಷ್ಟಿಗಳಿಗೆ ಕಾರಣವಾಗಿವೆ.'(ಡಾ.ಶಿವಾನಂದ ಎಸ್.ವಿರಕ್ತಮಠ, ೨೦೦೧, ಪು.೫೧-೫೨)

೧೨ನೇ ಶತಮಾನದ ಕಲ್ಯಾಣದ ಸೆನಪು ಮಧ್ಯಕಾಲದುದ್ದಕ್ಕೂ ಮತ್ತೆ ಮತ್ತೆ ಕಾಡಿದೆ. ಹೀಗಾಗಿ ವಿಜಯಕಲ್ಯಾಣ(ಹಂಪೆ); ಅಮರ ಕಲ್ಯಾಣ (ಕೊಡೇಕಲ್ಲು), ಧರ್ಮಕಲ್ಯಾಣಗಳು(ನಾಗಾವಿ) ಈ ನೆಲದಲ್ಲಿ ರೂಪು ತಳೆದಿವೆ.

ಪಂಚಗಣಾಧೀಶ್ವರರ ಚರಿತ್ರೆಯನ್ನು ಹೇಳುವ ಬಾಲಬಸವರ ಗೋಣಿ ಬಸವನ ಕಾವ್ಯವೂ ಕೂಡ ಕಲ್ಯಾಣದಿಂದಲೇ ಪ್ರಾರಂಭವಾಗುತ್ತದೆ. 'ಕಲ್ಯಾಣದಲ್ಲಿ ಪರಮಾತ್ಮ ಭಿಕ್ಷೆ ಬೇಡುತ್ತಾ ಹರಳಯ್ಯನ ಮನೆ ಹತ್ತಿರ ಬರುತ್ತಾನೆ. ಮನೆಯಲ್ಲಿ ಭಿಕ್ಷೆ ನೀಡಲು ಏನೂ ಇಲ್ಲದಿದ್ದಕ್ಕಾಗಿ ಸತ್ತ ಕರುವನ್ನೇ ಹರಳಯ್ಯ ಭಿಕ್ಷೆ ನೀಡುತ್ತಾನೆ. ಅದನ್ನು ಹೊತ್ತೊಯ್ದು ಪರಮಾತ್ಮ ಅದರ ಮಾಂಸವನ್ನು ಮೈಯೆಲ್ಲಾ ಬಳಿದು ಕೊಂಡು, ಕರುಳುಗಳನ್ನು ಕೊರಳಿಗೆ ಹಾಕಿಕೊಂಡು ಬಸವಣ್ಣನ ದಾಸೋಹ ಮನೆಗೆ ಬರುತ್ತಾನೆ. ಅಲ್ಲಿ ಅವನನ್ನು ಒಳಗೆ ಬಿಡದೆ ಕಾವಲುಗಾರರು ಪರಮಾತ್ಮನ ಬೆನ್ನಿಗೆ ಹೊಡೆಯುತ್ತಾರೆ. ಆ ಹೊಡೆತಗಳು ಬಸವಣ್ಣ ಮತ್ತು ನೀಲಾಂಬಿಕೆಯರ ಮೈ ಮೇಲೆ ಬಿದ್ದು ಅವರಿಗೆ ಅರಿವಾಗಿ ಪರಮಾತ್ಮನನ್ನು ಹುಡುಕುತ್ತಾ ಬರುತ್ತಾರೆ. ಪರಮಾತ್ಮ ಒಂದು ಹಗೇವಿನಲ್ಲಿ ನಿಂತಿರುತ್ತಾನೆ. ಬಸವಣ್ಣ ಅವನನ್ನು ಅಲ್ಲಿಂದ ಬರಲು ಕೇಳಿಕೊಳ್ಳುತ್ತಾನೆ. ಆಗ ಇಡೀ ಹಗೇವಿನ ತುಂಬ ಪರಮಾತ್ಮ ರಕ್ತ-ಕೀವಾಗಿ ತುಂಬಿಕೊಂಡು ಬಿಡುತ್ತಾನೆ. ಬಸವಣ್ಣ ಅದನ್ನೇ ಬಟ್ಟೆಯಲ್ಲಿ ಗಂಟು ಕಟ್ಟಿಕೊಂಡು ದಾಸೋಹ ಮನೆಯಲ್ಲಿ ಜಂಗಮರು ಊಟಕ್ಕೆ ಕುಳಿತ ಸ್ಥಳಕ್ಕೆ ತರುತ್ತಾನೆ. ಅಲ್ಲಿದ್ದ ಜಂಗಮರೆಲ್ಲ ಕೀವು ರಕ್ತ-ಮಾಂಸ ನೋಡಿ, ಕೆಟ್ಟು ಹೋದೆವೆಂದು ಮೈಲಿಗೆ ನಿವಾರಣೆಗಾಗಿ ಕೆರೆಗೆ ಸ್ನಾನ ಮಾಡಲಿಕ್ಕೆ ಹೋಗುವರು. ಆದರೆ ಇಡೀ ಕೆರೆ ರಕ್ತ-ಕೀವಾಗಿ ಹೋಗುತ್ತದೆ. ಕೊನೆಗೆ ಕೆರೆಯಿಂದ ಹೊರಬಂದು ನೋಡುತ್ತಾರೆ. ಅವರ ದೇಹದಲ್ಲಿ ಲಿಂಗವಿರುವುದಿಲ್ಲ ಬರೀ ವಸ್ತ್ರವಿರುತ್ತದೆ(ಅನುಬಂಧ ೬, ಗೋಣಿಬಸವ ಕಾವ್ಯದ ಆಯ್ದ ಭಾಗ, ಕಲ್ಯಾಣ ಪ್ರಸಂಗ).

೧೨ನೇ ಶತಮಾನದ ಕಲ್ಯಾಣ ಕ್ರಾಂತಿಯ ನಂತರ ಸುಮಾರು ಮೂರು-ನಾಲ್ಕು ಶತಮಾನಗಳ ಬೆಳವಣಿಗೆ ಅದಕ್ಕೊಂದು ಧಾರ್ಮಿಕ ರೂಪವನ್ನು ಕೊಟ್ಟಿದೆ. ಇದನ್ನು ಬಾಲಬಸವರು ತಮ್ಮದೇ ಆದ ಕಥನಗಳ ಮೂಲಕ ಪ್ರತಿಭಟಿಸಿದ್ದಾರೆ. ಈ ವೀರಶೈವದ ಸಾಂಸ್ಥಿಕ ಪ್ರಕ್ರಿಯೆಯನ್ನು ನೀಲಗಾರರು ಮಂಟೇಸ್ವಾಮಿ ಕಾವ್ಯದ ಮೂಲಕ ಪ್ರತಿಭಟಿಸಿದರೆ ಬಾಲಬಸವರು ಗೋಣಿಬಸವನ ಕಾವ್ಯದ ಮೂಲಕ ಪ್ರತಿಭಟಿಸಿದ್ದಾರೆ.

ಆದರೆ ಶಿಷ್ಟಕಾವ್ಯಗಳಿಗೆ ೧೨ನೇ ಶತಮಾನದ ವಚನಗಳಿಗಿಂತ ಅದನ್ನು ರಚಿಸಿದ ಶರಣರು ಮುಖ್ಯರಾದರು. ಹಾಗಾಗಿ ವಚನಗಳ ಆಶಯಕ್ಕಿಂತ ಭಿನ್ನವಾಗಿ ಶರಣರ ವೈಯಕ್ತಿಕ ಜೀವನ ಸಂಗತಿಗಳಲ್ಲಿ ಪವಾಡಗಳು, ಕಲ್ಪನೆಗಳು ಹುಟ್ಟಿಕೊಂಡವು. ಮುಂದೆ ಹರಿಹರ, ರಾಘವಾಂಕ, ಭೀಮಕವಿ, ಚಾಮರಸರಲ್ಲದೆ ನೂರೊಂದು ವಿರಕ್ತರ ಮತ್ತು ತೋಂಟದ ಸಿದ್ಧಲಿಂಗಯತಿಗಳ ಕಾಲದಲ್ಲಿ ಈ ಪ್ರಕ್ರಿಯೆಯನ್ನು ಕಾಣಬಹುದು.

ಒಟ್ಟಾರೆ ೧೨ನೇ ಶತಮಾನದ ಚಳುವಳಿ ಈ ಕಾಲದ ಮಾನವೀಯ ಹುಡುಕಾಟವಾಗಿದೆ. ಸಂಪೂರ್ಣವಾಗಿ ಈ ಚಳುವಳಿಯ ನೆಲೆಯು ಮನುಷ್ಯನ ಆರೋಗ್ಯಕರ ಬದುಕಿನ ಮೌಲ್ಯವಾಗಿರುವುದರಿಂದ ಅದು

ಕಾಲಾತೀತವಾಗಿಯು ಉಳಿದುಕೊಂಡಿದೆ. ಈ ಲಕ್ಷಣವೇ ಚಳುವಳಿಯೊಂದಿಗೆ ಕೊಡೇಕಲ್ ಪರಂಪರೆ, ಮೋನಪ್ಪಯ್ಯನ ಪರಂಪರೆ, ಮಂಟೇಸ್ವಾಮಿಯ ಪರಂಪರೆ, ಪಂಚಗಣಾಧೀಶ್ವರರ ಪರಂಪರೆಗಳು ಸಂವಾದ ಮಾಡಲು, ಹಾಗೂ ಮುಖಾಮುಖಿ ಆಗಲು ಮತ್ತು ಹಲವು ಬಗೆಯ ಅನುಸಂಧಾನ ಮಾಡಲು ಸಾಧ್ಯವಾಗಿಸಿದೆ.

### ೨.೨.೨. ನೂರೊಂದು ವಿರಕ್ತರ ಕಾಲ

ಪ್ರೌಢದೇವರಾಯನ ಕಾಲದಲ್ಲಿ ನೂರೊಂದು ವಿರಕ್ತರ ಮೂಲಕ ತೋರಿದ ಪ್ರತಿಕ್ರಿಯೆ ಇತಿಹಾಸ ೧೨ನೇ ಶತಮಾನಕ್ಕೆ ತೋರಿದ ಮೊಟ್ಟಮೊದಲ ಸಾಂಘಿಕ ಯತ್ನವಾಗಿತ್ತು. ಹರಿಹರ, ಭೀಮಕವಿ, ರಾಘವಾಂಕರು ತಮ್ಮ ಕೃತಿಗಳ ಮೂಲಕ ತೋರಿದ ಪ್ರತಿಕ್ರಿಯೆ ಬಿಡಿಬಿಡಿಯಾಗಿ ಏಕರೂಪದವುಗಳಾಗಿದ್ದದೇ ವಿನಃ ಅಲ್ಲಿ ಸಾಂಸ್ಥಿಕ ಸ್ವರೂಪ ಇರಲಿಲ್ಲ.

ನೂರೊಂದು ವಿರಕ್ತರ ಕಾಲ ಒಂದು ದೃಷ್ಟಿಯಿಂದ ವೀರಶೈವ ಧರ್ಮದ ಪುನರುಜ್ಜೀವನಕ್ಕೆ ಕಾರಣವಾದಂತೆ ವಿಪುಲವಾದ ವೀರಶೈವ ಸಾಹಿತ್ಯ ಸೃಷ್ಟಿಗೂ ಪ್ರೇರಕವಾಯಿತು. ಬಸವಣ್ಣನ ಕಾಲಘಟ್ಟದಲ್ಲಿ ಅವನನ್ನು ಸುತ್ತುವರೆದಿದ್ದ ಶರಣರ ಸಾಮಾಜಿಕ ಮತ್ತು ಧಾರ್ಮಿಕ ಆಂದೋಲನವು ಕಲ್ಯಾಣದಲ್ಲಿ ಕೇಂದ್ರೀಕೃತವಾಗಿತ್ತು. ಕಲ್ಯಾಣದ ಕ್ರಾಂತಿಯ ನಂತರ ಇಡೀ ಶರಣ ಸಮುದಾಯ ಅಲ್ಲಿಂದ ಚದುರಿ ಕರ್ನಾಟಕದ ದಕ್ಷಿಣ ಭಾಗ ಮತ್ತು ಆಂಧ್ರಪ್ರದೇಶದ ಭಾಗಗಳನ್ನು ಸೇರಿಕೊಂಡಿತು. ಈ ವಿಪ್ಲವದಿಂದ ಚದುರಿದ ವಚನಗಳನ್ನು ಸಂಕಲಿಸುವುದು, ಸ್ಥಲಕಟ್ಟುಗಳನ್ನು ಸಂಯೋಜಿಸುವುದು, ಸಿದ್ಧಾಂತ ಪ್ರಾತಿಪಾದಿಸುವುದು, ಸೂತ್ರ ರಚನೆ ಮಾಡುವುದು, ತತ್ವಕಾವ್ಯಗಳನ್ನು ಬರೆಯುವುದು ಇನ್ನಿತರ ಕೆಲಸಗಳನ್ನು ನೂರೊಂದು ವಿರಕ್ತರು ಕೈಗೆತ್ತಿಕೊಂಡರು.

ಪ್ರೌಢದೇವರಾಯನೇ ಸ್ವತಃ ವಿದ್ವಾಂಸನಾಗಿದ್ದು, 'ಬ್ರಹ್ಮಸೂತ್ರ ವೃತ್ತಿ' ಎಂಬ ಟೀಕು ಗ್ರಂಥವನ್ನು ಬರೆದಿದ್ದಾನೆ. ಅಲ್ಲದೆ ಲಕ್ಕಣ್ಣ ದಂಡೇಶ(ಶಿವತತ್ವ ಚಿಂತಾಮಣಿ), ಕರಸ್ಥಲದ ವೀರಣ್ಣೊಡೆಯ (ಕರಸ್ಥಲದ ವೀರಣ್ಣೊಡೆಯರ ಕಂದ, ಲಿಂಗಸೂತ್ರದ ವಚನ, ಇಷ್ಟಲಿಂಗ ಚರಿತೆ), ಕರಸ್ಥಲದ ನಾಗಿದೇವ (ಕರಸ್ಥಲ ನಾಗಿದೇವನ ತ್ರಿವಿಧಿ, ಅಕ್ಷರ ಚೌಪದ, ಏಕವಿಶಂತಿ ದೀಕ್ಷಾವಿಧಾನ, ಮಡಿವಾಳಯ್ಯನ ತಾರಾವಳಿ, ಕರಸ್ಥಲ ನಾಗಿದೇವನ ವಚನಗಳು), ಗುರುಬಸವ(ಶಿವಯೋಗಾಂಗ ತ್ರಿವಿಧಿ, ಸದ್ಗುಣ ರಹಸ್ಯ, ಕಲ್ಯಾಣೇಶ್ವರ ಸ್ವರೂಪಾಮೃತ, ವೃಷಭಗೀತೆ, ಅವಧೂತ ಗೀತೆ, ಮನೋವಿಜಯನ ಕಾವ್ಯ, ಗುರುಬಸವಾರ್ಯರ ವಚನ), ಬತ್ತಲೇಶ್ವರ(ಬತ್ತಲೇಶ್ವರರ ಹಾಡುಗಳು), ನಿರ್ವಾಣಿ ಬೋಳೇಶ(ನಿರ್ವಾಣಿ ಬೋಳೇಶನ ಹಾಡುಗಳು), ಷಟ್‌ಸ್ಥಲ ನಿರ್ಣಾಯಕರಾದ ಮಗ್ಗೆಯ ಮಾಯಿದೇವ(ಏಕೋತ್ತರ ಷಟ್‌ಸ್ಥಲ, ವಿಶೇಷಾರ್ಥ ಪ್ರಕಾಶಿಕೆ, ಅನುಭವ ಸೂತ್ರ, ಪ್ರಭುಗೀತೆ, ಷಟ್‌ಸ್ಥಲ ಗದ್ಯ, ಶತಕತ್ರಯ, ಮಾಯಿ ದೇವರಾರ್ಯ

ವಚನ), ವಚನ ಸಂಕಲನಕಾರರಾದ ಮಹಲಿಂಗದೇವ(ಏಕೋತ್ತರ ಶತಸ್ಥಲ), ಜಕ್ಕಣಾರ್ಯ(ನೂರೊಂದು ಸ್ಥಲ), ಟೀಕೆ-ವ್ಯಾಖ್ಯಾನಕಾರರಾದ ಕುಮಾರ ಬಂಕನಾಥ(ಷಟ್‌ಸ್ಥಲ ತಿಲಕ ಅಥವಾ ಪ್ರಭುದೇವರ ಟೀಕಿನ ವಚನ), ಕಲ್ಲುಮಠದ ಪ್ರಭುದೇವ(ಲಿಂಗಲೀಲಾ ವಿಲಾಸ ಚಾರಿತ್ರ್ಯ, ಪ್ರಭುದೇವರ ಮಂತ್ರಗೋಪ್ಯ), ಶ್ರೀಗಿರೀಂದ್ರ(ನೂರೊಂದು ಸ್ಥಲ ಟೀಕೆ), ಚಾಮರಸ(ಪ್ರಭುಲಿಂಗಲೀಲೆ) ಮೊದಲಾದವರು ವೀರಶೈವ ಸಾಹಿತ್ಯವನ್ನು ರಚನೆ ಮಾಡಿದರು. ಈ ನೂರೊಂದು ವಿರಕ್ತರ ಕಾಲಘಟ್ಟದಲ್ಲಿನ ಸಾಹಿತ್ಯವನ್ನು ಗಮನಿಸಿದರೆ, ಧಾರ್ಮಿಕ ತತ್ವಸಿದ್ಧಾಂತಗಳು, ಸಾಮಾಜಿಕ ಸಾಂಘಿಕ ಧೋರಣೆಗಳು ಸಾಹಿತ್ಯದ ವಿಭಿನ್ನ ಪ್ರಕಾರಗಳಲ್ಲಿ ವಿವಿಧ ನೆಲೆಗಳಲ್ಲಿ ರೂಪುಗೊಂಡಿರುವುದನ್ನು ಕಾಣಬಹುದು.

ಚೆನ್ನಬಸವ ಪುರಾಣವು ನೂರೊಂದು ವಿರಕ್ತರ ಕುರಿತು "....ಅತಿಮರುಳರಿಂದ ದೊಳಿಪ್ಪ ನೂರೊಂದು ವಿರತರ್ ......"(ಲಿಂಗಾಯತ ವಿದ್ಯಾಸಂಸ್ಥೆ(ಸಂ), ೧೯೩೪, ಪು.೭೬೩) ಎಂದು ಹೇಳುವುದು ನೋಡಿದರೆ ಇವರು ಹುಚ್ಚರತರ ಇದ್ದಂತೆ ಕಾಣುತ್ತದೆ. 'ಲೋಕ ದೃಷ್ಟಿಯಲ್ಲಿ ಹುಚ್ಚು-ಹುಚ್ಚಾಗಿ ಕಾಣುತ್ತಿದ್ದ ಈ ವಿರಕ್ತರು ತಪೋನಿಧಿಗಳಾಗಿ ಶಿವಯೋಗಿಗಳಾಗಿ ಲಿಂಗಾಂಗ ಸಮರಸರಾಗಿ ಕತೃತ್ವಶಾಲಿಗಳಾಗಿ ಆ ಕಾಲದಲ್ಲಿ ನಡೆದ ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ನವೋದಯಕ್ಕೆ ಪ್ರೇರಕರಾಗಿರಬೇಕು, ಕಾರಣ ಪುರುಷರಾಗಿರಬೇಕು.(ಆರ್.ಸಿ.ಹಿರೇಮಠ, ೧೯೬೬, ಪು.೨೨೬)

ಈ ನೂರೊಂದು ವಿರಕ್ತರ ಪ್ರಭಾವ ಪಂಚಗಣಾಧೀಶ್ವರರ ಮೇಲೆ ಆಗಿರುವುದನ್ನು ಕಾಣಬಹುದು. ಬಸವಲಿಂಗ ಕವಿಯು ಕೊಟ್ಟೂರ ಗುರುಬಸವೇಶ್ವರ ಚಾರಿತ್ರ್ಯದಲ್ಲಿ ಶಿಖಾಪುರಿಗೆ (ಈಗಿನ ಕೊಟ್ಟೂರು) ಬಂದ ಗುರುಬಸವೇಶ್ವರರನ್ನು ಕುರಿತು. 'ಮರೆಯೊಳಿರ್ಪ ದಿನಕರನಂತೆ ಮರುಳವೇಷದೊಳಪ್ಪಿದಂ' (ಆರ್.ಸಿ.ಹಿರೇಮಠ(ಸಂ), ೨೦೦೨, ಪು.೧೨೬) ಎಂದು ಹೇಳಲಾಗಿದೆ. ಈಗಲೂ ಕೂಡ ಕೊಟ್ಟೂರಲ್ಲಿ ಗುರುಬಸವೇಶ್ವರರಿಗೆ 'ಹುಚ್ಚು ಕೊಟ್ರಯ್ಯ' ಎಂದು ಜನಸಾಮಾನ್ಯರು ಕರೆಯುತ್ತಾರೆ. ತಿಪ್ಪೇಸ್ವಾಮಿಗೆ ಸಂಬಂಧಿಸಿದಂತೆ ಜನಪ್ರಿಯವಾಗಿ ಪ್ರಚಲಿತವಿರುವ ಮಿತಿನ ಪ್ರಕಾರ ಮರುಳನಂತೆ ತಿಪ್ಪೆಯ ಮೇಲೆ ಕೂತು ಪವಾಡ ಮಾಡಿದ್ದರಿಂದ 'ತಿಪ್ಪೇಸ್ವಾಮಿ' ಎಂದು ಕರೆಯಲಾಗುತ್ತದೆ.

ಅಲ್ಲದೆ ಪಂಚಗಣಾಧೀಶ್ವರರು ನೂರೊಂದು ವಿರಕ್ತರಂತೆ ಹೊಸ ಮಠಗಳನ್ನು ಸ್ಥಾಪಿಸುವ, ಶೈವಪಂಥದ ಹಲವಾರು ಹಳೆಯ ಕಾಳಮುಖ ಮಠಗಳನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುವ ಹಾಗು ಸಂಪ್ರದಾಯಗಳನ್ನು ಹುಟ್ಟು ಹಾಕುವ ಮೂಲಕ ವೀರಶೈವ ಧರ್ಮಕ್ಕೆ ಹೊಸ ರೂಪ ನೀಡುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ.

ಹೀಗಾಗಿಯೇ ಕೊಟ್ಟೂರೇಶ್ವರನು ಕೊಟ್ಟೂರಿಗೆ ಬರುತ್ತಿದ್ದ ಹಾಗೆಯೇ ವೀರಭದ್ರದೇವರ ಗುಡಿಯಲ್ಲಿ ಉಳಿದುಕೊಂಡು ಆತನನ್ನು ಕೂಡವಗುಡ್ಡಕ್ಕೆ ಕಳುಹಿಸಿದನೆಂದು ಹೇಳಲಾಗುತ್ತದೆ. ಕೊಟ್ಟೂರಿನಲ್ಲಿರುವ

ಮೂರು ಕಲ್ಲಿನ ಮಠವು ಜೈನ ಬಸದಿಯಾಗಿದ್ದು ಈಗ ಅದು ಕೊಟ್ಟೂರೇಶ್ವರರ ಪ್ರಮುಖ ಮಠವಾಗಿ ಪರಿಣಮಿಸಿದೆ. ಮತ್ತು ಇತ್ತೀಚೆಗೆ ನಿರ್ಮಾಣವಾದ ಮರಿಕೊಟ್ಟೂರೇಶ್ವರ ದೇವಸ್ಥಾನದಲ್ಲಿ ಜೈನಮೂರ್ತಿಯನ್ನು ಒಳಗೊಂಡ ಕಲ್ಲನ್ನು ಈಗಲೂ ಕಾಣಬಹುದು. ನಾಯಕನ ಹಟ್ಟಿಯ ತಿಪ್ಪೇಸ್ವಾಮಿಯ ಮಠ ಮೂಲದಲ್ಲಿ ಮಾರೆಮ್ಮನ ಗುಡಿಯಾಗಿದ್ದಿತೆಂದು ಅಲ್ಲಿನ ಜನರಲ್ಲಿ ಪ್ರಚಲಿತವಾಗಿದೆ. ಇನ್ನು ಗೋಣಿಬಸವೇಶ್ವರ ಚರಿತ್ರೆಯ ಪ್ರಕಾರ ಗೋಣಿ ಬಸವ ೭೭೦ ಮಠಗಳನ್ನು ಸ್ಥಾಪಿಸಿದನೆಂದೂ ಹಾಗೂ ಜಾತ್ರೆಯಲ್ಲಿ ಪ್ರತಿಯೊಂದು ಜಾತಿಗೂ ಕೆಲವೊಂದು ಆಚರಣೆಗಳನ್ನು ನಿಗಧಿಪಡಿಸಿದನೆಂದೂ ಹೇಳುತ್ತದೆ.

ಇವೆಲ್ಲ ಪಂಚಗಣಾಧೀಶ್ವರರ ಪವಾಡಗಳೆಂದೋ ಅಲೌಕಿಕ ಶಕ್ತಿಯಿಂದ ಘಟಿಸಿದ ಘಟನೆಗಳೆನ್ನುವಂತೆ ಚಿತ್ರಿತವಾಗಿದ್ದರೂ ಕೂಡ ವೀರಶೈವ ಧರ್ಮ ಮಧ್ಯಕಾಲದಲ್ಲಿ ನಿರ್ವಿದಿತವಾಗಿ ರಾಜಕೀಯ, ಧಾರ್ಮಿಕ ಪ್ರಾಬಲ್ಯವನ್ನು ಸ್ಥಾಪಿಸುತ್ತಿರುವ ಪರಿಣಾಮವನ್ನು ಸೂಚಿಸುತ್ತದೆ. ಹಾಗೂ ೧೨ನೇ ಶತಮಾನದ ಬಸವಣ್ಣನೊಳಗೊಂಡ ಶರಣರ ಚಳುವಳಿ ಕಾಲಾನುಕ್ರಮವಾಗಿ ಸಾಂಸ್ಥಿಕ ರೂಪು ಪಡೆಯುತ್ತಿದ್ದುದರ ಕುರುಹಾಗಿದೆ.

ಇತಿಹಾಸವನ್ನು ಪುನರ್ ನಿರ್ಮಿಸಲೆತ್ನಿಸಿದ ಈ ಪ್ರಯತ್ನ ಬದಲಾದ ಕಾಲಸ್ಥಿತಿಯಲ್ಲಿ ನಡೆಯಬೇಕಿತ್ತು. ಹಾಗಾಗಿ ನೂರೊಂದು ವಿರಕ್ತರಂತೆ ಪಂಚಗಣಾಧೀಶ್ವರರು ವೀರಶೈವವನ್ನು ಅದರ ಪ್ರಾಯೋಗಿಕ ನೆಲೆಯಲ್ಲಿ ಅಧ್ಯಯನ ಮಾಡಲು ಪ್ರಯತ್ನಿಸಿದರು. ಆದರೆ ತಮ್ಮ ತತ್ವ ಪ್ರತಿಪಾದನೆಗಾಗಿ ಹಾಗೂ ತಮ್ಮ ಆಚರಣೆಗಳನ್ನು ನೆಲೆನಿಲ್ಲಿಸುವುದಕ್ಕಾಗಿ ಅವರು ಮಠಗಳನ್ನು ಸ್ಥಾಪಿಸಬೇಕಾಯಿತು. ಹಾಗೂ ಸಂಪ್ರದಾಯಗಳನ್ನು ಬೆಳೆಸಬೇಕಾಯಿತು. ಇದರ ಮುಂದಿನ ಹೆಜ್ಜೆಯಾಗಿ ಈ ಸಂಪ್ರದಾಯಗಳು ರಾಜಪ್ರಭುತ್ವದ ಅಲೌಕಿಕ ನೆಲೆಗಳಾಗಿ ಬೆಳೆದವು.

### ೨.೨.೩. ತೋಂಟದ ಸಿದ್ಧಲಿಂಗಯತಿಗಳ ಕಾಲ

ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣದಲ್ಲಿನ ೬೩ನೇ ಸಂಧಿಯ ೪೨-೪೩ನೇ ಪದ್ಯಗಳು ಈ ರೀತಿಯಲ್ಲಿವೆ.

'ಸುರಪಾನ ನಿಮಿತ್ತದಿಂದಿಳೆಯೊಳಗೆ ನೂರೊಂದು
ವರಗಣೇಶ್ವರರುದಿಸಿ ಜಂಗಮಸ್ಥಲದಾಂತು
ಪರಮಷಟ್ಸ್ಥಲವನುದ್ಧರಿಸಿ ಬಳಿಕವರಿರದೆ ನಿರವಯವನೈದಲೀಗೆ

ಧರೆಯೊಳಗೆ ವೀರಶೈವಾಚಾರವಡಗಿತ್ತು
ಕರುಣದಿಂ ನೀವೆ ಚಿತ್ತೈಸಿ ಷಟ್ಸ್ಥಲವನು
ದ್ಧರಿಸೇದು ನಾರಾದಾ ಭಿನ್ನವಿಸಲೀಶಂ ನಿರಂಜನಗಣೇಶನೊಡನೆ

ವರಗಣೇಶ್ವರರವೇಳ್ನೂರ್ವರಂ ಕೂಡಿಕೊಂ
ಡಿರದೆ ಭೂಮಿಯೊಳುದಿಸಿ ಜಂಗಮ ಸ್ಥಳವಾಂತು
ಪರಮಷಟ್ಸಲವನುದ್ಧರಿಸೆಂದು ಕಳುಹಲವರೊಡಗೂಡಿ ಭೂಮಿಗಿಳಿದು'

(ಲಿಂಗಾಯತ ವಿದ್ಯಾಸಂಸ್ಥೆ(ಸಂ), ೧೯೩೪, ಪು.೭೬೪)

ಈ ಪದ್ಯಗಳನ್ನು ಗಮನಿಸಿದಾಗ ನೂರೊಂದು ವಿರಕ್ತರು ಷಟ್ಸ್ಥಲವನುದ್ಧರಿಸಿದ ಅಲ್ಪಾವಧಿಯಲ್ಲಿಯೇ ಮತ್ತೆ ವೀರಶೈವದಲ್ಲಿ ಸ್ವಲ್ಪ ಶೈಥಿಲ್ಯ ಉಂಟಾದಂತೆ ತೋರುತ್ತದೆ. ಆಗ ಏಳ್ನೂರು ಜನ ವಿರಕ್ತರು ಉದಯವಾಗಿ ಷಟ್ಸ್ಥಲವನ್ನು ಉದ್ಧರಿಸಿದುದಾಗಿ ಕಂಡುಬರುತ್ತದೆ. ಈ ಏಳ್ನೂರು ಜನ ವಿರಕ್ತರು ಸಿದ್ಧಲಿಂಗಯತಿಯ ನೇತೃತ್ವದಲ್ಲಿ ವೀರಶೈವ ಧರ್ಮಕ್ಕೆ ಪುನಶ್ಚೇತನ ನೀಡಲು ಪ್ರಯತ್ನಿಸಿದರು. ಜಂಗಮ ಸಮುದಾಯದ ಪುನರ್‌ವ್ಯವಸ್ಥೆಯಲ್ಲಿ ಇವರು ಮಹತ್ವದ ಪಾತ್ರನಿರ್ವಹಿಸಿದರು.

ಸಿದ್ಧಲಿಂಗಯತಿಯ ಈ ಶಿಷ್ಯ ಪರಂಪರೆ ವಚನ ವಾಙ್ಮಯದ ಸಂಕಲನ, ವ್ಯವಸ್ಥಾಪನೆ, ವ್ಯಾಖ್ಯಾನ-ಟೀಕೆ ಮುಂತಾದ ಕೆಲಸಗಳನ್ನು ಮಾಡುವುದರ ಮೂಲಕ ನೂರೊಂದು ವಿರಕ್ತರ ಕಾರ್ಯಗಳನ್ನು ಇನ್ನೂ ವ್ಯವಸ್ಥಿತ ರೂಪದಲ್ಲಿ ಮುಂದುವರಿಸಿದರು. ಅವರುಗಳೆಂದರೆ ಚೆನ್ನವೀರಾಚಾರ್ಯ(ವಿಶೇಷಾನುಭವ ಷಟ್ಸ್ಥಲ), ಗುಬ್ಬಿಯ ಮಲ್ಲಣ್ಣ(ಭಾವಚಿಂತಾರತ್ನಾ, ವೀರಶೈವಾಮೃತ), ಸಪ್ಪೆಯಾರ್ಯ(ಅಮೃತೇಶ್ವರ ಭಾಷ್ಯ), ಬೋಳುಬಸವೇಶ(ಮಹಾಚಾರ್ಯ ವಚನಕಾರ), ವಿರಕ್ತ ತೋಂಟದಾರ್ಯ (ತೋಂಟದ ಸಿದ್ಧೇಶ್ವರ ಪುರಾಣ), ಕವಿ ಹರೀಶ್ವರ(ಪ್ರಭುದೇವರ ಪುರಾಣ), ಘನಲಿಂಗಿದೇವ (ಘನಲಿಂಗಿದೇವನ ವಚನಗಳು), ಕಟ್ಟಿಗಿಹಳ್ಳಿ ಸಿದ್ಧಲಿಂಗಸ್ವಾಮಿ(ಏಕೋತ್ತರ ಸಾರ), ಜಿಗುನಿ ಮರುಳದೇವ(ಜಿಗುನಿ ಮರುಳದೇವರ ಸ್ವರ ವಚನಗಳು), ಮುರಿಗಾ ಶಾಂತವೀರ(ವೈರಾಗ್ಯ ಷಟ್ಪದಿ), ಇಮ್ಮಡಿ ಗುರುಸಿದ್ಧಸ್ವಾಮಿ (ಕೈವಲ್ಯ ಸೋಪಾನ ನಾಮೈಕೋತ್ತರ ಶತಸ್ಥಲ), ಶಾಂತೇಶ (ತೋಂಟದ ಸಿದ್ಧೇಶ್ವರ ಪುರಾಣ), ಗುರುನಂಜ(ಯಜುರ್ವೇದಭಾಷ್ಯ ಟೀಕು), ವಚನಗಳ ಸಂಪಾದನಾಕಾರರಾದ ಚನ್ನಂಜೇದೇವರು, ಎಳಮಲೆಯ ಗುರುಶಾಂತದೇವ, ಸಂಪಾದನೆಯ ಸಿದ್ಧವೀರಣ್ಣೊಡೆಯ, ಸಂಪಾದನೆಯ ಬೋಳಬಸವದೇವರು(ಷಟ್ಸ್ಥಲ ಬ್ರಹ್ಮಾನಂದ ವಿರಕ್ತ ಚಾರಿತ್ರ), ಸಂಪಾದನೆಯ ಗುರುಲಿಂಗದೇವ(ಶೀಲವಂತನ ತ್ರಿವಿಧ ಟೀಕು), ಸಂಪಾದನೆ ಪರ್ವತೇಶ(ಚತುರಾಚಾರ್ಯ ಪುರಾಣ), ಶೂನ್ಯ ಸಂಪಾದನಕಾರರಾದ ಗುಮ್ಮಳಾಪುರದ ಸಿದ್ಧಲಿಂಗಯತಿ, ಗೂಳೂರು ಸಿದ್ಧವೀರಣ್ಣೊಡೆಯರು ಹೀಗೆ ನೂರಾರು ಮಂದಿ ತಮ್ಮ ಕೃತಿಗಳ ಮೂಲಕ ವೀರಶೈವ ಧರ್ಮಕ್ಕೆ ಸಾಂಸ್ಥಿಕ ರೂಪ ನೀಡುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರು.

ಈ ಕಾಲದ ವೀರಶೈವ ಪರಂಪರೆಯನ್ನು ಗಮನಿಸಿದಾಗ ಕಂಡುಬರುವ ಲಕ್ಷಣವೆಂದರೆ, ಮೊದಲನೆಯದಾಗಿ ಲಿಂಗದ ಪ್ರತಿನಿಧಿಯಾದ ಚಲನಶೀಲ ಜಂಗಮ ಪರಿಕಲ್ಪನೆಯ ಸ್ಥಳದಲ್ಲಿ ಸಿಂಹಾಸನಾಧೀಶನಾದ ಸ್ಥಾವರದ ಪ್ರತಿಬಿಂಬವಾದ ದೈವಾಂಶಸಂಭೂತ ಗುರುವನ್ನು ಕಾಣಬಹುದು. ವ್ಯಕ್ತಿಸಂಬಂಧಗಳಿಗೆ

ಹೆಸರಾಗಿದ್ದ ಕಲ್ಯಾಣದ ಗುರುಶಿಷ್ಯರ ಸಂಬಂಧ ತೋಂಟದ ಸಿದ್ಧಲಿಂಗಯತಿಗಳ ಕಾಲದಲ್ಲಿ ಕಣ್ಮರೆಯಾಗಿರುವುದಷ್ಟೇ ಅಲ್ಲ, ಗುರುಲಿಂಗ, ಜಂಗಮರ ಸ್ಥಾನಗಳನ್ನು ಗುರುವೊಬ್ಬನೇ ಆಕ್ರಮಿಸಿ ಆತನೊಂದು ಬೃಹತ್ ಸಂಸ್ಥೆಯಾಗಿ ನಿಂತಿದ್ದಾನೆ. ಗುರುವಿನ ನಂತರ ಆತನ ಸಮಾಧಿ ಅಥವಾ ಗದ್ದುಗೆ ಆ ಸಂಸ್ಥೆಯ ಪ್ರತೀಕವಾಗಿ ಈಗಲೂ ಪ್ರಕಟವಾಗುತ್ತಿದೆ.

ತೋಂಟದ ಸಿದ್ಧಲಿಂಗಯತಿಗೆ ಸಂಬಂಧಿಸಿದಂತೆ ಎಡೆಯೂರು, ಗದಗ, ಡಂಬಳ, ಕಗ್ಗೆರೆಗಳಲ್ಲಿ ಹಾಗು ಚಿತ್ರದುರ್ಗ(ಮುರುಗಾಶಾಂತವೀರ), ಗೂಳೂರು(ಗೂಳೂರು ಸಿದ್ಧಲಿಂಗಯ್ಯ), ಮಧುಗಿರಿ(ಬೋಳಬಸವ), ತಿಳುವಳ್ಳಿ(ಕಟ್ಟಿಗೆಹಳ್ಳಿ ಸಿದ್ಧಲಿಂಗ), ಭೈರನದುರ್ಗ(ಗಗನದಯ್ಯ), ಹರದನಹಳ್ಳಿ(ಚನ್ನಬಸವೇಶ), ಗುಮ್ಮಳಾಪುರ(ಗುಡ್ಡದ ಸಿದ್ಧವೀರಸ್ವಾಮಿ),. ಇಳಸೂರು(ನೋಡಸಿದ್ಧಲಿಂಗ ದೇಶಿಕೇಂದ್ರ), ಕಟ್ಟಿಗೆಹಳ್ಳಿ(ರಾಚೋಟಿ ಸ್ವಾಮಿಗಳು), ಗುಬ್ಬಿ(ಚನ್ನಬಸವೇಶ), ಮುಂತಾದೆಡೆಗಳಲ್ಲಿ ಇರುವ ಸಮಾಧಿ ಅಥವಾ ಗದ್ದುಗೆಗಳು ಈಗಲೂ ಜನರಿಂದ ಪೂಜಿಸಲ್ಪಡುತ್ತಿವೆ.

ಎರಡನೇಯದಾಗಿ ಜಾತಿಗೆ ಸಂಬಂಧಿಸಿದಂತೆ ಹಳೆಯ ಸಂಪ್ರದಾಯವಾದಿ ಬ್ರಾಹ್ಮಣ ಮೌಲ್ಯಗಳಿಗೆ ಹಿಂದಿರುಗಿದ ಈ ಕಾಲಘಟ್ಟದಲ್ಲಿ ಬಸವ ಮತ್ತು ಅವನ ಸಮಕಾಲೀನರು ಪ್ರಚುರಪಡಿಸಿದ್ದ ಸಮಾನತೆ ವಿಚಾರಕ್ಕೆ ಅವಕಾಶವಿಲ್ಲದಂತಾಯಿತು. ೧೨ನೇ ಶತಮಾನದ ಶಿವಶರಣರು ಸ್ಥಲಗಳಲ್ಲಿ ಮುಖ್ಯವಾದ ಆರಂಭದ ಎರಡು ಸ್ಥಲಗಳಾದ ಭಕ್ತಸ್ಥಲ ಹಾಗೂ ಮಹೇಶ್ವರ ಸ್ಥಲಗಳಲ್ಲಿನ ವಚನಗಳಲ್ಲಿ ವ್ಯಾಪಕವಾಗಿ ಚಿತ್ರಿಸಿರುವ ಸಾಮಾಜಿಕ ಸಂಗತಿಗಳು ಸಿದ್ಧಲಿಂಗೇಶ್ವರರು ಮತ್ತು ಶಿಷ್ಯರು ಅದೇ ಸ್ಥಲಗಳಿಗೆ ಸೇರಿದಂತೆ ಬರೆದ ವಚನಗಳಲ್ಲಿ ಅದರ ಸುಳಿವೂ ಕೂಡ ದೊರೆಯುವುದಿಲ್ಲ. 'ಮಾನವ ಸಮಾನತೆಯನ್ನು ವಸ್ತುವಾಗಿಟ್ಟುಕೊಂಡ ಮೂಲ ವಚನಗಳಿಗೆ ಶೂನ್ಯ ಸಂಪಾದನೆಯಲ್ಲಿನ ೧೫೦೦ಕ್ಕೂ ಮಿಕ್ಕ ವಚನಗಳಿಗೆ ಸ್ಥಾನವೇ ದೊರೆತಿಲ್ಲ.(ಟಿ.ಆರ್.ಚಂದ್ರಶೇಖರ್ (ಅನು), ೨೦೦೦, ಪು.೭೬)

ಮೂರನೇಯದಾಗಿ ಸಿದ್ಧಲಿಂಗಯತಿಗಳ ಕಾಲದಲ್ಲಿ ಕೌಟುಂಬಿಕ ಜೀವನ ಹಾಗು ವೈರಾಗ್ಯ ಜೀವನಗಳ ನಡುವೆ ತೀವ್ರ ಭಿನ್ನತೆಯನ್ನು ಗುರುತಿಸಲಾಗಿತ್ತು. ಸಂಸಾರ ತ್ಯಾಗವು ಕೇವಲ ಗಂಡಸರಿಗೆ ಮೀಸಲಾದ ಒಂದು ಸಾಧನವಾಗಿತ್ತು. ಸನ್ಯಾಸ ವ್ಯವಸ್ಥೆಯ ಶ್ರೇಣೀಕರಣವೇ ನಿರ್ಮಾಣವಾಗಿ ಬ್ರಹ್ಮಚರ್ಯ ಹಾಗು ಆಶ್ರಮದಲ್ಲಿ ಜೀವಿಸುವ, ವ್ರತಪಾಲಿಸುವ ವಿರಕ್ತಸ್ವಾಮಿಗಳ ವ್ಯವಸ್ಥೆಯನ್ನು ರೂಢಿಸಲಾಯಿತು. ಸ್ತ್ರೀಯನ್ನು ಆಧ್ಯಾತ್ಮಕ್ಕೆ ಸಂಬಂಧಿಸಿದಂತೆ ಕೀಳೆಂದು ಭಾವಿಸಲಾಯಿತು.

ವೀರಶೈವ ಸಮುದಾಯವನ್ನು ಪುನರ್ ಸಂಘಟಿಸಿದ ತೋಂಟದ ಸಿದ್ಧಲಿಂಗಯತಿಗಳ ವಚನಗಳನ್ನು ಗಮನಿಸಿದರೆ ೧೨ನೇ ಶತಮಾನದ ವಚನಕಾರರಿಗಿಂತ ಭಿನ್ನವಾಗಿ ಹೆಣ್ಣಿನ ಬಗೆಗಿನ ಧೋರಣೆಗಳು ಕಂಡುಬರುತ್ತದೆ. ಸಿದ್ಧಲಿಂಗಯತಿಗಳು ಹೆಣ್ಣಿನ ಬಗೆಗಿನ ತೀವ್ರವಿರೋಧಿ ಧೋರಣೆಯನ್ನು ತಮ್ಮ ಅನೇಕ

ವಚನಗಳಲ್ಲಿ ವ್ಯಕ್ತಪಡಿಸಿದ್ದಾರೆ. ಇವರ ಪ್ರಕಾರ ಹೆಣ್ಣು ಗಂಡಸಿನ ಕಾಮಾಸಕ್ತಿಯನ್ನು ಕೆರಳಿಸುವ ಶಕ್ತಿಯಾಗಿ ಚಿತ್ರಿತವಾಗಿದ್ದಾಳೆ. ಉದಾಹರಣೆಯಾಗಿ ಈ ಮುಂದಿನ ವಚನವನ್ನು ಗಮನಿಸಬಹುದು.

'ಮೋಹನ ಮೊಲೆಯ ಮುದ್ದು ಮೊಗದ
ಭಾವಕಿಯರ ಲಲ್ಲೆ ನುಡಿಯೆಂಬ ನಯಗಿತ್ತಿ
ಎಲ್ಲರ ಹೃದಯವ ಕೊಚೆವುತ್ತಿದೆ ನೋಡಾ
ಇನ್ನೆಲ್ಲಿಯ ಅರುಹೊ ಶಿವ ಶಿವಾ
ಬಲ್ಲಾತನ ಬಱುದೋಟೆ ಹೋಯಿತು ಕಾಣಾ
ಮಹಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ'

(ಡಾ.ಆರ್.ಸಿ.ಹಿರೇಮಠ(ಸಂ), ೧೯೮೩, ಪು.೩೬)

ಹೆಣ್ಣಿನ ಜೊತೆಗಿನ ಸಂಪರ್ಕದಿಂದ ಉಂಟಾಗುವ ಗಂಡಾಂತರಗಳ ಬಗ್ಗೆ ವಚನವು ಪುರುಷರಿಗೆ ಎಚ್ಚರಿಕೆ ನೀಡುತ್ತದೆ. ಹೆಣ್ಣಿನ ಸಹವಾಸದಿಂದ ಆಧ್ಯಾತ್ಮಿಕ ಜ್ಞಾನ ಪ್ರಾಪ್ತವಾಗುವುದು ಸಾಧ್ಯವಿಲ್ಲ. ಎಂಬುದು ಈ ವಚನದ ಸಾರವಾಗಿದೆ. ಈ ರೀತಿಯ ವಚನಗಳು ರೂಪುಗೊಳ್ಳಲು ಕಾರಣವೆಂದರೆ ಹೊಸದಾಗಿ ತಾವೇ ರೂಪಿಸಿದ್ದ ೭೦೧ ವಿರಕ್ತ ಗಣಗಳಿಗೆ ಕಠಿಣತಮ ನಿಯಮಗಳನ್ನು ರೂಪಿಸುವುದೇ ಸಿದ್ಧಲಿಂಗೇಶ್ವರರ ಉದ್ದೇಶವಾಗಿದೆ. ಈ ಪ್ರಯತ್ನದಲ್ಲಿ ಅವರು ಹೆಣ್ಣನ್ನು ಕೀಳೆಂದು ಭಾವಿಸಿದ್ದ ಹಿಂದೂ ಬ್ರಾಹ್ಮಣ ಪರಂಪರೆಯನ್ನು ಅನುಕರಿಸಿದರು.

ಈ ಮೇಲಿನ ಸಿದ್ಧಲಿಂಗಯತಿಗಳನ್ನೊಳಗೊಂಡ ೭೦೦ ಜನ ವಿರಕ್ತರ ಚಳುವಳಿಯ ತಾತ್ವಿಕ ಅಂಶಗಳನ್ನು, ಹೊಸ ಕಾಲದ ಅಗತ್ಯಗಳಿಗೆ ಪಂಚಗಣಾಧೀಶ್ವರರು ಹೇಗೆ ಹೊಂದಿಸಿಕೊಂಡರು ಎಂಬ ಅಂಶವನ್ನು ಗಮನಿಸುವುದು ಅತ್ಯಂತ ಕುತೂಹಲಕಾರಿಯಾಗಿದೆ. ಏಕೆಂದರೆ ಜಾತಿಗೆ ಸಂಬಂಧಿಸಿದಂತೆ ಸಿದ್ಧಲಿಂಗಯತಿಗಳಿಗಿಂತ ಭಿನ್ನವಾಗಿ ೧೨ನೇ ಶತಮಾನದ ಶರಣರನ್ನು ಅನುಸರಿಸಿದ್ದರೆ, ಕೌಟುಂಬಿಕ ವಿಷಯವಾಗಿ ಸಿದ್ಧಲಿಂಗಯತಿಗಳ ಪ್ರಭಾವ ಪಂಚಗಣಾಧೀಶ್ವರರಲ್ಲಿ ಕಂಡುಬರುತ್ತದೆ.

ಜಾತಿಗೆ ಸಂಬಂಧಿಸಿದಂತೆ ಪಂಚಗಣಾಧೀಶ್ವರರು ಹಳೆಯ ಸಂಪ್ರದಾಯವಾದಿ ಬ್ರಾಹ್ಮಣ ಮೌಲ್ಯಗಳಿಗೆ ಹಿಂದಿರುಗಿದ ಸಿದ್ಧಲಿಂಗಯತಿಗಳ ಕಾಲದ ವೀರಶೈವವನ್ನು ಪರಿಷ್ಕರಿಸಿ ಕುಲೇಳು ಹದಿನೆಂಟು ಜಾತಿಗಳು. ಒಂದಾಗಬೇಕೆಂದು ಪ್ರಯತ್ನಿಸಿದರು. ಕೊಟ್ಟೂರು ಗುರುಬಸವೇಶ್ವರರು ಹರಿಜನ ಮಹಿಳೆಯ ಮನೆಯಲ್ಲಿ ಊಟ ಮಾಡಿದರು. ಅವಳಿಗೆ ಲಿಂಗದೀಕ್ಷೆ ನೀಡಿದರು. ಈವತ್ತಿಗೂ ಕೂಡ ಕೊಟ್ಟೂರ ಜಾತ್ರೆಯಲ್ಲಿ ಹರಿಜನ ಮಹಿಳೆಯ ಪ್ರಸಾದ ಸ್ವೀಕರಿಸಿದ ನಂತರವೇ ಗುರುಬಸವೇಶ್ವರರ ತೇರು ಎಳೆಯಲಾಗುವುದು. ನಾಯಕನಹಟ್ಟಿ ತಿಪ್ಪೇಸ್ವಾಮಿ ಬೇಡರಿಗೆ ಲಿಂಗದೀಕ್ಷೆ ನೀಡಿದನು. ಹಾಗೆಯೇ ಕೂಲಹಳ್ಳಿ ಮದ್ದಾನಸ್ವಾಮಿ ಬೇಡ ಜನಾಂಗದ ಕನಕವ್ವನನ್ನು ಮದುವೆಯಾದನು. ಆತನ ಮಗ ಗೋಣಿಬಸಪ್ಪ ಕುರುಬರ

ವಡ್ಡೆಟ್ಟವ್ವನನ್ನು ಮದುವೆಯಾಗಿರುವುದಲ್ಲದೆ, ಮಾದಿಗ ಜನಾಂಗದ ಕಾಲ ಜ್ಞಾನ ಸಾರುವ ಬಾಲಬಸವರಿಗೆ ಲಿಂಗದೀಕ್ಷೆ ನೀಡಿದನು. ಇವತ್ತಿಗೂ ನಾಯಕನಹಟ್ಟಿಯ ಹೊರಮಠದ ಪೂಜಾರಿಗಳು ಬೇಡರಾಗಿದ್ದಾರೆ. ಹಾಗೆಯೇ ಕೂಲಹಳ್ಳಿ ಮದ್ದಾನಸ್ವಾಮಿ ಮಠ ಮತ್ತು ಗುಮ್ಮಗೋಳದ ಗೋಣಿಬಸವನ ಮಠದಲ್ಲಿನ ಪೂಜಾರಿಗಳು ಬೇಡರಾಗಿದ್ದಾರೆ.

ಪಂಚಗಣಾಧೀಶ್ವರರ ಉತ್ಸವ ಆಚರಣೆಗಳಲ್ಲಿ ಈಗಲೂ ಎಲ್ಲ ಜಾತಿಗಳು ಸಮಾನ ಸಹಭಾಗಿತ್ವ ಹೊಂದಿರುವುದನ್ನು ಕಾಣಬಹುದು. ಅತ್ಯಂತ ಶೋಷಣೆಗೆ ಒಳಗಾದ ವ್ಯಕ್ತಿಯನ್ನು ಕುರಿತು ಕೂಡ ಕಾಳಜಿಯನ್ನು ಈ ಪರಂಪರೆ ತೋರಿದೆ.

ಪಂಚಗಣಾಧೀಶ್ವರರು ಜಾತಿಗೆ ಸಂಬಂಧಿಸಿದಂತೆ ೧೨ನೇ ಶತಮಾನದ ಶರಣರನ್ನು ಅನುಸರಿಸಿರುವುದನ್ನು ನೋಡಿದರೆ ೭೦೧ ವಿರಕ್ತರ ಕಾಲಕ್ಕಾಗಲೇ ಸಂಪ್ರದಾಯವಾದಿ ಮೌಲ್ಯಗಳ ಪ್ರಭಾವಲಯದಲ್ಲಿ ಸಿಕ್ಕು ವೀರಶೈವರು ರೂಢಿಸಿಕೊಂಡಿದ್ದ ಸಮಾನತೆ, ಆದರ್ಶ ಮರೆಯಾಗಿ ಬಿಟ್ಟಿತು ಎನಿಸುತ್ತದೆ.

ಇನ್ನು ಪಂಚಗಣಾಧೀಶ್ವರರು ಸ್ತ್ರೀಯರಿಗೆ ಸಂಬಂಧಿಸಿದಂತೆ ಸಿದ್ಧಲಿಂಗೇಶ್ವರರು ರೂಢಿಸಿದ್ದ ಹೆಣ್ಣಿನ ಬಗೆಗಿನ ವೈರಾಗ್ಯವಾದಿ ತಿರಸ್ಕಾರ ಭಾವನೆಯನ್ನು ಎತ್ತಿಹಿಡಿದರು. ಕೂಲಹಳ್ಳಿ ಗೋಣಿಬಸವೇಶ್ವರ ಚರಿತ್ರೆಯು ಈ ಕುರಿತು ಸನ್ಯಾಸಿಗಳಾಗಿ ಒಟ್ಟಾಗಿಯೇ ಬದುಕುತ್ತಿದ್ದ(ಬಾಗಳಿಯಲ್ಲಿ) ಪಂಚಗಣಾಧೀಶ್ವರರು ಮದ್ದಾನಸ್ವಾಮಿ ಬೇಡರ ಕನಕವ್ವನನ್ನು ಮದುವೆಯಾದ ನಂತರ ಅಲ್ಲಿಂದ ಚದುರಿ ಈಗಿರುವ ಕ್ಷೇತ್ರಗಳಾದ ಕೊಟ್ಟೂರು(ಗುರುಬಸವ), ಅರಸೀಕೆರೆ(ಕೋಲಶಾಂತ), ನಾಯಕನಹಟ್ಟಿ(ತಿಪ್ಪೇಸ್ವಾಮಿ), ಹರಪ್ಪನ ಹಳ್ಳಿಗೆ(ಕೆಂಪಯ್ಯ), ಹೋದರೆಂದು ಹೇಳುತ್ತದೆ. ಇಲ್ಲಿ ಮದ್ದಾನಸ್ವಾಮಿ ಸಂಸಾರಿ ಆಗುವುದರ ಮೂಲಕ ಸನ್ಯಾಸತ್ವಕ್ಕೆ ವ್ಯತಿರಿಕ್ತವಾಗಿ ನಡೆದುಕೊಂಡು ತಪ್ಪು ಮಾಡಿದರು ಎನ್ನುವಂತೆ ಚಿತ್ರಿಸಲಾಗಿದೆ.(ಈಟಿಗರ ಚಂದ್ರಪ್ಪ, ೧೯೯೦, ಪು.೧೨-೨೫) ಕೌಟುಂಬಿಕದಲ್ಲಿದ್ದುಕೊಂಡೇ ಆಧ್ಯಾತ್ಮಿಕ ಜೀವನವನ್ನು ಸಾಧಿಸಬಹುದು ಎನ್ನುವ ಬಸವಣ್ಣ ಮತ್ತು ಅನುಯಾಯಿಗಳ ಆಲೋಚನೆಗಳು ಈ ಕಾಲಕ್ಕೆ ಹಿಂದಕ್ಕೆ ಸರಿದಿದ್ದವು. ಮದ್ದಾನಸ್ವಾಮಿ ಸಂಸಾರಿಯಾದದ್ದು ತಪ್ಪು ಎನ್ನುವಂತೆ. ಈ ಘಟನೆ ಕುರಿತು 'ಮದ್ದಾನಸ್ವಾಮಿ ಹುದುಲಿಗೆ ಬಿದ್ದ' ಎನ್ನುವ ನಾಣ್ನುಡಿ ಕೂಲಹಳ್ಳಿ ಸುತ್ತಮುತ್ತ ಜನರಲ್ಲಿ ಪ್ರಚಲಿತದಲ್ಲಿದೆ.

ಪಂಚಗಣಾಧೀಶ್ವರರ ಬದುಕನ್ನು ನೋಡಿದರೆ ಗತಕಾಲದಲ್ಲಿ ವಿವಿಧ ಘಟ್ಟಗಳಲ್ಲಿ ಸಂಭವಿಸಿದ ಶಿವಶರಣರ ಚಳುವಳಿಯ ಆದರ್ಶಗಳನ್ನು ವರ್ತಮಾನ ಕಾಲದ ಅಗತ್ಯಗಳಿಗೆ ತಕ್ಕಂತೆ ಹೇಗೆ ಹೊಂದಿಸಿಕೊಂಡರೆಂದು ತಿಳಿದುಬರುತ್ತದೆ.

## ೨.೩. ಸಮಕಾಲೀನ ಪಂಥ ಪರಂಪರೆಗಳು

ಪಂಚಗಣಾಧೀಶ್ವರರ ಕಾಲದಲ್ಲಿನ ಹಲವಾರು ಪಂಥ-ಪರಂಪರೆಗಳು ನೂರೊಂದು ವಿರಕ್ತರು ಮತ್ತು ತೋಂಟದ ಸಿದ್ಧಲಿಂಗಯತಿಗಳ ಪರಂಪರೆಗಳಿಗಿಂತ ಭಿನ್ನವಾಗಿ ಶರಣ ಚಳುವಳಿಯೊಂದಿಗೆ ಅನುಸಂಧಾನ

ಮಾಡುತ್ತಿದ್ದವು. ಈ ಪರಂಪರೆಗಳಿಗೆ ಶರಣರ ವೈಯಕ್ತಿಕ ಜೀವನಕ್ಕಿಂತ ಅವರು ರಚಿಸಿದ ವಚನಗಳ ಆಶಯಗಳು ಮುಖ್ಯವಾಗಿದ್ದವು. ಕೊಡೇಕಲ್ ಬಸವಣ್ಣ, ತಿಂಥಿಣಿ ಮೊನಪ್ಪಯ್ಯ, ಮಂಟೇಸ್ವಾಮಿ, ಶಿರಹಟ್ಟಿ ಫಕ್ಕೀರೇಶ, ಮಲೆಮಾದೇಶ್ವರ, ಸಾವಳಗಿ ಶಿವಲಿಂಗ ಇತ್ಯಾದಿ ಪಂಥಗಳು ಲಿಖಿತ ಪರಂಪರೆಗಿಂತ ಭಿನ್ನವಾಗಿ ಮೌಖಿಕ ಕಾವ್ಯ ಆಚರಣೆಗಳ ಮೂಲಕ ೧೨ನೇ ಶತಮಾನದ ವಚನಗಳ ಆಶಯಗಳೊಂದಿಗೆ ಸಂವಾದವನ್ನು ಏರ್ಪಡಿಸಿಕೊಂಡಿದ್ದವು. ಈ ಪಂಥಗಳು ಹೆಚ್ಚಾಗಿ ಸಮಾಜದ ಬಹುಸಂಖ್ಯಾತ ಕೆಳವರ್ಗವನ್ನೇ ಆಶ್ರಯಿಸಿದ್ದವು.

೧೨ನೇ ಶತಮಾನದ ನಂತರದಲ್ಲಿ ವಚನಗಳು ಹಿನ್ನೆಲೆಗೆ ಸರಿದು ವಚನಕಾರರು ಮುಖ್ಯರಾದರು. ವಚನಕಾರರ ವೈಯಕ್ತಿಕ ಜೀವನವು ಪೌರಾಣೀಕರಣಗೊಳ್ಳಲು, ಪವಾಡಗಳ ಸೇರ್ಪಡೆ ಮುಂತಾದ ಕಲ್ಪಿತಗಳೆಲ್ಲ ಸೇರಿಕೊಂಡು ಶರಣ ಚಳುವಳಿಯು ತನ್ನ ಮೌಲ್ಯವನ್ನು ಕಳೆದುಕೊಂಡಿತು. ಹರಿಹರ ರಾಘಾವಂಕನಂತವರು ತಮ್ಮ ಕೃತಿಗಳ ಮೂಲಕ ಶರಣರನ್ನು ಅತ್ಯದ್ಭುತ ಪವಾಡಪುರುಷರನ್ನಾಗಿ ಚಿತ್ರಿಸಿದರು. ನಂತರದ ಚಾಮರಸ, ಸಿದ್ದನಂಜೇಶ, ವಿರೂಪಾಕ್ಷಪಂಡಿತ, ಮೋದಿರುದ್ರ, ಬಸವಲಿಂಗಕವಿ ಮುಂತಾದವರು ತಮ್ಮ ಕೃತಿಗಳ ನಾಯಕರನ್ನಾಗಿ ವಿವಿಧ ಪ್ರದೇಶದ ಶರಣರನ್ನಾರಿಸಿಕೊಂಡು ಬರೆದರು. ಈ ಬರಹಗಳಲ್ಲಿ ಶರಣರ ವೈಯಕ್ತಿಕ ಜೀವನವನ್ನು ಮೂಲ ಮಾತೃಕೆಗಳನ್ನಾಗಿ ಸ್ವೀಕರಿಸಿದರು. ಆದರೆ ಕೊಡೇಕಲ್ ಪರಂಪರೆ, ಮಂಟೇಸ್ವಾಮಿ ಪರಂಪರೆ ಇತ್ಯಾದಿ ಮೌಖಿಕ ಪಂಥಗಳೆಲ್ಲ ವೈಯಕ್ತಿಕ ಜೀವನ ದೊಂದಿಗೆ ೧೨ನೇ ಶತಮಾನದ ವಚನಗಳನ್ನು ಮೂಲ ಮಾತೃಕೆಗಳನ್ನಾಗಿ ಸ್ವೀಕರಿಸಿ ಬದುಕನ್ನು ರೂಪಿಸಿಕೊಳ್ಳುತ್ತಾ, ಕಾವ್ಯಗಳನ್ನು ಕಾಲಜ್ಞಾನಗಳನ್ನು ರಚಿಸಿದರು. ಈ ರಚನೆಗಳಲ್ಲಿ ಪವಾಡಗಳಿರಲಿಲ್ಲ ವೆಂತಲ್ಲ, ಇದ್ದರೂ ಅವು ವಚನಗಳ ಆಶಯಗಳನ್ನು ಪ್ರತಿಬಿಂಬಿಸುತ್ತಿದ್ದವು. ಮಂಟೇಸ್ವಾಮಿ, ಮಾದೇಶ್ವರ ಕಲ್ಯಾಣದಲ್ಲಿ ಮಾಡುವ ಪವಾಡಗಳು ನಿಶ್ಚಿತವಾಗಿಯೂ ೧೨ನೇ ಶತಮಾನದ ವಚನಗಳು ರೂಪಿಸಿದ ತತ್ವಗಳ ಪ್ರತಿಬಿಂಬವಾಗಿವೆ.

ನೂರೊಂದು ವಿರಕ್ತರು ಮತ್ತು ತೋಂಟದ ಸಿದ್ದಲಿಂಗಯತಿಗಳ ಪರಂಪರೆಯ ಸಂದರ್ಭದಲ್ಲಿ ರಚಿತವಾದ ಶೂನ್ಯ ಸಂಪಾದನೆಗಳು, ಟೀಕಾ ಗ್ರಂಥಗಳನ್ನು, ವ್ಯಾಖ್ಯಾನ ಗ್ರಂಥಗಳನ್ನು ಗಮನಿಸಿದರೆ ಇವರು ವಚನಗಳನ್ನು ಆಧಾರವಾಗಿಟ್ಟುಕೊಂಡು ಶರಣ ಚಳುವಳಿಯನ್ನು ವೀರಶೈವಿಕರಣಗೊಳಿಸಲು ಪ್ರಯತ್ನಿಸಿರುವುದು ಕಂಡುಬರುತ್ತದೆ. ಷಟ್ಸ್ಥಲ, ಅಷ್ಟಾವರಣ, ಸ್ಥಲಕಟ್ಟು, ಪಂಚಾಚಾರ ಮುಂತಾದ ಸಾಂಸ್ಥಿಕ ಪರಿಭಾಷೆಗಳ ಮೂಲಕ ವಚನಗಳನ್ನು ವಿಂಗಡಿಸುವ ಅವುಗಳನ್ನು ಧಾರ್ಮಿಕ ಸಿದ್ಧಾಂತಗಳಿಗೆ ಅಳವಡಿಸುವ ಪ್ರಕ್ರಿಯೆ ನಡೆಯಿತು. ಆದರೆ ಪಂಚಗಣಾಧೀಶ್ವರರ ಸಮಕಾಲೀನ ಪರಂಪರೆಗಳು ಇದೇ ವಚನಗಳನ್ನಾಧರಿಸಿಕೊಂಡು ೧೨ನೇ ಶತಮಾನದ ಶರಣ ಚಳುವಳಿಯನ್ನು ಪುನರ್ ಸಂಘಟಿಸುವ ಪ್ರಯತ್ನ ಮಾಡಿದರು. ಅದಕ್ಕಾಗಿ ಕೊಡೇಕಲ್ ಬಸವಣ್ಣನ ನೇತೃತ್ವದಲ್ಲಿ 'ಅಮರಕಲ್ಯಾಣ'ದ

ಕಲ್ಪನೆಯನ್ನು ಜಾರಿಗೆ ತಂದರು. ಅಮರಕಲ್ಯಾಣವು ವೀರಶೈವದ ಸಾಂಸ್ಥೀಕರಣಕ್ಕೆ ಪರ್ಯಾಯವಾಗಿ ಹುಟ್ಟಿಕೊಂಡಿತು. ಪರಮಾನಂದಪ್ರಭು, ಆರೂಢ ಸಂಗಮನಾಥ, ಕೊಡೇಕಲ್‌ಬಸವಣ್ಣ, ನೀಲಮ್ಮ, ರಾಚಪ್ಪಯ್ಯ, ಮಂಟೇಸ್ವಾಮಿ, ದೊಡ್ಡಮ್ಮ ಮತ್ತು ಚೆನ್ನಮ್ಮಾಜಿ, ಸಂಗಪ್ಪಯ್ಯ, ಗುಹೇಶ್ವರ ಮುಂತಾದವರು. 'ಅಮರಕಲ್ಯಾಣ'ದ ಪ್ರಮುಖ ವ್ಯಕ್ತಿಗಳು. 'ಅಮರಕಲ್ಯಾಣ' ಪರಂಪರೆ ಎನ್ನುವುದು ೧೫-೧೬ನೇ ಶತಮಾನದ ಕಾಲಘಟ್ಟದಲ್ಲಿ ಅನಾವರಣಗೊಂಡ ಕೊಡೇಕಲ್ ಅನುಭಾವಿಗಳ ಸಾಂಸ್ಕೃತಿಕ ಅಭಿವ್ಯಕ್ತಿಯನ್ನು ಕುರಿತಾದದ್ದು ಆಗಿದೆ. 'ಕಲ್ಯಾಣವು ಬಸವಾದಿ ಶರಣರ ತತ್ವಗಳನ್ನು ಹಾಗೂ ಕ್ರಿಯಾತ್ಮಕ ಬದುಕಿನ ಸಾಮಾಜಿಕ ಸಂಘರ್ಷವನ್ನು ನೆನಪಿಗೆ ತರುತ್ತದೆ. 'ಅಮರಕಲ್ಯಾಣ' ಪರಂಪರೆ ಕೂಡ ಕಾಲದ ಸಂಘರ್ಷವನ್ನು ಹಾಗೂ ತಾತ್ವಿಕ ಹುಡುಕಾಟವನ್ನು ಕುರಿತಾದ ಪ್ರಕ್ರಿಯಾತ್ಮಕವಾದ ಚಿಂತನೆಯಾಗಿದೆ' (ಡಾ.ಶಿವಾನಂದ ಎಸ್.ವಿರಕ್ತಮಠ, ೨೦೦೧, ಪು.೬೩).

ಅಮರಕಲ್ಯಾಣದ ಶರಣರ ಆಲೋಚನೆಗಳು ಮೌಖಿಕ ಆಚರಣೆ, ಕಾವ್ಯಗಳ ಮೂಲಕ ಅಭಿವ್ಯಕ್ತಿಗೊಂಡಿತು. ಲಿಖಿತ ಪರಂಪರೆಯಲ್ಲಿ ಅಭಿವ್ಯಕ್ತಗೊಂಡಿದ್ದರೂ ಅವರು ರಹಸ್ಯಾತ್ಮಕವಾದ ಅಮರಗನ್ನಡ ಲಿಪಿಯನ್ನು ಬಳಕೆಗೆ ತಂದರು. ಇದಕ್ಕೆ ಮುಖ್ಯವಾಗಿ ಅಂದಿನ ರಾಜಕೀಯ ಪರಿಸ್ಥಿತಿ ಕಾರಣವಾಗಿತ್ತು. ರಾಜಕೀಯವಾಗಿ ಬಹುಮನಿ ಮತ್ತು ವಿಜಯನಗರ ಸಾಮ್ರಾಜ್ಯಗಳ ನಡುವೆ ದೋ-ಆಬ್ ಪ್ರದೇಶಕ್ಕಾಗಿ ನಿರಂತರವಾಗಿ ನಡೆಯುತ್ತಿದ್ದ ಕದನಗಳು, ಅಮರಕಲ್ಯಾಣದ ಪರಿಸರದ ಸಮುದಾಯಗಳಲ್ಲಿ ಅನಿಶ್ಚತೆಯನ್ನುಂಟು ಮಾಡಿದ್ದವು. ಅಲ್ಲದೆ ಅಮರಕಲ್ಯಾಣದ ರುವಾರಿಯಾದ ಕೊಡೇಕಲ್ ಬಸವಣ್ಣ ಪ್ರಭುತ್ವದೊಂದಿಗೆ ಇಟ್ಟುಕೊಂಡಿದ್ದ ಸಂಘರ್ಷ, ಈ ಪರಂಪರೆಯಲ್ಲಿ ರಚಿತವಾದ ಪಠ್ಯಗಳಲ್ಲಿ ಪ್ರಭುತ್ವ ವಿರೋಧಿ ನಿಲುವುಗಳು; ಇವು ಸಂತರು ಮೌಖಿಕ ಪರಂಪರೆಯಲ್ಲಿ ಮತ್ತು ರಹಸ್ಯಾತ್ಮಕವಾದ ಅಮರಗನ್ನಡ ಲಿಪಿಯಲ್ಲಿ ಅಭಿವ್ಯಕ್ತಿಗೊಳಿಸಲು ಒತ್ತಾಯಿಸಿದವು. ಮುಖ್ಯವಾಗಿ ಈ ಸಂತರು ಆರೂಢ ಮಾರ್ಗವನ್ನು ಅನುಸರಿಸಿದರು. ಆರೂಢ ಮಾರ್ಗವು ಯೋಗಸಿದ್ಧಿ, ಕಾಯಸಿದ್ಧಿಗಳಿಂದ ರೂಪಗೊಂಡಿದುದಾಗಿದೆ.

ಮಧ್ಯಕಾಲದಲ್ಲಿ ಬಹುಮನಿ ಸುಲ್ತಾನರಿಂದಾಗಿ ಉತ್ತರ ಮತ್ತು ಮಧ್ಯ ಕರ್ನಾಟಕ ಪರಿಸರದಲ್ಲಿ ಮುಸ್ಲಿಂರ ಪ್ರಾಬಲ್ಯ ಉಂಟಾಯಿತು. ಮುಸ್ಲಿಂ ಮತ್ತು ಹಿಂದೂ ಆಚರಣೆಗಳು ಒಂದರೊಳಗೊಂದು ಬೆರುತಕೊಂಡು ಜನಜೀವನವನ್ನು ಸಂಕರಗೊಳಿಸಿದವು. ಪಂಚಗಣಾಧೀಶ್ವರರ ಸಮಕಾಲೀನ ಪಂಥಗಳ ಆಚರಣೆಗಳಲ್ಲಿ ಎರಡೂ ಸಮುದಾಯಗಳು ಬೆರೆತು ಬದುಕುತ್ತಿರುವ ಚಿತ್ರಣವನ್ನು ಕಾಣಬಹುದು. ಕೊಡೇಕಲ್ ಬಸವಣ್ಣನಿಗೆ ಸರ್ವರ್ ಮಹಮದ್ ಎಂದು ಕರೆದರೆ ಮಂಟೇಸ್ವಾಮಿಗೆ ಮಾಂಕ್ಷಾವಲಿ ಎಂದು, ಶಿರಹಟ್ಟಿ ಫಕ್ಕೀರೇಶನಿಗೆ ಫಕ್ರುದ್ದೀನ್ ಎಂದೂ ಕರೆಯಲಾಗುತ್ತಿತ್ತು. ಇವರ ಮಠ ಮಂದಿರಗಳ ವಾಸ್ತುಶಿಲ್ಪಗಳು ಮುಸ್ಲಿಂನ ಪ್ರಭಾವದಿಂದ ರೂಪುಗೊಂಡವು. ಈ ರೀತಿಯಾಗಿ ವೈಶಿಷ್ಟ್ಯ ರೂಪದಲ್ಲಿ

ಸಮುದಾಯದ ಮಧ್ಯ ಬದುಕಿದ್ದ ಹಲವಾರು ಪಂಥಗಳು ಪಂಚಗಣಾಧೀಶ್ವರರ ಸಂದರ್ಭದಲ್ಲಿ ಆರಾಧನೆಗೊಳಗಾಗಿದ್ದವು. ಅಂತಹ ಪಂಥ ಪರಂಪರೆಗಳಲ್ಲಿ ಕೆಲವುಗಳನ್ನು ಸಂಕ್ಷಿಪ್ತವಾಗಿ ಮುಂದೆ ವಿವರಿಸಲಾಗಿದೆ.

### ೨.೩.೧. ಕೊಡೇಕಲ್ ಬಸವಣ್ಣ

ಕಲ್ಬುರ್ಗಿ ಜಿಲ್ಲೆಯ ಸುರಪುರ ತಾಲೂಕಿನ ಕೃಷ್ಣಾತೀರಕ್ಕೆ ಹೊಂದಿಕೊಂಡು ಇರುವ ನೆಲೆ ಕೊಡೇಕಲ್ಲು. ವಿಜಯನಗರ ಅರಸರ ಕಾಲದಲ್ಲಿ ಬಹುಮನಿ ಸುಲ್ತಾನರಿಗೆ, ವಿಜಯನಗರದವರಿಗೆ ಕಿತ್ತಾಟದ ಯುದ್ಧ ಭೂಮಿಯೂ ಇದಾಗಿತ್ತು. ಕೊಡೇಕಲ್ ಬಸವಣ್ಣನ ಚರಿತ್ರೆಯನ್ನು ಹೇಳುವ ವೀರಸಂಗಪ್ಪಯ್ಯನ 'ನಂದಿ ಆಗಮ ಲೀಲೆ' ಕೊಡೇಕಲ್ಲನ್ನು 'ಕಡೇಕಲ್ಯಾಣ', 'ಅಮರ ಕಲ್ಯಾಣ' ಎಂದು ಸಂಬೋಧಿಸುತ್ತದೆ. 'ಗುತ್ತಿ-ಹಲವುಕಲ್ಲು, ದೇವದುರ್ಗ ಈ ಮೂರು ಪುರಗಳ ಒಟ್ಟು ಪ್ರದೇಶವೇ ಅಮರ ಕಲ್ಯಾಣವೆಂದು ನಿರ್ಧರಿಸಬಹುದು(ಬಸವಲಿಂಗ ಸೊಪ್ಪಿನಮಠ, ೧೯೯೭, ಪು.೨೭).

ಕೊಡೇಕಲ್ಲ ಬಸವಣ್ಣನ ಕಾಲ ೧೪೪೯(ಬಸವಲಿಂಗ ಸೊಪ್ಪಿಮಠ ೧೯೯೭ ಪು.೪೮). ತಂದೆ ಮಲ್ಲಶೆಟ್ಟಿ, ತಾಯಿ ಲಿಂಗಮ್ಮ, ಗುರು ಆರೂಢ ಸಂಗಮನಾಥನು ಈತನಿಗೆ ಆರೂಢ ದೀಕ್ಷೆ ನೀಡುತ್ತಾನೆ. ಕೊಡೇಕಲ್ಲ ಬಸವಣ್ಣನ ಕೊರಳಲಿಂಗವನ್ನು ಕಿತ್ತುಹಾಕಿ ತೊಗಲಿನ ಇಜಾರ, ತೊಗಲಿನ ತೊಪ್ಪಿಗೆ ತೊಡಿಸಿ 'ಮಹಮದ್ ಅವತಾರವಿದು' ಎಂದು ಘೋಷಿಸುತ್ತಾನೆ. ಮುಸ್ಲಿಂ ಭಕ್ತರು 'ಸರ್ವರ ಮಹಮದ್' ಎಂದು ಈಗಲೂ ಕರೆಯುತ್ತಾರೆ. ವೀರಸಂಗಯ್ಯನು 'ಹಿಂದುವ ರಕ್ಷೆಯ'ನು ಮೆಟ್ಟುತ ಮುಂದೆ ಮುಸಲ್ಮಾನ ಕಂಸಿಯ ನಡೆಸುತ ಕೊಡೇಕಲ್ ಬಸವಣ್ಣ ಹೋಗುತ್ತಿದ್ದುದನ್ನು ವರ್ಣಿಸುತ್ತಾನೆ.

ಕೊಡೇಕಲ್‌ನಲ್ಲಿ ಮುಸ್ಲಿಂ ಶೈಲಿಯ ದರಗಾದಲ್ಲಿ ಈತನ ಗದ್ದುಗೆ(ಗೋರಿ) ಇದೆ. ಈ ಗೋರಿಯ ಮೇಲೆ 'ಲಾ ಇಲಾಹಿ ಇಲ್ಲಿಲ್ಲಾ ಮಹಮದ್ ರಸೂಲಿಲ್ಲಾ' ಎಂಬ ವಾಕ್ಯ ಬರೆದ ಗಾಜಿನ ಹಂಡೆಗಳು ತೂಗುಬಿದ್ದಿವೆ. ಕೊಡೇಕಲ್ ಪೀಠಾಧ್ಯಕ್ಷರು ಧರಿಸುವ ಹಸಿರು ಪೇಟೆ, ದೇವಸ್ಥಾನದ ಮೇಲೆ ಹಾರಾಡುವ ಹಸಿರು ನಿಶಾನೆ, ಸಾಕಾರ ಪೂಜೆಯ ಖಂಡನೆ ಮತ್ತು ನಿರಾಕಾರ ಪೂಜೆಯ ಸ್ವೀಕರಣೆಗಳು ಮುಸ್ಲಿಂ ಆಚರಣೆಯ ದ್ಯೋತಕವಾಗಿವೆ. ವಿಜಾಪುರದ ದೊರೆ ಯುಸೂಫ್ ಆದಿಲ್‌ಶಹಾನಿಗೆ ತನ್ನ ಐದು ವಚನ ಹಾಗೂ ಐದು ಕೇಶಗಳನ್ನು ಕೊಟ್ಟನೆಂದು ನಂದಿ ಆಗಮಲೀಲೆ ತಿಳಿಸುತ್ತದೆ. ಈಗಲೂ ಬಿಜಾಪುರದ ಅಸರ್‌ಮಹಲ್‌ನಲ್ಲಿ ಕೊಡೇಕಲ್ ಬಸವಣ್ಣ ಕೊಟ್ಟ ಈ ಕುರುಹುಗಳು ಮಹಮದ್ ಪೈಗಂಬರ್ ಕೊಟ್ಟ ಕುರುಹುಗಳೆಂದು ಅತ್ಯಂತ ವೈಬವದಿಂದ ಮುಸ್ಲಿಂರಿಂದ ಪೂಜೆಗೊಳ್ಳುತ್ತಿವೆ. ಕೊಡೇಕಲ್ ಬಸವಣ್ಣನಿಗೆ ಸೂಫಿ ಇಸ್ಲಾಂ ಪ್ರಭಾವ ಮಾತ್ರವಲ್ಲದೆ ಶೈವನಾಥ ಸಿದ್ಧರ ಪ್ರಭಾವವೂ ಆಗಿದೆ. ಕೊಡೇಕಲ್ ಬಸವಣ್ಣ ತನ್ನ ಜೀವನದಲ್ಲಿ ಹಲವಾರು ಮಂದಿಯ ರೋಗಗಳನ್ನು ವಾಸಿಮಾಡುತ್ತಾನೆ. ಉಕ್ಕಿನ ಕುದುರೆ

ಏರುತ್ತಾನೆ. ಕಾಯಕವನ್ನು ಸ್ಥಿರ ಮಾಡುವ ನುಡಿಗಳು ಕೊಡೇಕಲ್ ಬಸವಣ್ಣನ ಸಾಹಿತ್ಯದಲ್ಲಿ ಕಾಣಸಿಕೊಳ್ಳುವುದರಿಂದ ಕೊಡೇಕಲ್ ಬಸವಣ್ಣನ ಆರೂಢ ಮಾರ್ಗವು ನಾಥಪಂಥದಿಂದ ಪ್ರಭಾವಿತವಾಗಿರುವುದು ಎದ್ದು ಕಾಣುತ್ತದೆ.

೧೭ನೇ ಶತಮಾನದ ಕಲ್ಯಾಣದ ನೆನಪಲ್ಲಿ ಕೊಡೇಕಲ್ ಬಸವಣ್ಣ 'ಅಮರಕಲ್ಯಾಣ'ವನ್ನು ಕಟ್ಟಲಿಕ್ಕಾಗಿ ಹಂಪೆಯಿಂದ ಕೊಡೇಕಲ್ಲಿಗೆ ಬರುತ್ತಾನೆ. ಈತನಿಗೆ 'ವೀರವಸವಂತ', 'ರಾಕ್ಷಸಶ್ವೇತಾಂಬರ' ಎಂತಲೂ ಕರೆಯಲಾಗುತ್ತದೆ. 'ಅಮರಕಲ್ಯಾಣ'ದಲ್ಲಿ ಕುಟುಂಬ ಪರಿವಾರ ಮತ್ತು ಗುರು-ಶಿಷ್ಯರುಗಳ ಮೂಲಕ ಕರ್ನಾಟಕದ ಸಂಸ್ಕೃತಿಯಲ್ಲಿ ನೂತನ ಅಧ್ಯಾಯವನ್ನೇ ತೆರಿದಿದ್ದಾನೆ. ನೀಲಮ್ಮ, ರಾಚಪ್ಪಯ್ಯ, ಗುಹೇಶ್ವರ, ಸಂಗಪ್ಪಯ್ಯ ಇವರುಗಳು ಕುಟುಂಬ ಪರಿವಾಕ್ಕೆ ಸೇರಿದ್ದರೆ, ಪರಮಾನಂದ ಪ್ರಭು ಮತ್ತು ಆರೂಢ ಸಂಗಮೇಶ್ವರರು ಗುರುಪರಿವಾರದವರು. ಇಂದು ಪ್ರತ್ಯೇಕ ಪರಂಪರೆಯಂತೆ ಬೆಳೆದ ತಿಂಥಿಣಿ ಮೋನಪ್ಪಯ್ಯ, ಸಾಲೊಟಗಿ ಶಿವಯೋಗಿ, ಮಳೆಯ ಪ್ರಭು, ಮಂಟೇಸ್ವಾಮಿ, ನಾಗಾವಿ ಈರಪ್ಪಯ್ಯ ಇವರು ಶಿಷ್ಯ ಪರಿವಾದರವರು.

ಈ ಕೊಡೇಕಲ್ ಪರಂಪರೆಯವರು ರಚಿಸಿದ ಕಾಲಜ್ಞಾನ, ಖಂಡಜ್ಞಾನ, ನೀತಿಜ್ಞಾನ, ಬೋಧಜ್ಞಾನ, ತತ್ವಜ್ಞಾನ ರಚನೆಗಳು ಅಂದಿನ ಬದುಕಿನ ಸಾಮಾಜಿಕ ಸ್ಥಿತಿಗತಿಯನ್ನು, ರಾಜಕೀಯ ಅರಾಜಕತೆಯನ್ನು ವಿವರಿಸುತ್ತವೆ. ಅಮರಗನ್ನಡ ಎಂಬ ಸಾಂಕೇತಿಕ ಲಿಪಿಯನ್ನು ಬಳಕೆಗೆ ಇವರು ತಂದರು. ಹೀಗೆ ಕೊಡೇಕಲ್ ಬಸವಣ್ಣ ಒಬ್ಬ ವ್ಯಕ್ತಿಯಾದರೂ ಒಂದು ನೂತನ ಪರಂಪರೆಯ ನಿರ್ಮಾಪಕನಾಗಿ ಬೆಳೆದವನು.

ಕೊಡೇಕಲ್ ಬಸವಣ್ಣನ ಉತ್ಸವದಲ್ಲಿ ಅವನ ಸಮಾಧಿಗೆ ಏರಿಸಬೇಕಾದ ಗಂಧವನ್ನು ತೇಯಲು ಬೇಕಾದ ನೀರು ಅಂತ್ಯಜರು ತರಬೇಕೆಂದು ಕಡ್ಡಾಯವಿದೆ. ದಿನವೂ ಕೊಡೇಕಲ್ ಸಾಹಿತ್ಯವನ್ನು ಪೂಜಿಸುತ್ತಿದ್ದ ಪೆಟ್ಟಿಗೆಯನ್ನು ಅಂದು ಹೊರ ತೆಗೆಯಲಾಗುತ್ತದೆ. ಪೆಟ್ಟಿಗೆಯೊಳಗಿನ ಹಸ್ತಪ್ರತಿಗಳನ್ನು ಪಲ್ಲಕ್ಕಿಯಲ್ಲಿಟ್ಟು ಮೆರೆಸುವುದು, ಪಠಿಸುವುದು (ಪ್ರಮುಖವಾಗಿ ಕೊಡೇಕಲ್‌ಬಸವನ 'ಗುರುಬೋಧೆ', ವೀರಸಂಗಪ್ಪಯ್ಯನ 'ರಗಳೆ ವಚನ' ಕೃತಿಗಳು) ಸಾರುವುದು ನಡೆಯುತ್ತದೆ.

ಕೊಡೇಕಲ್ ಸಾಹಿತ್ಯವನ್ನು ಗಮನಿಸಿದರೆ ಅಂದು ರಾಜಕೀಯವಾಗಿ ಯುದ್ಧಗಳು, ಬರ-ಭಯ ರೋಗಗಳು ಜನಸಾಮಾನ್ಯರನ್ನು ಕಾಡುತ್ತಿದ್ದವು ಎಂದು ಕಂಡುಬರುತ್ತದೆ. ಈತನು ಬೆಂಬಲಿಸಿದ ಬೇಡ ದೊರೆ ಹನುಮಂತನಾಯಕನ ಪತನ ಹಾಗೂ ವಿಜಯನಗರ, ಬಹುಮನಿ ಸುಲ್ತಾನರ ದಾಳಿಗೆ ತತ್ತರಿಸುತ್ತಿದ್ದುದು ಗೋಚರವಾಗುತ್ತದೆ. ಕೊಡೇಕಲ್ ಬಸವಣ್ಣನ ಅಂತ್ಯದ ಬಗೆಗೆ ನಿಖರ ಮಾಹಿತಿಗಳಿಲ್ಲದಿದ್ದರೂ ತನ್ನ ಸಾಹಿತ್ಯವನ್ನು ಕೃಷ್ಣೆಯ ಮಡುವಿಗೆ ಎಸೆದಿದ್ದಾನೆ. ಹೀಗೆ ಸಾಹಿತ್ಯದ ಜಲಸಮಾಧಿಯ ದುರ್ಘಟನೆಗೆ

ಮುಂಚೆಯೇ ಮಂಟೇಸ್ವಾಮಿ, ರಾಚಪ್ಪಯ್ಯ, ಅಮರಕಲ್ಯಾಣವನ್ನು ತೊರೆದು ಕಾವೇರಿ ತೀರವನ್ನು ಸುರಕ್ಷಿತ ನೆಲೆಯಾಗಿ ಸೇರಿದರು ಎಂದು ಭಾವಿಸಬೇಕಾಗುತ್ತದೆ(ಬಸವಲಿಂಗ ಸೊಪ್ಪಿಮಠ, ೧೯೯೫, ಪು.೩೪೦-೩೪೧).

### ೨.೩.೨. ತಿಂಥಿಣಿ ಮೋನಪ್ಪಯ್ಯ



ಮೋನಪ್ಪಯ್ಯನು ವಿಶ್ವಕರ್ಮ ಜಾತಿಯವನಾಗಿ ೧೨ನೇ ಶತಮಾನದ ವಚನಕಾರರ ಮತ್ತು ಕೊಡೇಕಲ್ ಪರಂಪರೆಯ ಪ್ರೇರಣೆ ಪ್ರಭಾವದಿಂದ ತನ್ನದೇ ಆದ ಪಂಥವನ್ನು ನಿರ್ಮಿಸಿಕೊಂಡವನು. ಗುಲಬರ್ಗಾ ಜಿಲ್ಲೆಯ 'ಗೋನಾಳ' ಎಂಬ ಗ್ರಾಮದಲ್ಲಿ ಹಾವಪ್ಪ-ಹಾವಮ್ಮ ಎಂಬ ದಂಪತಿಗಳಿಗೆ ಹುಟ್ಟಿದನು. 'ಮೋನಪ್ಪಯ್ಯನು ಸುರಪುರ ಸಂಸ್ಥಾನದ ಬೇಡ ದೊರೆಗಳಾದ ಲಿಂಗನಾಯ್ಕ ಕ್ರಿ.ಶ.೧೬೩೬-೬೬ ಮತ್ತು ಗಡ್ಡಿಪಿಡ್ಡಿನಾಯ್ಕರ ಕ್ರಿ.ಶ.೧೬೯೭-೭೦ ಆಳ್ವಿಕೆಯ ಕಾಲದಲ್ಲಿದ್ದನೆಂದು ವಿಧಿತವಾಗುತ್ತದೆ' (ಡಾ.ಎಂ.ಎಂ.ಪಡಶೆಟ್ಟಿ, ೧೯೯೨, ಪು.೩೧).



'ನೀನೆ ಮೌನನು ನೀನೆ ದೀನನು
ನೀನೆ ಪೀರ ಫಕೀರನು
ಲುಂಗಿಕಪನಿಯ ಟೋಪಿ ಪಾದದಲಿ
ಜಂಗು ನೀ ಧರಿಸಿದಿಯೋ ಬೆಳ್ಳಿ ಜಂಗು ನೀ ಧರಿಸಿದಿಯೋ
ಕಂಗಳಿಗೆ ಪ್ರತ್ಯಕ್ಷ ಮೂರುತಿ ಅಂಗ ನಿನ್ನೊಳು ಧರಿಸಿದಿಯೋ
ಮೃಢನೆ ಕಾಮಿತಾರ್ಥ ಕೊಡುವಂತೆ
ಕೊಡಲಿಯನು ಪಿಡಿದಿದ್ದಿಯೋ ದೇವ ಚಪ್ಪಗೊಡಲಿಯ ಪಿಡಿದಿದ್ದಿಯೋ
ಪೊಡವಿ ಪಾಲಿಪ ನೆನಸಿ ಭಕ್ತರ ಬಿಡದೆ ನೀ ಸಲುಹಿದ್ದಿಯೋ'

(ಎಂ.ಎಂ.ಪಡಶೆಟ್ಟಿ, ೧೯೯೨, ಪು.೧೯೭)

ಈ ಗೀತೆ ಮೋನಪ್ಪಯ್ಯನನ್ನು ದೀನನೆಂದೂ ಪೀರ್‌ಪಕೀರನೆಂದೂ ವರ್ಣಿಸುತ್ತಾ ಅವನು ಕೊಡಲಿ ಹಿಡಿದಿದುದನ್ನು, ಲಿಂಗಧರಿಸಿದುದನ್ನು ತಿಳಿಸುತ್ತದೆ.

'ವಚನ', 'ಕಾಲಜ್ಞಾನ ವಚನ', 'ಹುಷಾರು', 'ಪರಾಕುವಚನ'ಗಳನ್ನೊಳಗೊಂಡ ಮೋನಪ್ಪಯ್ಯನ ೮೦೦ಕ್ಕಿಂತ ಹೆಚ್ಚು ವಚನಗಳು ಇಂದು ಲಭ್ಯವಾಗಿವೆ. 'ಹಿಂದೂ-ತುರುಕರು ಒಂದಾಗಿ ನಡೆದಾರು', 'ಹಿಂದೂ-ಮುಸ್ಲಿಂರಿಗೆ ಚಂದನೊಬ್ಬನೆ' ಎಂದು ಬೋಧಿಸಿದ ಮೋನಪ್ಪಯ್ಯನು ಉಭಯ ಜನಾಂಗಗಳಿಂದಲೂ ಆರಾಧಿಸಿಕೊಳ್ಳುತ್ತಿದ್ದಾನೆ.

ಓಂ ಏಕಲಾಕ ಐಂಸೀ ಹಜಾರ್ ಪಾಂಚೋಪೀರ್ ಪೈಗಂಬರ್ ಮೌನುದ್ದೀನ್
ಜೀತಾ ಪೈಗಂಬರ್ ಮೌನುದ್ದೀನ್ ಕಾಶೀಪತಿ ಗಂಗಾಧರ ಹರಹರ ಮಹಾದೇವ

ಇದು ಮೋನಪ್ಪಯ್ಯನ ಕುರಿತು ಆರಾಧನೆಯ ಸಮಯದಲ್ಲಿ ಹೇಳುವ ಘೋಷಣೆಯಾಗಿದ್ದು ಹಿಂದೂ ಮುಸ್ಲಿಂ ಸಮನ್ವಯದ ಪ್ರತೀಕವಾಗಿದೆ. ಮಂದಿರಗಳು ದರ್ಗಾಮಾದರಿಯಲ್ಲಿವೆ. ತಿಂಥಿಣಿಯ ಮಂದಿರವು ದರ್ಗಾಮಾದರಿಯಲ್ಲಿದ್ದು ಅಲ್ಲಿ ಹಿಂದೂಗದ್ದಿಗೆ ಮುಸ್ಲಿಂ ಮರ್ಘೂರಗಳ ಸಮೀಕರಣವನ್ನು ಕಾಣುತ್ತೇವೆ. ಹಿಂದೂಗಳು ಪ್ರಾರ್ಥನೆಯನ್ನು ಮಾಡಿದರೆ ಮುಸ್ಲಿಂರು ನಮಾಜನ್ನು ಈ ಮಂದಿರದಲ್ಲಿ ಮಾಡುತ್ತಾರೆ.

'ತಿಂಥಿಣಿ ಮೋನಪ್ಪಯ್ಯನ ಜಾತ್ರೆ ಭರತ ಹುಣ್ಣಿಮೆಗೆ ಆರಂಭವಾಗುತ್ತದೆ. ಮೊನಪ್ಪಯ್ಯನ ವಚನಗಳ ಪಠಣ, ಪೂಜಾಸೇವೆ, ನಡೆದು ಪಲ್ಲಕ್ಕಿಯಲ್ಲಿ ಮೊನಪ್ಪಯ್ಯನ ಕುರುಹುಗಳಾದ 'ಹೂಜೆ'(ಮಣ್ಣಿನ ವಿಶಿಷ್ಟ-ಪಾತ್ರೆ) ಮತ್ತು 'ಚಪ್ಪಗೊಡಲಿ'ಗಳನ್ನು ಇಟ್ಟು ಮೆರೆಸಲಾಗುತ್ತದೆ. ಮುಸಲ್ಮಾನರು 'ಅಲಾಯಿ ನೃತ್ಯ ಮಾಡುತ್ತಾ ದೀನ್ ಹಾಕುತ್ತಾರೆ. ಪಾಂಚಾಳರು ಹಿಂದೂ ರೀತಿಯಲ್ಲಿ ಪೂಜೆ ಪುನಸ್ಕಾರಗಳನ್ನು ಅರ್ಪಿಸುತ್ತಾರೆ. ಮುಸಲ್ಮಾನರು 'ಫತೆಹಾ ಕೊಟ್ಟರೆ', ಹಿಂದೂಗಳ ರೀತಿಯಲ್ಲಿ ಪಾಂಚಾಳರು ಕಾಯಿ ಕರ್ಪೂರ ಮಾಡಿಸುತ್ತಾರೆ'(ಬಸವಲಿಂಗ ಸೊಪ್ಪಿಮಠ, ೧೯೯೫, ಪು.೩೪೯).

ತಿಂಥಿಣಿ ಮೋನಪ್ಪಯ್ಯನಲ್ಲಿ ಕಂಡುಬರುವ ಈ ಧಾರ್ಮಿಕ ಸಾಮರಸ್ಯಕ್ಕೆ ೧೭ನೇ ಶತಮಾನದ ಯುಗಧರ್ಮವು ಕಾರಣವಾಗಿದೆ. ಈ ಕಾಲಘಟ್ಟದಲ್ಲಿ ರಾಜಕೀಯವಾಗಿ ಉತ್ತರ ಕರ್ನಾಟಕದ ಮೇಲಾದ ಮುಸ್ಲಿಂ ಪ್ರಭಾವ, ನಿರಾಕಾರ ಪೂಜೆ, ಅವರ ಧಾರ್ಮಿಕ ತತ್ವಗಳು ಇತ್ಯಾದಿಗಳು ಹಾಗೂ ವೀರಶೈವ ಪರಂಪರೆಯಲ್ಲಿ ನಡೆದ ಧಾರ್ಮಿಕ ಸಾಂಸ್ಥೀಕರಣ, ದೇವಾಲಯಗಳ ನಿರ್ಮಾಣ ಮುಂತಾದ ಅಂಶಗಳು ಪ್ರಭಾವ ಬೀರಿವೆ. ಮುಖ್ಯವಾಗಿ ಆ ಸಂದರ್ಭದ ಕೊಡೇಕಲ್ ಪರಂಪರೆಯ ಪ್ರಭಾವಕ್ಕೆ ಒಳಗಾಗಿದ್ದಾನೆ. 'ಅಮರಕಲ್ಯಾಣ ಪರಿಸರದ ಮುಖ್ಯ ನೆಲೆಯಾದ ಜಲದುರ್ಗದಲ್ಲಿ ಆರೂಢ ಸಂಗಮನಾಥನ ದೇವಾಲಯದ ಎದುರಿಗೆ ಕೊಡೇಕಲ್ ಬಸವನ ದೇವಾಲಯದ ಪಕ್ಕದಲ್ಲಿ ಈತನ ಪಾಳು ದೇಗುಲವಿದೆ. ಇದು ಕೊಡೇಕಲ್ ಬಸವನ ಅಮರಕಲ್ಯಾಣದ ಶರಣ ಸಮೂಹದಲ್ಲಿ ಒಬ್ಬನಾಗಿ ಈತನೂ ಇದ್ದನೆಂಬುದಕ್ಕೆ ನಮಗಿರುವ ಬಲವಾದ ಪ್ರಮಾಣ'(ಅದೇ, ಪು.೧೦೨).

ಶಂಕರಕವಿ ಬರೆದ(೧೭೫೪) 'ಶರಣ ಮೋನಪ್ಪಯ್ಯನ ಚರಿತ್ರೆ ಪ್ರಕಾರ ಮೋನಪ್ಪಯ್ಯನು ಗೋನಾಳದಿಂದ ದಕ್ಷಿಣಾಭಿಮುಖವಾಗಿ ದೇಶಸಂಚಾರ ಹೊರಟು, ಕೃಷ್ಣಾನದಿಯನ್ನು ದಾಟಿ, ಅನುಕ್ರಮವಾಗಿ ದೇವದುರ್ಗ, ಮಾದರಾಯನ ಕೋಟೆ, ತಾವರಗೇರಿ, ಕನಕಗಿರಿ, ಲಿಂಗನಬಂಡಿ, ವರವಿ, ಲಕ್ಷ್ಮೀಶ್ವರ ಹೀಗೆ ಸಂಚಾರ ಮಾಡುತ್ತ ತಿಂಥಿಣಿಗೆ ಬಂದು ಐಕ್ಯನಾಗುತ್ತಾನೆ'.

### ೨.೩.೩. ಶಿರಹಟ್ಟಿ ಫಕ್ಕೀರೇಶ

ಶಿರಹಟ್ಟಿ ಫಕ್ಕೀರೇಶನು ಅಮೀನುದ್ದೀನನ ಪರಂಪರೆಗೆ ಸೇರಿದವನು. ಈತನನ್ನು ಕುರಿತು ದ್ಯಾಂಪುರದ ಚೆನ್ನಕವಿ 'ಶ್ರೀ ಫಕ್ಕೀರೇಶ್ವರ ಪುರಾಣ' ಕೃತಿಯನ್ನು ಬರೆದಿದ್ದಾನೆ. ಈ ಪುರಾಣದ ಪ್ರಕಾರ ಶಿವಯ್ಯ

ಮತ್ತು ಗೌರಮ್ಮ ಎಂಬ ದಂಪತಿಗಳಿಗೆ ಮಕ್ಕಳಿರುವುದಿಲ್ಲ. ಅವರು ಅಮೀನುದ್ದೀನನ ದರ್ಗಾಕ್ಕೆ ಬಂದು ಮಕ್ಕಳನ್ನು ಬೇಡುತ್ತಾರೆ. ಅದಕ್ಕೆ ಅಮೀನುದ್ದೀನನು ಎರಡು ಖರ್ಜೂರಗಳನ್ನು ಕೊಟ್ಟು ನಿಮಗೆ ಹುಟ್ಟುವ ಮಗುವನ್ನು ನನಗೆ ಶಿಶು ಮಗುವನ್ನಾಗಿ ಕೊಡಬೇಕೆಂದು ಪ್ರಮಾಣ ಮಾಡಿಸಿಕೊಳ್ಳುತ್ತಾನೆ. ಮಗು ಹುಟ್ಟಿದ ನಂತರ ಇದನ್ನು ಮರೆತ ಆ ದಂಪತಿಗಳು ಫಕ್ಕೀರೇಶನನ್ನು (ಮೊದಲ ಹೆಸರು ಚೆನ್ನವೀರಯ್ಯ) ಅಮೀನುದ್ದೀನನಿಗೆ ಶಿಶು ಮಗುವನ್ನಾಗಿ ಕೊಡುವುದಿಲ್ಲ. ಕೆಲವೇ ದಿನಗಳಲ್ಲಿ ಫಕ್ಕೀರೇಶ ಸತ್ತು ಹೋಗುತ್ತಾನೆ. ಸತ್ತ ಕೂಸನ್ನು ಬದುಕಿಸಿದ ಅಮೀನ್ ಆತನನ್ನು ತನ್ನ ಶಿಶು ಮಗನಾಗಿ ಸ್ವೀಕರಿಸುತ್ತಾನೆ.

ಇಲ್ಲಿ ಬರುವ ಅಮೀನುದ್ದೀನ್ ದರವೇಶಿ ಸಂತನಾಗಿದ್ದನು. ದರವೇಶಿಗಳು ಪ್ರಭುತ್ವ ವಿರೋಧಿಗಳಾಗಿದ್ದರು. ಆದರೆ ಈತನ ಶಿಷ್ಯ ಶಿರಹಟ್ಟಿ ಫಕ್ಕೀರೇಶ ಗಿಳಿಯ ರೂಪದಲ್ಲಿ ಹೋಗಿ ಅಕ್ಬರ್‌ನ ಆಸ್ಥಾನದಲ್ಲಿ ಮಹಿಮೆ ತೋರಿಸುತ್ತಾನೆ. ಆಗ 'ನಿನ್ನ ಗೌರವದ ಸಾಧನಕ್ಕೆ ಸ್ವೀಕರಿಪುದಿದನು ಎಂದಾ ಆ ಧರೇಂದ್ರನು ಶೇಲಸಿಕೆಗಳನ್ನಾಧರಿಪ ರಣಬಿಲ್ಲೆಯಂ ಕೊಟ್ಟೊಲಿಸುತ್ತಾನೆ'(ರಹಮತ್ ತರೀಕೆರೆ, ೨೦೦೧, ಪು.೧೩೮). ಶಿರಹಟ್ಟಿ ಫಕ್ಕೀರೇಶನ ಪರಂಪರೆಯವರು ಆದಿಲಾಶಾಹಿ ರಾಜ್ಯವಾಳಿದ ನಂತರ ರಾಜಮನ್ನಣೆಗಾಗಿ ಬೇರೆ ಪ್ರಾಂತ್ಯಗಳನ್ನು ಅವಲಂಬಿಸಿದ್ದ ಬಗ್ಗೆ ಮೈಸೂರು ಒಡೆಯರು ಕೊಟ್ಟ ದಾನಪತ್ರವನ್ನು ರಹಮತ್ ತರೀಕೆರೆಯವರು ದಾಖಲಿಸಿದ್ದಾರೆ(ಕರ್ನಾಟಕದ ಸೂಫಿಗಳು, ೨೦೦೧, ಪು.೧೩೮).

ಫಕ್ಕೀರೇಶನು ತನ್ನ ಗುರು ಅಮೀನುದ್ದೀನನೊಂದಿಗೆ ಹಲವಾರು ಪವಾಡ ಮಾಡುತ್ತಾನೆ. ಒಮ್ಮೆ ಬಿಜಾಪುರದ ದೊರೆ ಅಮೀನನನ್ನು ನಮಾಜಿಗೆ ಕರೆದುಕೊಂಡು ಹೋಗುತ್ತಾನೆ. ಅಲ್ಲಿ ಎಲ್ಲರೂ ನಮಾಜು ಮಾಡಿದರೆ ಅಮೀನುದ್ದೀನನು ಅವರಿಗಿಂತ ಭಿನ್ನವಾಗಿ ನಮಾಜು ಮಾಡುತ್ತಾನೆ. ಶಿಷ್ಯನಾದ ಫಕ್ಕೀರೇಶನು ಕೆರೆ ನೀರಿನ ನಡುವೆ ಗುರುವಿನ ನಮಾಜಿಗಾಗಿ ಕಂಬಳಿಯನ್ನು ಒಮ್ಮೆ ಝಾಡಿಸಿ ನಮಾಜು ಗಟ್ಟಿಯನ್ನು ಸಿದ್ಧಪಡಿಸುತ್ತಾನೆ. ಮತ್ತೊಮ್ಮೆ ಝಾಡಿಸಿ ನೀರಿನ ಮೇಲೆ ನಡೆದು ಹೋಗಲು ಪಾವಟಿಗೆ ಮಾಡುತ್ತಾನೆ. ಅಮೀನ್ ಹಾಗು ಅವನ ಶಿಷ್ಯನ ಮಹಿಮೆ ಕಂಡು, ದೊರೆಗೂ ನೆರದವರಿಗೂ ದಂಗು ಬಡಿಯುತ್ತದೆ (ಅದೇ, ಪು.೮೯).

ಗುರು ಶಿಷ್ಯರ ಈ ನಡವಳಿಕೆ ಓಂದೂ ಮುಸ್ಲಿಂ ಎರಡೂ ಧರ್ಮದ ಸನಾತನಿಗಳ ವಿರೋಧವನ್ನು ಕಟ್ಟಿಕೊಳ್ಳುವಂತೆ ಮಾಡಿತ್ತು. ಫಕ್ಕೀರೇಶನನ್ನು ನಂಬಿದ ಹಲವರನ್ನು ಕೆಲಗಣಂಗಳು ಕೆಲ ಭಕ್ತರು ಕರೆದು ಬುದ್ಧಿ ಹೇಳಿದ್ದರ ಬಗ್ಗೆ ಶಿರಹಟ್ಟಿ ಫಕ್ಕಿರೇಶ ಪುರಾಣ ವಿವರಿಸುತ್ತದೆ(ಸಂಧಿ ೧೫). ಆದರೆ ಜನಸಮುದಾಯದ ಬೆಂಬಲ ಯಾವತ್ತು ಶಿರಹಟ್ಟಿ ಫಕ್ಕಿರೇಶನೊಂದಿಗೆ ಇರುವುದು. 'ವೇಷಭೂಷಣಗಳೊಗದೇನುಂಟು, ಶೂಲಿ ತೊವಲಂ ಪೊರೆದ ಮಟ್ಟನು ಫಕ್ಕೀರನೆಂಬೀ ಪೆಸರು ತುರುಕರದೊಡೇನಾಯ್ತು?' ಎಂದು

ಸಮರ್ಥಿಸಿಕೊಳ್ಳುತ್ತಾರೆ. ಫಕ್ಕೀರೇಶನು ಅಮೀನನೊಂದಿಗೆ ಇದ್ದ ಪರಿಣಾಮ ಈತನ ವೇಷವೂ ಮುಸ್ಲಿಂರಂತೆಯೇ ಇತ್ತು. 'ತುರುಕರ ಹೆಮ್ಮೆ ಬಹಳವಗೆ ಬಟ್ಟಿಗವನಿಂ ಧರ್ಮವಳಿದಿಹುದು. ತುರುಕರಾದದೆ ವೇಷವಿರುವುದು. ತುರುಕರಂತೆ ಆಚಾರವುಂಟು. ಆ ತುರುಕರೊಡನಾಟವದು ಹೆಚ್ಚಿಹುದವನದು' ಎಂದು ಫಕ್ಕೀರೇಶ್ವರ ಪುರಾಣವು ವಿವರಿಸುವುದನ್ನು(ಸಂಧಿ ೧೫, ಪದ್ಯ ೧೯)ನೋಡಿದರೆ ಸೂಫಿ ಇಸ್ಲಾಂನ ಪ್ರಭಾವ ಈತನಿಗೆ ಎಷ್ಟೊಂದಾಗಿತ್ತು ಎನ್ನುವುದು ತಿಳಿದುಬರುತ್ತದೆ.

ಇವತ್ತಿಗೂ ಫಕೀರೇಶ ಪರಂಪರೆಯು ದರಗಾದೊಂದಿಗೆ ಸಂಬಂಧವನ್ನಿಟ್ಟುಕೊಂಡಿದೆ. ಫಕೀರೇಶ ಪರಂಪರೆಗೆ ಹೊಸಸ್ವಾಮಿಯ ಪಟ್ಟಾಭಿಷೇಕದ ಸಂದರ್ಭದಲ್ಲಿ ಅಮೀನ್ ದರ್ಗಾದಿಂದ ಗುರು ಬಂದು ಪೇಟವಿಕ್ಕಿ ಹರಸಬೇಕು. ಹಾಗೂ ಈ ಮಠದ ಸ್ವಾಮಿಗಳು ಮರಣ ಹೊಂದಿದಾಗ ದರಗಾದಿಂದ ಬಂದು ಮುಸಲ್ಮಾನಿ ರೀತಿಯ ಪದ್ಧತಿಯಲ್ಲಿ ಶವಸಂಸ್ಕಾರ ಮಾಡಬೇಕು.

ಆಚರಣೆ ಉತ್ಸವಗಳ ಸಂದರ್ಭದಲ್ಲಿ ಫಕೀರೇಶ್ವರ ಪರಂಪರೆಯ ಸ್ವಾಮಿಗಳು ರತ್ನಾಭರಣದಿಂದ ಕೂಡಿದ ದರ್ಬಾರಿ ವೇಷವನ್ನು ಹಾಕಿಕೊಳ್ಳುತ್ತಾರೆ. ಇದೊಂದು ರೀತಿಯಲ್ಲಿ ಪೈಜಾಮ ಶೇರವಾಣಿಗಳಿಂದ ಕೂಡಿದ ಆದಿಲಾಶಾಹಿ ದೊರೆಗಳ ದಿರಿಸಿನಂತಿರುತ್ತದೆ. ದರವೇಶಿಯಾಗಿ ಪ್ರಭುತ್ವಕ್ಕೆ ಯಾವತ್ತೂ ಸವಾಲಾಗಿದ್ದ ಅಮೀನುದ್ದೀನ ಶಿಷ್ಯ ಫಕ್ಕಿರೇಶ ಇಂದು ದೈವವಾಗಿ ಆಚರಣಾ ರೂಪದಲ್ಲಿ ಪಡೆದುಕೊಂಡಿರುವ ರೂಪಾಂತರ ಗುರುವಿನ ಪ್ರಭುತ್ವ ವಿರೋಧಿ ತತ್ವಕ್ಕೆ ವ್ಯತಿರಿಕ್ತವಾಗಿದೆ.

### ೨.೩.೪. ಸಾವಳಗಿ ಶಿವಲಿಂಗ

ಸಾವಳಗಿ ಶಿವಲಿಂಗನು ಹಿರೇಗೌಡರ ಮನೆತನದ ಮುದಿಗಂಡ ಮತ್ತು ಮಲ್ಲಮ್ಮ ದಂಪತಿಗಳಿಗೆ ಹುಟ್ಟಿದನು(ಕಪಟರಾಳ ಕೃಷ್ಣರಾವ್, ೧೯೭೦, ಪು.೧೬೧). 'ಲಿಂಗಬಸಪ್ಪ' ಎನ್ನುವವನು ಈತನ ತಂದೆ ಎಂದು 'ಶ್ರೀ ಸಾವಳಗಿ ಶಿವಲಿಂಗೇಶ್ವರ ಪುರಾಣ' ಹೇಳುತ್ತದೆ. ಈತನ ಊರು ಗುಲ್ಬಾರ್ಗ ಜಿಲ್ಲೆಯ ಅಫಜಲಪುರ ತಾಲೂಕಿನ ಕೊಳ್ಳೂರು. ಗುಲಬರ್ಗಾದ ಖಾಜಬಂದೇ ನವಾಜ್‌ನ ಸಮಕಾಲೀನನು. ಖಾಜಾ ಬಂದೇ ನವಾಜನಿಗೂ ಮತ್ತು ಶಿರಹಟ್ಟಿ ಫಕ್ಕಿರೇಶಗೂ ನಡೆದ ಮುಖಾಮುಖಿಯನ್ನು ಶಿವಪುರದ ಸಿದ್ಧಲಿಂಗಕವಿ(೧೯ನೇ ಶತಮಾನ) ಬರೆದ 'ಶ್ರೀ ಸಾವಳಗಿ ಶಿವಲಿಂಗೇಶ್ವರ ಪುರಾಣ'ದಲ್ಲಿ ವಿವರಿಸಲಾಗಿದೆ.

ಒಮ್ಮೆ ಖಾಜಾಬಂದೇ ನವಾಜನು ಹುಲಿಯವಾನಹವನ್ನೇರಿ ಸಾವಳಗಿ ಶಿವಲಿಂಗನನ್ನು ಬೇಟಿ ಮಾಡಲು ಬರುತ್ತಾನೆ. ಈತ ಬರುವುದನ್ನು ಕಂಡ ಶಿವಲಿಂಗನ ಶಿಷ್ಯರು ವಿಷಯ ಮುಟ್ಟಿಸುತ್ತಾರೆ. ಧ್ಯಾನದಲ್ಲಿ ಕಟ್ಟೆಯ ಮೇಲೆ ಕುಳಿತಿದ್ದ ಶಿವಲಿಂಗನು ವಿಚಲಿತನಾಗದೆ ತಾನು ಕುಳಿತ ನಿರ್ಜೀವ ಕಟ್ಟೆಯನ್ನೇ ನಡೆಸಿಕೊಂಡು ಹೋಗಿ ಬಂದೇನವಾಜನನ್ನು ಭೇಟಿಯಾಗುವನು. ಈತನ ಪವಾಡಶಕ್ತಿಗೆ ಮಣಿದ ಬಂದೇ ನವಾಜನು ತನ್ನ ಉರುಸಿಗೆ ಗುಲಬರ್ಗಾಕ್ಕೆ ಕರೆದುಕೊಂಡು ಹೋಗಿ ಶೈಲಿ, ಶಮಲ, ಶಿಲೇಮಣಿಗಳನ್ನು ಕೊಟ್ಟು ಉಪಚರಿಸುವನು.

ಸಾವಳಗಿ ಶಿವಲಿಂಗನು ಮಾಡುವ ಪ್ರಮುಖ ಪವಾಡಗಳಲ್ಲಿ ಪ್ರಭುತ್ವವನ್ನು ಮಣಿಸುವುದು ಹಲವಾರು ಇವೆ. 'ಬೀದರ್‌ನ ಬರೀದ್‌ಶಾಹಿ ಮನೆತನದ ರಾಜ ಬಾದಾಶಹ ತನ್ನ ದೇವರನ್ನು ಪೂಜೆ ಮಾಡುವುದಕ್ಕೆ ಮುಂಚೆ ಕೆರೆಯ ನೀರು ತರಲು ಹೋಗುವಾಗ ಪ್ರಜೆಗಳನ್ನು ಬೋರಲು (ಮಕ್ಕಾಡೆ) ಮಲಗಿಸುತ್ತಾನೆ. ಆನಂತರ ಮಲಗಿದ್ದ ಪ್ರತಿಯೋರ್ವರ ಬೆನ್ನ ಮೇಲೆ ತನ್ನ ಕಾಲಿಡುತ್ತಾ ನಡೆದು ಹೋಗಿ ನೀರು ತಂದು ದರ್ಬಾರಿಗೆ ಬರುತ್ತಿದ್ದನು. ಇಂತಹ ಕ್ರೂರ ಹಿಂಸೆಯನ್ನು ಕೇಳಿದ ಶಿವಲಿಂಗನು ಒಂದು ದಿವಸ ಭಾಲ್ಕಿಗೆ ಪ್ರಯಾಣ ಬೆಳೆಸುತ್ತಾನೆ. ಬಾದಾಶಾಹನು ನೀರಿನ ಮೇಲೆ ಲುಂಗಿಹಾಸಿ 'ಅಲ್ಲಾ' ಎಂದು ಆಜಾ ಕೊಡುತ್ತಿದ್ದನಂತೆ ಬಾದಶಹಾನು 'ಅಲ್ಲಾ' ಎಂದು ಮೇಲೆ ನೋಡುವ ಸಂದರ್ಭದಲ್ಲಿ ಶಿವಲಿಂಗ ಅಂತರ ಮಾರ್ಗದಲ್ಲಿ ಗೊಂಗಡಿ ಹಾಸಿ ಗಂಟೆ ಬಾರಿಸುತ್ತಿದ್ದನಂತೆ. ಬಾದಶಹನು ಇದನ್ನು ನೋಡಿ ನನಗೆ ನೀರಿನ ಆಧಾರವಿದೆ. ನಿಮಗೆ ಯಾವುದರ ಆಧಾರವೂ ಇಲ್ಲ. ನನಗಿಂತ ನೀವು ದೊಡ್ಡವರು. ನಾನು ಸೋತಿದ್ದೇನೆ. ನಿಮಗೆ ವರದಾನವಾಗಿ ಏನು ಬೇಕು ಕೇಳಿ ಎಂದು ಅರುಹುವನು. ಪ್ರತಿಯಾಗಿ ಶಿವಲಿಂಗ ಒಂದೇ ರಾತ್ರಿಯಲ್ಲಿ ಮಠ ಕಟ್ಟಬೇಕು. ಇನ್ನು ಮುಂದೆ ಊರಿನ ಜನರನ್ನೆಲ್ಲಾ ಅಣ್ಣತಮ್ಮಂದಿರಂತೆ ತಿಳಿಯಬೇಕು ಎಂದರಂತೆ'(ಡಾ.ಹೆಬ್ಬಾಲೆ ಕೆ.ನಾಗೇಶ, ೨೦೦೨, ಪು.೫). ಈ ರೀತಿ ಬೀದರನ ಬಾದಾಶಹನೊಬ್ಬನೇ ಅಲ್ಲ. ಔರಂಗಜೇಬ, ಬಿಜಾಪುರದ ಆದಿಲ್‌ಶಾಹಿ, ಸಿಕಂದರಬಾಷಾ, ಪಾಮಾರನಾಯಕ ಮತ್ತು ಮೈಸೂರಿನ ಮಹಾರಾಜರು ಈತನಿಗೆ ಮಣಿದು ಕಪ್ಪಕಾಣಿಕೆ ಒಪ್ಪಿಸುತ್ತಾರೆ. ಮಧ್ಯಕಾಲೀನ ಸಂತರಲ್ಲಿ ಹೀಗೆ ಪ್ರತಿಷ್ಠಿತ ರಾಜಪ್ರಭುತ್ವವನ್ನು ಮಣಿಸುವ ಮೂಲಕ ಜನಪದರ ಆರಾಧ್ಯ ದೈವವಾಗಿದ್ದಾರೆ.

ಖಾಜಾ ಬಂದೇನವಾಜನ ಉರುಸಿಗೆ ಹೋಗಿ ಅಲ್ಲಿ ಟೊಪ್ಪಿಗೆ, ಶಮನ, ಶೈಲಿಗಳನ್ನು ಪಡೆಯುವುದು, ಔರಂಗಜೇಬನ ಮಗನಾದ ಅಕ್ಬರ್‌ನಲ್ಲಿ ಬಾಲಖೇಡಕ್ಕೆ ಹೋಗಿ ತನ್ನ ಮಹಿಮೆಯನ್ನು ತೋರುವುದು, ಲಾಕುಳವನ್ನು ಹಿಡಿದು ಕೃಷ್ಣೆಯನ್ನು ದಾಟಿ ತುಗುಚಿಯ ವಲಿಗಳಿಗೆ ಬೆರಗುಗೊಳಿಸುವುದು ಇವೆಲ್ಲವೂ ಸಾವಳಗಿ ಶಿವಲಿಂಗ ಸೂಫಿಸಿದ್ದನಾಗಿದ್ದನೆಂಬುದನ್ನು ದೃಢಪಡಿಸುತ್ತದೆ. ಆಚರಣೆಗಳಲ್ಲಿಯೂ ಸೂಫಿಸಂನ ಪ್ರಭಾವ ಕಂಡುಬರುತ್ತದೆ. ಜಾತ್ರೆ, ಉತ್ಸವ, ವಿಶೇಷ ಸಂದರ್ಭಗಳಲ್ಲಿ ಹಸಿರು ಪೋಷಾಕು ಧರಿಸುವುದು ಅಲ್ಲದೆ ಕುದುರೆಯನ್ನು ಬಳಸುವುದು, ಸಹಭೋಜನ ಪದ್ಧತಿ, ಪೂಜೆ, ಪ್ರಾರ್ಥನೆ, ದೀನಾಹರಾ, 'ಹರಹರ ಮಹಾದೇವ', 'ಖಾಜಾಬಂದೇ ನವಾಜಕೀ ದೋಸ್ತರಾ', 'ಜಗದ್ಗುರು ಶ್ರೀ ಶಿವಲಿಂಗೇಶ್ವರ ಮಹಾರಾಜ್‌ಕೀ ಜೈ' ಮುಂತಾದ ಘೋಷಣೆಗಳು ಹಿಂದೂ ಮುಸ್ಲಿಂ ಸಮುದಾಯದವರು ಕೂಡಿಯೇ ಕೂಗುತ್ತಾರೆ.

ಕರ್ನಾಟಕ, ತಮಿಳುನಾಡು, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶಗಳಲ್ಲಿ ಸುಮಾರು ೩೫೦ ಮಠಗಳನ್ನು, ೧೧೦ ಗದ್ದಿಗೆಗಳನ್ನು ಹಿಂದೂ ಮುಸ್ಲಿಂ ಭಕ್ತಾದಿಗಳು ನಿರ್ಮಿಸಿದ್ದಾರೆ. ಮೊದಲು ನಿರ್ಮಾಣಗೊಂಡ ಮಠ ಗುಲಬರ್ಗಾ ಜಿಲ್ಲೆಯ ಹಿರೇಸಾವಳಗಿಯಲ್ಲಿದೆ. ಅವರ ಕೊನೆಯ ಮಠ ಬೆಳಗಾವಿ ಜಿಲ್ಲೆಯ ಗೋಕಾಕ್‌ನ ಸಾವಳಗಿ ಆಗಿದೆ(ಅದೇ, ಪು.೬).

### ೨.೩.೫. ಮಂಟೇಸ್ವಾಮಿ

ಮಂಟೇಸ್ವಾಮಿ ಕಾವ್ಯ ಹಾಡುವ ನೀಲಗಾರರು ಈತನನ್ನು ಚಾರಿತ್ರಿಕ ವ್ಯಕ್ತಿಯಾಗಷ್ಟೇ ಪರಿಭಾವಿಸುವುದಿಲ್ಲ. ಉತ್ತರದೇಶದ ಕತೆಯಲ್ಲಿ ಪುರಾಣೀಕರಿಸಿಕೊಂಡು ಅಲ್ಲಮನಾಗಿ ಚಿತ್ರಿಸಿದರೆ ಕಲಿಗಾಲದಲ್ಲಿ ಮಂಟೇದರಾಗಿ ಚಿತ್ರಿಸುತ್ತಾರೆ. ವೀರಸಂಗಯ್ಯನ 'ನಂದಿ ಆಗಮಲೀಲೆ' ಕೃತಿಯು ಸೂಚಿಸುವ ಕ್ರಿ.ಶ.೧೪೮೯ ಮತ್ತು ಮುಟ್ನಳ್ಳಿ ಶಾಸನ ಸೂಚಿಸುವ ಕ್ರಿ.ಶ.೧೫೫೦ ಈ ಎರಡೂ ಆಧಾರಗಳು ಮಂಟೇಸ್ವಾಮಿಗಳ ಕಾಲವನ್ನು ನಿರ್ಧರಿಸಲು ಮುಖ್ಯ ಆಧಾರಗಳಾಗುತ್ತವೆ. ಈ ಆಧಾರಗಳ ಪ್ರಕಾರ ಮಂಟೇಸ್ವಾಮಿಗಳ ಕಾಲ ಸ್ಥೂಲವಾಗಿ ೧೫ನೇ ಶತಮಾನದ ಉತ್ತರಾರ್ಧದಿಂದ ೧೬ನೇ ಶತಮಾನದ ಪೂರ್ವಾರ್ಧ (ಸುಮಾರು ಕ್ರಿ.ಶ.೧೪೪೦-೧೫೫೦) ಎಂಬುದಾಗಿ ಇಟ್ಟುಕೊಳ್ಳಬಹುದು'(ಮಹದೇವ ಶಂಕನಪುರ, ೨೦೦೨, ಪು.೬೨).

ಮಂಟೇಸ್ವಾಮಿ ಕೊಡೇಕಲ್ ಪರಂಪರೆಯ ಸಮಕಾಲೀನನಾಗಿದ್ದಾನೆ. 'ದ್ರಾವಿಡ ದೇಶ'(ತಮಿಳುನಾಡು) ದಿಂದ 'ಕಾಯಸಿದ್ಧಿ'ಗಳಿಸಲು (ನಾಥಸಿದ್ಧರ ಸಾಧನೆ) ಕೊಡೇಕಲ್ ಬಸವಣ್ಣನನ್ನು ಹುಡುಕಿಕೊಂಡು ಕೊಡೇಕಲ್ಲಿಗೆ ಬರುತ್ತಾನೆ. ಅಲ್ಲಿ ಕೆಲಕಾಲ ಇದ್ದು ಸಾಧನೆಗೈದು ಕೊಡೇಕಲ್ಲ ಬಸವನ ಆದೇಶದಂತೆ ದಕ್ಷಿಣದತ್ತ ಹೊರಡುತ್ತಾನೆ. ರಾಚಪ್ಪಾಜಿ, ದೊಡ್ಡಮ್ಮತಾಯಿ, ಚೆನ್ನಾಜಮ್ಮ, ಫಲಾರದಯ್ಯ, ಸಿದ್ದಪ್ಪಾಜಿ, ನಿಂಗಯ್ಯ, ಚೆನ್ನಯ್ಯ ಇವರೆಲ್ಲ ಮಂಟೇಸ್ವಾಮಿ ಪರಂಪರೆಯ ಸಿದ್ಧರೂ, ಸಾಧಕರೂ ಆಗಿದ್ದಾರೆ.

ನೀಲಗಾರರ ಪ್ರಕಾರ ಮಂಟೇಸ್ವಾಮಿ ಮೊಟ್ಟ ಮೊದಲಬಾರಿಗೆ ಕಲ್ಯಾಣದಲ್ಲಿ ಕಾಣಿಸಿಕೊಳ್ಳುತ್ತಾನೆ. ಕೀವುರಸಿಕನಿಂದ ಗದಗದನೆ ನಾರುವ ಕೊಳಕು ಜಂಗಮನಾಗಿ ಕಲ್ಯಾಣಕ್ಕೆ ಬರುತ್ತಾನೆ. ನಾವು ಲಿಂಗವಂತರು ಎಂಬ ಅಹಂಕಾರದಿಂದ ಮೆರೆಯುತ್ತಿದ್ದ ಜಂಗಮರೆಲ್ಲಾ ಇವನನ್ನು ನಿರಾಕರಿಸುತ್ತಾರೆ. ಮಂಟೇಸ್ವಾಮಿ ಅವರ ಲಿಂಗಗಳನ್ನೆಲ್ಲಾ ಮಾಯಮಾಡಿ ಹೆಂಡದ ಗಡಿಗೆಯಲ್ಲಿ ಅಡಗಿಸುತ್ತಾನೆ. ದುಡಿಯುವ ವರ್ಗದ ಒಂಭತ್ತು ಮಂದಿಗೆ ಮಾತ್ರ ಲಿಂಗಧಾರಣೆ ಮಾಡಿ ಉಳಿದ ಜಂಗಮರೆಲ್ಲ 'ಕಲ್ಲುವಡ್ಡರಾಗಿ ಗೇಯ್ಕ ತಿನ್ನಲಿ' ಎಂದು ಶಾಪಕೊಟ್ಟು ಹೋಗುತ್ತಾನೆ. ಹಾಗೆ ಲಿಂಗಧಾರಣೆ ಮಾಡಿಸಿಕೊಂಡ ಕಾಯಕ ಜೀವಿಗಳೆಂದರೆ ಕುರುಬರ ಬೀರಯ್ಯ, ಮಡಿವಾಳ ಮಾಚಯ್ಯ, ಹೊಲಾರ ಹೊನ್ನಯ್ಯ, ಹಡಪದ ಅಪ್ಪಣ್ಣ, ಕುಂಬಾರಗುಂಡಯ್ಯ, ಮಾದಾರ ಚೆನ್ನಯ್ಯ, ದೇವಾಂಗ ದಾಸಯ್ಯ, ಮೇಲುಸಕ್ಕರೆ ಶೆಟ್ಟಿ, ಗಂಗಡಕಾರ ಗೌಡ ಈ ಮಂದಿಗೆ ಲಿಂಗಧಾರಣೆ ಮಾಡಿ ಹೋಗುವಾಗ ಬಸವಣ್ಣನವರ ದಾಸೋಹದ ಮನೆಯ ಎಂಜಲು ಎಲೆಗಳನ್ನೇ ತಮ್ಮ ಪರಂಪರೆಯ ತಿಲಕ (ಮುಟಿಕಪ್ಪು)ವಾಗಿ ಪಡೆದು ಕಲ್ಯಾಣವನ್ನು ಬರಿದು ಮಾಡುತ್ತಾನೆ.

ವಚನ ಚಳುವಳಿಯ ನಂತರ ನಡೆದ ವೀರಶೈವೀಕರಣದ ಪ್ರಕ್ರಿಯೆಯಾದ ಷಟ್‌ಸ್ಥಳ, ಅಷ್ಟಾವರಣ, ಪಂಚಾಚಾರ ಕಲ್ಪನೆಗಳನ್ನು ನಿರಾಕರಿಸುವುದನ್ನು ಮಂಟೇಸ್ವಾಮಿಯ ಜೀವನದಲ್ಲಿ ಕಾಣಬಹುದು. ಈತನು ಇಷ್ಟಲಿಂಗದ ಕಲ್ಪನೆಯನ್ನು ಒಡೆದು ಹಾಕಿ ಆತ್ಮಲಿಂಗದ ಕಲ್ಪನೆಯನ್ನು ತರುತ್ತಾನೆ.

ಮೂಲತಃ ದಕ್ಷಿಣದವನಾದ ಮಂಟೇಸ್ವಾಮಿ ಕೊಡೇಕಲ್ಲಿಗೆ ಬಂದು ಕೊಡೇಕಲ್ ಬಸವಣ್ಣನ ಶಿಷ್ಯನಾಗಿ ಅಲ್ಲಿಂದ ಕೇಲೂರು, ಕೂಡಲಸಂಗಮ, ಹಂಪಿ, ಕಾಗಿನೆಲೆ, ಬಳ್ಳಿಗಾವಿ, ಉಡುತಡಿ, ಬನವಾಸಿ, ಸುಖರಾಯಪಟ್ಟಣ್ಣ, ಮೈಸೂರು, ಕಪ್ಪಡಿ, ಚಿಕ್ಕಲೂರು ಕುರುಬನಕಟ್ಟೆ ಮುಂತಾದ ಸ್ಥಳಗಳಲೆಲ್ಲ ಸಂಚರಿಸಿ ಬೊಪ್ಪೇಗೌಡನಪುರದಲ್ಲಿ ನೆಲೆಸಿದ್ದಾನೆ.

ಮಂಟೇಸ್ವಾಮಿಗೆ ಶೈವನಾಥಸಿದ್ಧ ಮತ್ತು ಸೂಪಿಸಿದ್ದರ ಪ್ರಭಾವ ಇದೆ. ಮಂಟೇಸ್ವಾಮಿ ಸಂಚರಿಸಿದ ಸ್ಥಳಗಳೆಲ್ಲ ಕುರುಬರ ಪ್ರಮುಖ ಕೇಂದ್ರಗಳಾಗಿದ್ದು ಈ ಜನಾಂಗದವರು ರೇವಣಸಿದ್ದನ ಕಾಲ(೧೧ನೇ ಶತಮಾನ)ದಿಂದಲೂ ನಾಥ ಪರಂಪರೆಗೆ ನಡೆದು ಬಂದಿದ್ದಾರೆ. ಈ ಪರಂಪರೆಯ (ಕೊಡೇಕಲ್ ಪರಂಪರೆ) ಮಂಟೇಸ್ವಾಮಿಗಳು, ರಾಚಪ್ಪಾಜಿಯವರನ್ನೊಳಗೊಂಡಂತೆ ಎಲ್ಲರೂ ಬೌದ್ಧಸಿದ್ಧ, ಶೈವಸಿದ್ಧ, ನಾಥಸಿದ್ಧ, ಸೂಫಿಸಿದ್ಧ ಪಂಥ, ಪರಂಪರೆ ಮತ್ತು ಇತರೆ ಧಾರೆಗಳನ್ನು ಅವಾಹಿಸಿಕೊಂಡು ಬೆಳೆದ 'ಸಿದ್ಧ'ರಾಗಿದ್ದಾರೆ. ಧರೆಗುರು ಮಂಟೇಸ್ವಾಮಿಗಳು 'ಕಾಯಸಿದ್ಧಿ' ಪಡೆದ ಕೊಡೇಕಲ್ ಬಸವಣ್ಣ ಮತ್ತು ಅವರ ಪಂಥ ಪರಂಪರೆಯು ಸಹ ನಾಥ, ಸೂಫಿ, ಶೈವ, ಇಸ್ಲಾಂ ಪಂಥಗಳಿಂದ ರೂಪಿತವಾದದ್ದು ಎಂಬುದು ಗಮನಾರ್ಹ(ಮಹದೇವ ಶಂಕನಪುರ, ೨೦೦೨, ಪು.೯೮). ನಾಥಸಿದ್ಧರ ಪ್ರಭಾವವಲ್ಲದೆ ಸೂಫಿಸಂತರ ಪ್ರಭಾವವು ಮಂಟೇಸ್ವಾಮಿಗೆ ಆಗಿರುವುದಕ್ಕೆ ಮುಸ್ಲಿಂರು ಈತನನ್ನು 'ಮಾಂಕ್ಷಾವಲಿ' ಎಂದು ಕರೆಯುವುದೇ ಸಾಕ್ಷಿ. ಮಂಟೇಸ್ವಾಮಿ ಪರಂಪರೆಯಲ್ಲಿ ಈ ಸಂತರ ಗದ್ದಿಗೆಗಳು ಅಲಂಕಾರ, ಆಚರಣೆಗಳು ಸೂಫಿ ದರ್ಗಾಗಳ ಆಚರಣೆಯಂತೆಯೇ ನಡೆಯುತ್ತಿವೆ.

ಮಂಟೇಸ್ವಾಮಿಯ ಪವಾಡಗಳನ್ನು ಗಮನಿಸಿದರೆ ಮಧ್ಯಕಾಲೀನ ಕರ್ನಾಟಕದಲ್ಲಿನ ರಾಜಕೀಯ ಅರಾಜಕಸ್ಥಿತಿ, ಆ ಸ್ಥಿತಿಯಲ್ಲಿ ಸಂತರು ಹಾಗೂ ಪ್ರಭುತ್ವದೊಟ್ಟಿಗಿನ ಸಂಬಂಧ ಹಾಗೂ ಒಕ್ಕಲಾಗಿಸಿಕೊಳ್ಳುವ ಪ್ರಕ್ರಿಯೆಗಳು ಕಂಡುಬರುತ್ತವೆ. ಕುರುಬ ಬೊಪ್ಪೇಗೌಡನ ಹಟ್ಟಿಯನ್ನು ಮಠಮನೆಯಾಗಿಸುವುದರ ಮೂಲಕ ತಳವೂರುತ್ತಾನೆ. ಹಲಗೂರು ಪಾಳೇಗಾರರಿಂದ ಕಬ್ಬಿಣ ಭಿಕ್ಷಾ ಪಡೆದು ಉತ್ಪಾದನಾ ಚಟುವಟಿಕೆಯ ಮೇಲೆ ಹಿಡಿತವನ್ನು ಸಾಧಿಸುತ್ತಾನೆ. ಕೊನೆಗೆ ಕಲಿಕಂಡು ಮಂಟೇಸ್ವಾಮಿ ಕಣ್ಮರೆಯಾಗುವ ಚಿತ್ರಣವನ್ನು ನೀಲಗಾರರು ನೀಡುತ್ತಾರೆ. 'ಅಧಿಕಾರ-ಜ್ಞಾನ-ಉತ್ಪಾದನೆಯಲ್ಲಿ ಉಂಟಾದ ಚಾರಿತ್ರಿಕ ದ್ರೋಹದ ಪರಿಣಾಮ ಕಲಿ. ಮಂಟೇಸ್ವಾಮಿಗಳು ಮೊದಲು ಇದನ್ನು ಗುರುತಿಸಿ ಪಾತಾಳ ಬಾವಿಯನ್ನು ತೋಡಿಸಿಕೊಂಡು ಕಣ್ಮರೆಯಾಗಿ ಹೋಗುತ್ತಾರೆ'(ವೆಂಕಟೇಶ್ ಇಂದ್ವಾಡಿ, ೧೯೯೯, ಪು.೯೪).

ಒಟ್ಟಾರೆ ನೀಲಗಾರರು ಮಂಟೇಸ್ವಾಮಿ ಕಥನವನ್ನು ಅಖಂಡವಾಗಿ ಕಟ್ಟಿಕೊಡುತ್ತಾರೆ. ಆದಿ ಸೃಷ್ಟಿಯಿಂದ ಕಾವ್ಯ ಆರಂಭವಾಗಿ, ಮಂಟೇಸ್ವಾಮಿ ಕಲ್ಯಾಣದಲ್ಲಿ ಪವಾಡ ಮಾಡಿ ೧೫ನೇ ಶತಮಾನದ ಕೊಡೇಕಲ್ ಪರಂಪರೆಯೊಂದಿಗೆ ನಿಕಟ ಸಂಪರ್ಕ ಹೊಂದಿ ಅಲ್ಲಿಂದ ಕತ್ತಲರಾಜ್ಯಕ್ಕೆ ಬಂದು ನೆಲೆಯೂರಿ ಕಲಿಕಂಡು ಕಣ್ಮರೆಯಾಗುವಲ್ಲಿಗೆ ಕಾವ್ಯ ಮುಕ್ತಾಯವಾಗುತ್ತದೆ.

### ೨.೩.೬. ಮಲೆಮಾದೇಶ್ವರ

'ದೇವರಗುಡ್ಡರು' ಅಥವಾ 'ಕಂಸಾಳೆ'ಯವರು ಎಂದು ಕರೆಯಲ್ಪಡುವ ಗಾಯಕವರ್ಗದವರು ಮಾಲೆಮಾದೇಶ್ವರನನ್ನು ಕುರಿತು ಹಾಡುವುದನ್ನು ತಮ್ಮ ವೃತ್ತಿಯಾಗಿಸಿಕೊಂಡಿದ್ದಾರೆ. ಕರ್ನಾಟಕದ ದಕ್ಷಿಣದ ಮೈಸೂರು ಭಾಗದಲ್ಲಿ ಇವರು ಹೆಚ್ಚಾಗಿ ವಾಸಿಸುತ್ತಾರೆ.

ಮಾದೇಶ್ವರ ಕುರಿತು ಹರದನಹಳ್ಳಿಯ 'ತಾಮ್ರಶಾಸನ'(೧೩೪೫), ಹೈದರಾಲಿಯ 'ತಾಮ್ರಶಾಸನ' (೧೭೬೧), 'ನಿರಂಜನ ವಂಶರತ್ನಾಕರ' 'ಗುರುಸಿದ್ಧಕವಿಯ' 'ಮಾದೇಶ್ವರ ಸಾಂಗತ್ಯ'(೧೭೫೦), ದೇವಚಂದ್ರನ 'ರಾಜಾವಳಿಕಥೆ'(೧೯ನೇ ಶತಮಾನ) ಹಾಗೂ ಕಂಸಾಳೆಯವರು ಹಾಡುವ 'ಮಾದಪ್ಪನ ಕಾವ್ಯ' ಪ್ರಮುಖ ಆಕರಗಳಾಗಿವೆ(ಸತೀಶ್ ಪಿ., ೧೯೯೭, ಪು.೨೮-೩೧).

'ನಿರಂಜನ ವಂಶರತ್ನಾಕರ'ದಲ್ಲಿ ಮಾದೇಶ್ವರನನ್ನು 'ನಿರ್ಮಾಯಗಣೇಶ್ವರ' ಎಂದು ಕರೆಯಲಾಗಿದೆ. ಶೂನ್ಯ ಸಿಂಹಾಸನವನ್ನು ಏರಿದ ಹಲವಾರು ಗುರುಗಳಲ್ಲಿ ನಿರ್ಮಾಯಗಣೇಶ್ವರನು ಆರನೆಯವನಾಗಿದ್ದಾನೆ. 'ರಾಜಾವಳಿಕಥೆ'ಯು ಮಾದೇಶ್ವರ ಕುಂತೂರು ಮಠಕ್ಕೆ ಭೇಟಿ ಇತ್ತು ಅಲ್ಲಿನ ಗುರುಗಳಿಂದ ದೀಕ್ಷೆ ಪಡೆದ ವಿಷಯವನ್ನು ಪ್ರಸ್ತಾಪಿಸಿದೆ. ಅಲ್ಲದೆ ಮಾದೇಶ್ವರ ಮಾದಿಗ ಜಾತಿಯಲ್ಲಿ ಹುಟ್ಟಿದವನೆಂದು ಹೇಳಿದೆ.

ಮಾದೇಶ್ವರನ ಜೀವನವನ್ನು ಗಮನಿಸಿದರೆ ಈತ ನಿರಂತರವಾಗಿ ಸಂಘರ್ಷವನ್ನು ಇಟ್ಟುಕೊಂಡಿದ್ದಾನೆ. ಜನಸಮುದಾಯಗಳನ್ನು ತನ್ನ ಒಕ್ಕಲಾಗಿಸಿಕೊಳ್ಳಲು ಹೋರಾಟವನ್ನು, ಹಲವಾರು ಪವಾಡಗಳನ್ನು, ಕಷ್ಟಗಳನ್ನು ಈತ ನೀಡುವ ಚಿತ್ರಣವನ್ನು ಕಂಸಾಳೆಯವರು ನಿರೂಪಿಸುತ್ತಾರೆ.

ಮಾದೇಶ್ವರನಿಗೆ ಉತ್ತರದೇಶದಲ್ಲಿ ನಡೆದ ಯಾವುದೋ ಘಟನೆ ಆತನಿಗೆ ಭ್ರಮನಿರಸನ ತಂದಿದೆ. ಆ ಕಾರಣಕ್ಕಾಗಿ ಶೂನ್ಯ ಸಿಂಹಾಸನ ಪದವಿಬಿಟ್ಟು ದಕ್ಷಿಣದ ಕಡೆ ಸಂಸಾರಿ ಸಂಗಪ್ಪನ ಜೊತೆ ಹೊರಟು ಬಂದಿದ್ದಂತೆ ಕಾಣುತ್ತದೆ'(ಅದೇ, ಪು.೪). ಸುತ್ತೂರು ಮತ್ತು ಕುಂತೂರು ಮಠಗಳನ್ನು ಹುಡುಕಿಕೊಂಡು ಬಂದ ಈತನನ್ನು ಈ ಮಠಗಳು ಸರಿಯಾಗಿ ನಡೆಸಿಕೊಳ್ಳಲಿಲ್ಲ. ಇದರಿಂದಾಗಿ ಅಲ್ಲಿಂದ ತ್ಯಜಿಸಿ ಏಕಾಂಗಿಯಾಗಿ ಏಳುಮಲೆಗೆ ನಡೆದು ಬರುತ್ತಾನೆ. ನಡುಮಲೆಯನ್ನು ತನ್ನ ಕೇಂದ್ರಸ್ಥಳವನ್ನಾಗಿಸಿಕೊಂಡು ಅಲ್ಲಿಯೇ ತಳವೂರುತ್ತಾನೆ. ಸಾಲೂರುಮಠ ಸ್ಥಾಪಿಸಿ ಗಿರಿಜನರಿಗೆ ವಿದ್ಯಾದಾನ ಮಾಡುತ್ತಾನೆ. ತನಗೆ ಏಳಂಕಣದ ದೇವಸ್ಥಾನವನ್ನು ಕಟ್ಟಿಸಿಕೊಳ್ಳಲಿಕ್ಕಾಗಿ ಕುರುಬೇಗೌಡ, ಆಲಂಬಾಡಿ ಜುಂಜೇಗೌಡನನ್ನು ಒಕ್ಕಲು ಮಾಡಿಕೊಳ್ಳುತ್ತಾನೆ. ಉಪ್ಪಲಿಗರ ಸರಗೂರಯ್ಯನ ಕುಟುಂಬದ ಮೂಗಪ್ಪ ರಾಮವ್ವೆಯರನ್ನು ಒಕ್ಕಲು ಮಾಡಿಕೊಂಡು ಅವರಿಂದ ಎಳ್ಳಿನ ಎಣ್ಣೆಯ ಮಜ್ಜನಮಾಡಿಸಿಕೊಳ್ಳುತ್ತಾನೆ. ಸಂಕಮ್ಮನಿಗೆ ಮಕ್ಕಳ ಫಲನೀಡಿ ನೀಲಯ್ಯನಿಗೆ ತನ್ನ ಸಾಮರ್ಥ್ಯವನ್ನು ತೋರಿಸಿ ಅವರ ಕಾರಯ್ಯ, ಬಿಲಯ್ಯ ಎನ್ನುವ ಅವಳಿ

ಮಕ್ಕಳನ್ನು ತನ್ನ ಶಿಷ್ಯರನ್ನಾಗಿ ಮಾಡಿಕೊಳ್ಳುತ್ತಾನೆ. ಬೇವಿನಹಟ್ಟಿ ಕಾಳಮ್ಮನನ್ನು ಹಿಡಿಸಿ ಅವಳನ್ನು ಬೇವಿನಮರವಾಗಿ ಹುಟ್ಟುವಂತೆ ಶಪಿಸುತ್ತಾನೆ. ಇಕ್ಕೇರಿ ದೇವಮ್ಮ ಮಾದೇಶ್ವರನನ್ನು ಕೊಲ್ಲಲು ಪ್ರಯತ್ನಿಸಿ ಊಟದಲ್ಲಿ ವಿಷ ಬಡಿಸಿದ್ದರಿಂದ ತನ್ನ ಪವಾಡ ಶಕ್ತಿಯಿಂದ ಆಕೆ ಊರಚಾವಡಿ ಕಲ್ಲಾಗುವಂತೆ ಮಾಡಿ ಅವಳ ೭ ಕೊಪ್ಪರಿಗೆ ಹೊನ್ನು ತನ್ನ ಏಳು ಮಲೆಗೆ ಸೇರಿಸಿಕೊಳ್ಳುತ್ತಾನೆ. ತನಗೆ ಚಪ್ಪಲಿ ಹೊಲೆಯುವ 'ಮಾದರಿ' ಎಂದು ಅಪಮಾನಿಸಿದ ಶ್ರವಣದೊರೆಯನ್ನು ಕೊಂದು ಆತನ ಸೆರೆಯಲ್ಲಿದ್ದ ಎಲ್ಲ ದೇವಾನುದೇವತೆಗಳನ್ನು ಬಿಡುಗಡೆ ಮಾಡುತ್ತಾನೆ.

ಕಂಸಾಳೆಯವರು ಹಾಡುವ ಮಲೆಮಾದೇಶ್ವರ ಕಾವ್ಯವನ್ನು ಕೇಳಿದರೆ ಆತನಿಗೆ ಶೈವನಾಥಸಿದ್ಧರ ಪ್ರಭಾವ ಆಗಿದೆ ಎನ್ನುವುದು ತಿಳಿದುಬರುತ್ತದೆ. ಹುಲಿಯ ಮೇಲೆ ಸವಾರಿ ಮಾಡುವುದು, ಸರ್ಪಗಳನ್ನು ಕೈಯಲ್ಲಿಡುವುದು, ಸತ್ತ ಎಮ್ಮೆ ಬದುಕಿಸುವುದು, ಹಲವಾರು ಜನರ ರೋಗಗಳನ್ನು ವಾಸಿ ಮಾಡುವುದು ಇವೆಲ್ಲ ನಾಥ ಪರಂಪರೆಯ ಸಂತನ ಲಕ್ಷಣಗಳಾಗಿವೆ. ಮಧ್ಯಕಾಲೀನ ಸಂದರ್ಭದಲ್ಲಿ ನಾಥಸಿದ್ದರು ಕರ್ನಾಟಕದಾದ್ಯಂತ ಇದ್ದರು. ಈತನಲ್ಲಿರುವ ವೈದ್ಯಶಕ್ತಿಯನ್ನು ತೋರ್ಪಡಿಸುವ ಪವಾಡಗಳನ್ನು ಗಮನಿಸಿದರೆ ಈತ ರಸಸಿದ್ಧನೂ ಆಗಿದ್ದಾನೆ ಎನಿಸುತ್ತದೆ.

ಮಾದೇಶ್ವರ ಕಾವ್ಯದ ಆರಂಭದಲ್ಲಿ ಈ ಲೋಕ ಸೃಷ್ಟಿಯ ಕುರಿತು ವಿವರಿಸಿದರೆ ನಂತರದಲ್ಲಿ ಕಲ್ಯಾಣದಲ್ಲಿ ರಕ್ತ, ಕೀವು ಸುರಿವ ರೂಪದಲ್ಲಿ ಹೋಗಿ, ಅಲ್ಲಿನ ಜಂಗಮರ ಲಿಂಗ ಮಾಯ ಮಾಡುವ ಚಿತ್ರಣವಿದೆ. ಮಂಟೇಸ್ವಾಮಿ ಕಾವ್ಯದಲ್ಲಿಯೂ ಆರಂಭದಲ್ಲಿ ನೀಲಗಾರರು ಇಂತದೇ ಚಿತ್ರಣವನ್ನು ಕೊಡುತ್ತಾರೆ.

೧೨ನೇ ಶತಮಾನದ ಶರಣ ಚಳುವಳಿಯು ಭಕ್ತಿಯೆನ್ನುವುದನ್ನು ಸಾರ್ವತ್ರಿಕಗೊಳಿಸಿತು. ಎಲ್ಲ ವರ್ಗದವರಿಗೂ ಲಿಂಗದೀಕ್ಷೆ ನೀಡುವ ಮೂಲಕ ಭಕ್ತಿಯ ಖಾಸಗೀ ಒಡೆತನವನ್ನು ಒಡೆದು ಹಾಕಿತ್ತು. ಲಿಂಗದೀಕ್ಷೆಯ ಮೂಲಕ ವೀರಶೈವಕ್ಕೆ ಆಗಮಿಸಿದವರೆಲ್ಲ ಸಾತ್ವಿಕರಾಗಿರಲಿಲ್ಲ. ಅದರಲ್ಲಿಯೂ ಪೊಳ್ಳು ಜಂಗಮರಿದ್ದರು ಹಾಗೂ ೧೨ನೇ ಶತಮಾನದ ನಂತರದಲ್ಲಿ ವೀರಶೈವ ಧರ್ಮ ಸಾಂಸ್ಥಿಕ ರೂಪ ಪಡೆಯಲಾರಂಭಿಸಿತು. ನೂರೊಂದು ವಿರಕ್ತರ ಕಾಲದಲ್ಲಿ ವಚನಗಳನ್ನು ಒಂದು ಧಾರ್ಮಿಕ ಚೌಕಟ್ಟಿಗೆ ಒಳಪಡಿಸಲು ಟೀಕೆ ವ್ಯಾಖ್ಯಾನಗಳ ಮೂಲಕ, ಮೂಲ ಆಶಯಗಳನ್ನೇ ತಿರುಚಲಾಯಿತು. ಇದನ್ನು ಪ್ರತಿರೋಧಿಸಿದ ಜನಪದರು ಅಥವಾ ದುಡಿಯುವ ವರ್ಗದವರು, ಕಂಸಾಳೆ, ನೀಲಗಾರರ ಪಂಥಗಳು ಈ ಸಾಂಸ್ಥಿಕ ಪ್ರಕ್ರಿಯೆಯನ್ನು ಕಾವ್ಯಗಳನ್ನು ಕಟ್ಟುವ ಮೂಲಕ ತೀವ್ರ ವಿಮರ್ಶೆಗೊಳಪಡಿಸಿದರು. ಹಾಗಾಗಿ ಮಲೆಮಾದೇಶ್ವರನಂತವರು ಕಲ್ಯಾಣದಲ್ಲಿ ಹೋಗಿ ಪೊಳ್ಳು ಜಂಗಮರ ಲಿಂಗಗಳನ್ನು ಕಾಣದಂತೆ ಮಾಡುವ ಪವಾಡವನ್ನು ಮಾಡುತ್ತಾರೆ.

ಮಂಟೇಸ್ವಾಮಿ ಮತ್ತು ಮಲೆಮಾದೇಶ್ವರರಿಬ್ಬರೂ 'ಉತ್ತರದೇಸ'ದಿಂದ ಬಂದವರು ಎಂದು ವೃತ್ತಿಗಾಯಕರು ಹೇಳುತ್ತಾರೆ. ಮತ್ತು ಈ ಇಬ್ಬರು ನಾಯಕರೂ ಕಲ್ಯಾಣದೊಟ್ಟಿಗೆ ಸಂಬಂಧವನ್ನು ಏರ್ಪಡಿಸಿಕೊಳ್ಳುವಂತೆ ಗಾಯಕರು ಹಾಡುತ್ತಾರೆ. ಮಂಟೇಸ್ವಾಮಿ ಮತ್ತು ಮಾದೇಶ್ವರ ಕಲ್ಯಾಣಕ್ರಾಂತಿಯ ನಂತರದ ಘಟ್ಟದವರಾಗಿದ್ದಾರೆ. ಮಾದೇಶ್ವರ ಮತ್ತು ಮಂಟೇಸ್ವಾಮಿ ಕೆಳವರ್ಗಕ್ಕೆ ಸೇರಿದ್ದರು ಎಂಬುದರಲ್ಲಿ ಯಾವುದೇ ಅನುಮಾನವೂ ಇರುವಂತಿಲ್ಲ. ಈಗಲೂ ಅಸ್ತಿತ್ವದಲ್ಲಿರುವ ಈ ಪಂಥಗಳ ಗುಡ್ಡರ ಸಂಪ್ರದಾಯಗಳು ಹಾಗೂ ಅವರ ಆಚರಣೆಗಳು ಈ ವಾದಕ್ಕೆ ಪುಷ್ಟಿ ನೀಡುತ್ತವೆ. ಆದರೂ ಇವರುಗಳ ಹುಟ್ಟಿನ ಬಗ್ಗೆ ಅನೇಕ ವಾದವಿವಾದಗಳಿವೆ. ಮಾದೇಶ್ವರ ಮತ್ತು ಮಂಟೇಸ್ವಾಮಿ ಹುಟ್ಟಿನಿಂದ ಯಾವುದೇ ಜಾತಿಯವರಾಗಿರಲಿ, ಕೆಳವರ್ಗಗಳ ವೀರಪುರುಷರಾಗಿ ಆರಾಧಿಸಲ್ಪಟ್ಟಿದ್ದು ನಿಜ. ಈ ಅರಣ್ಯವಾಸಿ ಭೈರಾಗಿಗಳು ಕೇವಲ ಹೊಟ್ಟೆ ಹೊರೆಯುವ ಸನ್ಯಾಸಿಗಳಾಗಿರಲಿಲ್ಲ. ಪಟ್ಟಭದ್ರ ಸಂಸ್ಕೃತಿಗೆ ವಿರುದ್ಧವಾದ ಕೆಳವರ್ಗಗಳ ಅಸ್ತಿತ್ವವನ್ನು ಪುನರ್ ಸ್ಥಾಪಿಸುವ ಪ್ರತಿಸಂಸ್ಕೃತಿಯೊಂದರ ನಿರ್ಮಾಣ ಇವರ ಉದ್ದೇಶವಾಗಿದ್ದಂತೆ ತೋರುತ್ತದೆ(ಕೇಶವನ್‌ಪ್ರಸಾದ್ ಕೆ.(ಸಂ), ೧೯೯೭, ಪ್ರಸ್ತಾವನೆ, ಬೋರಲಿಂಗಯ್ಯ ಹಿ.ಚಿ., ಪು.xiv).

# ಅಧ್ಯಾಯ ೩

# ಸಂಕರಶೀಲ ಪಂಥವಾಗಿ ಪಂಚಗಣಾಧೀಶ್ವರರು

# ಸಂಕರಶೀಲ ಪಂಥವಾಗಿ ಪಂಚಗಣಾಧೀಶ್ವರರು

## ೩.೧. ಪ್ರವೇಶ

ಮಧ್ಯಕಾಲೀನ ಕರ್ನಾಟಕದ ಚರಿತ್ರೆಯ ಆರಂಭದಲ್ಲಿ ಸೇವುಣ, ಹೊಯ್ಸಳ, ಕಾಕತೀಯ ಮತ್ತು ಚೋಳರ ಮಧ್ಯ ನಿರಂತರವಾಗಿ ಅಧಿಕಾರ ಬಲಕ್ಕಾಗಿ ಕದನಗಳು ಸಂಭವಿಸುತ್ತಿದ್ದವು. ಇದನ್ನರಿತ ಉತ್ತರದ ಅಲ್ಲಾವುದ್ದೀನ್ ಖಿಲ್ಜಿ(೧೨೯೬), ಮಲ್ಲಿಕಾಫರ್(೧೩೦೯-೧೧) ಮತ್ತು ಮಹಮದಬಿನ್ ತುಘಲಕ್ ದಕ್ಷಿಣದ ಕಡೆ ದಂಡೆತ್ತಿ ಬಂದರು. ಈ ದಾಳಿಗಳು ನಡೆದಾಗಲೆಲ್ಲ ಉತ್ತರ ಭಾರತದಿಂದ ಮುಸ್ಲಿಂ ಸಮುದಾಯ ದಕ್ಷಿಣದ ಕಡೆ ಬಂದು ನೆಲೆಸತೊಡಗಿತು. '೧೩೧೬-೧೭ರಲ್ಲಿ ಮುಂಬಯಿಯ ಚಾಲ್ ಎಂಬಲ್ಲಿ ೧೦,೦೦೦ ಜನ ಅರೇಬಿಯಾ, ಇರಾಕ್ ಗಳಿಂದ ಬಂದವರು ಮೆಣಸು ಮಾರುತ್ತಿದ್ದರೆಂದು ಅರಬ್ಬಿ ಪ್ರವಾಸಿ ಮಸೂದ್ ಹೇಳಿದ್ದಾನೆ.'(ಅಮರೇಶ್ ನುಗುಡೋಣಿ, ೨೦೦೩, ಪು.೨೩), ಮಹಮದ್ ಬಿನ್ ತುಘಲಕ್ ರಾಜಧಾನಿಯನ್ನು ದೆಹಲಿಯಿಂದ ದೇವಗಿರಿಗೆ ವರ್ಗಾಯಿಸಿದಾಗ ದಕ್ಷಿಣದ ಕಡೆ ಬಂದು ನೆಲೆಸಿದ ಜನವರ್ಗಗಳಿಂದಲೇ ಬಹುಮನಿ ರಾಜ್ಯ ಸ್ಥಾಪಿಸಲು ಹಸನ್ ಗಂಗೂಗೆ ಸಾಧ್ಯವಾಗಿದ್ದು. ಈ ಬಹುಮನಿ ರಾಜ್ಯ ಉದಯವಾದ ನಂತರ ಉತ್ತರದಿಂದ ಅರಬರು, ಟರ್ಕರು, ಅಫಘನ್ನರು, ಪರ್ಷಿಯನ್ನರು ಇಲ್ಲಿ ಬಂದು ನೆಲೆಸಲಾರಂಭಿಸಿದರು. 'ಕ್ರಿ.ಶ. ೧೩೦೦ರಲ್ಲಿ ದೆಹಲಿಯ ಖ್ವಾಜಾ-ನಿಜಾಮುದ್ದೀನ್ ಔಲಿ ಆದೇಶದಂತೆ ೭೦೦ ಜನ ಸೂಫಿಗಳು ದಕ್ಷಿಣಕ್ಕೆ ಬಂದು ನೆಲೆಸಿದರು. ಎಂಬ ಪ್ರತೀತಿ ಇದೆ. ಬರ್ಹಾನುದ್ದೀನ್ ಉಘಾರಿಬನ ಮಟ್ಟದ ಹಿರಿಯ ಸೂಫಿಸಂತರು ದಕ್ಷಿಣದಲ್ಲಿ ಇಸ್ಲಾಂ ಹರಡುವ ಕಾರ್ಯವನ್ನು ಕೈಗೊಂಡರು'(ಬಿ.ಷೇಕ್ ಅಲಿ(ಸಂ.) ಸಂಪುಟ.೪, ೧೯೯೭, ಪು.೨೦) ಕರ್ನಾಟಕದ ಮಟ್ಟಿಗೆ ಇಸ್ಲಾಂ ಹಾಗೂ ಸೂಫಿಸಂ ಉತ್ತರದಿಂದ ರಾಜಕೀಯ ವಿಸ್ತರಣ ಚಟುವಟಿಕೆಗಳ ಮೂಲಕ ಬಂದವು. ತಾವು ಗೆದ್ದು ಪಡೆದುಕೊಂಡ ಹೊಸ ರಾಜ್ಯದಲ್ಲಿ ತಮ್ಮ ಆಡಳಿತಕ್ಕೆ ಅನುಕೂಲಕರವಾದ ಧಾರ್ಮಿಕ ವಾತಾವರಣ ನಿರ್ಮಿಸಲು ಮಿಶನರಿ ಸೂಫಿಗಳನ್ನು ಕರೆಸಿಕೊಳ್ಳಲಾಗುತ್ತಿತ್ತು. ಸೂಫಿಗಳಾದರೂ ಸ್ವಯಂ ಆಕರ್ಷಣೆಯಿಂದ ಇಂತಹ ಪ್ರಭುತ್ವವನ್ನು ಅರಸಿಕೊಂಡು ಬರುತ್ತಿದ್ದರು. ಚಿಸ್ತಿಪಂಥಕ್ಕೆ ಸೇರಿದ್ದ ಖ್ವಾಜಾ ಬಂದೇನವಾಜ್ ಸೂಫಿಸಂತ ಗುಲ್ಬರ್ಗಾಕ್ಕೆ ಬಂದು ನೆಲೆಸಿದ. ಅಜ್ಮೀರಿನ ಮೋಯಿನುದ್ದೀನ್ ಚಿಸ್ತಿಯ ಸಂಗಾತಿಯಾಗಿದ್ದ ಹಾಜಿರೂಮಿ ಬಾಬ, ಪೀರ್ ಮಲಬಾರಿ, ಪೀರ್ ಜಮ್ಮ ಸೈಯದ್, ಅಲಿ ಶಾಹೀದ್, ಪೀರ್ ಮಿತಾ ಹಿ, ತಾಜುದ್ದೀನ್ ಮುನಾವರ್ ಮುಂತಾದವರು ಬಿಜಾಪುರಕ್ಕೆ ಬಂದು ನೆಲೆಸಿದರು. ತಮ್ಮ ಆಡಳಿತಕ್ಕಾಗಿ ಅಧಿಕಾರಗಳನ್ನು ಸೇನಾಪತಿಗಳನ್ನು ಪರ್ಷಿಯಾದಿಂದ ಕರೆಯಿಸಿಕೊಳ್ಳುವ ನೀತಿ ಅನುಸರಿಸುತ್ತಿದ್ದ ಬಹುಮನಿಗಳು, ಸೂಫಿಗಳನ್ನೂ ಕರೆಸಿಕೊಳ್ಳುತ್ತಿದ್ದರು.

'ಅಹಮದ್-ಶಾ-ಬಹುಮನಿ'ಯು ಪರ್ಶಿಯಾದಿಂದ ನಿಯಾಮತ್ ಉಲ್ಲಾ ಖಾದ್ರಿಯನ್ನು ಕರೆಸಿಕೊಳ್ಳಲು ಮೂರು ಸಲ ನಿಯೋಗಗಳನ್ನು ಕಳಿಸುತ್ತಾನೆ. ಗೋಗಿಯ ಮಹಮದ್ ಬಪ್ರಿ, ಸಗರದ ಶೇಕ್ ಐನುದ್ದೀನ್ ಮುಂತಾದವರು ಕೂಡ ಬಹುಮನಿ ರಾಜ್ಯ ಸ್ಥಾಪನೆಯಾದ ನಂತರ ಬೇರೆ ಬೇರೆ ಕಡೆಯಿಂದ ಬಂದವರು'(ರಹಮತ್ ತರೀಕೆರೆ-೨೦೦೧, ಪು-೩೯) ಬಹುಮನಿ ಸುಲ್ತಾನ್ ಫಿರೋಜ್ ಷಾನಂತೂ ಹಿಂದೂಗಳೊಂದಿಗೆ ಸಾಂಸ್ಕೃತಿಕ ಸಾಮರಸ್ಯವನ್ನು ತರುವ ಪ್ರಯತ್ನ ಮಾಡಿದನು. 'ತಾನೇ ವಿಜಯನಗರದ ಅರಸ ದೇವರಾಯನ ಮಗಳನ್ನು ಮದುವೆಯಾದನು. ಫಿರೋಜ್‌ನ ಕಾಲದಿಂದ ಮುಸ್ಲಿಂ ಹಬ್ಬಗಳನ್ನು ಹಿಂದೂ ಪಂಚಾಗದ ರೀತಿಯಲ್ಲಿ ಆಚರಿಸತೊಡಗಿದರು. ಮುಸ್ಲಿಂ ಉತ್ಸವಗಳಲ್ಲಿ ವೀರಶೈವ ಪಂಥದ ಮುಖಂಡನು ಪ್ರಧಾನವಾಗಿ ಭಾಗವಹಿಸುತ್ತಿದ್ದನು.'(ಬಿ.ಷೇಕ್ ಅಲಿ(ಸಂ.) ಸಂಪುಟ.೪, ೧೯೯೭, ಪು.೫) ಲೆಕ್ಕಪತ್ರ ವಿಭಾಗ ಮತ್ತು ಕಂದಾಯ ವಿಭಾಗಗಳಿಗೆ ಹಿಂದೂಗಳನ್ನೇ ನೇಮಿಸಲಾಗುತ್ತಿತ್ತು. ಆದಿಲ್ ಶಾಹಿಗಳ ಕಾಲದಲ್ಲಿ ಇಲಾಖೆಗಳಲೆಲ್ಲಾ ಹಿಂದೂಗಳೇ ಉನ್ನತ ಸ್ಥಾನಗಳನ್ನು ಹೊಂದಿದ್ದರು. '೭ನೇ ಇಬ್ರಾಹಿಂ ಸಂಗೀತದಲ್ಲಿ ಪರಿಣಿತ, ಹಿಂದೂ ದೇವತಾಶಾಸ್ತ್ರವನ್ನು ಚೆನ್ನಾಗಿ ತಿಳಿದುಕೊಂಡಿದ್ದನು. ವಿಶೇಷವಾಗಿ ಗಣಪತಿ ಮತ್ತು ಸರಸ್ವತಿಯರ ಬಗೆಗೆ ತಿಳಿದುಕೊಂಡಿದ್ದನು. ಹಿಂದೂಗಳಲ್ಲಿ ಅವನು ಎಷ್ಟು ಜನಪ್ರೀಯವಾಗಿದ್ದನೆಂದರೆ 'ಜಗತ್ ಗುರು' ಎಂಬ ಬಿರುದು ಅವನಿಗೆ ದೊರಕಿತು. ನವರಸ ಎಂಬ ಸಂಸ್ಕೃತ ಬಿರುದನ್ನು ಅವನು ಧರಿಸಿದ್ದನು. ಹೀಗೆ ಸರ್ಕಾರದ ಮೇಲೆ ಗಣನೀಯವಾಗಿ ಹಿಂದೂ ಪ್ರಭಾವವಿದ್ದಿತು. ಬಿಜಾಪುರದ ಕಟ್ಟಡಗಳು ಬೇರೆ ದಖ್ಖನ್ ಮುಸ್ಲಿಂ ಶೈಲಿಗಳಲೆಲ್ಲಾ ಅಧಿಕ ಪ್ರಮಾಣದಲ್ಲಿ ಹಿಂದೂ ಆದವು.'(ಬಿ. ಷೇಕ್‌ಅಲಿ(ಸಂ), ಸಂಪುಟ.೫, ೧೯೯೭, ಪು.೭)

ವಿಜಯನಗರ ಸಾಮ್ರಾಜ್ಯವೂ ಕೂಡ ಇಸ್ಲಾಂ-ಸೂಫಿಸಂ ಈ ಭಾಗದ ಜನರಲ್ಲಿ ಬೆರೆತು ಸಂಕರ ಸಂಸ್ಕೃತಿ ಬೆಳೆಯಲು ಕಾರಣವಾಗಿದೆ. ಸಂಗಮ ವಂಶದ ಕಾಲದಿಂದ ಅರವೀಡು ವಂಶದ ಕಾಲದವರೆಗೂ ವಿವಿಧ ಮತ-ಧರ್ಮ-ಪಂಥಗಳು ಸೌಹಾರ್ದಯುತವಾಗಿ ಬಾಳ್ವೆ ಮಾಡಲು ವಾತಾವರಣವನ್ನು ಅರಸರು ಕಲ್ಪಿಸಿಕೊಟ್ಟಿದ್ದರು. ವಿಜಯನಗರದ ಅರಸರು ಮುಸ್ಲಿಂರಿಗೆ ಜಹಗೀರುಗಳನ್ನು ನೀಡಿದ ಉದಾಹರಣೆಗಳಿವೆ. ಅಲ್ಲದೆ ಮಸೀದಿ ದರ್ಗಾಗಳನ್ನು ಕಟ್ಟಿಸಿರುವುದು ತಿಳಿದುಬರುತ್ತದೆ. ಇದಕ್ಕೆ ಸಂಗಮರ ಕಾಲದಲ್ಲಿ ಒಬ್ಬ ಮುಸ್ಲಿಂ ಫಕ್ಕೀರನಿಗಾಗಿ ಕಟ್ಟಿಸಲಾದ ಪೆನುಗೊಂಡಾದ ಬಾಬಯ್ಯನ ದರ್ಗಾವು ಒಳ್ಳೆಯ ಉದಾಹರಣೆ' ಇಸ್ಲಾಂ ಧರ್ಮಕ್ಕೆ ಮನ್ನಣೆ ನೀಡಿದ್ದ '೨ನೇ ದೇವರಾಯನು ತನ್ನ ಆಸನದ ಬಳಿಯೇ ಅವರ ಪವಿತ್ರ ಗ್ರಂಥವಾದ ಕುರಾನ್‌ನನ್ನು ಇರಿಸಿದ್ದನು(ಬಿ.ಷೇಕ್ ಅಲಿ(ಸಂ.) ಸಂಪುಟ.೪, ೧೯೯೭, ಪು.೩೫೨).

ಹಿಂದೂಗಳ ಜೀವನದ ಮುಖ್ಯ ಧಾರೆಯೊಳಗೆ ಇಸ್ಲಾಂಮಿಯರು ಕೂಡಿಕೊಳ್ಳುತ್ತಿದ್ದುದರಿಂದ ಅವರು ವಿಜಯನಗರದಲ್ಲಿ ಬಂದು ನೆಲೆಸುವುದರ ಬಗೆಗೆ ಪ್ರತಿಬಂಧಕಗಳಿರಲಿಲ್ಲ. ಹಾಗಾಗಿ ವಿಜಯನಗರ ಸಾಮ್ರಾಜ್ಯದಲ್ಲಿನ ಮುಸ್ಲಿಂರು ಅನೇಕ ಹಿಂದೂ ಲಕ್ಷಣಗಳನ್ನು ಸಾಮಾಜಿಕ ರೂಢಿಗಳನ್ನು ತಮ್ಮಲ್ಲಿ

ಅಳವಡಿಸಿಕೊಂಡರು. ಹಿಂದೂ ಧರ್ಮದ ಭಕ್ತಿ ಪಂಥದ ಲಕ್ಷಣಗಳು ಇಸ್ಲಾಂ ಧರ್ಮಕ್ಕೆ ಬಂದವು. ಇಸ್ಲಾಮಿಕ್ ಜೀವನ ಮತ್ತು ಚಿಂತನ ವಿಧಾನಗಳಿಂದ ಹಿಂದೂಗಳು ಪ್ರಭಾವಿತರಾದರು.

ಬಹುಮನಿ ಮತ್ತು ವಿಜಯನಗರ ಸಾಮ್ರಾಜ್ಯಗಳ ಆಳುವ ವರ್ಗಗಳ ನಡುವೆ ಇದ್ದ ಹಿಂದೂ-ಮುಸ್ಲಿಂ ಎಂಬ ಧಾರ್ಮಿಕ ಭಿನ್ನತೆಗಳೇನಿದ್ದರೂ ಹೊರ ಆವರಣದ ಬಣ್ಣವಾಗಿದ್ದು, ಜನ ಸಮುದಾಯಗಳು ತಮ್ಮ ನಿತ್ಯ ಬದುಕಿನಲ್ಲಿ ಎರಡೂ ಧರ್ಮಗಳನ್ನು ಒಂದುಗೂಡಿಸುವ ಸಂಕರಸಂಸ್ಕೃತಿಗೆ ಕಾರಣವಾಗಿದ್ದರು. 'ದೇವರಾಯನ ಉದಾರಗುಣಕ್ಕೆ ಅಹಮದ್ ಖಾನ್ ಎಂಬ ಮುಸ್ಲಿಂ ಅಧಿಕಾರಿಯು ರಾಜಧಾನಿಯಲ್ಲಿ ಮಸೀದಿಯೊಂದನ್ನು ಕಟ್ಟಿಸಿ ಅರಸನಿಗೆ ಒಳಿತನ್ನು ಬಯಸಿದ್ದನ್ನು ಗಮನಿಸಬಹುದು.(ಅದೇ, ಪು.೩೫೨) ವಿಜಯನಗರದ ಆಡಳಿತದಲ್ಲಿ ಹಿಂದೂ-ಮುಸ್ಲಿಂ(ಇಂಡೋ-ಸಾರ್‌ಸೆನಿಕ್) ವಾಸ್ತುಶಿಲ್ಪದ ಅನೇಕ ಕಟ್ಟಡಗಳು ನಿರ್ಮಾಣವಾಗಿರುವುದನ್ನು ನೋಡಬಹುದು.

ಹಾಗೆ ನೋಡಿದರೆ ಇಸ್ಲಾಂ ಧರ್ಮ ಮೊಟ್ಟಮೊದಲಿಗೆ ಕರ್ನಾಟಕಕ್ಕೆ ಪ್ರವೇಶಿಸಿದ್ದು ಕಡಲದಾರಿಯಲ್ಲಿ ಅರಬ್ ವ್ಯಾಪಾರಿಗಳ ಮೂಲಕ ಮೂಲತಃ ವ್ಯಾಪಾರಿ ಸಮುದಾಯದ ಅರಬರು ಕಡಲ ಮೂಲಕ ಹೋದ ಕಡೆಯೆಲೆಲ್ಲ ತಮ್ಮ ಧರ್ಮ ಇಸ್ಲಾಂನ್ನು ಒಯ್ದರು. ಕರ್ನಾಟಕ-ಕೇರಳದ ಮಲಬಾರ್ ದೊರೆಗಳ ಮತ್ತು ಅರಬ್ ವ್ಯಾಪಾರಿ ಸಂಬಂಧಗಳು ಆರ್ಥಿಕವಾಗಿ ತುಂಬಾ ಬಲಿಷ್ಠವಾಗಿತ್ತು. ಎಂತಲೇ ಕರ್ನಾಟಕದ ಬಾರಕೂರು, ಮಂಗಳೂರುಗಳಲ್ಲಿ ಲನೇ ಶತಮಾನಕ್ಕಾಗಲೇ ಮಸೀದಿಗಳನ್ನು ಕಟ್ಟಲಾಗಿತ್ತು. 'ಕ್ರಿ.ಶ. ೮೧೫ರಲ್ಲಿ ಕೊಡಂಗಲ್ಲಿನ ದೊರೆ ಇಸ್ಲಾಂನ್ನು ಸ್ವೀಕಾರ ಮಾಡಿದನು. ಇವನು ಮದೀನಕ್ಕೆ ಹೋಗಿ ಕಾಸರಗೋಡಿಗೆ ಮಾಲಿಕ್ ಬಿನ್-ದಿನಾರನನ್ನು ಕಳುಹಿಸಿದನು. ಮಾಲೀಕ್ ಬೀನ್-ದಿನಾರ್ ಮತ್ತು ಅವನ ಅನುಯಾಯಿಗಳು ಕಾರಾವಳಿಯುದ್ದಕ್ಕೂ ಮತ ಪ್ರಸಾರ ಮಾಡಿದರು.'(ರಹಮತ್ ತರೀಕೆರೆ, ೨೦೦೧, ಪು.೩೭) ಕಡಲ ಮೂಲಕ ಕುದುರಿದ ರಾಜಕೀಯ-ಆರ್ಥಿಕ ಸಂಬಂಧಗಳು ವಿಜಯನಗರದ ಕಾಲದಲ್ಲಿ ಉತ್ತುಂಗ ಸ್ಥಿತಿಯನ್ನು ಮುಟ್ಟಿದವು. ಕರಾವಳಿ ಪ್ರದೇಶಗಳಾದ ಕಾರವಾರ, ಅಂಕೋಲ, ಹೊನ್ನಾವರ, ಭಟ್ಕಳ, ಬಾರಕೂರು, ಮಂಗಳೂರು, ಮಂಜೇಶ್ವರ, ನೀಲೇಶ್ವರಗಳ ಮೂಲಕ ವ್ಯಾಪಾರ ವಹಿವಾಟನ್ನು ಹೊಂದಿದ ಅರಬ್ ಪರ್ಶಿಯಾ ದೇಶಗಳ ವರ್ತಕರು ಇಲ್ಲಿಯೇ ಉಳಿದು ಇಲ್ಲಿನ ಜನರಲ್ಲಿ ಬೆರೆತರು. ಮತಪ್ರಸಾರದ ಮೂಲಕ ಜನರ ಮೇಲೆ ಪ್ರಭಾವ ಬೀರಿದರು. ಈ ಕುರಿತು ರಹಮತ್ ತರೀಕೆರೆಯವರು 'ಅವರ(ಕರಾವಳಿ ಪ್ರದೇಶ) ಜಾನಪದದಲ್ಲಿ, ಉದಾ-ಪಾಟ್ಟು ಸಂಪ್ರದಾಯದಲ್ಲಿ ಇರುವುದು ಅರಬ್ ಚರಿತ್ರೆ ಪುರಾಣಗಳೆ, ಪಶ್ಚಿಮ ಕರಾವಳಿಯ ಈ ಮುಸ್ಲಿಂರನ್ನು 'ಮಾಪಿಳ್ಳೆ'ಗಳು(ತಾಯಿಯ ಮಕ್ಕಳು), ನವಾಯಿತರು(ನಾವಿಕರು), ಬ್ಯಾರಿಗಳು(ವ್ಯಾಪಾರಿಗಳು) ಎಂದು ಕರೆಯುತ್ತಾರೆ.' (ರಹಮತ್ ತರೀಕೆರೆ, ೨೦೦೧, ಪು.೩೬-೩೭) ಎಂದಿದ್ದಾರೆ. ಹೀಗೆ ಕಡಲ ಮೂಲಕವೋ, ಕಾಲ್ನಡಿಗೆ ಮೂಲಕವೋ ಬಂದ ಇಸ್ಲಾಂ ಮತ್ತು ಸೂಫಿಸಂ ಇಲ್ಲಿನ ರಾಜಾಶ್ರಯದ ನೆರವಿನಿಂದ ಸ್ಥಳೀಯ ಜನಸಮುದಾಯವನ್ನು

ಮತಾಂತರಿಸುವುದರ ಮೂಲಕ ಇಲ್ಲಿ ನೆಲೆಯೂರಿದತು. ಹೀಗೆ ಮತಾಂತರಗೊಳ್ಳಲು ಪ್ರಯತ್ನಿಸಿದವರಲ್ಲಿ ಕೆಳವರ್ಗದವರು ಹೆಚ್ಚಾಗಿದ್ದಾರೆ. ಸ್ಥಳೀಯ ಕೆಳವರ್ಗದವರು ಹಿಂದೂ ಧರ್ಮದ ಉನ್ನತ ವರ್ಗದವರ ಶೋಷಣೆ, ಜಾತಿಪದ್ಧತಿಯಿಂದ ಬೇಸತ್ತು ಬಿಡುಗಡೆ ಹೊಂದಲು ಹವಣಿಸುತ್ತಿದ್ದರು. ಇವರ ಹಂಬಲಗಳು ಮತ ಪ್ರಚಾರಕರಿಗೆ ಪ್ರೇರಣೆ ನೀಡಿದವು. 'ಒಬ್ಬ ವ್ಯಕ್ತಿಯು ಇಸ್ಲಾಂ ಧರ್ಮದ ತೆಕ್ಕೆಗೆ ಬಂದನೆಂದರೆ ಅವನಿಗೆ ಉತ್ತಮ ಉದ್ಯೋಗ ಅವಕಾವಶ ದೊರಕುತ್ತಿತ್ತು. ಅವನ ಸಾಮಾಜಿಕ ಸ್ಥಾನಮಾನ ಮೇಲೇರುತ್ತಿದ್ದುದು ಮಾತ್ರವಲ್ಲದೆ ಸರಕಾರಿ ಉದ್ಯೋಗದಿಂದಲೋ ಇಲ್ಲವೆ, ಯಾವುದಾದರು ಕಲೆಯನ್ನೋ, ಕಸುಬವನ್ನೋ ಕಲಿಯುವ ಮೂಲಕವಾಗಿಯೇ ಅವನ ಆರ್ಥಿಕ ಸ್ಥಿತಿ ಉತ್ತಮವಾಗುತ್ತಿತ್ತು. ಈ ಮೊದಲು ಅವನು ಕೇವಲ ಒಬ್ಬ ಜೀತದಾಳು ಆಗಿರುತ್ತಿದ್ದನು.(ಬಿ. ಷೇಕ್ ಅಲಿ III(ಪ್ರ.ಸಂ) ೧೯೯೭, ಪು.೨೨೪-೨೨೫) ಈ ಅಭಿಪ್ರಾಯವನ್ನು ಗಮನಿಸಿದರೆ, ಕೆಳವರ್ಗಗಳು ಇಸ್ಲಾಂ ಧರ್ಮಕ್ಕೆ ಸೇರುವುದರಿಂದ ಈ ಕಾಲಾವಧಿಯಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ, ಉತ್ತಮಬಾಳು ನಡೆಸಲು ಅವಕಾಶಗಳನ್ನು ಪಡೆಯುತ್ತಿದ್ದರು ಎನ್ನಿಸುತ್ತದೆ. 'ಕೆಲವು ಸೇವಾಜಾತಿಗಳು ಇಸ್ಲಾಂ ಧರ್ಮಕ್ಕೆ ಪರಿವರ್ತನೆಗೊಂಡಿದ್ದನ್ನು ಸೂಚಿಸುತ್ತವೆ. ಅವರಲ್ಲಿ ಪದ್ಮಶಾಲಿ ನೇಕಾರರು ಸೇರಿದ್ದರು. ಇದೊಂದು ಬಹುಮುಖ್ಯ ನೇಕಾರ ಜಾತಿಯಾಗಿದ್ದು, ನಂತರದಲ್ಲಿ ಬೋಮಿಯನ್ಸ್ ಹಾಗೂ ಪಟ್ವೇಗಾರರೆಂದು ಕರೆಯಲ್ಪಡುವ ರೇಷ್ಮೇ ನೇಕಾರರಾಗಿದ್ದರು.'(ಬಂಜಗೆರೆ ಜಯಪ್ರಕಾಶ್, ೨೦೦೦, ಪು.೧೬೧) ಹೀಗೆ ಪರಿವರ್ತನೆ ಹೊಂದಿದ ಜನಸಮುದಾಯಗಳಿಂದ ಈ ಪ್ರಾಂತ್ಯದಲ್ಲಿ ಸಂಸ್ಕೃತಿ ನಿರ್ಮಾಣವಾಯಿತು. ಮತಾಂತರಗೊಂಡವರು ಇಸ್ಲಾಂನ್ನು ಸೇರಿಕೊಂಡರೂ ತಮ್ಮ ಮೂಲ ಜಾತಿ-ನಂಬಿಕೆ-ಆಚರಣೆಗಳನ್ನು ಪೂರ್ತಿ ಕೈಬಿಡದೆ, ಎರಡನ್ನೂ ಒಂದು ಮಾಡಿಕೊಂಡು ಬದುಕುವ ಕಲೆ ರೂಢಿಸಿಕೊಂಡರು. ಜನಸಮುದಾಯದಲ್ಲಾದ ಈ ಪ್ರಕ್ರಿಯೆಯನ್ನು ಕಪಟರಾಳ ಕೃಷ್ಣರಾವ್ 'ಮುಸಲ್ಮಾನ್ ಪಕೀರರು ಗುರುಗಳಾದರು, ವೇದವು ಕುರಾನು ಒಂದಾಯಿತು. ಈ ಪಕೀರರ ಗೋರಿಗಳೇ ದೇವಸ್ಥಾನಗಳಾದವು. ಕನ್ನಡಿಗರಿಗೆ ಗೋರಿಗಳು ಕುಲದೇವತೆಗಳಾದವು'(ಕಪಟರಾಳ ಕೃಷ್ಣರಾವ್, ೧೯೭೦, ಪು.೨೬) ಎಂದಿದ್ದಾರೆ.

ಅನ್ಯ ಸಂಸ್ಕೃತಿ-ಭಾಷೆಯ ಜನ ಕರ್ನಾಟಕದಲ್ಲಿ ಬಂದು ನೆಲೆಸುವಾಗ ಸ್ಥಳೀಯ ಸಂಸ್ಕೃತಿ-ಭಾಷೆಯ ಜೊತೆ ಹೊಂದಾಣಿಕೆ ಮಾಡಿಕೊಳ್ಳಬೇಕಾಯಿತು. ಇದರಿಂದಾಗಿ ಹೊಸಭಾಷೆಯೇ ಹುಟ್ಟಿಕೊಂಡಿತು. 'ಸುಮಾರು ೨೦೦ ವರ್ಷಗಳ ಹೊತ್ತಿಗೆ ಈ ಭಿನ್ನ ಭಾಷಿಗರು ಈ ಪ್ರಾಂತ್ಯದಲ್ಲಿದ್ದು, ಒಡನಾಡಿದ ಫಲವಾಗಿ 'ದಖಿನಿ' ಎಂಬ ಭಾಷೆಯನ್ನು ಸೃಷ್ಟಿಸಿಕೊಂಡರು. ಈ 'ದಖಿನಿ' ಮಿಶ್ರ ಭಾಷೆಗಳಿಂದ ರೂಪಗೊಂಡರೂ ಇದು ಸಂವಹನದ ತೊಡಕನ್ನು ನಿವಾರಿಸಿತು.'(ಅಮರೇಶ್ ನುಗುಡೋಣಿ, ೨೦೦೩, ಪು.೨೬) ದಖಿನಿ ಭಾಷೆಯನ್ನು ಬೀದಿ ಭಾಷೆಯೆಂದು, ಒರಟು ಭಾಷೆಯೆಂದು ಮೊದಲಿಗೆ ಸುಶಿಕ್ಷಿತರು ಜರಿದರೂ ಸಹ ಅದು ಜನಸಮೂಹದಲ್ಲಿ ಬಲವಾಗಿ ಬೇರೂರಿತು. ೨ನೇ ಇಬ್ರಾಹಿಂ ಶಾ ಈ ಭಾಷೆಗೆ

ರಾಜಮನ್ನಣೆ ನೀಡಿದನು. ಎನೇ ಇಬ್ರಾಹಿಂ 'ಕಿತಾಬೆ-ಸೌರಸ್' ಎಂಬ ಸಂಗೀತಕ್ಕೆ ಸಂಬಂಧಿಸಿದ ಗ್ರಂಥವನ್ನು ಈ ಭಾಷೆಯಲ್ಲಿ ಬರೆದನು. ಗುಲ್ಬರ್ಗಾದ ಖಾಜಾ ಬಂದೇನವಾಜ್ ಈ ಭಾಷೆಯಲ್ಲಿಯೇ ತನ್ನ ಅನುಭಾವ ಪದಗಳನ್ನು ರಚಿಸಿದ. ಸಂತರು ಕವಿಗಳು 'ದಖನಿ ಭಾಷೆಯಲ್ಲಿ ಚಕ್ಕಿನಾಮ, ಚಕ್ರನಾಮ, ಲೋರಿನಾಮ ಮತ್ತು ಸುಹಾಗನ್ ನಾಮ ಎಂಬ ಪ್ರಕಾರಗಳಲ್ಲಿ ಹಾಡುಗಳನ್ನು ರಚಿಸಿದರು. ಅವು ಕನ್ನಡದಲ್ಲಿ ಜೋಗುಳ ಹಾಡು, ಬೀಸೋಕಲ್ಲಿನ ಪದ, ಸೋಬಾನೆ ಪದ ಮುಂತಾದವುಗಳಿಗೆ ಸಂವಾದಿಯಾಗಿವೆ. ಈ ಹಾಡುಗಳನ್ನು ಆಗಿನ ಜನಸಮುದಾಯಗಳು ಅದರಲ್ಲೂ ಮುಖ್ಯವಾಗಿ ಹೆಣ್ಣುಮಕ್ಕಳು ಬಹುವಾಗಿ ಹಾಡುತ್ತಿದ್ದರು.(ಬಂಜಗೆರೆ ಜಯಪ್ರಕಾಶ್, ೨೦೦೦, ಪು.೧೬೧)

ಹೀಗೆ ಜನಸಮುದಾಯದ ಆಚರಣೆ-ಉತ್ಸವಗಳನ್ನು ಕಲೆ-ವಾಸ್ತುಶಿಲ್ಪದಲ್ಲಿ, ಸಾಹಿತ್ಯದಲ್ಲಿ ಸಂಕರದ ಪ್ರಕ್ರಿಯೆ ಯಾವುದೋ ಕಾರಣಗಳಿಂದ ಶುರುವಾಗಿರಬಹುದು. ಆದರೆ ಇದನ್ನು ವಾಸ್ತವದ ಬದುಕಿನಲ್ಲಿ ನಿಜವಾಗಿ ಸಾಧ್ಯವಾಗಿಸುವುದು ಜನಸಮುದಾಯಗಳೆ. ಹಲವು ಧರ್ಮ-ಪಂಥ ಜಾತಿಗಳು ಒಟ್ಟಿಗೆ ಬದುಕುವಾಗ ಅಥವಾ ಸಮಾನ ಕಾರಣಕ್ಕಾಗಿ ಒಗ್ಗೂಡಿದಾಗ ಅವುಗಳಲ್ಲಿ ಬೆರಕೆ ಸಂಭವಿಸುವುದು ಸಹಜ. ಅದರಲ್ಲೂ ಮತಾಂತರ ಅಥವಾ ದೀಕ್ಷೆಗೆ ಅವಕಾಶ ಕಲ್ಪಿಸುವ ಎಲ್ಲ ಮತ-ಪಂಥಗಳಿಗೂ ಸಂಕರಶೀಲ ಸ್ವಭಾವ ಇದ್ದೇ ಇರುತ್ತದೆ. ಇಸ್ಲಾಂ ಸ್ವೀಕರಿಸಿದ ಬಳಿಕ ಅದೆಷ್ಟೋ ಹಿಂದೂ ಧರ್ಮದ ಜನರು ಮೂಲ ಧಾರ್ಮಿಕ ನೆನಪನ್ನು ಕಳಚಿಕೊಳ್ಳದೆ ಹಾಗೆ ಉಳಿಸಿಕೊಂಡಿದ್ದಾರೆ. ಹುಸೇನಿ ಬ್ರಾಹ್ಮಣರು, ಜುಗಿಮಹಮ್ಮದರು, ಜಜ್ಜು ಪಂಥೀಯರು, ಕಬೀರ ಪಂಥಿಗಳು, ಕರ್ನಾಟಕದ ಪಿಂಜಾರರು, ಜಾತಿಗೇರರು ಇದಕ್ಕೆ ಒಳ್ಳೆಯ ನಿದರ್ಶನ.

ಸಂಕರಶೀಲತೆ ಹಲವು ಧರ್ಮ ಅಥವಾ ಸಂಸ್ಕೃತಿಗಳ ನಡುವೆ ನಡೆಯುವ ಪ್ರಕ್ರಿಯೆ ಮಾತ್ರವಲ್ಲ. ಹಲವಾರು ಪಂಥ-ಪಂಗಡ, ಜಾತಿ-ಉಪಜಾತಿ ತುಂಬಿರುವ ಒಂದು ಧರ್ಮದಲ್ಲಿ ಪಂಗಡ-ಪಂಗಡಗಳ ನಡುವೆ, ಜಾತಿ-ಜಾತಿಗಳ ನಡುವೆ ನಡೆಯುವ ಕೊಡುಕೊಳ್ಳುವಿಕೆಯಿಂದಲೂ ಸಂಭವಿಸುತ್ತಿರುತ್ತದೆ. ಕರ್ನಾಟಕದಲ್ಲಿನ ಅದೆಷ್ಟೋ ಜಾತಿಗಳು ಮೇಲು ಜಾತಿಗಳನ್ನು ಅನುಕರಿಸುತ್ತಿವೆ. ಉದಾಹರಣೆಗಾಗಿ 'ಮಲೆನಾಡಿನ ಒಕ್ಕಲಿಗ ಸಮುದಾಯವು ಬ್ರಾಹ್ಮಣರ ರೀತಿ ರಿವಾಜುಗಳನ್ನು ಅನುಕರಿಸುತ್ತಾ ಸಂಸ್ಕೃತೀಕರಣಗೊಂಡಿದೆ. ವೈಧಿಕ ಎನ್ನುವಂತಹ ಸಂಸ್ಕೃತಿ ಕೂಡ, ಅವೈಧಿಕ ಧಾರೆಗಳ ಅನೇಕ ಸಂಗತಿಗಳನ್ನು ತನ್ನೊಳಗೆ ತಂದುಕೊಂಡಿದೆ. ಅನೇಕ ಬುಡಕಟ್ಟುಗಳು ಕೂಡ ಯಜಮಾನ ಸ್ಥಾನದಲ್ಲಿರುವ ಪ್ರತಿಷ್ಠಿತ ಧರ್ಮಗಳ ಪ್ರಭಾವಕ್ಕೆ ಒಳಗಾಗಲು ಹಾತೊರೆಯುತ್ತವೆ. ಹೀಗೆ ಸಂಕರಶೀಲತೆಯು ಒಂದೇ ಧರ್ಮ ಅಥವಾ ಸಾಮಾಜಿಕ ಗುಂಪಿನ ಒಳಗಡೆ ಸಂಭವಿಸುತ್ತಿರುತ್ತದೆ.(ರಹಮತ್ ತರೀಕೆರೆ(ಸಂ), ೨೦೦೦, ಪು.೩೫೦)

ಸಂಕರಶೀಲತೆಯ ಹಿಂದೆ ಶತಮಾನಗಳ ಕಾಲದ ರಾಜಕೀಯ ಆರ್ಥಿಕ ಒತ್ತಡಗಳು ಕೆಲಸ ಮಾಡುತ್ತಿರುತ್ತವೆ. ೧೨ನೇ ಶತಮಾನದಲ್ಲಿ ರಾಜಕೀಯ-ಆರ್ಥಿಕವಾಗಿ ಹುಟ್ಟಿಕೊಂಡ ಹೊಸ ಪರಿಸ್ಥಿತಿ ವೀರಶೈವ ಮತ ಹುಟ್ಟಲು ಕಾರಣವಾಯಿತು. ಈ ಮತದ ಒಳಗಡೆ ಬಂದ ಅದೆಷ್ಟೋ ಜಾತಿಗಳು ತಮ್ಮ ಮೂಲ ಆಚರಣೆ, ಆಹಾರ ಪದ್ಧತಿಗಳನ್ನು ಹಾಗೆಯೇ ಮುಂದುವರೆಸಿಕೊಂಡು ಬಂದವು. 'ಎಂತಲೇ ವಚನಕಾರರಲ್ಲಿ ಕ್ಷುದ್ರ ದೇವತೆಗಳನ್ನು ನಿರಾಕರಿಸುವ ಬಸವಣ್ಣನ ಭಕ್ತಿ, 'ಭಕ್ತಿಯನ್ನು ತೋರುಂಬ ಲಾಭ' ಎಂದು ಜರೆಯುವ ಅಲ್ಲಮನ ಅನುಭಾವ ಎರಡೂ ಇದ್ದವು. ಕ್ಷುದ್ರ ದೇವತೆಗಳನ್ನು ತಲೆಯ ಮೇಲಿಂದ ಇಳಿಸದ ಡಕ್ಕೆಯ ಮಾರಯ್ಯ, ಗುಪ್ತಭಕ್ತಿಯನ್ನು ಮಾಡುವ ಮಂಚಣ್ಣ, ವೈಷ್ಣವ ಹಿನ್ನೆಲೆಯನ್ನು ತ್ಯಜಿಸದ ಏಕಾಂತದ ರಾಮಯ್ಯ ಎಲ್ಲ ಇದ್ದರು. 'ಗಂಡ ಶಿವಭಕ್ತ, ಹೆಂಡತಿ ಮಾರಿಮಸಣಿಯ ಭಕ್ತೆ' ಎಂದು ಬಸವಣ್ಣ ವಿಷಾದದಿಂದ ಮಾಡುವ ವರ್ಣನೆಯು ಈ ಸಂಕರದ ನಿವಾರಿಸಲಾಗದ ಶಕ್ತಿಯನ್ನು ಸೂಚಿಸುತ್ತದೆ.''(ರಹಮತ್ ತರೀಕೆರೆ(ಸಂ), ೨೦೦೦, ಪು.೩೫೧)

ಶರಣ ಚಳುವಳಿಯ ಡೆಮಾಕ್ರಟಿಕ್ ಗುಣಗಳು, ಸಾಮಾಜಿಕ ಚಿಂತನೆಗಳು ೧೨ನೇ ಶತಮಾನದ ತರುವಾಯ ಹಿನ್ನೆಲೆಗೆ ಸರಿದವು. ಚಳುವಳಿಯ ತೀವ್ರತೆ ಇಳಿಮುಖವಾಗಿ ವೀರಶೈವದ ಜಂಗಮತ್ವ ಸ್ಥಾವರವಾಯಿತು. ಕಾಯಕ, ದಾಸೋಹ, ಮಹಿಳಾ ಸಮಾನತೆ, ಜಾತ್ಯಾತೀತ ಅಂಶಗಳೆಲ್ಲ ಕುಸಿದು, ಪುರೋಹಿತಶಾಹಿಯು ಸಮಾಜದ ಬಹುಸಂಖ್ಯಾತ ಕೆಳವರ್ಗದವರನ್ನು ಶೋಷಣೆಗೆ ಒಳಪಡಿಸಿತು. ಈ ವೇಳೆಗಾಗಲೆ ರಾಜಕೀಯ ಪ್ರಭುತ್ವದ ಮೂಲಕ ಬಂದ ಇಸ್ಲಾಂ ಧರ್ಮವು ಹೇಗೆ ದಕ್ಷಿಣ ಭಾರತದ ತುಂಬ ಪ್ರಭಾವ ಬೀರಲಾರಂಭಿಸಿತೆನ್ನುವುದನ್ನು ವಿವರಿಸಲಾಗಿದೆ.

ಇಂತಹ ಸಂದರ್ಭದಲ್ಲಿ ಸಮಾನತೆಯನ್ನು ಬಯಸಿದ, ಸಾಮಾಜಿಕ ಸ್ಥಾನಮಾನಗಳಿಲ್ಲದ, ಧಾರ್ಮಿಕ ಪರಿಧಿಯ ಆಚೆ ಇದ್ದ ಅದೆಷ್ಟೋ ಸಮುದಾಯಗಳು ಯಾವುದೇ ಕಾರಣಕ್ಕೂ ಬ್ರಾಹ್ಮಣ-ಹಿಂದೂ ವ್ಯವಸ್ಥೆಯನ್ನು ಒಪ್ಪಿಕೊಳ್ಳಲು ನಿರಾಕರಿಸಿ ಮುಸ್ಲಿಂ-ಸೂಫಿಸಂನ್ನು ಮುಕ್ತಿಯ ಮಾರ್ಗವೆಂದು ಬಗೆದು ಸ್ವೀಕರಿಸಲಾರಂಭಿಸಿದರು.

ಇದೇ ವೇಳೆಗೆ ಶೈವಸಿದ್ಧ-ನಾಥಸಿದ್ಧರನ್ನೊಳಗೊಂಡ ಅನುಭಾವಿ, ಆರೂಢ ಪಂಥಗಳು ಸಮಾಜದ ಮುನ್ನೆಲೆಗೆ ಬಂದವು. ಕೆಳವರ್ಗದವರಿಗೆ ದೀಕ್ಷೆಯ ಮೂಲಕ, ಸಾಮಾಜಿಕವಾಗಿ ಮೇಲುಸ್ತರಕ್ಕೆ ತರುತ್ತಿದ್ದ ಈ ಆರೂಢ ಪಂಥಗಳು ಶೋಷಿತರಿಗೆ ಬಿಡುಗಡೆಯ ಹಾದಿಗಳಾಗಿದ್ದವು. ಯಾವುದೇ ಜಾತಿ ಧರ್ಮದವರು ದೀಕ್ಷೆ ಹೊಂದಲು ಇಲ್ಲಿ ಅವಕಾಶವಿದ್ದಿತು. ಈ ಜಾತ್ಯಾತೀತ ಸ್ವರೂಪದಿಂದಾಗಿ ಅವು ಸಮಾಜವನ್ನು ಬಹುಬೇಗನೇ ಪ್ರಭಾವಿಸಿದವು.

'ಮೇಲ್ವರ್ಗದವರೆಲ್ಲ ಶೈವ-ವೈಷ್ಣವದಂತಹ ಧರ್ಮಗಳಿಗೆ ಹಂಚಿ ಹೋದಾಗ ಸಮಾನತೆಯ ಸೌಜನ್ಯದಿಂದ, ಆಧ್ಯಾತ್ಮಿಕ ಚರ್ಚೆಯಿಂದ ವಂಚಿತವಾದ ಕೆಳವರ್ಗದ ಜನತೆ ವೈಧಿಕ ವಿರೋಧಿ

ನಡತೆಯನ್ನು ಹುಟ್ಟುಹಾಕಿದ ಪರಿಣಾಮವಾಗಿಯೇ ವಾಮಾಚಾರದಂತಹ ಪಂಥಗಳು ನಮ್ಮಲ್ಲಿ ಬಿಡೆ ತೊರೆದು ಎದ್ದುನಿಂತವು ಎನಿಸುತ್ತದೆ. ಸಿದ್ಧ ಸಂಪ್ರದಾಯವು ಇಂತಹ ನೆಲೆಯಿಂದೆದ್ದ ಮಹಾಸಾಗರವಾಗಿದೆ. ಈ ಸಾಗರದ ಅಲೆಗಳಾಗಿ ನಾಥ, ಆರೂಢ ಅವಧೂತ ಮೊದಲಾದ ಪಂಥಗಳು ಮಧ್ಯಕಾಲೀನ ಕರ್ನಾಟಕದಲ್ಲಿ ಭಕ್ತಿಪಂಥದ ಶಿಷ್ಟಧರ್ಮಗಳ ಭುಜಕ್ಕೆ ಭುಜಕೊಟ್ಟು ಸೆಣಸಿದ ಇತಿಹಾಸವಿದೆ.(ಬಸವಲಿಂಗ ಸೊಪ್ಪಿಮಠ, ಸಂಪುಟ I, ೧೯೯೮, ಪು.೫)

ಈ ನಾಥ, ಆರೂಢ, ಅವಧೂತ ಸಿದ್ಧಪಂಥಗಳಿಗೆ ಬಹುದೊಡ್ಡ ಹಿನ್ನಲೆ ಇದೆ. 'ಬೌದ್ಧರಲ್ಲಿ ಹೀನಯಾನ-ಮಹಾಯಾನ ಎಂದು ಎರಡು ಪಂಗಡಗಳಿದ್ದವು. ಮಹಾಯಾನ ಪಂಥದ ಮೂಲಪುರುಷನೆನಿಸಿ ಕೊಳ್ಳುವ ನಾಗಾರ್ಜುನನು ಸಿದ್ಧಸಂಪ್ರದಾಯದ ಪ್ರವರ್ತಕನೂ ಹೌದು. ಮುಂದೆ ಅದೇ ಸಿದ್ಧ ಸಂಪ್ರದಾಯ ವಜ್ರಯಾನ ಪಂಥವಾಗಿ ಪರಿಣಮಿಸಿತು. ಇವರಲ್ಲಿ ಎಂಬತ್ನಾಲ್ಕು ನವನಾಥಸಿದ್ಧರು ಇದ್ದಾರೆ. ಆದಿನಾಥ, ಮಚ್ಛೇಂದ್ರನಾಥ, ಗೋರಖನಾಥ ಎಂದು ಕ್ರಮವಾಗಿ ನಾಥಸಿದ್ಧ ಪರಂಪರೆ ಪ್ರಾರಂಭವಾಗುತ್ತದೆ.(ವೆಂಕಟೇಶ್ ಇಂದ್ವಾಡಿ, ೧೯೯೯, ಪು.೬೪)

ವಜ್ರಯಾನ ಪಂಥದ ಗೋರಖನಾಥರು ಬೌದ್ಧ ತಂತ್ರಪಂಥಕ್ಕೆ ಶಿವದೀಕ್ಷೆಕೊಟ್ಟು ನಾಥಪಂಥವಾಗಿಸಿದನು. ಈ ಪರಿವರ್ತನೆಯು ಭಾರತದ ತುಂಬೆಲ್ಲ ನಡೆದಿರುವುದು ಕಂಡುಬರುತ್ತದೆ. ವಜ್ರಯಾನ ಬೌದ್ಧರ ತಾಣವಾಗಿದ್ದ ಮಂಗಳೂರಿನ ಕದ್ರಿ ಬೆಟ್ಟವು ಅನಂತರ ನಾಥಪಂಥದ ಕೇಂದ್ರವಾಯಿತು. ದಿವಂಗತ ಶ್ರೀಗೋವಿಂದ ಪೈ ಅವರು 'ಧರ್ಮಸ್ಥಳದ ಶಿವಲಿಂಗಕ್ಕೆ ಮಂಜುನಾಥ ಎಂಬ ಹೆಸರು ಹೇಗೆ ಬಂತು?' ಎಂಬ ತಮ್ಮ ಲೇಖನದಲ್ಲಿ 'ಮಂಗಳೂರಿನ ಕದರಿಕಾ ಎಂಬ ಬೌದ್ಧ ವಿಹಾರವನ್ನು ನಾಥಪಂಥದ ಮಠವಾಗಿ ಮತ್ಸೇಂದ್ರನಾಥನು ಪರಿವರ್ತಿಸಿದನು. ಅಲ್ಲಿನ ಮಂಜುಶ್ರೀ ದೇವಾಲಯವೆ ಮಂಜುನಾಥ ದೇವಾಲಯವಾಗಿ ಪರಿವರ್ತಿತವಾಯಿತು ಎಂದು ಪ್ರತಿಪಾದಿಸಿದ್ದಾರೆ.(ಹೆರೆಂಜೆ ಕೃಷ್ಣಭಟ್ಟ, ಮುರುಳೀಧರ, ಉಪಾಧ್ಯ ಹಿಡಿಯಡ್ಕ(ಸಂ), ೧೯೯೫, ಪು-೬೬೬-೬೭೨) ಪುತ್ತೂರು ತಾಲೂಕು ವಿಟ್ಲದಲ್ಲಿ ಮೈಸೂರು ಜಿಲ್ಲೆ ಕಪ್ಪಡಿಯಲ್ಲಿ ಬೆಳಗಾಂನ ಹಂಡಿಬಡಗನಾಥದಲ್ಲಿ, ಉತ್ತರ ಕರ್ನಾಟಕದ ಬೆಡಕಿನಹಾಳ, ಕಪ್ಪತಗುಡ್ಡ, ಮೊದಲಾದ ಕಡೆ ನಾಥಪಂಥದ ಅವಷೇಶಗಳಿವೆ. ಹಾಸನ ಜಿಲ್ಲೆಯ ಆದಿಚುಂಚನಗಿರಿ ಮಠ ನಾಥಪೀಠವೆ ಆಗಿದೆ. ನಾಥ ಪರಂಪರೆಯು ಪ್ರಾಚೀನ ಕಾಲದಿಂದಲೂ ವ್ಯಾಪಕವಾಗಿ ಕರ್ನಾಟಕದಲ್ಲಿ ಹರಡಿತ್ತು ಎನ್ನುವುದು ಸಿದ್ಧಯೋಗಿಗಳ ಹೆಸರಿನಲ್ಲಿರುವ ನೂರಾರು ಹಳ್ಳಿಗಳು, ಬೆಟ್ಟಗಳು, ಕೊಳ್ಳಗಳು ಸೂಚಿಸುತ್ತವೆ.

ಈ ನಾಥಪಂಥವು ತಂತ್ರವಿದ್ಯೆ, ಗುಹ್ಯಸಾಧನೆ ಮುಂತಾದವುಗಳಿಂದ ಅನೇಕ ಕವಲುಗಳಾಗಿ ಒಡೆದು ನಿಗೂಢವಾಗುತ್ತ ಬಂತು. ಈ ಪರಂಪರೆ ಮತ್ತೆ ನಮಗೆ ಕರ್ನಾಟಕದಲ್ಲಿ ಕಂಡುಬರುವುದು ೧೧-೧೨ನೇ ಶತಮಾನದಲ್ಲಿದ್ದ ರೇವಣಸಿದ್ಧ, ಅಲ್ಲಮಪ್ರಭು ಮುಂತಾದ ಶೈವಸಿದ್ಧರಿಂದ, 'ಹಠಯೋಗ ಪ್ರದೀಪಿಕೆ'

ಯಲ್ಲಿ 'ಅಲ್ಲಮಪ್ರಭು ದೇವಶ್ಚ' ಎಂದು ಕನ್ನಡ ನಾಡಿನ ಅಲ್ಲಮ ಪ್ರಭುವಿನ ಹೆಸರು ಹಾಗೂ ಮತ್ತೊಂದು ಸೂಚಿಯಲ್ಲಿ 'ರೇವಣಶ್ಚ' ಎಂದು ರೇವಣಸಿದ್ದನ ಹೆಸರೂ ಬಂದಿದೆ.'(ಮ.ಸೂ. ಕೃಷ್ಣಮೂರ್ತಿ, ೧೯೮೨, ಪು.೧೫೩)

'ಹಠಯೋಗ ಪ್ರದೀಪಿಕೆ'ಯಲ್ಲಿ ಅಲ್ಲಮ ಪ್ರಭುವಿನ ಹೆಸರು ಉಕ್ತವಾಗಿರುವುದರಿಂದ ವೀರಶೈವ ಚಳುವಳಿಯ ಅಗ್ರವ್ಯಕ್ತಿಯಾದ ಅಲ್ಲಮಪ್ರಭುವು ಸಿದ್ಧಯೋಗಿಗಳ ಪರಂಪರೆಯಲ್ಲಿ ಗಣ್ಯನಾಗಿದ್ದನೆಂದು ವೇದ್ಯವಾಗುತ್ತದೆ. ಈತನಲ್ಲದೆ, ಸಿದ್ದಪರಂಪರೆಯು ೧೨ನೇ ಶತಮಾನದ ಚಳುವಳಿಕಾರರ ಮೇಲೆ ಪ್ರಭಾವ ಬೀರಿತೆನ್ನಲು ಸಿದ್ದರಾಮನು ರೇವಣಸಿದ್ಧ ಪರಂಪರೆಯವನಾಗಿರುವುದು(ಕಪಟರಾಳ ಕೃಷ್ಣರಾವ್, ೧೯೭೦ ಪು.೧೪) ಬಸವಣ್ಣನು ನಾಥಪಂಥದವನಾಗಿರುವುದು(ಅದೇ, ಪು.೧೩೪) ಗಮನಿಸಬಹುದು.

ಈ ನಾಥಪಂಥವು ವೀರಶೈವ ಪರಂಪರೆಯ ಉದ್ದಕ್ಕೂ ತನ್ನ ಪ್ರಭಾವವನ್ನು ಬಿರುತ್ತಾ ಬಂದಿದೆ. ೧೨ನೇ ಶತಮಾನದ ನಂತರ ಬಂದ ಪ್ರೌಢದೇವರಾಯನ ಕಾಲದ ನೂರೊಂದು ವಿರಕ್ತರು ವಾಮಾಚಾರಿಗಳಂತೆ ಅತಿಮರುಳ ಸ್ಥಿತಿಯವರಾಗಿ ಶಿವೋಪಾಸನೆ ಮಾಡುತ್ತಿದ್ದರಿಂದ ಇವರೂ ನಾಥಪಂಥದವರಿರಬೇಕೆಂದು ವಿದ್ವಾಂಸರು (ಎಂ.ಎಂ. ಕಲ್ಬುರ್ಗಿ, ೧೯೮೮, ಪು.೨೨೯-೨೩೧) ಅಭಿಪ್ರಾಯ ಪಡುತ್ತಾರೆ. ಹಂಪೆಯ ನೂರೊಂದು ವಿರಕ್ತರ ಪ್ರಭಾವದಿಂದ ಜಲದುರ್ಗ ಪರಿಸರಕ್ಕೆ ಹೋದ ಕೊಡೇಕಲ್ ಬಸವಣ್ಣ ಮತ್ತು ಆತನ ಪರಿವಾರಕ್ಕೆ ನಾಥಪಂಥದ ಪ್ರಭಾವ ಸಾಕಷ್ಟಿದೆ. ಒಂದು ಕಡೆ ಮುಸ್ಲಿಂ ರಾಜ್ಯಾಡಳಿತದ ಮೂಲಕ ಬಂದು ಪ್ರಭಾವ ಬೀರಿದ್ದ ಸೂಫಿ ತತ್ವ ಇನ್ನೊಂದೆಡೆ ನೂರೊಂದು ವಿರಕ್ತರ ಮೂಲಕ ಪ್ರಭಾವ ಬೀರಿದ್ದ ಪ್ರಾಚೀನ ಶೈವ ಪಂಥಗಳು ಕೊಡೇಕಲ್ ಬಸವಣ್ಣನ ಮೇಲೆ ಪ್ರಭಾವಬೀರಿ ಸಂಕರ ಸಂಸ್ಕೃತಿಗೆ ಕಾರಣವಾಗಿದೆ.

ಪ್ರಾಚೀನ ಕಾಲದಿಂದಲೂ ಸೂಫಿಸಂ ಮತ್ತು ನಾಥ ಪಂಥಗಳು ಒಂದರೊಡನೊಂದು ಬೆರೆತಿವೆ. ಪ್ರಾಚೀನ ಬೌದ್ಧಸಿದ್ಧ ಪಂಥವು ಪರ್ಶಿಯಾದವರೆಗೆ ನೆಲೆಯನ್ನು ಪಡೆದಿತ್ತು. ಗೋರಖ್ ಪಂಥ ಮತ್ತು ಮನುಭಾವ ಪಂಥಗಳ ಜೊತೆ ಮೊದಲಿನಿಂದಲೂ ಸೂಫಿಗಳು ನಿಕಟ ಸಂಪರ್ಕವನ್ನು ಹೊಂದಿದ್ದರು. 'ಪೇಶಾವರದಲ್ಲಿದ್ದ ನಾಥಕೇಂದ್ರವು ೧೧ನೇ ಶತಮಾನದ ನಂತರದಲ್ಲಿ ಮಧ್ಯ ಏಶಿಯಾದ ಖಲಂದರ್ ಸೂಫಿ ಸಿದ್ದರನ್ನು ಪ್ರಭಾವಿಸಿತ್ತು. ಬಂಗಾಳ ಬಿಟ್ಟರೆ ನಾಥಪಂಥ ವ್ಯಾಪಕವಾಗಿ ಬೆಳೆದದ್ದು ಪಂಜಾಬ್, ಗುಜರಾತ್, ಸಿಂದ್ ಸೀಮೆಗಳಲ್ಲಿ. ಜಾಲಂದರ್ (ಜಲಂದರ್‌ನಾಥ), ರಾವಲ್ಪಿಂಡಿ (ರಾವಲರು = ಸೂಫಿನಾಥರು) ಪೇಶಾವರ್ , ಧಿನೋಧರ್ (ಬಾಬಾ ಫರೀದನ್ ಊರು), ಇವು ಪ್ರಮುಖ ನಾಥಕೇಂದ್ರಗಳು. ಈ ಊರುಗಳು ಪರ್ಶಿಯಾಕ್ಕೆ ನೆರೆಮನೆಗಳಂತೆ ಇದ್ದಂಥವು. ಉರ್ದು-ಪಾರಸಿ ಭಾಷೆಗಳಲ್ಲಿ ನಾಥಪಂಥದ ಚರಿತ್ರೆಯೆಂದರೆ ನಾಥರ ಮತ್ತು ಸೂಫಿಗಳ ಒಡನಾಟದ ಚರಿತ್ರೆಯೆ'(ರಹಮತ್ ತರೀಕೆರೆ, ೨೦೦೧, ಪು.೪೬-೪೭)

ನಾಥಪಂಥದ ಶಾಖೆಗಳಲ್ಲಿ ಪಾಗಲ್ ಪಂಥಿಗಳು ಇಡಿಯಾಗಿ ಸೂಫೀಕರಣಗೊಂಡವರು. ಖಲಂದರ್ ಸೂಫಿಗಳು ನಾಥಪಂಥದ ಪ್ರಭಾವಕ್ಕೆ ಒಳಗಾದವರು. ಕಿವಿ ಹರಿದು ಕುಂಡಲ ಹಾಕುವುದು ನಾಥರ ಲಕ್ಷಣ ಇದಕ್ಕೆ ಯೌಗಿಕ ಅರ್ಥ ಇದೆ. ಖಲಂದರ್ ಹಾಗೂ ಹೈದರಿ ಸೂಫಿಗಳು ಕಾನ್‌ಪರಾ ನಾಥರಂತೆ. ಕಿವಿಹರಿದು ಕುಂಡಲಗಳನ್ನು ಧರಿಸುತ್ತಿದ್ದರು.(ಅದೇ, ಪು.೪೯)

ಈ ರೀತಿ ನಾಥಸಿದ್ದರು ಮತ್ತು ಸೂಫಿಗಳು ಹತ್ತಿರವಾಗಲು ಇಸ್ಲಾಂ ಕಾರಣವಾಗಿತ್ತು. ಸೂಫಿಗಳೆಲ್ಲಾ ಪ್ರಾಣಯಾಮಕ್ಕೆ ಆದ್ಯತೆ ಕೊಡುತ್ತಿದ್ದರು. 'ಇದಕ್ಕಾಗಿ ಅವರು ಇಸ್ಲಾಂನ ಪ್ರಸಿದ್ಧ 'ಲಾ ಇಲಾಹ ಇಲ್ಲಲ್ಲಾಹ' ಮಂತ್ರವನ್ನು ಜಿಕ್ರ್ ಗೆ(ಯೋಗ ಪರಿಭಾಷೆಯಲ್ಲಿ 'ನಾದ'ಕ್ಕೆ) ಬಳಸುತ್ತಿದ್ದರು. ಈ ಮಂತ್ರದ ಉಚ್ಚಾರಣೆಯಲ್ಲಿ ಉಸಿರನ್ನು ಒಳಗೆಳೆದುಕೊಂಡು, ನಿಲ್ಲಿಸಿ ಹೊರಬಿಡುವ ಕಲೆಯನ್ನು ಸೂಫಿಗಳು ಶಿಷ್ಯರಿಗೆ ಹೇಳುತ್ತಿದ್ದರು. ನಾಥಸಿದ್ದರ ಜೊತೆ ಸಂಪರ್ಕವಿದ್ದ ನಿಜಾಮುದ್ದೀನ್(೧೩೨೫) ಈ ಉಸಿರಾಟದ ಬಗ್ಗೆ ತುಂಬಾ ಚರ್ಚೆ ಮಾಡಿದ್ದಾನೆ.'(ಅದೇ, ಪುಟ-೫೦)

ಈ ಅಭಿಪ್ರಾಯಗಳನ್ನು ಗಮನಿಸಿದರೆ, ಶೈವ-ನಾಥಸಿದ್ಧರಿಗೂ ಸೂಫಿ-ಇಸ್ಲಾಂಗೂ ನಿಕಟ ಸಂಬಂಧವಿದ್ದು ಅದು ಭಾರತದಾಚೆಗೂ ಹರಡಿರುವುದು ಕಂಡುಬರುತ್ತದೆ. ಕರ್ನಾಟಕದಲ್ಲಿ ಈ ಬೆರಕೆತನ ಕೊಡೇಕಲ್ ಬಸವಣ್ಣನ ಮೂಲಕ ಪ್ರಕಟಗೊಂಡಿತು.

ಕೊಡೇಕಲ್ ಬಸವಣ್ಣನಿಗೆ ತೊಗಲಿನ ಇಜಾರ, ತೊಗಲಿನ ಟೊಪ್ಪಿಗೆ ತೊಡಿಸುವ ಗುರು ಸಂಗಮನಾಥನು 'ಮಹಮದ್ ಅವತಾರ'ವಿದು ಎಂದು ಘೋಷಿಸುತ್ತಾನೆ. ಮುಸ್ಲಿಂ ಭಕ್ತರು ಕೊಡೇಕಲ್ ಬಸವಣ್ಣನಿಗೆ ಸರ್ವರ ಮಹಮದ್ ಎಂದು ಕರೆಯುತ್ತಾರೆ. ವೀರ ಸಂಗಯ್ಯನು 'ನಂದಿ ಆಗಮಲೀಲೆ'ಯಲ್ಲಿ ಓಂದುವ ರಕ್ಷೆಯನು ಮೆಟ್ಟುತ ಮುಂದೆ ಕಂಸಿಯ ನಡೆಸುತ ಕೊಡೇಕಲ್ ಬಸವಣ್ಣ ಹೋಗುತ್ತಿದ್ದುದನ್ನು ವರ್ಣಿಸುತ್ತಾನೆ. ಕೊಡೇಕಲ್‌ನಲ್ಲಿರುವ ಸಮಾಧಿಯೂ ದರಗಾ ವಾಸ್ತುವಿನಂತೆಯೇ ಇದೆ. ಒಳಗೆ ಸಮಾಧಿಯ ಮೇಲೆ ತೂಗುಬಿದ್ದಿರುವ ಗಾಜು ಹಂಡೆಗಳಲ್ಲಿ ಇಸ್ಲಾಂನ ಮೂಲಮಂತ್ರ 'ಲಾ-ಇಲ್ಲಾಹ ಇಲ್ಲಲ್ಲಾಹ ಮಹಮದ್ ರಸೂಲಿಲ್ಲ' ಎಂದು ಕೆತ್ತಲಾಗಿದೆ. ಗೋರಿಯ ಮೇಲಿನ ಹಸಿರು ಗಲೀಫ, ಹಸಿರು ನಿಶಾನೆ, ಗಂಧ ಬಳಿಯುವುದು, ಲೋಬಾನ ಉರಿಸುವುದು, ಸಕ್ಕರೆ ಓದಿಸುವುದು, ಮಾಲ್ದಿ ಊಟ, ಕುದುರೆ ತೊಟ್ಟಿಲುಗಳ ಹರಕೆ ಇವೆಲ್ಲವುಗಳು ದರಗಾ ಸಂಸ್ಕೃತಿಯಲ್ಲಿ ಇರುವಂತಹವು. ಕೊಡೇಕಲ್ ಗುರುಗಳ ವೇಷವೂ ಸೂಫಿವೇಷವಾಗಿದೆ. ಜಾತ್ರೆಯ ಸಂದರ್ಭದಲ್ಲಿ ಮುಸ್ಲಿಂ ವ್ಯಕ್ತಿಯೊಬ್ಬ ದೀನ್ ಜಗಾಯಿಸಿ ಧೂಳುಗಾಯಿ ಒಡೆಯುತ್ತಾನೆ.

ಇಷ್ಟೆಲ್ಲಾ ಇಸ್ಲಾಂನ ಪ್ರಭಾವದ ಜೊತೆಗೆ ಕೊಡೇಕಲ್ ಬಸವಣ್ಣನ ಸಾಹಿತ್ಯ, ಆಧ್ಯಾತ್ಮ ಸಾಧನೆಯನ್ನು ನೋಡಿದರೆ ಈತನಿಗಾಗಿರುವ ನಾಥಪಂಥದ ಪ್ರಭಾವವೂ ಕಂಡುಬರುತ್ತದೆ. 'ಕೊಡೇಕಲ್ ಬಸವಣ್ಣ ತನ್ನ

ದೇಶಸಂಚಾರದ ಕಾಲದಲ್ಲಿ 'ಕೊಂಕಣ ದೇಶ'ದ ಕಾಳಿಂಗನೆಂಬಾತನ 'ಕಾಯಶುದ್ಧ'ಗೊಳಿಸಿ ಪುನರ್ಜಾತನಾಗಿಸಿದ್ದು, ಕೊರಳಿಬೆಟ್ಟ ಎಂಬ ಊರಿನ ಮಲ್ಲಶೆಟ್ಟಿ ಎಂಬುವವನ ಕುಷ್ಠರೋಗ ಕಳೆದು ಆತನ ಕೈಕಾಲು ಚಿಗಿಯುವಂತೆ ಮಾಡಿದ್ದು, ಉಜ್ಜಿನಿಯ ದೊರೆ ದೇವರಾಜನಿಗೆ 'ಕಂಕಣದ ಕಡ್ಡಾಯ' ನೀಡಿ ಅದನ್ನು 'ಹೇಮ'ವನ್ನಾಗಿಸಿದ್ದು ಮಹಾಚಿನ್ನ ಎಂಬ ನಗರದಲ್ಲಿ ಕಾದ ಉಕ್ಕಿನ ಕುದುರೆ ಏರಿದ್ದು ಅದಕ್ಕೆ(ನೀಲ ಕುದುರೆ) ಜೀವ ಬರಿಸಿ ಆಕಾಶದಲ್ಲಿ ವೈಹಾಳಿ ಮಾಡಿದ್ದು ಎಲ್ಲದಕ್ಕೂ ಮುಖ್ಯವಾಗಿ ವಡಬಾಳ ನಾಗನಾಥ, ಮಂಟೇಸ್ವಾಮಿಗಳನ್ನು ಶಿಷ್ಯರನ್ನಾಗಿ ಪಡೆದು ಅವರಿಗೆ 'ಸ್ಥಿರಕಾಯ' ದೀಕ್ಷೆ ಬೋಧೆ ಇತ್ತದ್ದು, ಇವು ಕೊಡೇಕಲ್ ಬಸವಣ್ಣನ ಸಿದ್ಧತನದ ಕೆಲವು ಪವಾಡಗಳು ಕೊಡೇಕಲ್ ಬಸವನಾಥಸಿದ್ಧ ನೆನ್ನಲು ನಾಥರ 'ಅಷ್ಟಮಹಾಸಿದ್ಧಿ'ಗಳನ್ನು ಈತ ಗಳಿಸಿಕೊಂಡಿದ್ದನೆನ್ನಲು ಸಾಕ್ಷಿಗಳು'(ಬಸವಲಿಂಗ ಸೊಪ್ಪಿಮಠ, ೧೯೯೫, ಪುಟ.೨೯೨-೨೯೩) ಈತ ನಾಥಸಿದ್ಧನೆನ್ನಲು ಭಿಕ್ಷಾಪಾತ್ರೆಯಾಗಿ ಹಿಡಿದ 'ಹಂಡಿ'(ಮಣ್ಣಿನ ಗಡಿಗೆ) ಮತ್ತು ಆರೂಢ ಮಾರ್ಗವಾಗಿ ನುಡಿಯುವ 'ಬಾರಾಮಾರ್ಗ' ಪ್ರಬಲ ಆಧಾರಗಳಾಗಿವೆ. 'ಹಂಡಿಬಡಗನಾಥ' ಎಂಬುದು ನಾಥಸಿದ್ಧರ ನೆಲೆ ಎಂಬುದನ್ನು ಗಮನಿಸಿದರೆ 'ಹಂಡಿ ಅರ್ಥಾತ್ ಗಡಿಗೆ ನಾಥಸಿದ್ಧರ ಭಿಕ್ಷಾಪಾತ್ರೆಯಾಗಿತ್ತು ಎಂಬುದು ತಿಳಿಯುತ್ತದೆ. ಕೊಡೇಕಲ್ ಬಸವಣ್ಣ 'ಹಂಡಿ' ಹಿಡಿದು ಭಿಕ್ಷೆ ಎತ್ತುತ್ತಾ 'ಹಂಡಿಭಿಕ್ಷದ ಕಾಲಜ್ಞಾನ' ಸಾರಿದವನಾಗಿದ್ದಾನೆ.

ಇನ್ನು ಕರ್ನಾಟಕದಲ್ಲಿ 'ಆದಿಚುಂಚನಗಿರಿ' ಮಠ ನಾಥಪೀಠವೇ ಆಗಿದ್ದು, 'ದಿವ್ಯ ಚುಂಚನಗಿರಿ ಕ್ಷೇತ್ರ ಪುರಾಣ'ದಲ್ಲಿ ದ್ವಾದಶನಾಥರ ಸಂಘಟನೆಗೆ ಬಾರಾನಾಥಪಂಥ ಎಂದು ಕರೆಯುತ್ತಾರೆ.(ಮ.ಸು. ಕೃಷ್ಣಮೂರ್ತಿ, ೧೯೮೨, ಪು.೧೫೨) ಇಲ್ಲಿ ಹೇಳಲಾದ ಬಾರನಾಥಪಂಥವು ಗೋರಖನಾಥನ ಬಾರಹಪಂಥಿ ಮಾರ್ಗವೇ ಆಗಿದ್ದು ಕೊಡೇಕಲ್‌ಬಸವಣ್ಣ ಇದನ್ನೇ 'ಬಾರಾಮಾರ್ಗ' ಎಂದು ತನ್ನ ಸಾಹಿತ್ಯದಲ್ಲಿ ಉಲ್ಲೇಖಿಸುತ್ತಾನೆ.

ಹೀಗೆ ಕೊಡೇಕಲ್‌ಬಸವಣ್ಣ ಸೂಫಿ ಇಸ್ಲಾಂನ್ನು, ನಾಥ ಶೈವಿಸಂನ್ನು ತನ್ನೊಳಗೆ ಸೇರಿಸಿಕೊಂಡಿದ್ದಾನೆ. ಈ ಬೆರಕೆತನ ಮುಂದೆ ಬಂದ ಪಂಚಗಣಾಧೀಶ್ವರ ಪಂಥವನ್ನೊಳಗೊಂಡಂತೆ ಮಂಟೇಸ್ವಾಮಿ, ತಿಂಥಿಣಿ ಮೋನಪ್ಪಯ್ಯ, ಶಿರಹಟ್ಟಿ ಫಕ್ಕೀರೇಶ, ಸಾವಳಗಿ ಶಿವಲಿಂಗ, ಮಳೆಪ್ಪಯ್ಯ, ಕಾಡಸಿದ್ಧ ಪರಂಪರೆಗಳಲ್ಲದೆ ೨೦ನೇ ಶತಮಾನದ ದೀನಾದಾರ್ ಚನ್ನಬಸವೇಶ್ವರ ಪಂಥದವರೆಗೆ ಪ್ರವಹಿಸಿ ಪ್ರಕಟಗೊಂಡಿದೆ.

ಈ ಮೇಲಿನ ಪಂಥ-ಪರಂಪರೆಗಳ ಆಚರಣೆಗಳ ಸಂದರ್ಭದಲ್ಲಿ ಮುಸ್ಲಿಂರು, ಜೋಗಿಗಳು, ಸಿದ್ಧರು, ವೀರಶೈವರು, ಕೆಳವರ್ಗದವರು ಭಾಗವಹಿಸುತ್ತಾರೆ. ಈ ಭಾಗವಹಿಸುವಿಕೆ ಭಾಷೆ, ಪುರಾಣ, ಧರ್ಮ, ವಾಸ್ತುವಿನಲ್ಲಿ ಮಾಡಿರುವ ಮಿಶ್ರಣ ಅತ್ಯಂತ ಸಹಜವಾಗಿದೆ. ಮೋನಪ್ಪಯ್ಯ, ಮಂಟೇಸ್ವಾಮಿ, ಶಿರಹಟ್ಟಿ ಫಕ್ಕೀರೇಶ, ಸಾವಳಗಿಶಿವಲಿಂಗ, ತಿರುಗಾಡಿದ ಕಲ್ಯಾಣ, ಕಲ್ಬುರ್ಗಿ, ಸಗರ, ಗೋಗಿ, ಹಾನಗಲ್ಲು, ಬಿಜಾಪುರ, ಬಂಕಾಪುರ, ಕೋಡೇಕಲ್ಲು, ಲಕ್ಷ್ಮೇಶ್ವರ, ಉಜ್ಜಿನಿ, ಶಿರಹಟ್ಟಿ, ಹಂಪಿ, ಹಲವಾಗಲು, ಕಪ್ಪಡಿ, ಕೆ.ಆರ್. ನಗರ ಇವೆಲ್ಲ ಸೂಫಿ-ನಾಥ ಕೇಂದ್ರಗಳಾಗಿವೆ.

ಈ ಸಂತರು ರಚಿಸಿರುವ ಕಾಲಜ್ಞಾನ ವಚನಗಳು ಸಿದ್ಧಪಂಥಕ್ಕೂ, ಸೂಫಿಗಳಿಗೂ ಇರುವ ಸಂಬಂಧ ವನ್ನು ಸೂಚಿಸುತ್ತವೆ. ಇವರ ಗದ್ದುಗೆಗಳಂತೂ ಇಸ್ಲಾಮಿಕ್ ವಾಸ್ತುಶೈಲಿಯಲ್ಲಿವೆ. ಈ ಗದ್ದುಗೆಗಳ ಸುತ್ತ ಇರುವ ಉತ್ಸವ-ಆಚರಣೆಗಳನ್ನು ನೋಡಿದರೆ ಹಿಂದೂ-ಮುಸ್ಲಿಂ ಕೂಡಿ ಉಂಟುಮಾಡಿರುವ ಸಂಕರತೆಯ ಅರಿವಾಗುತ್ತದೆ. 'ಕೆಲವು ಕಡೆ ಗೆಳೆಯನೋ ಗುರುವೋ ಆದ ಸೂಫಿಯ ತೋರುಗದ್ದುಗೆ ಮೇಲಿದ್ದು ಕೆಳಗೆ ಸಂತನ ಗದ್ದುಗೆ ಇರುತ್ತದೆ. ದಿಗ್ಗಿ ಸಂಗಮನಾಥನ ಮೇಲೆ ಚಾಂದಸಾಹೇಬ, ಸಾವಳಗಿ ಶಿವಲಿಂಗನ ಮೇಲೆ ಖಾಜಾಬಂದೇ ನವಾಜ್, ಮೋನಪ್ಪಯ್ಯನ ಮೇಲೆ ಮಹಮದ್ ಪೈಗಂಬರ್ ಅವರ ತೋರುಗದ್ದುಗೆಗಳಿವೆ.(ರಹಮತ್ ತರೀಕೆರೆ, ೨೦೦೧, ಪು.೭೫)

ಕೊಡೇಕಲ್, ಸಾವಳಗಿ, ಶಿರಹಟ್ಟಿ, ಪರಂಪರೆಗಳಲ್ಲಿ ಇರುವ ಗುರುಗಳು ಹಸಿರು ಪೇಟ, ಶೆರ್ವಾನಿ, ಪಾಯಿಜಾಮ, ವೇಷವನ್ನು ಹಾಕುತ್ತಾರೆ. ಈ ಗುರುಗಳು ಹಸ್ತಮಸ್ತಕದ ಮೂಲಕ ಶಿಷ್ಯರಿಗೆ ದೀಕ್ಷೆಯನ್ನು ನೀಡುತ್ತಾರೆ. ೧೨ನೇ ಶತಮಾನದ ಲಿಂಗದೀಕ್ಷೆಯನ್ನು ತೀವ್ರಸ್ವರೂಪದಲ್ಲಿ ವಿಡಂಬಿಸುವ ಈ ಪ್ರಕ್ರಿಯೆ ನಾಥಸಿದ್ಧ ಮತ್ತು ಸೂಫಿಪಂಥಗಳ ಮೂಲಕ ಪಡೆದುಕೊಂಡುದುದಾಗಿದೆ. ಮಂಟೇಸ್ವಾಮಿ ಕಾವ್ಯವೂ ಲಿಂಗದೀಕ್ಷೆಯನ್ನು ತೀವ್ರಸ್ವರೂಪದಲ್ಲಿ ವಿಮರ್ಶೆಗೊಳಪಡಿಸುತ್ತದೆ.

ಈ ಸಂತರು ಮಣ್ಣಿನ ಪಾತ್ರೆಯನ್ನು(ಹಂಡಿ) ಮತ್ತು ಬಡಿಗೆಯನ್ನು ಹಿಡಿದು ಭಿಕ್ಷೆ ಬೇಡುತ್ತಾ ಕಾಲಜ್ಞಾನವನ್ನು ಸಾರಿದ್ದಾರೆ. ನಾಥಪಂಥದಲ್ಲಿನ ಜೋಗಿಗಳು ಹಂಡಿ ಮತ್ತು ಬಡಿಗೆಯನ್ನು ಹಿಡಿಯುವುದು ವಾಡಿಕೆ. ಇನ್ನು ಕಾಲಜ್ಞಾನಕ್ಕೂ ಸೂಫಿಗಳಿಗೂ, ಯೋಗಿಗಳಿಗೂ, ಸಿದ್ಧಪಂಥಕ್ಕೂ ಯಾವುದೋ ಒಂದು ಬಗೆಯ ಸಂಬಂಧವಿದೆ. ಕಾರಣಿಕ ಹೇಳುವುದು ನಾಥ-ಸೂಫಿ ಸಿದ್ಧರ ಇನ್ನೊಂದು ಮುಖ್ಯಲಕ್ಷಣವಾಗಿದೆ.

ಮಂಟೇಸ್ವಾಮಿಯನ್ನು ಸೂಫಿಸಂತನೆಂದು ಗುರುತಿಸುವ ಸಮುದಾಯಗಳು 'ಮಾಂಕ್ಷಾವಲಿ' ಎಂದು ಕರೆಯುತ್ತವೆ. ಈ ಪರಂಪರೆಯ ಶಿಷ್ಯರನ್ನು ಸೂಫಿಗಳೆನ್ನಲಾಗುತ್ತದೆ. ಮಂಟೇಸ್ವಾಮಿ ಗದ್ದಿಗೆ, ಕಪ್ಪಡಿ ರಾಚಪ್ಪಾಜಿ ಚೆನ್ನಾಜಮ್ಮನವರ ಗದ್ದಿಗೆ, ಮುಟ್ನಳ್ಳಿ ದೊಡ್ಡಮ್ಮತಾಯಿ ಗದ್ದುಗೆ, ಚಿಕ್ಕಲೂರು ಸಿದ್ದಸ್ವಾಮಿಯವರ ಗದ್ದುಗೆ, ಕುರುಬರಕಟ್ಟೆನಿಂಗಯ್ಯ-ಚೆನ್ನಯ್ಯನವರ ಗದ್ದುಗೆ, ಇವೆಲ್ಲವೂ ಸೂಫಿ ಸಂತರ ದರ್ಗಾ ಮಾದರಿಯಲ್ಲಿ ಉತ್ತರ-ದಕ್ಷಿಣ ದಿಕ್ಕಿಗೆ ಮಲಗಿರುವಂತಿವೆ.

ಮಂಟೇಸ್ವಾಮಿ ಪಂಥವು ಸೂಫಿಗಳಿಂದ ಮಾತ್ರವಲ್ಲದೆ, ಶೈವನಾಥ, ಆರೂಢ ಅವಧೂತ ಪಂಥಗಳಿಂದ ರೂಪಿತವಾಗಿದ್ದು, ಸಹಜವಾಗಿ ಅವೆಲ್ಲದರ ಲಕ್ಷಣವನ್ನು ಅದು ಒಳಗೊಂಡಿದೆ. 'ಮಂಟೇಸ್ವಾಮಿಗಳ ಪರಂಪರೆಯಲ್ಲಿ ಸಿದ್ಧರನ್ನು ಪ್ರತಿನಿಧಿಸುವ ಕಂಡಾಯಗಳು, ನಾಗಬೆತ್ತ, ಮುತ್ತಿನ ಜೋಳಿಗೆ, ಮುಡಿಕೊಡುವುದು, ನೀಲಗಾರ ದೀಕ್ಷೆ, ಕಂತೆಭಿಕ್ಷೆ ಅಥವಾ ಭಿಕ್ಷೆ, ಹೆಂಡ, ಬಾಡು, ಭಂಗಿಸೇವೆ, ಧೂಪದ ಸೇವೆ, ಪಂಜಿನಸೇವೆ, ಮಗ್ಗಲುಸೇವೆ, ಮರುಳುಸೇವೆ, ಅಜ್ಜಿನಮಸ್ಕಾರ, ಸಾಷ್ಟಾಂಗ ನಮಸ್ಕಾರ ಇವೆಲ್ಲವೂ

ಅನುಭಾವಿ ಪಂಥಗಳ ಆಚರಣೆಗಳಾಗಿವೆ. ಯೋಗ ಸಮಾಧಿಗಳ ವಿವಿಧ ಭಂಗಿಗಳಾಗಿವೆ.(ಮಹಾದೇವ ಶಂಕನಪುರ, ೨೦೦೨, ಪು.೪೯)

ಹೀಗೆ ಸಂಕರರೂಪಿಯಾದ ಕೊಡೇಕಲ್‌ಬಸವಣ್ಣ, ಮಂಟೇಸ್ವಾಮಿ, ಶಿರಹಟ್ಟಿಫಕ್ಕೀರೇಶ, ಸಾವಳಗಿ ಶಿವಲಿಂಗ, ತಿಂಥಿಣಿಮೋನಪ್ಪಯ್ಯ ಮುಂತಾದ ಪರಂಪರೆಗಳ ಗದ್ದುಗೆಗಳು ಮತ್ತು ಇವುಗಳಿಗೆ ನಡೆದುಕೊಳ್ಳುವ ಸಮುದಾಯಗಳು ಪಂಚಗಣಾಧೀಶ್ವರರಿರುವ ಮಧ್ಯ ಕರ್ನಾಟಕದ ಪರಿಸರದಲ್ಲಿಯೇ ಇವೆ. ಉಜ್ಜಿನಿ, ಹಂಪಿ, ಹಲವಾಗಲು, ನಾಯಕನಟ್ಟಿ, ಕಾಗಿನೆಲೆ, ಗುಮ್ಮಗೋಳ, ನುಂಕೆಮಲೆ, ಜೋಗಿಮಟ್ಟಿ ಮುಂತಾದವು ಶೈವಸಿದ್ಧ-ಸೂಫಿಸಿದ್ಧರ ಕೇಂದ್ರಗಳೇ ಆಗಿವೆ. ಪಂಚಗಣಾಧೀಶ್ವರ ಪಂಥವು ಭಿನ್ನ ಭಿನ್ನ ಪಂಥ ಪರಂಪರೆಗಳನ್ನು ಪೋಷಿಸಿಕೊಂಡು ಬಂದ ಮಧ್ಯಕರ್ನಾಟಕ ಪರಿಸರದಲ್ಲಿದ್ದ ಪರಿಣಾಮವಾಗಿ ಹಲವಾರು ಸಂಕರರೂಪಿ ಲಕ್ಷಣಗಳನ್ನು ಮೈಗೂಡಿಸಿಕೊಂಡಿದೆ. ಈ ಪಂಥದ ಆಚರಣೆಗಳು ರೂಪುಗೊಳ್ಳಲು ಶೈವಸಿದ್ಧ ಸೂಫಿಸಿದ್ದ ಪರಂಪರೆಗಳು ಮಾತ್ರವಲ್ಲದೆ, ಆ ಹೊತ್ತಿನ ರಾಜಕೀಯ, ಆರ್ಥಿಕ ಸಂದರ್ಭಗಳೂ ಕಾರಣವಾಗಿವೆ. ಸಮಕಾಲೀನ ಸಂದರ್ಭದಲ್ಲಿಯೂ ಕೂಡ ಅದೆಷ್ಟೋ ಹೊಸ ಆಚರಣೆಗಳು ಬಂದು ಸೇರುವ, ಹಳೆಯ ಆಚರಣೆಗಳು ಬಿಟ್ಟು ಹೋಗುವ ಅಥವಾ ರೂಪಾಂತರ ಹೊಂದುತ್ತಿರುವ ಪ್ರಕ್ರಿಯೆ ನಡೆಯುತ್ತಲೆ ಇದೆ. ಒಟ್ಟಾರೆ ಈ ಎಲ್ಲಾ ಪ್ರಕ್ರಿಯೆಗಳು ಪಂಚಾಗಣಾಧೀಶ್ವರ ಪಂಥವನ್ನು ಹೇಗೆ ಸಂಕರಶೀಲ ಪಂಥವಾಗಿಸಿವೆ ಎಂಬುದನ್ನು ಈ ಮುಂದೆ ಚರ್ಚಿಸಲಾಗಿದೆ.

## ೩.೨. ಶೈವ-ನಾಥಸಿದ್ಧರ ಪ್ರಭಾವ

ಕರ್ನಾಟಕವು ಮೊದಲಿನಿಂದಲೂ ಶೈವ-ನಾಥಸಿದ್ದ ಪ್ರಭಾವಕ್ಕೆ ಒಳಗಾಗುತ್ತಲೇ ಬಂದಿದೆ. ಕರ್ನಾಟಕ ದಾದ್ಯಂತ ನಾಥಪರಂಪರೆ ಹರಡಿತ್ತೆನ್ನಲು ಈಗಲೂ ಇರುವ ನೂರಾರು ಸಿದ್ದಕೇಂದ್ರಗಳೇ ಸಾಕ್ಷಿ. ಇಂಥ 'ಸಿದ್ಧ ಪಂಥವನ್ನು ಅನುಸರಿಸಿದವರಲ್ಲಿ ಕುರುಬ ಜನಾಂಗ ಪ್ರಮುಖವಾದುದು'(ಮ.ಸು. ಕೃಷ್ಣಮೂರ್ತಿ, ೧೯೮೨, ಪು.೧೫೦). ಕುರುಬರ ಆರಾಧ್ಯ ದೈವವಾದ ರೇವಣಸಿದ್ದನು ನಾಥಪಂಥದವನು. ಈತನು ಬೀರೇಶ್ವರ ಮತ್ತು ಮಾಲಿಂಗರಾಯನಿಗೆ ಶಿವಲಿಂಗ ದೀಕ್ಷೆ ಕೊಡುವ ಮೂಲಕ ಕುರುಬರ ಮೂಲಗುರು ವಾಗಿದ್ದಾನೆ. ಅಲ್ಲದೆ ಶಾಂತಮುತ್ತಯ್ಯ ಎಂಬ ಶಿಷ್ಯನಿಗೆ ಲಿಂಗದೀಕ್ಷೆ ಕೊಟ್ಟು ಗುರುಕಂಕಣ ಕಟ್ಟಿ ಹಾಲುಮತಕ್ಕೆ ಅಧ್ಯಕ್ಷನನ್ನಾಗಿ ಮಾಡುತ್ತಾನೆ. ಅಲ್ಲಿಂದಲೇ ಕುರುಬರ ಹಾಲುಮತ ಗುರುಪೀಠ ಆರಂಭವಾಗಿದೆ.

ಈ ರೀತಿ ಶೈವ ಸಿದ್ಧ ಹಿನ್ನೆಲೆಯಿರುವ ಕುರುಬ ಜನಾಂಗ ಅತಿ ಹೆಚ್ಚಾಗಿ ವಾಸಿಸುತ್ತಿರುವುದು ಮಧ್ಯ ಕರ್ನಾಟಕದ ಪರಿಸರದಲ್ಲಿ 'ಬಳ್ಳಾರಿ, ರಾಯಚೂರು, ಧಾರವಾಡ, ಹಾವೇರಿ, ಚಿತ್ರದುರ್ಗ ಮತ್ತು

ಶಿವಮೊಗ್ಗದ ಉತ್ತರ ಭಾಗಗಳಲ್ಲಿ ಇಂದಿಗೂ ಕುರುಬರು ಒಂದು ಪ್ರಧಾನ ಗ್ರಾಮೀಣ ಜನಾಂಗವಾಗಿದೆ. ಈ ಪ್ರದೇಶವನ್ನೇ ಅಂದು(ವಿಜಯನಗರ ಕಾಲಕ್ಕೆ) 'ಕುರುಂಬ ನಾಡು' ಎಂದು ಕರೆಯಲಾಗುತ್ತಿತ್ತು.'(ಪ್ರೊ. ಒಡೆಯರ್, ಡಿ. ಹೆಗ್ಗಡೆ, ೨೦೦೩, ಪು.೨೫)

ಕುರುಬರಲ್ಲದೆ ಈ ಭಾಗದಲ್ಲಿರುವ ಮತ್ತೊಂದು ಪ್ರಮುಖ ಜನಾಂಗವೆಂದರೆ ಬೇಡರದು. ಬೇಡರು ಮಧ್ಯಕಾಲದ ಕರ್ನಾಟಕದಲ್ಲಿ ಹಲವಾರು ನಾಥಸಿದ್ಧರನ್ನು ಅನುಸರಿಸುತ್ತಾ, ಪೋಷಿಸುತ್ತಾ ಸಾಂಸ್ಕೃತಿಕ ವೀರರನ್ನಾಗಿಸಿಕೊಂಡಿದ್ದಾರೆ. ಅವರುಗಳೆಂದರೆ ಕೊಡೇಕಲ್‌ಬಸವಣ್ಣ, ತಿಂಥಿಣಿಮೋನಪ್ಪಯ್ಯ, ನುಂಕೆಮಲೆ ಸಿದ್ದೇಶ್ವರ, ಅಲ್ಲದೆ ಪಂಚಗಣಾಧೀಶ್ವರರಲ್ಲಿನ ಕೂಲಹಳ್ಳಿ ಮದ್ದಾನಸ್ವಾಮಿ, ಮಗ ಗೋಣಿಬಸವ, ಕೊಟ್ಟೂರಗುರುಬಸವ, ನಾಯಕನಟ್ಟಿತಿಪ್ಪೇಸ್ವಾಮಿ ಮುಂತಾದವರಿದ್ದಾರೆ.

ನಾಯಕನಟ್ಟಿ ತಿಪ್ಪೇಸ್ವಾಮಿ ಸಿದ್ದಪರಂಪರೆಯವನೆನ್ನಲು ನಮಗೆ ಸಾಕಷ್ಟು ಆಧಾರಗಳು ದೊರೆಯುತ್ತವೆ. ಈ ಜಾತ್ರೆಯ ಸಂದರ್ಭದಲ್ಲಿ ಹೊರಮಠದ ಆವರಣದಲ್ಲಿ ಅಪಾರವಾದ ಪ್ರಮಾಣದಲ್ಲಿ ಸಿದ್ಧರು, ಜೋಗಿಗಳು ಬಂದು ಸೇರುತ್ತಾರೆ. ಕರ್ನಾಟಕವಲ್ಲದೆ ಮಹಾರಾಷ್ಟ್ರ, ಆಂಧ್ರ, ತಮಿಳು ನಾಡುಗಳಿಂದಲೂ ಇಲ್ಲಿಗೆ ಬರುತ್ತಾರೆ. ಭಂಗಿಯನ್ನು ಸೇದುತ್ತಾ ತಿರುಗುವ ಈ ಜೋಗಿಗಳು ಮೂರರಿಂದ ಐದು ದಿನಗಳ ತನಕ ಅಲ್ಲಿಯೇ ಬೀಡು ಬಿಡುತ್ತಾರೆ. 'ನಾಥಸಿದ್ಧ ಸಂಪ್ರದಾಯದಲ್ಲಿ ಭಂಗಿ ಸೇವನೆ ಸಾಮಾನ್ಯ, ಆದಿಚುಂಚನಗಿರಿ ಸೀಮೆಯ ಜೋಗಪ್ಪ, ಮೈಸೂರು ಸೀಮೆಯ ಮಂಟೇಸ್ವಾಮಿ ಸಂಪ್ರದಾಯಗಳಲ್ಲಿ ಭಂಗಿ ಸೇವನೆಯು ಮುಖ್ಯ ಆಚರಣೆಗಳಲ್ಲಿ ಒಂದು.(ರಹಮತ್ ತರೀಕೆರೆ, ೨೦೦೧, ಪುಟ.೧೮೩) ದಿಗ್ಗಿ, ತಿಂಥಿಣಿ, ಕೊಡೇಕಲ್, ಸಾವಳಗಿ, ಮಾಡ್ಯಾಳ ಮುಂತಾದ ಸಿದ್ಧಕೇಂದ್ರಗಳ ಹತ್ತಿರ ಇರುವ ಗೂಗಿಯ ಬಹ್ರಿ 'ಭಂಗಾಬ್ ನಾಮಾ' ಎನ್ನುವ ಕಾವ್ಯವನ್ನೇ ಬರೆದಿದ್ದಾನೆ. 'ಬಹ್ರಿ ಕಾವ್ಯದಲ್ಲಿ ಭಂಗಿಯು ಅನುಭಾವಿಕ ರೂಪಕವಾಗಿ ಮೈತಳೆಯುತ್ತದೆ. ಇದಂತೂ ಸಿದ್ಧಪಂಥಗಳ ಪ್ರಭಾವದಿಂದ ಬಂದದ್ದು."(ಅದೇ, ಪು.೧೮೩)

ಜಾತ್ರೋತ್ಸವದ ಸಂದರ್ಭದಲ್ಲಿ ನಾಯಕನಟ್ಟಿಯ ಹೊರಮಠದ ಹತ್ತಿರ ಸಾಧು ಸಂತರು ಮಾತ್ರವಲ್ಲದೆ ಎಲ್ಲ ಕುಲದವರೂ ಬಂದು ಕೂಡುತ್ತಾರೆ. ಅವರಲ್ಲಿ ಕುರುಬರು ಮತ್ತು ಬೇಡ ಜನಾಂಗದವರೇ ಹೆಚ್ಚು. ಈ ಎರಡೂ ಜನಾಂಗಗಳೂ ಮಧ್ಯ ಕಾಲದುದ್ದಕ್ಕೂ ನಾಥಸಿದ್ಧ ಶೈವಸಿದ್ಧ ಪರಂಪರೆಗೆ ನಡೆದುಕೊಂಡು ಬಂದಿರುವುದನ್ನು ಕಾಣಬಹುದು. ಹೊರ ಮಠದಲ್ಲಿನ ಪೂಜಾರಿಗಳು ಬೇಡರಾಗಿದ್ದಾರೆ. ಈ ಕುರಿತು ಜನಪದ ಗೀತೆಯೊಂದು ಈ ರೀತಿ ಹೇಳುತ್ತದೆ.

'ಲಿಂಗ ಜಂಗಮರಿಗೆ ಒಳಮಠವೇ ಇರಲೆಂದು
ಬ್ಯಾಡಾರ ಸಂಗಾಕೆ ಹೋದಾನೆ ತಿಪ್ಪಯ್ಯ
ಹೊರಮಠದಲ್ಲವರು ಇರಲೆಂದು

ಬ್ಯಾಡಾರ ಸಂಗಾಕೆ ಹೋದಾನೆ ತಿಪ್ಪಯ್ಯ
ಮದ್ದು ಮಾಂಸಗಳ ಮಾಡಂದ ಹೊರಮಠಕೆ
ಎಡಿಯೇ ತಿಪ್ಪಯ್ಯಗೆ ಇರಲೆಂದ

(ಅನುಬಂಧ ೭, ತಿಪ್ಪೇಸ್ವಾಮಿ ಕಾವ್ಯ)

ಬ್ಯಾಪರ ಸಂಗವೇ ಇರಲೆಂದು ಹೊರಮಠಕ್ಕೆ ಹೋದ ತಿಪ್ಪಯ್ಯ ಅಲ್ಲೇ ನೆಲೆಗೊಂಡು ಸಮಾಧಿಯಾದುದು ಅದನ್ನು ಇಂದಿಗೂ ಬೇಡರ ಪೂಜಾರಿಗಳೇ ಪೂಜಿಸುತ್ತಿರುವುದೂ ಅಲ್ಲದೆ ಮದ್ದು-ಮಾಂಸಗಳನ್ನು ಎಡೆಯಾಗಿ ಕೊಡುವುದು ಏನನ್ನು ಸೂಚಿಸುತ್ತಿದೆ.?

ಸಿದ್ಧಪಂಥದಲ್ಲಿನ ಯೋಗಿಗಳು ಸಾಮಾನ್ಯವಾಗಿ ವೈಧಿಕ ವಿರೋಧಿನೀತಿಯನ್ನು ಅನುಸರಿಸುತ್ತಾ ಬಂದವರು. ಅದರಲ್ಲೂ ಅವರು ಹೆಚ್ಚಾಗಿ ನಿಮ್ನವರ್ಗದಿಂದ ಬಂದವರು. ಹಾಗಾಗಿ ಅವರು ನಿತ್ಯಬದುಕಿನಲ್ಲಿ ತುಚ್ಛೀಕರಿಸಲ್ಪಟ್ಟ, ಕೀಳೆಂದು ಪರಿಗಣಿಸಲ್ಪಟ್ಟ ಅಂಶಗಳನ್ನು ತೆಗೆದುಕೊಂಡು ಮೌಲೀಕರಿಸುವ ಪ್ರಯತ್ನವನ್ನು ಮಾಡುತ್ತಾರೆ. ಇಂತಹ ಸಿದ್ದ ಪರಂಪರೆಯಲ್ಲಿ ಬೆಳೆದಿರುವ ನಾಯಕನಟ್ಟಿ ತಿಪ್ಪೇಸ್ವಾಮಿ ಮಾಂಸಹಾರವನ್ನು ಒಪ್ಪಿಕೊಳ್ಳುವುದರ ಮೂಲಕ ಆ ಜೀವನ ಪದ್ಧತಿಗೆ ಮಾನ್ಯತೆಯನ್ನು ನೀಡುತ್ತಾನೆ. ಒಟ್ಟು ನಾಯಕನಟ್ಟಿ ತಿಪ್ಪೇಸ್ವಾಮಿ ಜೀವನವೇ ಇಂತಹ ಕೀಳನ್ನು ಮೌಲೀಕರಿಸುವ ಪ್ರಯತ್ನದಿಂದ ಕೂಡಿದೆ.

ಜನಪದರಲ್ಲಿರುವ ಮಿತ್(ಪುರಾಣದ) ಪ್ರಕಾರ ಒಮ್ಮೆ ರಾಯದುರ್ಗದಲ್ಲಿ ಕೆಂಪಯ್ಯನ ವೈಭವದ ಮೆರವಣಿಗೆ ಹೋಗುತ್ತಿರುವಾಗ ಇಲ್ಲಿಯೇ ತಿಪ್ಪೆಯ ಮೇಲೆ ಮರುಳನಂತೆ ಇದ್ದ ತಿಪ್ಪೇಸ್ವಾಮಿ, ತನ್ನ ಪವಾಡದ ಮೂಲಕ ವೈಭವದ ಮೆರವಣಿಗೆಯನ್ನು ಹಾಸ್ಯ ಮಾಡಿ ಕೆಂಪಯ್ಯನಿಗೆ ಬುದ್ಧಿಕಲಿಸುತ್ತಾನೆ. ಹಾಗೆ ಹುಚ್ಚನಂತೆ ತಿಪ್ಪೆಮೇಲೆ ಪವಾಡ ಮಾಡಿದ್ದಕ್ಕಾಗಿ ಆತನನ್ನು 'ತಿಪ್ಪೇಸ್ವಾಮಿ' ಎಂದು ಕರೆಯುತ್ತಾರೆ. ಇನ್ನೊಂದು ಮಿತ್‌ನ ಪ್ರಕಾರ 'ತಿಪ್ಪೆ'ಯ ಮೇಲೆ ಯಾವಾಗಲೂ ಇರುತ್ತಿದ್ದ ಈ 'ಸ್ವಾಮಿ'ಯನ್ನು 'ತಿಪ್ಪೇಸ್ವಾಮಿ' ಎಂದು ಕರೆಯಲಾಯಿತು.'(ಹರ್ತಿಕೋಟೆ ವಿರೇಂದ್ರಸಿಂಹ, ಡಾ. ತೇಜಸ್ವೀ ಕಟ್ಟಿಮನಿ(ಸಂ), ೨೦೦೨, ಪು.೬೪)

ಈ ಮೇಲಿನ ಮಿತ್‌ಗಳು ನಾಥಪರಂಪರೆಯ ಗೋರಖ್‌ನಾಥನ ಹುಟ್ಟನ್ನು ನೆನಪಿಸುತ್ತವೆ. 'ನವನಾಥ ಭಕ್ತಸಾರ' ಕೃತಿಯಲ್ಲಿ ಕಂಡುಬರುವ ಗೋರಖ್‌ನಾಥನ ಹುಟ್ಟು ಹೀಗಿದೆ. 'ಒಮ್ಮೆ ಮತ್ಸೇಂದ್ರನಾಥನು ಭಿಕ್ಷೆ ಬೇಡುತ್ತಾ ಹೋದಾಗ ಒಬ್ಬ ಹೆಂಗಸು ಮಕ್ಕಳಿಲ್ಲದ ತನ್ನ ಕೊರಗನ್ನು ಹೇಳಿಕೊಳ್ಳುವಳು. ಆಗ ಮತ್ಸೇಂದ್ರನು ಮಂತ್ರಭಸ್ಮವನ್ನು ನೀಡಿ 'ಇದನ್ನು ಸೇವಿಸಿದರೆ ಮಕ್ಕಳಾಗುವುದೆಂದು' ಹೇಳಿ ಯಾತ್ರೆಗೆ ಹೊರಡುವನು ಅದನ್ನು ಅನುಮಾನಿಸಿದ ಅ ಹೆಂಗಸು ಮಂತ್ರಭಸ್ಮವನ್ನು ತಿಪ್ಪೆಗೆ ಎಸೆಯುವಳು. ಮುಂದೆ ಈ ತಿಪ್ಪೆಯಲ್ಲಿ(ಗೋವಿನ ಗೊಬ್ಬರ) ಮಗು ಹುಟ್ಟಿದ್ದರಿಂದಲೇ ಗೋರಖನಾಥ ಎಂದು ಹೆಸರು ಪ್ರಾಪ್ತವಾಯಿತು.

ಹೀಗೆ ಸಿದ್ಧಪರಂಪರೆಯಲ್ಲಿ ತಿಪ್ಪೆ, ಮಾಂಸ, ಭಂಗಿ, ಹೆಂಡ ಇವುಗಳು ಮೌಲ್ಯಯುತವಾಗಿ ಬಿಡುತ್ತವೆ. ವೈದಿಕ ಪರಂಪರೆ ಕೀಳುಗೊಳಿಸಿದ ಇವುಗಳನ್ನು ಸಿದ್ಧಪರಂಪರೆಯು ಹಠದಿಂದ ಮೌಲೀಕರಿಸುತ್ತದೆ. ವೈದಿಕ ಪರಂಪರೆಯ ಮೌಲ್ಯಗಳ ಪಾವಿತ್ರ್ಯನಾಶ ಆಶಯಗಳು ಸಿದ್ಧಪರಂಪರೆಯಲ್ಲಿನ ಪ್ರಧಾನ ಕಾರ್ಯವಾಗಿದೆ. ಅದು ಗೋರಕ್ಷನಿರಬಹುದು. ನಾಯಕನಟ್ಟಿ ತಿಪ್ಪೇಸ್ವಾಮಿ ಇರಬಹುದು. ಈ ಎಲ್ಲರೂ ಕೀಳನ್ನು ಮೌಲೀಕರಿಸುತ್ತಾರೆ. ಈ ಕುರಿತು 'ಸಿದ್ಧರು ಬಹಳಷ್ಟು ಪ್ರತೀಕ ಹಾಗೂ ಅಪ್ರಸ್ತುತಗಳನ್ನು ತಮ್ಮ ಸುತ್ತಣ ಜನಜೀವನದಿಂದ ಆರಿಸಿಕೊಂಡಿದ್ದಾರೆ. ಸಿದ್ಧರಲ್ಲಿ ಬಹುಪಾಲು ನಿಮ್ನ ವರ್ಗದವರು. ಬಹಳ ಮಂದಿ ಬ್ರಾಹ್ಮಣಸಿದ್ಧರು ತಮ್ಮ ಔನತ್ಯವನ್ನು ತೊರೆದು ಲೋಕ ಜೀವನದಲ್ಲಿ ಒಂದಾಗಿ ಹೋಗಿದ್ದರು. ಆದ್ದರಿಂದ ಅವರು ತಮ್ಮ ಶೈಲಿಯಲ್ಲಿ ಸಾಮಾನ್ಯ ಜೀವನದಿಂದ ಅಪ್ರಸ್ತುತ ಅಲಂಕಾರಗಳನ್ನು ಸ್ವೀಕರಿಸಿದರು'(ಮ.ಸು. ಕೃಷ್ಣಮೂರ್ತಿ, ೧೯೮೨, ಪು.೨೮೧) ಎಂದು ಹೇಳಲಾಗುತ್ತದೆ.

ನಾಯಕನಟ್ಟಿ ತಿಪ್ಪೇಸ್ವಾಮಿಯನ್ನು ಅವಧೂತನೆಂದು ಕರೆಯಲಾಗುತ್ತದೆ. ಅದೇ ರೀತಿ ಕೊಟ್ಟೂರ ಗುರುಬಸವನನ್ನು ಅವಧೂತ ಎನ್ನಲಾಗುತ್ತದೆ. ಮತ್ತು ಇವರಿಬ್ಬರೂ ಮರುಳರಂತೆ ಬದುಕಿದ್ದಾರೆ. ಬಸವಲಿಂಗ ಕವಿಯು ಗುರುಬಸವನನ್ನು ಕುರಿತು 'ದಿನಕರನಂತೆ ಮರುಳ ವೇಷದೊಳಪ್ಪಿದಂ', 'ಪುಚ್ಚನಂತಚ್ಚರಿಯೊಳಾಡುವನ', 'ಮಂದಮತಿಗಳ ಮಾನಸಕೆ ಮರುಳಂತ'(ಆರ್.ಸಿ.ಹಿರೇಮಠ(ಸಂ), ೨೦೦೧, ಪುಟ.೪೮-೫೦) ಎಂದು ಮತ್ತೆ ಮತ್ತೆ ಕರೆಯುತ್ತಾನೆ. ಈತನು ಹುಚ್ಚುತನದಿಂದ ಮಾಡಿದ ಪವಾಡಗಳನ್ನು ವರ್ಣಿಸುತ್ತಾನೆ. ಈಗಲೂ ಗುರುಬಸವನನ್ನು ಕೊಟ್ಟೂರಿನಲ್ಲಿ 'ಹುಚ್ಚಕೊಟ್ರಯ್ಯ' ಎಂದೇ ಜನ ಕರೆಯುವುದು.

ಅವಧೂತರಿಗೂ, ಮರುಳಸ್ಥಿತಿಗೂ ಸಂಬಂಧವಿರುವಂತಿದೆ. ಹಂಪೆಯ ಪರಿಸರದಲ್ಲಿನ ನೂರೊಂದು ವಿರಕ್ತರೂ ಕೂಡ ಈ ರೀತಿ ಅರೆಮರುಳ ಸ್ಥಿತಿಯವರಾಗಿದ್ದರು. 'ಒಂದು ಬಗೆಯ ವಾಮಾಚಾರದ ಶಿವೋಪಾಸಕರಂತಿರುವ ಇವರು(ನೂರೊಂದು ವಿರಕ್ತರು) ನಾಥಪಂಥಿಯರಂತೆ ಕಾಣುತ್ತಾರೆ. ಈ ಪಂಥದ ಸಂತರಿಗೆ 'ಅವಧೂತ'ರೆಂದು ಹೆಸರು. ನೂರೊಂದು ವಿರಕ್ತರ ಅರೆಮರುಳು ಸ್ಥಿತಿಯೂ ಅವಧೂತರನ್ನೇ ನೆನಪಿಸುತ್ತದೆ.'(ಡಾ.ಎಂ.ಎಂ. ಕಲ್ಬುರ್ಗಿ, ೧೯೯೮, ಪು.೨೩೦) ಗೋರಖನಾಥದಿಂದ ಪರಿವರ್ತಿತವಾದ ನಾಥಪಂಥದ ಹನ್ನೆರಡು ಶಾಖೆಗಳಲ್ಲಿ(೧. ಸತ್ಯನಾಥಿ, ೨. ಧರ್ಮನಾಥಿ, ೩.ರಾಮನಾಥಿ, ೪. ನಾಟೇಶ್ವರೀ, ೫. ಕನ್ಹಡ(ಡ), ೬. ಕಪಿಲಾನಿ, ೭. ವೈರಾಗಿ, ೮. ಮಾನನಾಥಿ, ೯. ಆಯೀಪಂಥ, ೧೦. ಪಾಗಲ್ ಪಂಥ, ೧೧. ದಜಪಂಥ ೧೨. ಗಂಗಾನಾಥಿ) ಪಾಗಲ್ ಪಂಥ ಎಂಬ ಒಂದು ವರ್ಗವೇ ಇದೆ. ಇವರು ಹುಚ್ಚುವರ್ತನೆಗೆ ಹೆಸರಾದವರು.

ಈ ಅರೆಮರುಳ ಸ್ಥಿತಿಯ ಮೂಲಕ ಪಂಚಗಣಾಧೀಶ್ವರು ಈ ವ್ಯವಸ್ಥೆಯ ನಡಾವಳಿಗಳನ್ನು ಪ್ರಶ್ನಿಸುತ್ತಾರೆ. ನಾಯಕನಟ್ಟಿ ತಿಪ್ಪೇಸ್ವಾಮಿ ಮತ್ತು ಕೊಟ್ಟೂರ ಗುರುಬಸವರ ಪವಾಡಗಳು ಈ

ಹುಚ್ಚುತನದಿಂದ ಕೂಡಿದ್ದು ಅವರು ಶೋಷಿತರ ಬಡವರ ಪರವಾಗಿ ವ್ಯವಸ್ಥೆಗೆ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾರೆ. ಸಂತರ ಇಂತಹ ಹುಚ್ಚಿನ ಪವಾಡಗಳು ಅವರ ಜನಪ್ರಿಯತೆಯನ್ನೂ ಹೆಚ್ಚಿಸಿವೆ. 'ವಾಸ್ತವವಾಗಿ ಹುಚ್ಚಿನ ಅಂಶವು ಅನುಭಾವಿ ಪಂಥಗಳಲ್ಲಿ ಸಾಮಾನ್ಯ. ಯೋಗದ ಮೂಲಕ 'ಪರ್ವಾ'(Trans) ಸ್ಥಿತಿಗೆ ಹೋಗುವುದು ಮೈಮರೆಯುವುದು, ಉನ್ಮತ್ತರಾಗಿ ಹಾಡಿ ಕುಣಿಯುವುದು ಇದಕ್ಕೆ ಉತ್ತೇಜನ ಪಡೆಯಲು ಭಂಗಿಯಂತಹ ಮಾದಕಗಳನ್ನು ತೆಗೆದುಕೊಳ್ಳುವುದು. ಇವು ಹುಚ್ಚಿಗೆ ಪೂರಕ ಸಂಗತಿಗಳು. ದೈವಿಕವಾದ ಈ ಹುಚ್ಚಿನ ಸ್ಥಿತಿಯಲ್ಲಿ ಅವರು ಧಾರ್ಮಿಕ-ಸಾಮಾಜಿಕ-ಶಿಷ್ಟಾಚಾರಗಳನ್ನು ಮೀರಿ ನಿರಂಕುಶಮತಿಗಳಾಗಿ ದಾರ್ಶನಿಕ ಸ್ಥಿತಿಯನ್ನು ಪಡೆಯುತ್ತಿದ್ದರು. ಸೂಫಿಗಳಲ್ಲಿ ದರವೇಸಿ ಖಲಂದರ್, ಮಜ್ಸೂಬ್ ಜಲಾಲಿಗಳು, ನಾಥರಲ್ಲಿ ಪಾಗಲ್ ಪಂಥಿಗಳು ತಮ್ಮ ಹುಚ್ಚುವರ್ತನೆಗೆ ಹೆಸರಾದವರು. 'ಹುಚ್ಚಪ್ಪಯ್ಯ' ಎಂಬ ಹೆಸರಿನ ಸಂತರು ಅನುಭಾವಿ ಪರಂಪರೆಗಳಲ್ಲಿ ಅನೇಕರಿದ್ದಾರೆ. ಚೆಳ್ಳುಗುರ್ಕಿಯ ಯರ್ರಿತಾತನೂ(ಯರ್ರೀ-ತೆಲುಗಿನಲ್ಲಿ ಹುಚ್ಚ) ನವಲುಗುಂದದ ನಾಗಲಿಂಗನೂ ತಮ್ಮ ಹುಚ್ಚಿಗೆ ಹೆಸರಾದವರು. ಬಂಕಾಪುರದ ಅಲ್ಲಾವುದ್ದೀನ್ ಶಾಖಾದ್ರಿಗೆ ಹುಚ್ಚುಸ್ವಾಮಿ ಎನ್ನಲಾಗುತ್ತಿತ್ತು. (ರಹಮತ್ ತರೀಕೆರೆ, ೨೦೦೧, ಪುಟ.೧೫೬) ಇದೇ ರೀತಿ ಹುಚ್ಚುತನದಿಂದ ಪವಾಡ ಮಾಡುವ ತಿಪ್ಪೇಸ್ವಾಮಿ ಹಾಗೂ ಕೊಟ್ಟೂರಿನ 'ಹುಚ್ಚುಕೊಟ್ರಯ್ಯ'(ಗುರುಬಸವ) ಅನುಭಾವಿ ಸಿದ್ದ ಪಂಥದವರು ಎನಿಸುತ್ತದೆ. ಇವರ ಪವಾಡಗಳನ್ನು ನೋಡಿದರೆ ಇವರು ಸಿದ್ಧಪಂಥದವರು ಎನ್ನುವುದು ಇನ್ನು ಸ್ಪಷ್ಟವಾಗುತ್ತದೆ.

'ಹಿಂದಿನ ಕಾಲದಲ್ಲಿ ಗಿಡಮೂಲಿಕೆಗಳಿಂದ 'ರಸಾಯನ'ವನ್ನು ಸಿದ್ದಿಸಿಕೊಂಡು ಅದರಿಂದ ಶರೀರದ ದುರ್ಬಲತೆ, ರೋಗ, ಮೃತ್ಯುಗಳನ್ನು ಗೆಲ್ಲುತ್ತಿದ್ದುದಾಗಿ ತಿಳಿದುಬರುತ್ತದೆ. ಬ್ರಹ್ಮಶಿವ ತನ್ನ 'ಸಮಯ ಪರೀಕ್ಷೆ'ಯಲ್ಲಿ ಕುಷ್ಟರೋಗ ನಿವಾರಿಸುವ, ಆಯುಷ್ಯ ಹೆಚ್ಚಿಸುವ, ಕಲ್ಲನ್ನು ಕನಕವಾಗಿಸುವ, ಬಂಜೆಗೆ ಮಕ್ಕಳನ್ನು ಕೊಡುವ, 'ಮದ್ದು' ಅರ್ಥಾತ್ 'ರಸಭಸ್ಮ'ವನ್ನು ಬಲ್ಲ ತಾಂತ್ರಿಕರನ್ನು ಉಲ್ಲೇಖಿಸಿದ್ದಾನೆ. ಸಾಯಣ ಮಾಧವನು ತನ್ನ 'ಸರ್ವದರ್ಶನ ಸಂಗ್ರಹ'ದಲ್ಲಿ ಒಂದು ಕ್ಷಣ ವೀರಶೈವವನ್ನು ಬಿಟ್ಟು ರಸಸಿದ್ಧರ 'ರಸೇಶ್ವರ ದರ್ಶನ'ವನ್ನು ವಿವರಿಸಬೇಕಾದರೆ, ಕರ್ನಾಟಕದಲ್ಲಿಯ ಈ ಸಿದ್ದರ ಪ್ರಾಬಲ್ಯದ ಅರಿವಾಗುತ್ತದೆ.(ಬಸವಲಿಂಗ ಸೊಪ್ಪಿಮಠ, ೧೯೯೫, ಪುಟ.೨೯೧-೨೯೨). ಕೊಟ್ಟೂರ ಗುರುಬಸವನು ಹುಚ್ಚರಂತೆ ತಿರುಗಾಡಿದ್ದು, ಕಲ್ಲು ಹೊಡೆದರೆ ತಾಗದೇ ಇದ್ದದ್ದು, ಹರಪ್ಪನಳ್ಳಿ ದೊರೆ ದಾದಿನಾಯಕನ ಮೂಲಕ ಕುರುಡನಿಗೆ ಕಣ್ಣು ಕೊಡಿಸಿದ್ದು, ಸುಲಿಗೆ ಮಾಡಲು ಬಂದ ಕಳ್ಳಬೇಡರಿಗೆ ಕಣ್ಣು ಕೈಕಾಲುಗಳನ್ನು ಕಳೆದು ಮತ್ತೆ ಮರಳಿ ಕೊಟ್ಟದ್ದು, ಸತ್ತ ಎಮ್ಮೆ, ಕುದುರೆ, ಹುಂಜ, ಆಕಳು-ಕರು, ಗೂಳಿಗಳನ್ನು ಬದುಕಿಸಿದ್ದು, ತನ್ನ ಭಸ್ಮ ಲೇಪನದಿಂದ ಸೊಂಡೂರ ಪರವಿನಾಯಕನ ಹೆಂಡತಿಗೆ ಜೀವದಾನ ನೀಡಿದ್ದು, ಅಂಗಳದ ಧೂಳಿನಿಂದ ವಡ್ಡರ ವಿಷಮಜ್ವರ ನಿವಾರಣೆಯಾದದ್ದು, ಕುಷ್ಟರೋಗ ನಿವಾರಣೆ ಮಾಡಿದ್ದು,

ಹಾವು ಕಚ್ಚಿದ ಬಲಗುರು ಲಿಂಗಣ್ಣನಿಗೆ ಭಸ್ಮಲೇಪನದಿಂದ ವಿಷ ಇಳಿದು ಹೋದದ್ದು, ರೋಗಿಯ ಗಂಡಮಾಲೆ ಹುಣ್ಣು ಮಾಯೆ ಮಾಡಿದ್ದು, ಭಕ್ತನ ಮನದ ಆಸೆಯಂತೆ ಹೊನ್ನಿನ ಮಳೆ ಸುರಿಸಿದ್ದು, ದಾಸೋಹಿ ಲಿಂಗಮ್ಮನಿಗೆ ಒಲಿದು ಮಳೆ ಪವಾಡ ಮಾಡಿದ್ದು, ಅಕ್ಬರ್ ಚಕ್ರವರ್ತಿಯ ಅರಮನೆಯಲ್ಲಿನ ಪವಾಡ ಇವೆಲ್ಲವುಗಳನ್ನು ಬಸವಲಿಂಗಕವಿ ತನ್ನ 'ಕೊಟ್ಟೂರ ಗುರುಬಸವೇಶ' ಚಾರಿತ್ರ್ಯದಲ್ಲಿ ವಿವರಿಸುತ್ತಾನೆ. ಈ ಪವಾಡಗಳ ಮೂಲಕ ಕೊಟ್ಟೂರ ಗುರುಬಸವ ಸಾವಿರಾರು ಭಕ್ತರನ್ನು ಆಕರ್ಷಿತಸುತ್ತಾನೆ. ಈ ಪವಾಡಗಳನ್ನು ನೋಡಿದರೆ ಈತ ರಸಸಿದ್ಧಿಯನ್ನು ಗಳಿಸಿಕೊಂಡ ನಾಥಪರಂಪರೆಯವನು ಎನಿಸುತ್ತದೆ.

ವಿಜಯನಗರ ಕಾಲದಲ್ಲಿ ಪ್ರವಾಸ ಕೈಗೊಂಡಿದ್ದ ಅಲ್ಬೇರುನಿ ರಸಸಿದ್ಧರನ್ನು ತಾನು ಕಂಡುದಾಗಿ ನುಡಿಯುತ್ತಾ ಹೀಗೆ ಹೇಳುತ್ತಾನೆ. ''ಹಿಂದುಗಳಲ್ಲಿ 'ರಸತಂತ್ರ', ವಿದ್ಯೆಯಂತಹ ಇನ್ನೊಂದು ವಿದ್ಯೆ ಇದೆ. ಅದಕ್ಕೆ 'ರಸಾಯನ ವಿದ್ಯೆ' ಎಂದೂ ಕರೆಯುತ್ತಾರೆ. ರಸ=ಚಿನ್ನ ಎಂಬುದರಿಂದ ಬಂದಿದ್ದರಿಂದ ರಸಾಯನ ಎಂದೂ ಕರೆಯುತ್ತಾರೆ. ಇದರಲ್ಲಿ ಮಿಶ್ರಣ ಮಾಡುವ ವಸ್ತುಗಳು ಬಹುಭಾಗ ಗಿಡಮೂಲಿಕೆಗಳು. ಈ ಔಷಧಿಯನ್ನು ತೆಗೆದುಕೊಂಡಲ್ಲಿ ಸಾಯುತ್ತಿರುವ ರೋಗಿಯೂ ಗುಣಮುಖನಾಗುತ್ತಾನೆ. ಮುದುಕನಾದವನು ಯುವಕನಾಗುತ್ತಾನೆ. ನೆರೆಗೂದಲು ಕಪ್ಪಾಗುತ್ತವೆ. ಇಂದ್ರಿಯಗಳು ಪುನಃ ಚೇತನಗೊಳ್ಳುತ್ತವೆ. ಆಯಸ್ಸು ವೃದ್ಧಿಯಾಗುತ್ತದೆ. ಹೀಗಿರುವಾಗ ಇಂಥ 'ರಸಾಯನ' ವಿದ್ಯೆ ತಿಳಿದಿರುವವರನ್ನು ಮುತ್ತಿಕೊಳ್ಳುವುದು ಏನಾಶ್ಚರ್ಯ''(ಎಚ್.ಎಲ್. ನಾಗೇಗೌಡ(ಸಂ), ಸಂಪುಟ I, ೧೯೬೪, ಪು.೩೬೦)

ನಾಯಕನಟ್ಟಿ ತಿಪ್ಪೇಸ್ವಾಮಿಯ ಜೀವನದಲ್ಲಿ ಮಾಡಿದ ಪವಾಡಗಳನ್ನು ನೋಡಿದರೆ ಈತನೂ ರಸಸಿದ್ಧನಿರಬೇಕು ಎನಿಸುತ್ತದೆ. ಹಾಗೆ ನೋಡಿದರೆ, ರಸಸಿದ್ಧರಿಗೂ-ನಾಥಸಿದ್ಧರಿಗೂ ಅಂತಹ ಬೇಧವೇನೂ ಇಲ್ಲ. ಈ ಕುರಿತು 'This sidda school(Natha) seems to be closely Associated with the Indian school of Rasayan and it is sometimes held that the siddha school was originally based on the thearies and practices of the Rasayana school'(Shashiboshana Dasagupta, ೧೯೪೬, ಪು.೧೯೨-೧೯೩) ಈ ರೀತಿ ಅಭಿಪ್ರಾಯ ಪಡುತ್ತಾರೆ. ಅಲ್ಲದೆ ನಾಯಕನಟ್ಟಿ ಊರಿನ ಹತ್ತಿರವೇ ಇರುವ ಪ್ರಸಿದ್ಧನಾದ ಸಿದ್ಧನಾಥ ನುಂಕೆಮಲೆಯ ಸಿದ್ದೇಶ್ವರ ರಸಸಿದ್ಧನೆಂದೇ ಪ್ರಸಿದ್ಧಿಯನ್ನು ಪಡೆದಿದ್ದಾನೆ.

ನಾಯಕನಟ್ಟಿ ತಿಪ್ಪೇಸ್ವಾಮಿಯು ನಿಡುಗಲ್ಲಿನ ದೊರೆಗಳಿಗೆ ಏಳು ಜನ ಪುತ್ರರನ್ನು ಕರುಣಿಸಿದ್ದು, ಹುಚ್ಚನಂತೆ ತಿಪ್ಪೆ ಮೇಲೆ ಕಂಡಿದ್ದು, 'ಮಾಡಿದವರಿಗೆ ನೀಡು ಭಿಕ್ಷೆ' ಪವಾಡದ ಮೂಲಕ ಮಣ್ಣಿನಲ್ಲಿ ಚಿನ್ನ ಕಾಣಿಸಿದ್ದು, ಫಣಿಯಪ್ಪನ ಮನೆಯಲ್ಲಿ ವಡೇವಿಗೆ ಅಕ್ಷಯಶಕ್ತಿ ನೀಡಿದ್ದು, ಇವೂ ಕೂಡ ನಾಥರು ಗಳಿಸಿದ ಸಿದ್ಧಿಗಳನ್ನೇ ಸೂಚಿಸುತ್ತವೆ.

ಇನ್ನು ಕೊಟ್ಟೂರು ಮತ್ತು ನಾಯಕನಟ್ಟಿಯಲ್ಲಿ ನಡೆಯುವ ಅಗಾಧ ಪ್ರಮಾಣದ ಕೊಬ್ಬರಿ ಸುಡುವ ವಿಶಿಷ್ಟ ಆಚರಣೆಯೂ ಕೂಡ ಇವರು ಸಿದ್ಧಪರಂಪರೆಯವರೆಂದು ನಿರೂಪಿಸುತ್ತದೆ. ನಾಯಕನಟ್ಟಿ ಜಾತ್ರೆಯ ಸಂದರ್ಭದಲ್ಲಿ ಹೊರಮಠದ ಆವರಣದಲ್ಲಿ ಸಿದ್ಧರು-ಜೋಗಿಗಳು ಅಪಾರ ಪ್ರಮಾಣದಲ್ಲಿ ಸೇರೆದು ಪ್ರಾಣಿಬಲಿ ನೀಡಿ ಮಾಂಸ ಎಡೆಕೊಡುತ್ತಿದ್ದರೆ, ಅದೇ ಹೊತ್ತಲ್ಲಿ ಒಳಮಠದ ಹತ್ತಿರ(ಕೆಲವು ವರ್ಷಗಳ ಹಿಂದೆ ಎಲ್ಲೆಂದರಲ್ಲಿ ಕೊಬ್ಬರಿ ಸುಡುತ್ತಿದ್ದರು. ಈಗ ನಿರ್ದಿಷ್ಟ ಸ್ಥಳದ ವ್ಯವಸ್ಥೆ ಮಾಡಿದ್ದಾರೆ.) ಹಗಲಿನಲ್ಲಿ ಅಪಾರ ಪ್ರಮಾಣದ ಕೊಬ್ಬರಿಯನ್ನು ಸುಡಲಾಗುತ್ತದೆ(ಅನುಬಂಧ ೭, ಛಾಯಾಚಿತ್ರಗಳು, ಚಿತ್ರ ಸಂ.೨೮). ಹೀಗೆ ಕೊಬ್ಬರಿ ಸುಡುವುದರ ಕುರಿತು ಇರುವ Mythನ ಪ್ರಕಾರ 'ತಿಪ್ಪೇಸ್ವಾಮಿ ರಾಯದುರ್ಗದಿಂದ ಫಣಿಯಪ್ಪ(ವೃತ್ತಿಯಲ್ಲಿ ವ್ಯಾಪಾರಿ) ಎಂಬ ಭಕ್ತನೊಂದಿಗೆ ನಾಯಕನಟ್ಟಿಗೆ ಬರುವಾಗ ಕತ್ತಲಾಗುತ್ತದೆ ಹಾಗೆ ಕತ್ತಲಾದ್ದರಿಂದ ಬೆಳಕಿಗಾಗಿ ಫಣಿಯಪ್ಪ ತನ್ನಲ್ಲಿರುವ ಕೊಬ್ಬರಿಯ ಬಟ್ಟಲುಗಳನ್ನು ಸುಟ್ಟು ದಾರಿ ಕಾಣುವಂತೆ ಬೆಳಕು ಮಾಡುತ್ತಾನೆ. ಆ ಬೆಳಕಿನಲ್ಲಿ ಇಬ್ಬರೂ ನಾಯಕನಟ್ಟಿಯನ್ನು ಸೇರುತ್ತಾರೆ. ಹೀಗೆ ದಾರಿಯಲ್ಲಿ ಬೆಳಕಿಗಾಗಿ ಕೊಬ್ಬರಿ ಬಟ್ಟಲು ಸುಟ್ಟು ಬಂದುದರ ಕುರುಹಾಗಿ ಈ ಆಚರಣೆ ಇದೆ ಎನ್ನಲಾಗುತ್ತದೆ. ಈ ಜಾತ್ರೆ ಹುಣ್ಣಿಮೆಯಂದು ನಡೆಯುತ್ತದೆ. 'ಜ್ಞಾನೋದಯ ಎಂಬುದನ್ನು ಹುಣ್ಣಿಮೆಯ ಬೆಳದಿಂಗಳ ಜೊತೆ, ಬೆಳಕಿನ ಜೊತೆ, ಒಂದು ಜ್ಯೋತಿ, ಹಣತೆಯ ಜೊತೆ, ಬೆಂಕಿಯ ಜ್ವಾಲೆ, ಉರಿ, ಕಿಚ್ಚು, ಬೆಳಕಿನ ಕಿರಣಗಳ ಜೊತೆ ಸಮೀಕರಿಸುವ 'ಪರಿಕಲ್ಪನೆ' ಬೌದ್ಧರಿಂದ ಬಂದಿರಬಹುದು'(ಮಹದೇವ ಶಂಕನಪುರ, ೨೦೦೨, ಪು.೨೬) ಏಕೆಂದರೆ ಭಗವಾನ್ ಬುದ್ಧನಿಗೆ ಹುಣ್ಣಿಮೆಯ ದಿನವೇ ಜ್ಞಾನೋದಯವಾಗಿದ್ದು. ಹಾಗಾಗಿ ಬೌದ್ಧ ಪೂರ್ಣಿಮೆಯನ್ನು ಬೋದಿ(ಜ್ಞಾನೋದಯ) ಪಡೆದ ದಿನವನ್ನಾಗಿ ಆಚರಿಸುವರು. ಭಗವಾನ್ ಬುದ್ಧ ಪಡೆದ ಜ್ಞಾನ ಮತ್ತು ನಾಯಕನಟ್ಟಿ ತಿಪ್ಪೇಸ್ವಾಮಿ ಪಡೆದುಕೊಂಡ ಸಿದ್ಧಿ ಬೇರೆ ಬೇರೆಯಾಗಿರಬಹುದು. ಆದರೆ ಶೈವ-ನಾಥಸಿದ್ದರ ಮೂಲ ಬೌದ್ಧಸಿದ್ಧವಾಗಿದ್ದು ಅನೇಕ ಬೌದ್ಧಸಿದ್ದ ಪರಿಕಲ್ಪನೆಗಳು ಶೈವ-ನಾಥ ಸೂಫಿಸಿದ್ಧರ ಆಚರಣೆಗಳಲ್ಲಿ ಸೇರಿಕೊಂಡು ಅವುಗಳನ್ನು ಸಂಕರಶೀಲವಾಗಿಸಿದೆ.

ಆದರೆ ಕೊಟ್ಟೂರಿನಲ್ಲಿ ಜಾತ್ರೆಯ ಸಂದರ್ಭದಲ್ಲಿ ಕೊಬ್ಬರಿಯನ್ನು ಸುಡದೆ ಕಾರ್ತಿಕೋತ್ಸವದ ರಾತ್ರಿ ಸುಡಲಾಗುತ್ತದೆ(ಅನುಬಂಧ ೭, ಛಾಯಾಚಿತ್ರಗಳು, ಚಿತ್ರ ಸಂ.೨೭) ಕಾರ್ತಿಕೋತ್ಸವದಂದು ಗುರುಬಸವನ ಉತ್ಸವ ಮೂರ್ತಿಯನ್ನು(ಅಳತೆ ಮಾಡುವ ಸೇರಿನ ಆಕಾರದಲ್ಲಿದೆ) ಜೊತೆಗೆ ಅಕ್ಬರ್ ಕೊಟ್ಟ ಖಡ್ಗವನ್ನು ಪಲ್ಲಕ್ಕಿಯಲ್ಲಿಟ್ಟು(ಈಗ ಬೆಳ್ಳಿರಥ ಮಾಡಿದ್ದಾರೆ) ಅಲಂಕಾರ ಮಾಡಿ ಅಂದು ರಾತ್ರಿ ಹಿರೇಮಠದಿಂದ (ಕ್ರಿಯಾಮಠ) ತೊಟ್ಟಿಲು ಮಠ(ಗುರುಬಸವನನ್ನು ಸಾಕಿದ ಅಂಬಿಯಕ್ಕನ ಮನೆ), ಗಚ್ಚಿನಮಠಕ್ಕೆ(ಜೀವಂತ ಸಮಾಧಿಮಠ) ಹೋಗಿ ಅಲ್ಲಿಂದ ಮರಳಿ ಹಿರೇಮಠಕ್ಕೆ ತರಲಾಗುತ್ತದೆ. ಇಡೀ ಆಚರಣೆ ರಾತ್ರಿಯೆಲ್ಲಾ ಜರುಗಿ ಮುಕ್ತಾಯವಾಗುವುದರೊಳಗಾಗಿ ಮುಂಜಾನೆ ೩-೪ ಗಂಟೆ ಆಗುತ್ತದೆ. ಆ ರಾತ್ರಿಯ ಸಂದರ್ಭದಲ್ಲಿ ಹಿರೇಮಠದ ಮುಂದುಗಡೆ ಅಪಾರ ಪ್ರಮಾಣದಲ್ಲಿ ಭಕ್ತರು ಕೊಬ್ಬರಿಯನ್ನು ಸುಡುವುದು ದೀಪಗಳಿಗೆ(ಈ

ಸಂದರ್ಭದಲ್ಲಿ ೧೦ ವರ್ಷಗಳಿಂದ ಲಕ್ಷದೀಪೋತ್ಸವ ಆಚರಿಸಲಾಗುತ್ತಿದೆ) ಎಣ್ಣೆಯನ್ನು ಹಾಕುವುದು ಮಾಡುತ್ತಾರೆ.

ಇದೂ ಕೂಡ ಹುಣ್ಣಿಮೆಯ ಹತ್ತಿರವಿರುವ ಸೋಮವಾರದಂದು(ಡಿಸೆಂಬರ್ ತಿಂಗಳಲ್ಲಿ) ನಡೆಯುತ್ತದೆ. 'ಸಿದ್ಧ ಪಂಥದಲ್ಲಿ ಮೂರ್ತಿಪೂಜೆ, ವಿಗ್ರಹರಾಧನೆಗಳಿಲ್ಲ. ಈ ಪರಂಪರೆಯ 'ಸಿದ್ಧರು' ರಚಿಸಿರುವ ವಚನಗಳ ಕಟ್ಟು, ಅವರ ಸಮಾಧಿಗಳಾದ ಗದ್ದುಗೆಗಳು, ಅವರ ಜೊತೆ ಇಟ್ಟುಕೊಂಡಿದ್ದ ಕಂಡಾಯಗಳು, ನಾಗಬೆತ್ತಗಳು, ಅವರು ಕಾಯಸಿದ್ಧಿಗಾಗಿ ಬಳಸುತ್ತಿದ್ದ ಕಬ್ಬಿಣದ ಆಯುಧ, ಆಭರಣ, ತಂಬೂರಿ ಮೊದಲಾದವು ಪೂಜ್ಯ ಹಾಗೂ ಪವಿತ್ರವೆಂದು ಪರಿಗಣಿಸಲ್ಪಟ್ಟಿವೆ. ಗದ್ದಿಗೆಗಳ ಮೇಲೆ ವಚನಗಳ ಕಟ್ಟು, ಕಂಡಾಯ ಬೆತ್ತಗಳು ಇತರ ಆಯುಧ ಗುರುಮಣಿ ಸರಗಳನ್ನು ಇಟ್ಟು ಆರಾಧಿಸುತ್ತಾರೆ. ಈ ವಸ್ತುರೂಪದಲ್ಲಿ ಸಿದ್ಧರನ್ನು ಕಾಣುವುದು ಪರಂಪರೆಯ ಲಕ್ಷಣ. ಜೊತೆಗೆ ಈ ಪರಂಪರೆಯ ಪಂಥದಲ್ಲಿ 'ಜ್ಯೋತಿ' ಸ್ವರೂಪಕ್ಕೆ ಪೂಜ್ಯ ಸ್ಥಾನವಿದೆ.(ಮಹದೇವ ಶಂಕನಪುರ, ೨೦೦೨, ಪು.೨೪) ಕೊಟ್ಟೂರ ಕಾರ್ತಿಕೋತ್ಸವದಲ್ಲಿ ಅಕ್ಬರ್‌ನ ಖಡ್ಗವನ್ನು ಮತ್ತು ಉತ್ಸವದ ಮೂರ್ತಿಯನ್ನು ಅಲಂಕರಿಸಿ ಮೆರವಣಿಗೆ ಮಾಡುವುದು, ಹುಣ್ಣಿಮೆಯ ಸೋಮವಾರ ಕೊಬ್ಬರಿ ಸುಡುವುದರ ಮೂಲಕ ಬೆಳಕಾಗಿಸುವುದು ಇವೆಲ್ಲ ಕೊಟ್ಟೂರ ಗುರುಬಸವ ಸಿದ್ಧಪರಂಪರೆಯವನೆಂದು ಸಾಬೀತುಪಡಿಸುತ್ತದೆ.

ಕೊಟ್ಟೂರಿನಲ್ಲಿ ಕೊಬ್ಬರಿ ಸುಡುವ ಈ ಕ್ರಿಯೆ ಚಿಕ್ಕಲೂರಿನಲ್ಲಿ ನಡೆಯುವ ಮಂಟೇಸ್ವಾಮಿ, ಜಾತ್ರೆಯ 'ಚಂದ್ರಮಂಡಲ'ವನ್ನು ಹೋಲುತ್ತದೆ. ಮಂಟೇಸ್ವಾಮಿಯನ್ನು 'ಜ್ಯೋತಿ' ರೂಪದಲ್ಲಿ ಆರಾಧಿಸುವುದು, ಪ್ರತಿಷ್ಠಾಪಿಸುವುದೂ ಇದೆ. ಮಂಟೇಸ್ವಾಮಿಯನ್ನು ಪರಂಜ್ಯೋತಿ, ಜ್ಯೋತಿರ್ಲಿಂಗಯ್ಯ ಎಂದೂ ಕರೆಯಲಾಗುತ್ತದೆ. ಕೊಟ್ಟೂರ ಗುರುಬಸವನಿಗಾಗಲಿ ನಾಯಕನಟ್ಟಿ ತಿಪ್ಪೇಸ್ವಾಮಿಗಾಗಲಿ ನೇರವಾಗಿ ಈ ಆಚರಣೆ ಬಂದಿಲ್ಲದಿರಬಹುದು. ಆದರೆ ಮಂಟೇಸ್ವಾಮಿಯಂತಹ ಸಮಕಾಲೀನ ಪರಂಪರೆಗಳ ಪ್ರಭಾವ, ಅನುಕರಣೆಯಿಂದಲೂ ಈ ಆಚರಣೆ ಹುಟ್ಟಿಕೊಂಡಿರಬಹುದು.

ಸಮಕಾಲೀನ ಪಂಥವಾದ ಕೊಡೇಕಲ್ ಬಸವಣ್ಣನಂತೆ ಕೊಟ್ಟೂರ ಗುರುಬಸವನನ್ನು 'ವೀರವಸಂತ' ಎಂದು ಸ್ವರವಚನವೊಂದು ಉಲ್ಲೇಖಿಸುತ್ತದೆ. ಈ ಸ್ವರವಚನದ ಪ್ರಕಾರ

'ಹೊಟ್ಟು ಹಾರಿತು ಗಟ್ಟಿ ಉಳಿಯಿತೆಂಬ ನುಡಿಯ ಕೇಳಿ
ನಷ್ಟವನು ಗಳಿಸಿ ಲಾಭವ ಮೆರೆದಿಲ್ಲ
ದಿಟ್ಟರಾಗಿದ್ದವರು ಇಷ್ಟಲಿಂಗವ ನೋಡಿ
ಕೊಟ್ಟೂರು ಬಸವೇಶ ಪಟ್ಟಕ್ಕೆ ನಿಂದ
ಕಟ್ಟಕಡೆಯಾಟವಿದು ಕೊಟ್ಟು ಕಲ್ಪನೆ ಬಂದ
ಸೃಷ್ಟಿಯೊಳು ವೀರವಸಂತನೆಂದೆನಿಸಿ

ಮುಟ್ಟಿ ಪೂಜಿಸಿದವರೆ ಇಷ್ಟಸಿದ್ಧಿಯ ಕೊಡುವ
ಕಪ್ಪಡಿಯ ಸಂಗಮೇಶ್ವರ ಪೇಳ್ದ ನುಡಿಯ'

(ಜಿ.ಜಿ.ಮಂಜುನಾಥ(ಸಂ), ೧೯೯೫, ಪು.೩)

ಇಲ್ಲಿ ಕೊಟ್ಟೂರ ಗುರುಬಸವನು ಭೂಮಿಯಲ್ಲಿ ವೀರವಸಂತನೆಂದೆನಿಸಿ ಅವತರಿಸಿದರ ಬಗೆಗೆ ಉಲ್ಲೇಖವಿದೆ. 'ವೀರವಸಂತ' ಎನ್ನುವುದು ಕೊಡೇಕಲ್ ಬಸವಣ್ಣನಿಗೆ ಇದ್ದಂತಹ ಹೆಸರು. ವೀರವಸಂತನು ಸೃಷ್ಟಿಯಲ್ಲಿ ಆಗಮಿಸುವ ಕಾಲವನ್ನು ವಿರುಪಾಕ್ಷಪಂಡಿತನು

'ಎಲೆ ಸಿದ್ದರಾಮೇಶ ಕೇಳ್ವುದೊಲವಿಂ ಮುಂದೆ
ಕಲಿಯುಗದ ನಾಲ್ಕು ಸಾವಿರದಾರುನೂರರಿಂ
ಬಳಿಕಲೆಂಬತ್ತು ಮೂರನೆಯ ಸ್ವಭಾನುಸಂವಂತ್ಸರದ ಮಾಘಬಹುಳ|
ಸಲೆ ಚತುರ್ದಶಿ ಸೋಮವಾರದಿಪ್ಪತ್ತೆಂಟು
ಗಳಿಗೆಯೊಳ್ ಕರ್ಣಾಟಕದೇಶಮಂ ತಾನಂದು
ತಾಳುವದೈದುವನಿರದೆ ವೀರವಸಂತಭೂಪಾಲನತಿಗೋಪ್ಯದಿಂದೆ||

(ಚೆನ್ನಬಸವ ಪುರಾಣ, ಸಂಧಿ.೬೪, ಪದ್ಯ ೬೪)

ಎನ್ನುವ ಪದ್ಯದಲ್ಲಿ ಹೇಳಿದ್ದಾನೆ. 'ಕಲಿಯುಗ ನಾಲ್ಕು ಸಾವಿರದಾರು ನೂರರಿಂದ ಬಳಿಕಲೆಂಬತ್ತು ಮೂರನೇಯ ಸ್ವಭಾನು ಸಂವತ್ಸರ'ವು ಕ್ರಿ.ಶ. ೧೫೮೪ರ ಇಸ್ವಿಯನ್ನು ಸೂಚಿಸುತ್ತದೆ. ಈ ಹೊತ್ತಲ್ಲಿ ವೀರವಸಂತ 'ಅತಿಗೋಪ್ಯ'ದಿಂದ ಕರ್ನಾಟಕವನ್ನು ಪ್ರವೇಶಿಸುವ ಸೂಚನೆ ಇಲ್ಲಿದೆ. ಕೊಟ್ಟೂರ ಗುರುಬಸವ ಮೂಲತಃ ಕರ್ನಾಟಕದವನಲ್ಲ. ಅವನು ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಹೊಸೂರಿನವನು. ಅಲ್ಲಿಂದ ಎಡೆಯೂರು, ಹಂಪಿ ಮಾರ್ಗವಾಗಿ ಕೊಟ್ಟೂರಿಗೆ ಬಂದಿದ್ದಾನೆ. ಹಾಗೆ ಬರುವಾಗ ಮರುಳ ವೇಷದಿಂದ ಬಂದಿದ್ದಾನೆ.(ದಿನಕರನಂತೆ ಮರುಳವೇಷದೊಳಪ್ಪಿದಂ) ವಿದ್ವಾಂಸರು ನಿರ್ಧರಿಸಿದಂತೆ ಕೊಡೇಕಲ್ ಬಸವಣ್ಣನ ಕಾಲ ಕ್ರಿ.ಶ. ೧೪೮೯, (ಬಸವಲಿಂಗ ಸೊಪ್ಪಿಮಠ, ೧೯೯೫, ಪುಟ.೪೮) ಇದು ವೀರವಸಂತನು ಬರುವನೆಂದು ಚೆನ್ನಬಸವ ಪುರಾಣ ಹೇಳುವ, ಕ್ರಿ.ಶ. ೧೫೮೪ಕ್ಕೆ ತುಂಬಾ ದೂರದಲ್ಲಿದೆ. ಆದರೆ 'ಕೊಟ್ಟೂರ ಗುರುಬಸವನ ಕಾಲ ಕ್ರಿ.ಶ. ೧೫೬೦'(ಆರ್.ಸಿ. ಹಿರೇಮಠ(ಸಂ) ೨೦೦೧, ಪುಟ.XXViii) ಇದು ಚೆನ್ನಬಸವ ಪುರಾಣ ಸೂಚಿಸುವ ಕಾಲಕ್ಕೆ ಸರಿಹೊಂದುತ್ತದೆ.

ತಿಂಥಿಣಿ ಮೋನಪ್ಪಯ್ಯನ ವಚನವೊಂದು ವೀರವಸಂತನ ಆಗಮನವನ್ನು

'ನಿಬ್ಬಣ ನೆರೆದೀತು ಹಂಪೆಯ ಪೊಳೆಯಲಿ
ಬೊಬ್ಬೆ ಹೊಯ್ಯುಲು ಸಾಕ್ಷಿ

ಅಬ್ಬರದಲಿ ವೀರಬಸವಣ್ಣ ಬರುವಾಗ

ಸಂಬ್ರಮವೇ ಸಾಕ್ಷಿ ಬಸವಣ್ಣ'

(ಜೀವಣ್ಣಮಸಳಿ(ಸಂ), ೧೯೮೭, ಪು.೨೪)

ಇಲ್ಲಿ ವೀರಬಸವಣ್ಣ(ಇನ್ನೊಂದು ಹೆಸರು ವೀರವಸವಂತ) ಬರುವ ಸನ್ನಿವೇಶವನ್ನು ವಿವರಿಸಲಾಗಿದೆ. ಹಂಪೆಯ ಹೊಳೆಯಲಿ ಬೊಬ್ಬೆ ಹುಯ್ಯೊಲು' ವೀರಬಸವಣ್ಣ ಬರುತ್ತಾನೆನ್ನುವಲ್ಲಿ ವಿಜಯನಗರದ ವಿನಾಶ ಕಾಲವೇ ವೀರಬಸವಣ್ಣನ ಆಗಮನ ಕಾಲ ಎನ್ನುವುದು ಸ್ಪಷ್ಟವಾಗಿದೆ. 'ಸಾಮಾನ್ಯವಾಗಿ ವೀರವಸಂತನನ್ನು ಉಲ್ಲೇಖಿಸುವ ಕಾಲಜ್ಞಾನ ವಚನಗಳು ಮತ್ತು ಕಾವ್ಯಗಳು ಹಂಪೆಯ ಅಳಿವಿನ ಕಾಲಕ್ಕೆ ಈತ ಆಗಮಿಸುತ್ತಾನೆ ಎಂದು ದೃಢವಾಗಿ ಹೇಳುತ್ತವೆ.'(ಬಸವಲಿಂಗ ಸೊಪ್ಪಿಮಠ, ೧೯೯೫, ಪುಟ.೩೪೭) ೧೫೬೦ರಲ್ಲಿದ್ದ ಕೊಟ್ಟೂರ ಗುರುಬಸವ ತಮಿಳುನಾಡಿನ ಹೊಸೂರಿನಿಂದ ಎಡೆಯೂರಿನ ಮಾರ್ಗವಾಗಿ ಹಂಪೆಗೆ ಬಂದು ಅಲ್ಲಿಂದ ಕೊಟ್ಟೂರಿಗೆ ಬಂದಿದ್ದಾನೆ. ಇದೇ ಹೊತ್ತಲ್ಲಿ ವಿಜಯನಗರ ಸಾಮ್ರಾಜ್ಯವು ರಕ್ಕಸ-ತಗಂಡಗಿ(೧೫೬೫) ಯುದ್ಧದಲ್ಲಿ ವಿನಾಶಹೊಂದಿದೆ.

ಈ ಹಿಂದೆ ನೋಡಿದ ಕರಿಬಸವೇಶ್ವರ ಸ್ವರವಚನವು ವೀರವಸಂತನೆಂದು ಸೂಚಿಸುತ್ತಿರುವ ಕೊಟ್ಟೂರು ಬಸವನೇ ವೀರವಸಂತನೆಂದೆನಿಸುತ್ತದೆ. ಈತನೇ ಹಂಪಿಯ ಅಳಿವಿನ ಕಾಲಕ್ಕೆ ಹುಚ್ಚನಂತೆ ಆಗಮಿಸಿರಬಹುದು. ಗೋಣಿಬಸವನ ಕಾಲಜ್ಞಾನ ಹಸ್ತಪ್ರತಿಯಲ್ಲಿಯೂ 'ವೀರವಸಂತನ' ಉಲ್ಲೇಖ ಬರುತ್ತದೆ. ಇವತ್ತಿಗೂ ಗೋಣಿಬಸವನ ಮಠದಲ್ಲಿರುವ ಗರ್ಭಗುಡಿಯಲ್ಲಿ ಕೊಟ್ಟೂರ ಗುರುಬಸವನ ಮೂರ್ತಿಯನ್ನೇ ಎಲ್ಲೆಡೆಯೂ ಪ್ರತಿಷ್ಠಾಪಿಸಲಾಗುತ್ತದೆ. ಗೋಣಿಬಸವನ ರಥೋತ್ಸವದ ಸಂದರ್ಭದಲ್ಲಿ ರಥದಲ್ಲಿ ಕೊಟ್ಟೂರ ಗುರುಬಸವನ ದೇವಾಲಯದಿಂದ(ಕೂಲಹಳ್ಳಿ) ಉತ್ಸವ ಮೂರ್ತಿಯನ್ನು ತಂದು ಅದನ್ನೇ ರಥದಲ್ಲಿ ಪ್ರತಿಷ್ಠಾಪಿಸಿ ಜಾತ್ರೋತ್ಸವ ನಡೆಯುತ್ತದೆ. ಇದು ಗುಮ್ಮಗೋಳದಲ್ಲಿನ ಗೋಣಿ ಬಸವನ ಜಾತ್ರೆಯಲ್ಲಿಯೂ ನಡೆಯುವಂತಹುದಾಗಿದೆ. ಹಾಗಾಗಿ ಗೋಣಿಬಸವನ ಕಾವ್ಯ ಹಾಡುವ ಬಾಲಬಸವರು ಉಲ್ಲೇಖಿಸುವ ವೀರವಸಂತ, ಕೊಟ್ಟೂರ ಗುರುಬಸವನೇ ಇರಬೇಕು.

ಈ ಮೇಲಿನ ಆಧಾರಗಳು ಕೊಟ್ಟೂರ ಗುರುಬಸವನನ್ನು ವೀರವಸಂತನೆಂದು ಅತ್ಯಂತ ನಿಖರವಾಗಿ ಸ್ಪಷ್ಟಪಡಿಸದಿದ್ದರೂ, ಶೈವನಾಥ ಸಿದ್ಧರಾದ ಕೊಡೇಕಲ್ ಬಸವಣ್ಣ, ತಿಂಥಿಣಿ ಮೋನಪ್ಪಯ್ಯ ಮತ್ತು ಬಾಲಬಸವ ಪಂರಪೆಗಳಿಗೂ ಕೊಟ್ಟೂರ ಗುರುಬಸವನಿಗೂ ಸಂಬಂಧ ಪ್ರಭಾವ ಇರುವುದನ್ನಂತು ಸ್ಪಷ್ಟಪಡಿಸುತ್ತವೆ.

ಕೂಲಹಳ್ಳಿಯ ಮದ್ದಾನ ಸ್ವಾಮಿ ಮತ್ತು ಆತನ ಮಗ ಗೋಣಿಬಸವನ ಜೀವನ-ಸಾಧನೆಗಳಂತೂ ಇವರು ಸ್ಪಷ್ಟವಾಗಿ ಶೈವನಾಥ ಸಿದ್ಧರೆಂಬುದನ್ನು ತಿಳಿಸುತ್ತದೆ. ಅದರಲ್ಲೂ ಗೋಣಿಬಸವನ ಬದುಕು,

ಆತನ ಒಕ್ಕಲಾಗಿರುವ ಬಾಲಬಸವರ ಕಾಲಜ್ಞಾನ ವಚನಗಳು, ಗೋಣಿಬಸವ ಕಾವ್ಯ, ಇವೆಲ್ಲವುಗಳ ಸುತ್ತಲೂ ಹಬ್ಬಿರುವ ಆಚರಣೆಗಳು, ಮಠಗಳು ಆತನನ್ನು ಮಧ್ಯಕರ್ನಾಟಕದಲ್ಲಿನ ಹಲವಾರು ಧಾರ್ಮಿಕ ಸಂತರಲ್ಲಿಯೇ ಅತ್ಯಂತ ವಿಶಿಷ್ಟವಾಗಿ ಕಾಣುವಂತೆ ಮಾಡಿವೆ.

'ಬಾಲಬಸವ' ಪರಂಪರೆಯ ಹಾಡುಗಾರರು ಮದ್ದಾನೇಶ್ವರನ ಮಗ ಗೋಣಿಬಸವನ ಕಾವ್ಯವನ್ನು ಹಾಡುವುದನ್ನೇ ಕಾಯಕವಾಗಿಸಿಕೊಂಡಿದ್ದಾರೆ. ಈ ಹಾಡು ಮಂಟೇಸ್ವಾಮಿ ಮಲೆಮಾದೇಶ್ವರ ಕಾವ್ಯಗಳನ್ನು ಹೋಲುತ್ತದೆ. ಈ ಬಾಲಬಸವರು ಕಾಲಜ್ಞಾನ ಸಾರುವಾಗ ಕಿವಿಯಲ್ಲಿ ಕರ್ಣಕುಂಡಲಗಳನ್ನು, ಕೈಯಲ್ಲಿ ತಂಬೂರಿಯನ್ನು, ಹಿಡಿದುಕೊಂಡು ಬೆರಳಲ್ಲಿ ಬಸವ ಮುದ್ರೆ, ಒಂಟಿ ಜಂಗಿನ ಬೆತ್ತ ಹಿಡಿದು ಕಾವಿ ವೇಷ ತೊಟ್ಟು ಕಾಲಜ್ಞಾನವನ್ನು ಸಾರುತ್ತಾ ಭಿಕ್ಷಾಟನೆಯನ್ನು ಮಾಡುತ್ತಾರೆ. ಹೆಂಗಸರೂ ಸಹಿತ ಕಾಲಜ್ಞಾನವನ್ನು ಸಾರುವುದರ ಜೊತೆ ಭಿಕ್ಷಾಟನೆಯನ್ನು ಮಾಡುತ್ತಾರೆ.

ಬಾಲಬಸವರು ಸಾರುವ ಕಾಲಜ್ಞಾನ ಪ್ರಕಾರ ಹುಟ್ಟಿರುವುದು ಕೊಡೇಕಲ್ ಪರಂಪರೆಯ ಪ್ರಭಾವದಿಂದ ೧೫-೧೬ನೇ ಶತಮಾನದಲ್ಲಿ ರಾಜಕೀಯವಾಗಿ ವಿಜಯನಗರದೊಂದಿಗಿನ ಯುದ್ಧ, ಅದರಲ್ಲುಂಟಾದ ವಿಜಯನಗರದ ಸೋಲು, ನಂತರ ಬಂದ ಪಾಳೇಗಾರರ ನಡುವೆ ನಡೆದ ನಿರಂತರ ಕಿತ್ತಾಟ ಆ ಕಾಲದ ಸಮಾಜದ ನೆಮ್ಮದಿಯನ್ನು ಕದಡಿದೆ. ಇಂತಹ ಹೊತ್ತಲ್ಲಿ ಸಾಮಾಜಿಕ ಕಳಕಳಿಯ ಕೊಡೇಕಲ್ ಬಸವಣ್ಣ, ಎಮ್ಮೆ ಬಸವಣ್ಣ, ಮಂಟೇಸ್ವಾಮಿ, ತಿಂಥಿಣಿ ಮೋನಪ್ಪಯ್ಯ ಮುಂತಾದವರು ಕಾಲಜ್ಞಾನವನ್ನು ಸಾರುತ್ತ ಜನತೆಗೆ ಪ್ರಸ್ತುತ ಸ್ಥಿತಿಯನ್ನು ವಿವರಿಸಿದ್ದಾರೆ. ಹಾಗೆಯೇ ಅದನ್ನು ದಾಟಲು ಜನತೆಗೆ ಧೈರ್ಯ ಹಾಗೂ ಎಚ್ಚರಗಳನ್ನು ನೀಡಿದ್ದಾರೆ.

ಕನ್ನಡದಲ್ಲಿ ವೀರಶೈವ ಕಾಲಜ್ಞಾನವನ್ನು ಪ್ರಥಮತಃ ಆರಂಭಿಸಿದವನು ಕೊಡೇಕಲ್ ಬಸವಣ್ಣ. ಅವನ ಈ ಪರಂಪರೆ ಮುಂದೆ ಮಕ್ಕಳು, ಶಿಷ್ಯರ ಮೂಲಕ ಬೆಳೆದುಕೊಂಡು ಬಂದಿದೆ. 'ಇವತ್ತು ಕರ್ನಾಟಕದಲ್ಲಿ ಅದರಲ್ಲೂ ಉತ್ತರ ಕರ್ನಾಟಕದಲ್ಲಿ ಕಾಲಜ್ಞಾನವೆಂದರೆ ಕೊಡೇಕಲ್ ಕಾಲಜ್ಞಾನ. ಕಾಲಜ್ಞಾನ ಸಾರುವ ಅಯ್ಯಗಳು ಅರ್ಥಾತ್ ಜಂಗಮರೆಂದರೆ ಕೊಡೇಕಲ್ ಜಂಗಮರೆಂದೇ ಖ್ಯಾತಿ'(ಬಸವಲಿಂಗ ಸೊಪ್ಪಿಮಠ, ೧೯೯೫, ಪು.೧೨೬) ಬಾಲಬಸವರ ಕಾಲಜ್ಞಾನವೊಂದು ವೀರವಸಂತನ ಆಗಮನವನ್ನು ವಿವರಿಸುತ್ತದೆ.

'ಮೂರೇಳು ದಿನಾವು 'ಮುಳುಗುವುದು ಮರ್ತ್ಯಕ್ಕೆ| ವೀರವಸವಂತ ಬರುವಾಗ||ಸು||
ಹುಟ್ಟಿದೇಳು ದಿವಸಾಕೆ| ಬೆಟ್ಟಗಳು ನಡುಗ್ಯಾವು| ಬೆಟ್ಟ ಗುಂಡು ಉರುಳ್ಯಾವು||ಸು||
ಬೆಟ್ಟದಾ ಗುಂಡು ಉರುಳ್ಯಾವು| ಚೆನ್ನಬಸವಾ| ಸೃಷ್ಟಿಪಾಲಕ ಬರುವಾಗ||ಸು||

(ಅನುಬಂಧ ೫, ಬಾಲಬಸವರ ಕಾಲಜ್ಞಾನ ಸಾಹಿತ್ಯ)

ಇಲ್ಲಿ ವೀರವಸಂತನ ಆಗಮನವನ್ನು ಸೂಚಿಸುವ ಈ ವಚನ ಕರಪಲ್ಲವಾಗಿದೆ. ಬಾಲಬಸವರ ಈ ಕರಪಲ್ಲವವು ಕೊಡೇಕಲ್ ಪರಂಪರೆಯಿಂದ ಪಡೆದಿರುವಂತಹುದು. 'ಕೊಡೇಕಲ್ ಜಂಗಮರೆಂದೇ

ಜನಪ್ರಿಯರಾಗಿರುವ ಉತ್ತರ ಕರ್ನಾಟಕ ಭಾಗದ ಸಾರುವಯ್ಯಗಳು ಕಾಲಜ್ಞಾನವನ್ನು ಸಾರುತ್ತಾರೆ. ಕರಪಲ್ಲವನ್ನೂ ಮಾಡುತ್ತಾರೆ. ಕಾಲಜ್ಞಾನ ಸಾಹಿತ್ಯ 'ರಚನೆ' ಹಾಗೂ ಅದರ 'ಸಾರುವ' ಪರಂಪರೆಗೆ ಮೂಲನಾದ ಕೊಡೇಕಲ್ ಬಸವನ ಜನ, ಕರಪಲ್ಲ ಮಾಡುತ್ತಿರುವುದನ್ನು ನೋಡಿದರೆ ಕರ್ನಾಟಕದಲ್ಲಿ ಈ ವಿದ್ಯೆ ಈತನಿಂದ ಚಲಾವಣೆಗೊಂಡಿರುವಂತೆ ತೋರುತ್ತದೆ.'(ಬಸವಲಿಂಗ ಸೊಪ್ಪಿಮಠ, ೧೯೯೫, ಪುಟ.೧೨೭) ಕಾಲಜ್ಞಾನ ವಚನಗಳಿಗೂ ಕರಪಲ್ಲದ ಮಧ್ಯ ಅಂತಹ ವ್ಯತ್ಯಾಸವೇನೂ ಇಲ್ಲ. 'ಕಾಲಜ್ಞಾನಗಳಲ್ಲಿ ವೀರವಸಂತನೋ ಚೆನ್ನಬಸವಣ್ಣನೋ ಹುಟ್ಟಿ'' ಬರುತ್ತಾನೆ ಎಂಬ ವಿಶ್ವಾಸ ನಿರೀಕ್ಷೆ ಇದ್ದರೆ, 'ಕರಪಲ್ಲ'ದ 'ಸುವ್ವಿ ಬಾ ಸಂಗಯ್ಯ, ಸುವ್ವಿ ಬಾ ಲಿಂಗಯ್ಯ, ಸುವ್ವಿ ಬಾ ಚೆನ್ನಬಸವಯ್ಯ' ಎಂಬ ಪಲ್ಲವಿಯಲ್ಲಿ ಸಂಗಯ್ಯ, ಲಿಂಗಯ್ಯರಾದಿಯಾಗಿ ಚೆನ್ನಬಸವಯ್ಯನನ್ನು 'ಬಾ' ಎಂದು ಕರೆವ ಕರಪಲ್ಲ, ನಡುವೆ ಹಾಗೂ ಕರಪಲ್ಲದ ಪರಿಸರ ಒಂದೇ ಎಂಬುದನ್ನು, ಒಂದೇ ಮೂಲದಿಂದ ಇವು ಹುಟ್ಟಿ ಬೆಳೆದಿರಬೇಕೆಂಬುದನ್ನು ಮನದಟ್ಟು ಮಾಡಿಕೊಡುತ್ತವೆ.(ಅದೇ, ಪುಟ.೧೨೬)

ಕಾಲಜ್ಞಾನವನ್ನು ಸಾರುತ್ತಾ ಬಾಲಬಸವರ ಜೊತೆ ಹೆಂಗಸರೂ ಭಿಕ್ಷಾಟನೆಗೆ ಹೋಗುತ್ತಾರೆ. ಇವರೂ ಕೂಡ 'ಬಾಲಬಸವ' ದೀಕ್ಷೆ ಹೊಂದಿ ಗೋಣಿ ಬಸವನ ಕಾವ್ಯವನ್ನು, ಕಾಲಜ್ಞಾನವನ್ನು, ಭಿಕ್ಷಾಟನೆಯನ್ನು ತಮ್ಮ ವೃತ್ತಿಯಾಗಿಸಿಕೊಂಡಿದ್ದಾರೆ. ಈ ರೀತಿ ಸ್ತ್ರೀಯರು ದೀಕ್ಷೆ ಹೊಂದಿ ಭಿಕ್ಷಾಟನೆ ಮಾಡುವುದು ನಾಥಪಂಥದ ಲಕ್ಷಣ. ಪಿಂಗಳಾದೇವಿ ಎಂಬುವಳು ನಾಥಪಂಥದ ದೀಕ್ಷೆ ಹೊಂದಿದ ಪ್ರಥಮ ಯೋಗಿನಿಯಾಗಿದ್ದಾಳೆ. 'ಸ್ತ್ರೀ ರಾಜ್ಯದಿಂದ ಹೊರಟ ವಿರಾಗಿನಿ ಪಿಂಗಳಾದೇವಿಯು ಮತ್ಸ್ಯೇಂದ್ರನಾಥನನ್ನು ಗುರುಗಳನ್ನಾಗಿ ಸ್ವೀಕರಿಸಿ ನಾಥಪಂಥದ ಪ್ರಥಮ ಯೋಗಿನಿಯಾಗಿ ಗೋರಕ್ಷನಾಥರೊಡಗೂಡಿ ಯೋಗ ಪ್ರಚಾರದಲ್ಲಿ ತನ್ನನ್ನು ತಾನೇ ತೊಡಗಿಸಿಕೊಂಡದ್ದಲ್ಲದೆ, ಹಲವಾರು ಸ್ತ್ರೀಯರು ಕೂಡ ನಾಥ ಸಂಪ್ರದಾಯದ ಪ್ರಭಾವಕ್ಕೊಳಗಾಗಿ ಯೋಗಿನಿಯರಾಗಿ ನಾಥಪಂಥಕ್ಕೆ ದೀಕ್ಷಾ ಬದ್ಧರಾಗುವಂತೆ ಮಾಡಿದರು.'(ಜೋಗಿ ಆನಂದನಾಥ್, ೨೦೦೩, ಪುಟ-೧೦೧) ಇಂದಿನವರೆಗೂ ಕೂಡ ಸ್ತ್ರೀಯರು ನಾಥಪಂಥದಲ್ಲಿ ದೀಕ್ಷೆ ಹೊಂದಿ ಯೋಗಿನಿಯರಾಗುವ ಪದ್ಧತಿ ಬೆಳೆದುಕೊಂಡು ಬಂದಿದೆ. '೧೯೩೮ರಲ್ಲಿ ಜಾರ್ಜ್‌ವೆಸ್ಟ್‌ನ ಬ್ರಿಗ್ಸ್ ಎಂಬುವವನು ಬರೆದ ''ಗೋರಖನಾಥ ಅಂಡ್ ದಿ ಖಾನಪಟಾ ಯೋಗೀಸ್'' ಎಂಬ ಪುಸ್ತಕದಲ್ಲಿ ಹಿಂದೂಸ್ಥಾನದಲ್ಲಿ ಕ್ರಿ.ಶ. ೧೮೯೧ನೇ ಇಸ್ವಿಯ ಸಮಯದಲ್ಲಿ ಸುಮಾರು ೨೧,೪೧,೫೦೦ ಜನರು ನಾಥಸಂಪ್ರದಾಯದ ದೀಕ್ಷೆಗೊಳಪಟ್ಟ ದಾರ್ಶನಿಕ ಯೋಗಿಗಳು ಇದ್ದಾರೆಂದೂ ಇವರಲ್ಲಿ ಸುಮಾರು ೫೭ ಯೋಗಿನಿಯರೂ ಇದ್ದರೆಂದೂ ಈ ಪಂಥವು ಬೆಳೆದು ಬಂದಂತೆ ಕ್ರಿ.ಶ. ೧೯೧೧ರಲ್ಲಿ ಸುಮಾರು ೮,೧೪,೩೫೦ ಜೋಗಿಗಳು ಇದ್ದರೆಂದು ತಿಳಿಸಿದ್ದಾನೆ.''(ಅದೇ, ಪುಟ-೧೬)

ಮಾದಿಗ ಜನಾಂಗದ ಬಾಲಬಸವರಿಗೆ ದೀಕ್ಷೆ ನೀಡಿದವನು ಕೂಲಹಳ್ಳಿ ಗೋಣಿಬಸವ. ಈ ಕುರಿತು ಗೋಣಿಬಸವ ಚರಿತ್ರೆಯು ಚಿಗಟೇರಿಯ ಶಿವನಯ್ಯ ಗೋಣಿಬಸವಣ್ಣನನ್ನು ಸಾಯಿಸಲಿಕ್ಕಾಗಿ ಮಾಟ-

ಮಂತ್ರ ಮಾಡಿಸಿದ, ಮೊರವಿ ಅಂಗಿಯನ್ನು ಆತನಿಗೆ ತೊಡಿಸುತ್ತಾನೆ. ಆ ಅಂಗಿ ಮೈಗೆ ಹಾಕಿಕೊಳ್ಳುತ್ತಿದ್ದಂತೆ ಮೈಯೆಲ್ಲ ವಿಷ ಏರಿ ಗೋಣಿಬಸವ ಪ್ರಜ್ಞೆ ತಪ್ಪಿ ಬೀಳುತ್ತಾನೆ. ಆಗ ಈ ಬಾಲಬಸಪ್ಪ ಹಾವಿನ ರೂಪದಲ್ಲಿ ಬಂದು ಗೋಣಿಬಸವನ ಮೈಯಲ್ಲಿ ಸೇರಿದ ವಿಷವನ್ನು ಹೀರಿ ಬದುಕಿಸುತ್ತಾನೆ. ಇದಕ್ಕೆ ಪ್ರತಿಫಲವಾಗಿ ನಿನಗೇನು ಬೇಕೆಂದು ಕೇಳಿದಾಗ ಬಾಲಬಸವನು 'ದೇವಾ ನಮ್ಮ ವಂಶವು ಸೂರ್ಯಚಂದ್ರರಿರುವವರೆಗೂ ಅಚ್ಚಳಿಯದಂತೆ ಉಳಿಯಲಿ ಎಂದು ಆಶೀರ್ವಾದಿಸಿ ಎಂದು ಕೇಳಿಕೊಂಡನು. ನಾನು ಯಾರ ಮನೆಹತ್ತಿರ ನಿಂತು ಭಿಕ್ಷೆಯನ್ನು ಕೇಳಿದರೂ ಇಲ್ಲವೆನ್ನದೆ ಮತ್ತು ಮುಂದಿನ ಆಗಮನವು ಸಹ ನನಗರಿವಾಗುವಂತೆಯೂ, ನಾನಾಡಿದ ಮಾತುಗಳು ಸುಳ್ಳಾಗದಂತೆ ಸದಾಕಾಲವೂ ನಿನ್ನ ಬಿರುದಾವಳಿಗಳೊಡನೆ ಶೋಭಿಸುವಂತೆ ಆಶೀರ್ವದಿಸಿರಿ ಎಂದು ಬೇಡಿಕೊಂಡನು. ಆಗ ಗೋಣಿಬಸವ ತನ್ನ ಕಿವಿಯಲ್ಲಿ ಧರಿಸಿದ ಕರ್ಣಕುಂಡಲಗಳನ್ನು ತೆಗೆದು ಬಾಲಬಸವನ ಕಿವಿಯಲ್ಲಿ ಧರಿಸಿ 'ಬಾಲಬಸವಾ ನಾನು ಕೊಟ್ಟ ಕರ್ಣಕುಂಡಲಗಳ ಮಹಿಮೆಯಿಂದ ಮುಂದಿನ ಆಗಮನವೂ ನಿನ್ನ ಕಿವಿಯಲ್ಲಿಯೇ ಅರಿವಾಗಲಿ, ನಿನ್ನ ಕೈಯಲ್ಲಿ ತಂಬೂರಿಯನ್ನು ಹಿಡಿದುಕೊಂಡು ಮಧ್ಯಾಹ್ನ ಒಂದು ಗಂಟೆಯವರೆಗಾದರೂ ಮುಂದಿನ ಆಗಮನವು ಅರಿವಾಗಲಿ, ಆನಂತರದಲ್ಲಿ ನಿನಗೆ ತಿಳಿಯದಂತಾಗಲಿ ಎಂದು ಇದೇ ನಿನಗೆ ಗೋಣೀ ಬಸವ ಹೇಳುವ ವಾಕ್ಯವೆಂದರು'(ಈಡಿಗರ ಚಂದ್ರಪ್ಪ, ೧೯೯೦, ಪು.೧೫೨) ಮೊದಲೆಲ್ಲ ಗೋಣಿಬಸವನ ಮಠದ ಸ್ವಾಮಿಗಳೆ ಬಾಲಬಸವರಿಗೆ ದೀಕ್ಷೆ ನೀಡುತ್ತಿದ್ದರು. ಈಗ ಉಜ್ಜಿನಿಯ ಮರುಳಸಿದ್ದ ಮಠದ ಜಗದ್ಗುರುಗಳು ಇವರಿಗೆ ದೀಕ್ಷೆ ನೀಡುತ್ತಾರೆ. ಮರುಳಸಿದ್ಧನೂ ಪ್ರಾಚೀನ ಶೈವ ಸಿದ್ಧನಾಗಿದ್ದಾನೆ. ಬಾಲಬಸವರು ಮರುಳಸಿದ್ಧನ(ಉಜ್ಜಿನೆಪ್ಪನ ಕಥೆ) ಕಾವ್ಯವನ್ನು ಹಾಡುತ್ತಾರೆ. ಕೂಲಹಳ್ಳಿ ಗೋಣಿಬಸವ ಮತ್ತು ಉಜ್ಜಿನಿಯ ಮರುಳಸಿದ್ಧನ ಕಾವ್ಯಗಳಲ್ಲಿ ಅಪಾರವಾದ ಸಾಮ್ಯವಿದೆ.

ಇನ್ನು ಗೋಣಿಬಸವನ ಜೀವನ ಪವಾಡಗಳನ್ನು ನೋಡಿದರೆ, ಈತ ನಾಥ-ಶೈವಸಿದ್ದನೆಂಬುದು ಇನ್ನೂ ಸ್ಪಷ್ಟವಾಗುತ್ತದೆ. ಬಂಡ್ರಿಯಲ್ಲಿ ಸತ್ತ ಮಗುವನ್ನು ಬದುಕಿಸಿದ್ದು, ಕರುವಿನ ಕೋಟೆಯಲ್ಲಿ ಸತ್ತ ಎಮ್ಮೆಯನ್ನು ಬದುಕಿಸಿದ್ದು, ಎಳವತ್ತಿ ಮತ್ತು ನಿಂಬಳಗಿ ಗ್ರಾಮದಲ್ಲಿ ಮಳೆತರಿಸಿದ್ದು, ಮಲೆನಾಡಿನ ಗಂಜಿ ರಾಕ್ಷಸರನ್ನು ಎದುರಿಸಿದ್ದು, ಮಂತ್ರವಾದಿಯೊಬ್ಬನ ಮಾಟದ ಗೊಂಬೆಗಳನ್ನು ಶರಣಾಗತಿಯಾಗಿಸಿಕೊಂಡದ್ದು, ಉಳುವಿನ ಬೆತ್ತದ ಮೂಲಕ ಗೊಂಬೆ ಸುಟ್ಟುದ್ದು, ಸುಣ್ಣದ ಚೀಲದಲ್ಲಿ ಹಾಕಿ ಸುಡಲು ಬಂದಾಗ ಬದುಕಿ ಮರಳಿ ಬಂದುದು, ಗಾಳಿಪೂಜೆಪಟ್ಟಣ(?) ಸಿದ್ದರಿಂದ ತಯಾರಾದ ಮೊರವಿ ಅಂಗಿ ತೊಟ್ಟಿದ್ದು, ಸತ್ತ ಹಾವು ಬದುಕಿಸಿದ್ದು, ಕಂಬಳಿ ಹಾಸಿ ಅದರ ಮೇಲೆ ಹೊಳೆದಾಟಿ ಹೋಗಿದ್ದು, ದೇಸಾಯಿರಾಜನ ಬೆನ್ನ ಬೇತಾಳ ಹುಣ್ಣನ್ನು ನಿವಾರಿಸಿದ್ದು, ಗಾಳಿಧೂಳಿ ರಾಕ್ಷಸರನ್ನು ಶರಣಾಗತರನ್ನಾಗಿಸಿದ್ದು, ಬಿಳಿಕುದುರೆ ಮೇಲೆ ಕಾಣಿಸಿಕೊಳ್ಳುವುದು ಈ ಎಲ್ಲ ಪವಾಡಗಳೂ ಈತನನ್ನು ನಿಶ್ಚಿತವಾಗಿಯೂ ಸಿದ್ಧಪರಂಪರೆಯವನೆಂದು ಸಾಬೀತುಪಡಿಸುತ್ತವೆ. ಸಿದ್ದರಿಗೆ ಯೌಗಿಕ ಸಿದ್ಧಿಯಿಂದ ಈ ರೀತಿಯ ಪವಾಡಗಳನ್ನು ಮಾಡಲು ಸಾಧ್ಯವಾಗುತ್ತದೆ.

ಗುಮ್ಮಗೋಳ ಮಠದಲ್ಲಿ ಕಲ್ಲಿನಲ್ಲಿರುವ ಸಿದ್ಧರ ಶಿಲ್ಪಗಳು, ಗೋಣಿಬಸವನ ಹುಲಿಸವಾರಿಯ ಶಿಲ್ಪ, ತೆಂಗಿನಮರ ಬಾಗಿ ಈತನಿಗೆ ಕಾಯಿಕೊಡುತ್ತಿರುವ ಶಿಲ್ಪಗಳು ಈತನು ನಿಶ್ಚಿತವಾಗಿಯೂ ಸಿದ್ಧಪರಂಪರೆಯವನೆಂದು ಸಿದ್ಧಪಡಿಸುತ್ತವೆ.

ಗೋಣಿಬಸವನ ಚರಿತ್ರೆಯಲ್ಲಿ ಗೋಣಿಬಸವನನ್ನು ಕೊಲ್ಲಲು ಎಷ್ಟೆಲ್ಲ ಪ್ರಯತ್ನಿಸಿದ ಚಿಗಟೇರಿಯ ಶಿವನಯ್ಯ ಒಮ್ಮೆ ಗಾಳಿಪೂಜೆ ಪಟ್ಟಣದ ಮೂವರು ಕಾಡಸಿದ್ಧರನ್ನು ಬೇಟಿ ಮಾಡುತ್ತಾನೆ. ಈ ಸಿದ್ಧರ ಹಿಂದೆ ಏಳುಕೋಟಿ ಸಿದ್ಧರಿರುವರು. ಇವರು ಮಂತ್ರತಂತ್ರಕ್ಕೆ ಪ್ರಸಿದ್ಧರಾಗಿದ್ದು, ಇವರ ಮೂಲಕ ಗೋಣಿಬಸವನನ್ನು ಕೊಲ್ಲಿಸಲು ಪ್ರಯತ್ನಿಸುತ್ತಾನೆ. ಆದರೆ ಅವರು ಸೋತು ಹೋಗುತ್ತಾರೆ. "ಮೂರು ಮಂದಿ ಮುಖ್ಯಸ್ಥರಾದ ಸಿದ್ದರನ್ನು ತನ್ನ ಉಳುವಿನ ಬೆತ್ತದಿಂದ ಜಾಡಿಸಿದರೆ, ಸಿದ್ಧರಲ್ಲಿದ್ದ ಅಹಂಕಾರವೂ ಮಾಯವಾಗಿ ಹೊಟ್ಟೆಯಲ್ಲಿ ಸಂಕಟ ಎದ್ದು ಒದ್ದಾಡ ಹತ್ತಿದರು. ಅವರಲ್ಲಿದ್ದ ಯಂತ್ರ-ಮಂತ್ರ ಮಾಯ ಮಾಟದ ಪುಸ್ತಕಗಳನ್ನು ಸಹ ಇವರ ಮಹಿಮೆಯಿಂದ ಕೂಲಹಳ್ಳಿ ಕ್ಷೇತ್ರಕ್ಕೆ ಬಂದವು. ಮತ್ತು ಉಳಿದ ಕೆಲವು ಮಾಟದ ಗ್ರಂಥಗಳನ್ನು ಗುಮ್ಮಗೋಳದ ಮುಸುಕಿನ ಬಾವಿಯಲ್ಲಿ ಹಾಕಿದರು. ಈ ಬಾವಿಯಲ್ಲದೆ ಆವರಣದ ಒಳಗಡೆ ಇನ್ನೊಂದು ಬಾವಿಯಿದೆ. ಅದರಲ್ಲಿ ಸಿದ್ದರನ್ನು ಕಲ್ಲಾಗುವಂತೆ ಮಾಡಿ ನಿಲ್ಲಿಸಿದರು. (ಈಡಿಗರ ಚಂದ್ರಪ್ಪ, ೧೯೯೦, ಪು.೧೮೩) ಈಗಲೂ ಗುಮ್ಮಗೋಳ ಮಠದ ಆವರಣದಲ್ಲಿ ಸಿದ್ಧರ ಬೆತ್ತಲೆ ಪ್ರತಿಮೆಗಳನ್ನು ನೋಡಬಹುದು.

ಇಲ್ಲಿ ಬರುವ ಗಾಳಿ ಪೂಜೆ ಪಟ್ಟಣ ಯಾವುದು? ಅಲ್ಲಿನ ಮೂವರು ಕಾಡಸಿದ್ಧರು ಯಾರು? ಈ ಬಗ್ಗೆ ನಮಗೆ ನಿಖರವಾಗಿ ತಿಳಿದುಬರುವುದಿಲ್ಲವಾದರೂ, ಗಾಳಿ ಪೂಜೆ ಎಂಬ ಪಟ್ಟಣ ಸಿದ್ಧರಿಗೆ ಪ್ರಸಿದ್ಧವಾಗಿರುವುದಂತೂ ಸತ್ಯ. 'ಷಟ್‌ಸ್ಥಲ ಶಿವಾಯಣ' ಎನ್ನುವ ಚೀಲಾಳ ಸ್ವಾಮಿಯ(ಕ್ರಿ.ಶ.೧೬೧೫) ಬಗೆಗಿರುವ ಕೃತಿಯೊಂದು ಈ ಬಗ್ಗೆ ಆಧಾರ ನೀಡುತ್ತದೆ.

'ಗಾಳಿ ಪೂಜೆಯ ಗಿರಿಯನೇರುತ
ಭಾಳಸಿದ್ಧರ ಭಕ್ತಿಗೊಲಿವುತ
ಹೇಳಿ ಷಟ್ಸ್ಥಲ ಮಾರ್ಗ ಬೋಧೆಯ ಘನಮಹತ್ವಗಳ|
ಕೇಳಿದವರಿಗೆ ನಿಜವ ತೋರುತ
ಜಾಳಿಸುತ ಸಿದ್ಧಿಗಳ ಸಿದ್ಧರ
ತೋಳಗಳ ಹಾರಿಸುತಲವರಿತ್ತು ಚಿತಗಳ ಕೊಂಡು|

(ಡಾ.ಎಂ.ಎಂ. ಕಲ್ಬುರ್ಗಿ, ಡಾ.ಸಿ.ಪಿ.ಕೆ(ಸಂ), ೧೯೯೯, ಪುಟ.೨೨೨)

ಗಾಳಿ ಪಟ್ಟಣ ಯಾವುದೆಂದು ತಿಳಿಯದಿದ್ದರೂ ಅದು ಮಧ್ಯಕಾಲೀನದಲ್ಲಿ ಸಿದ್ಧರಿಗೆ ಪ್ರಸಿದ್ಧವಾಗಿತ್ತು ಎನ್ನುವುದು ಸ್ಪಷ್ಟ. ಇದರಿಂದ ಗೋಣಿಬಸವ ಪಡೆದ ಮಾಯಾ-ಮಾಟದ ಪುಸ್ತಕಗಳು ಸಿದ್ದರು ಯೌಗಿಕ

ಜ್ಞಾನವನ್ನು ಹೊಂದಿರುವ ಇಲ್ಲವೆ ರಸಸಿದ್ಧಿಯನ್ನು ತಿಳಿಸಿಕೊಡುವ ಹಸ್ತಪ್ರತಿಗಳಿರಬಹುದು. 'ಮೊದಲಿಗೆ ಕೂಲಹಳ್ಳಿ ಮಠದಲ್ಲಿ ಹಸ್ತಪ್ರತಿಗಳಿದ್ದವೆಂದೂ ಅವನ್ನು ಯಾರೋ ಭಕ್ತಾದಿಗಳು ಒಯ್ದು ತಂದುಕೊಟ್ಟಿಲ್ಲವೆಂದು' ಮಠದ ಸ್ವಾಮಿಗಳು ಹೇಳುತ್ತಾರೆ. ಆದರೆ ಈಗಂತೂ ಯಾವುದೇ ಹಸ್ತಪ್ರತಿಗಳು ಉಳಿದಿಲ್ಲ. ಆದರೆ ಈ ಘಟನೆಯ ನೆನಪಿಗೆ ಸಂಬಂಧಿಸಿದಂತೆ 'ಪ್ರತಿವರ್ಷ ಗೋಣಿಬಸವೇಶ್ವರ ರಥೋತ್ಸವ ನಡೆಯುವ(ಚೈತ್ರ ಶುದ್ಧ ದಶಮಿಯ ದಿವಸ) ಒಂದು ದಿವಸ ಮುಂಚಿತವಾಗಿಯೇ ಹಮ್ಮಿಗೆಯಿಂದ ಸಿದ್ದರ ಪೂಜಾರಿಯು ದಿಗಂಬರ ರೂಪದಲ್ಲಿ ಗುಮ್ಮಗೊಳಕ್ಕೆ ಬಂದು ಪೂಜೆ ಮಾಡಿಕೊಂಡು(ಸಿದ್ಧರ ಪ್ರತಿಮೆಗಳಿಗೆ) ಹೋಗುವ ವಾಡಿಕೆ ನಡೆಯುತ್ತಿದೆ.

ಕೂಲಹಳ್ಳಿ ಗೋಣಿಬಸವನ ತಂದೆ ಮದ್ದಾನೇಶನು ಬೇಡಜನಾಂಗದ ಕನಕವ್ವನನ್ನು ಮದುವೆಯಾಗಿದ್ದಾನೆ. ಗೋಣಿಬಸವ ಕುರುಬರ ವಡ್ಡೆವ್ವನನ್ನು ಮದುವೆಯಾಗಿದ್ದಾನೆ. ಗೋಣಿಬಸವ ತನ್ನ ಕಿವಿಯಲ್ಲಿ ಕರ್ಣ ಕುಂಡಲಗಳನ್ನು ಧರಿಸುತ್ತಿದ್ದನು.ಬಾಲಬಸವರು ಈಗಲೂ ಕೂಡ 'ಕಷಾಯ' ವಸ್ತ್ರಧಾರಿಗಳಾಗಿರುವುದಲ್ಲದೆ ಕಿವಿಯಲ್ಲಿ ಕರ್ಣಕುಂಡಲ, ಬೆರಳಲ್ಲಿ ಬಸವ ಮುದ್ರೆ, ಒಂಟಿ ಜಂಗಿನ ಬೆತ್ತ ಹಿಡಿದು ವರ್ಷ ಒಂದಾವರ್ತಿ ಕಾಲಜ್ಞಾನವನ್ನು ಸಾರುತ್ತ(ಮಕರ ಸಂಕ್ರಾಂತಿ ದಿನಗಳಲ್ಲಿ) ಊರಿಂದೂರಿಗೆ ಹೋಗುತ್ತಾರೆ'.(ಬಿ.ಆರ್. ಮಂಜುನಾಥ್, ೨೦೦೧, ಪುಟ.೨೦) ಈ ರೀತಿ 'ಕಿವಿ ಚುಚ್ಚಿಸಿ ಕೊಳ್ಳುವವರನ್ನು ನಾಥಪಂಥದಲ್ಲಿ ಕನಪಟಾ(ಕಿವಿಹರುಕರು) ಎಂದು ಪವಿತ್ರದುಂಗುರವನ್ನು ಧರಿಸುವುದರಿಂದ 'ದರ್ಶನಿ ಸಾಧು' ಎಂದೂ ಕರೆಯಲ್ಪಡುತ್ತಾರೆ. ಇವರಲ್ಲಿ ಗೃಹಸ್ಥರೂ ಉಂಟು. ಗೃಹಸ್ಥ ಯೋಗಿಗಳಲ್ಲಿ ನೇಕಾರರೂ ಕುರುಬರು ಹೆಚ್ಚು.(ಮ.ಸು. ಕೃಷ್ಣಮೂರ್ತಿ, ೧೯೮೨, ಪು.೧೫೦). ಕುರುಬರೆ ಹೆಚ್ಚು ಭಕ್ತರಿರುವ ಗೋಣಿಬಸವನು ಕಿವಿಚುಚ್ಚಿಸಿಕೊಂಡಿರುವನಲ್ಲದೆ, ಪವಿತ್ರ ಉಂಗುರ 'ಬಸವ ಮುದ್ರೆ'ಯನ್ನು ಕೈಯ ಬೆರಳುಗಳಿಗೆ ಧರಿಸುತ್ತಾನೆ. ಅಲ್ಲದೆ ನಾಥಪಂಥದಲ್ಲಿ ಇಂತಹ ಯೋಗಿಗಳಲ್ಲಿ ಗೃಹಸ್ಥರೇ ಹೆಚ್ಚು ಎಂದು ಹೇಳುವುದನ್ನು ನೋಡಿದರೆ ಗೋಣಿಬಸವನು ಮದುವೆಯಾಗಿ ಗೃಹಸ್ಥನಾಗಿರುವುದು ಕಾಣುತ್ತದೆ. ಈತನ ತಂದೆ ಮದ್ದಾನ ಸ್ವಾಮಿಯೂ ಗೃಹಸ್ಥನಾಗಿದ್ದಾನೆ. ನಾಥಶೈವ ಸಿದ್ಧನಾದ ಕೊಡೇಕಲ್ ಬಸವಣ್ಣನೂ ಮದುವೆ ಆಗಿದ್ದಾನೆ. ಅವು ಈಗಲೂ ಗೃಹಸ್ಥ ಮಠಗಳೆ ಆಗಿವೆ. ಈ ಎಲ್ಲ ಅಂಶಗಳೂ ಗೋಣಿಬಸವನು ನಾಥಪಂಥದಲ್ಲಿನ ಗೃಹಸ್ಥ ಸಿದ್ಧನಾಗಿದ್ದನು ಎಂಬುದನ್ನು ಸಾಬೀತುಪಡಿಸುತ್ತಿದೆ.

ಒಟ್ಟಾರೆ ಕೊಟ್ಟೂರ ಗುರುಬಸವ, ನಾಯಕನಟ್ಟಿ ತಿಪ್ಪೇಸ್ವಾಮಿ, ಕೂಲಹಳ್ಳಿ ಮದ್ದಾನೇಶ ಮತ್ತು ಮಗ ಗೋಣಿಬಸವ ಇವರ ಜೀವನ ಪವಾಡಗಳು, ಸುತ್ತಲೂ ಇರುವ ಆಚರಣೆ-ಉತ್ಸವಗಳನ್ನು ನೋಡಿದರೆ ಇವರು ನಾಥ-ಶೈವಸಿದ್ಧರಾಗಿದ್ದರೆಂಬುದು ತಿಳಿದುಬರುತ್ತದೆ.

## ೩.೩. ಸೂಫಿ-ಮುಸ್ಲಿಂ ಪ್ರಭಾವ

ಮಧ್ಯಕಾಲೀನ ಮುಸ್ಲಿಂ ದಾಳಿಯು ಇಡೀ ಭಾರತದ ಸಂಸ್ಕೃತಿಯ ಮೇಲೆ ಅಪಾರ ಪ್ರಭಾವ ಬೀರಿತು. ಈ ಪ್ರಭಾವದಿಂದಾಗಿ ಇಲ್ಲಿನ ಜೀವನಪದ್ಧತಿ, ಕಲೆ, ಸಾಹಿತ್ಯ, ವಾಸ್ತುಶಿಲ್ಪ, ಭಾಷೆ, ಸಂಗೀತಗಳಲ್ಲಿ, ಸಂಕರ ಸಂಸ್ಕೃತಿ ಬೆಳೆಯಿತು. ಈ ಸಂಕರವು ಕರ್ನಾಟಕದಲ್ಲಿಯೂ ಜರುಗಿತು. ಅದರಲ್ಲಿಯೂ ಪಂಚಗಣಾಧೀಶ್ವರರಿರುವ ಮಧ್ಯಕರ್ನಾಟಕದ ಪರಿಸರವು ಬಹುಮನಿ ಸುಲ್ತಾನ ಮತ್ತು ಹೈದರಾಬಾದ್ ನಿಜಾಮರ ಆಳ್ವಿಕೆಯ ಪರಿಣಾಮವಾಗಿ ಅನ್ಯಭಾಷೆ, ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಯಿತು. ಅನ್ಯಭಾಷೆ, ಜನಸಮುದಾಯದಿಂದಾಗಿ ಸ್ಥಳೀಯವಾಗಿದ್ದ ಧಾರ್ಮಿಕ ಸಂತರ ಆಚರಣೆಗಳಲ್ಲಿಯೂ ಇವು ಸೇರಿಕೊಂಡವು. ಅದರಲ್ಲಿಯೂ ಪಂಚಗಣಾಧೀಶ್ವರರಿರುವ ಮಧ್ಯಕರ್ನಾಟಕದ ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ, ಕೊಪ್ಪಳ, ಗದಗ ಜಿಲ್ಲೆಗಳಲ್ಲಿ ಸೂಫಿ-ಇಸ್ಲಾಂನ ಪ್ರಭಾವ ಸಾಕಷ್ಟಾಗಿದೆ. ಅವುಗಳೆಂದರೆ 'ಅನ್ವರ್ ಶಾವಲಿ-ರುಪನ ಗುಡಿ(ಬಳ್ಳಾರಿ), ಅಲಿಶಾ ಖಾದ್ರಿ-ಕಲಕೇರಿ(ಮುಂಡರಗಿ), ಅಹಮದ್ ಶಾ ಖಾದ್ರಿ(ಹೊಸಪೇಟೆ), ಅಹಮದ್ ಶಾ ಚಿಸ್ತಿ-ಚಿತ್ರದುರ್ಗ, ಇಮಾಂಶಾ ಖಾದ್ರಿ-ಕಂಚಿಕೆರೆ(ಹರಪನಹಳ್ಳಿ), ಇರಶಾದ್ ವಲೀಬಾಶಾ -ಹಾವೇರಿ, ಜಲವಾಟಿ ಬಾಬ-ಬಳ್ಳಾರಿ, ಚಾಂದ್ ಬಾಶಾಬಾಲೆ-ದಾವಣಗೆರೆ, ನೂರುಲ್ಲಾ ಖಾದ್ರಿ-ಕಮಲಾಪುರ, ಮರ್ದಾನಗೈಬ್-ಕೊಪ್ಪಳ, ಮುಸ್ತಾನ್ ಪಾಶಾ-ವಲಿ-ಕಮಲಾಪುರ, ತಾಜುದ್ದೀನ್ ಖಾದ್ರಿ-ಕಂಪ್ಲಿ, ಸಾದಿಕ್ ವಾಲಿ-ತೋಲಂಗರ್-ಉಜ್ಜಿನಿ, ಸರ್ವ ಹುಸೇನಿ-ಬಳ್ಳಾರಿ, ಹಜರತ್ ಜಲಾಲ್-ಡಂಬಳ, ಹಜರೇ-ಶಾ-ಖಾದ್ರಿ-ಶಿಗ್ಗಾವ್, ಲಂಗರ್ ಶಾವಲಿ-ಕುಡುತಿನಿ, ಇನ್ನೂ ಸಾಕಷ್ಟು ಮಂದಿ ಸೂಫಿ ಸಂತರು ಮಧ್ಯಕರ್ನಾಟಕ ಭಾಗದಲ್ಲಿರುವರು. ಇನ್ನೂ ಸೂಫಿ ಪ್ರಭಾವದ ದರ್ಗಾಗಳೂ ಗದ್ದುಗೆಗಳು ಈ ಭಾಗದಲ್ಲಿವೆ. ಎಚ್ಚರೇಶ್ವರ-ರೋಣ, ಚಾಂಗ್ ದೇವ-ಯಮನೂರು, ಹಡಗಲಿ, ಮುಂಡರಗಿ, ಚಿದಾನಂದ ಅವಧೂತ-ಕನಕಗಿರಿ(ಗಂಗಾವತಿ), ಸಿದ್ದೇಶ್ವರ-ರಾಮದುರ್ಗ(ಸಂಡೂರು), ಶಿಲವೇರಿ ಶಿವಪ್ಪ-ಹಂದಿಹಾಳು ಮುಂತಾದವು'(ರಹಮತ್ ತರೀಕೆರೆ, ೨೦೦೧, ಪು.೨೫೦, ೨೬೪)

ಇವುಗಳನ್ನೆಲ್ಲಾ ನೋಡಿದರೆ ಮಧ್ಯಕರ್ನಾಟಕ ಭಾಗದಲ್ಲಿನ ಸೂಫಿಗಳ ಪ್ರಭಾವ ಸ್ಪಷ್ಟವಾಗುತ್ತದೆ. ಪಂಚಗಣಾಧೀಶ್ವರ ಬದುಕು-ಸಾಧನೆ, ಆಚರಣೆ ವಾಸ್ತುಶಿಲ್ಪಗಳ ಮೇಲೂ ಅಂದಿನಿಂದ ಇಂದಿನವರೆಗೂ ಈ ಸೂಫಿ-ಇಸ್ಲಾಂನ ಪ್ರಭಾವ ಸಾಕಷ್ಟು ಕಂಡುಬರುತ್ತದೆ.

ನಾಯಕನಟ್ಟಿ ತಿಪ್ಪೇಸ್ವಾಮಿಯ ಹೊರಮಠವು ಈತನು ಜೀವಂತ ಸಮಾಧಿಹೊಂದಿದ ಸ್ಥಳವಾಗಿದೆ. ಇದರ ಗರ್ಭಗುಡಿಯ ಶಿಖರ ಭಾಗ ಇಸ್ಲಾಂ ಶೈಲಿಯ ಗುಂಬಜ್ ಆಕಾರದಲ್ಲಿದೆ. ಈ ಹೊರಮಠವು ಇಸ್ಲಾಂ ಶೈಲಿಯಲ್ಲಿ ಕಟ್ಟಿರುವುದಕ್ಕೆ ಒಂದು ಕತೆ ಇದೆ. ಒಮ್ಮೆ ಮೈಸೂರು ಸಂಸ್ಥಾನದ ನವಾಬನಾಗಿದ್ದ ಹೈದರಾಲಿಯು ಚಿತ್ರದುರ್ಗಕ್ಕೆ ಆಗಮಿಸಿದಾಗ, ನಾಯಕನಟ್ಟಿ ಸಂಸ್ಥಾನದಲ್ಲಿ ಸುತ್ತಾಡುತ್ತಿರುವಾಗ

ಹೊರಮಠದ ಹತ್ತಿರದ ಚಿಕ್ಕಕೆರೆ ಏರಿಯ ಮೇಲೆ ಸಮಾಧಿ ಎದುರಿಗೆ ಕುದುರೆ ಮುಗ್ಗರಿಸಿ ನೆಲಕ್ಕೆ ಹೊರಳುತ್ತದೆ. ಅದಕ್ಕೆ ನವಾಬರು ದಳವಾಯಿಗಳಿಂದ ಸ್ವಾಮಿಯ ಇತಿಹಾಸವನ್ನು ತಿಳಿದು 'ಸ್ವಾಮಿ ನನಗೆ ಗಂಡುಮಗುವಾದರೆ ನಿನ್ನ ಹೆಸರಿಡುತ್ತೇನೆ' ಎಂದು ಬೇಡಿಕೊಳ್ಳುತ್ತಾನೆ. ಅದರಂತೆ ಗಂಡು ಮಗು ಜನಿಸುತ್ತದೆ. ಆಗ ಸುಲ್ತಾನನು ಮಗನಿಗೆ 'ತಿಪ್ಪುಸುಲ್ತಾನ್ ' ಎಂದು ಹೆಸರಿಟ್ಟಿದ್ದು, ಮುಂದೆ 'ಟಿಪ್ಪು ಸುಲ್ತಾನ್ ' ಆಯಿತೆಂದೂ ಜನಪದರು ನಂಬಿದ್ದಾರೆ. 'ಹೊರಮಠದ ಸಮಾಧಿ ಮಂಟಪ ಗುಂಬಜ್ ಆಕಾರದಲ್ಲಿರುವುದರಿಂದ ಅದನ್ನು ಹರಕೆ ತೀರಿಸಲು ಹೈದರಾಲಿಯೆ ಕಟ್ಟಿಸಿದನೆಂದು ಹೇಳಲಾಗುತ್ತದೆ.'(ಹರ್ತಿಕೋಟೆ ವಿರೇಂದ್ರ ಸಿಂಹ ಮತ್ತು ಡಾ. ತೇಜಸ್ವೀ ಕಟ್ಟೀಮನಿ(ಸಂ), ೨೦೦೨, ಪು-೬೫) ಆದರೆ ಬಿಚ್ಚುಗತ್ತಿ ಭರಮಣ್ಣನಾಯಕನು(೧೭೨೧) ಮಾಡಿದ ನೂರಾರು ಧರ್ಮಕಾರ್ಯಗಳಲ್ಲಿ ನಾಯಕನಟ್ಟಿ ಶ್ರೀಗುರು ತಿಪ್ಪೇಸ್ವಾಮಿ ಸಮಾಧಿ ಮಠ(ಹೊರಮಠ) ನಿರ್ಮಾಣವೂ ಒಂದಾಗಿದೆ(ರಂಗಸ್ವಾಮಿ .ಡಿ.ಟಿ, ೧೯೯೧, ಪು-೨೬) ಎನ್ನುವುದು ಇತ್ತೀಚಿನ ಸಂಶೋಧನೆಗಳಿಂದ ಸ್ಪಷ್ಟವಾಗಿದೆ. ಹಾಗಾದರೆ ಈ ಹೊರಮಠದ ಗುಂಬಜ್ ಆಕಾರವೂ, ಹೈದರಾಲಿಗೆ ಸಂಬಂಧಿಸಿದ ಈ ಮಿತ್ ಏನನ್ನು ಸೂಚಿಸುತ್ತದೆ? 'ಟಿಪ್ಪು ಸುಲ್ತಾನ್' ಎಂಬ ಹೆಸರಿಗೆ ಸಂಬಂಧಿಸಿದಂತೆ ಇನ್ನೊಂದು ಕತೆ ಇದೆ. 'ಶಿರಹಟ್ಟಿ ಫಕ್ಕೀರೇಶನು ಅಮೀನುದ್ದೀನನ ಪ್ರಿಯ ಖಲೀಫನಾಗಿದ್ದನು. ಅವನ ಅನೇಕ ಖಲೀಫರಲ್ಲಿ ಖ್ಯಾತನಾದವನೆಂದರೆ ಆರ್ಕಾಟಿನ ಟಿಪೂ ಔಲಿಯಾ(ಇವನ ಹರಕೆಯಿಂದ ಹುಟ್ಟಿದ್ದರಿಂದ ಟಿಪ್ಪೂ ಸುಲ್ತಾನನಿಗೆ ಈ ಹೆಸರು ಬಂದಿತು)'(ರಹಮತ್ ತರೀಕೆರೆ, ೨೦೦೧, ಪು.೧೪೮) ಒಬ್ಬ ವ್ಯಕ್ತಿಯ ಹುಟ್ಟಿನ ಬಗೆಗೆ ಈ ರೀತಿ ದಂತಕತೆಗಳು ಹುಟ್ಟಲು ಕಾರಣವೇನು?

ಮಧ್ಯಕರ್ನಾಟಕ ಭಾಗದಲ್ಲಿ ಸೂಫಿ ಪ್ರಭಾವದ ಹಲವಾರು ಮಠಗಳನ್ನು ಈಗಾಗಲೇ ನೋಡಿದ್ದೇವೆ. ಹೊರಮಠಕ್ಕೆ ಇವುಗಳ ಪ್ರಭಾವವು ಆಗಿದೆ. ಅದೇ ರೀತಿ ಈ ಹೊತ್ತಿನ ಪರಿಸ್ಥಿತಿ ಮುಸ್ಲಿಂ ಪ್ರಭಾವ ಕರ್ನಾಟಕದಾದ್ಯಂತ ಹೆಚ್ಚಾಗಿದ್ದು, ಅವರು ಕಲೆ, ವಾಸ್ತುಶಿಲ್ಪದ ಮೇಲೂ ಪ್ರಭಾವ ಬೀರಿದ್ದರು. ಹೈದರ್ ಮತ್ತು ಟಿಪ್ಪು ಮುಸ್ಲಿಂರಾಗಿದ್ದರೂ ಮುಸ್ಲಿಂಮೇತರ ದೈವಗಳನ್ನು ಭಕ್ತರನ್ನು ಪ್ರೋತ್ಸಾಹಿಸಿದವರು. (ಟಿಪ್ಪು ಶೃಂಗೇರಿ ಮಠಕ್ಕೆ ದಾನ-ರಕ್ಷಣೆ ನೀಡಿದ್ದಾನೆ) ಇದರಿಂದಾಗಿ ಹೈದರ್-ಟಿಪ್ಪೂವನ್ನು ತಮ್ಮ ಕಥೆಗಳಲ್ಲಿ ಸೇರಿಸಿಕೊಳ್ಳುವುದರ ಮೂಲಕ ಅಂತಹ ಪ್ರತಿಷ್ಠರು ಕೂಡ ತಿಪ್ಪೇಸ್ವಾಮಿ ಭಕ್ತರು ಎಂದು ಸೂಚಿಸುತ್ತಿದ್ದಾರೆ. ಕರ್ನಾಟಕದ ಅದೆಷ್ಟೋ ಸಂತರ ಪವಾಡ ಕತೆಗಳಲ್ಲಿ ಅಕ್ಬರ್ ಮತ್ತು ಡಿಳ್ಳಿಪಟ್ಟಣ ಇಂಥದೇ ಆಶಯದಿಂದ ಸೇರಿಕೊಳ್ಳುತ್ತವೆ.

ಕೊಟ್ಟೂರ ಗುರುಬಸವನಿಗೆ ಸಂಬಂಧಿಸಿದಂತೆ ಈ ರೀತಿಯೇ ಮುಸ್ಲಿಂ ದೊರೆಯೊಬ್ಬ ತೋರುವ ಭಕ್ತಿಯ ಕುರಿತು ಸಿದ್ಧನಂಜೇಶನ 'ಶ್ರೀ ಗುರುರಾಜ ಚಾರಿತ್ರ್ಯ' ಮತ್ತು ಬಸವಲಿಂಗ ಕವಿಯ 'ಕೊಟ್ಟೂರ ಬಸವೇಶ ಚಾರಿತ್ರ್ಯ' ವಿವರಿಸುತ್ತವೆ.

ಸಿದ್ದನಂಜೇಶನ ಶ್ರೀಗುರುರಾಜ ಚಾರಿತ್ರ್ಯ 'ಕುತುಮ್ ಶಾಹ ನಿಜಾಮುಲುಕ್ ಕುಬಾರ ಇವರ ಮನೆಯಲ್ಲಿ ಶಿವಗೆಂದು ಸಿಂಗರಿಸಿದ ಮಂಚದ ಮೇಲೆ ಬಸವೇಶನು ನಿಜದೋರಿ ವಾಂಛೀತವಿತ್ತು ಬಯಲಾದನು'(ಸಂ.ಶಿ. ಭೂಸನೂರ ಮಠ(ಸಂ), ೧೯೫೦, ಪುಟ.೭೫) ಎಂದು ಹೇಳುತ್ತದೆ. 'ಕೊಟ್ಟೂರ ಬಸವೇಶ ಚಾರಿತ್ರ್ಯ'ವು ಸಹ ಈ ಪವಾಡವನ್ನು ವಿವರಿಸುತ್ತದೆ. ಆದರೆ ಇಲ್ಲಿ ಕುತುಮ್ ಶಾಹಾ ನಿಜಾಮುಲುಕನ ಬದಲು ಡಿಳ್ಳಿಯ ದೊರೆ ಅಕ್ಬರ್‌ನನ್ನು ಹೆಸರಿಸಿದೆ. 'ಅಕ್ಬರನ ಅಂತಃಪುರದಲ್ಲಿ ಕಾಣಿಸಿಕೊಂಡ ಗುರುಬಸವನನ್ನು 'ಕುಟಿಲಸಿದ್ಧಪತಿಯೀತನು' ಎಂದು ಅಕ್ಬರ್ ಕೊಲ್ಲಲು ಖಡ್ಗವ ತೆಗೆದು ಮುಂದಡಿ ಇಡಲು ಹೋಗುತ್ತಾನೆ. ಆದರೆ ಸಾಧ್ಯವಾಗದೇ ಈತ ಮಹಾಪುರುಷನಿರಬೇಕೆಂದು ಭಾವಿಸಿ ಆತನಿಗೆ ತಲೆಬಾಗುತ್ತಾನೆ.

'ಮಂಡಿಸಿರ್ಪ ಕುಟಿಲ ಸಿದ್ಧಪತಿಯೀತನು
ದ್ದಂಡತೆಯ ಮಣಿಸುವನೆಂದು ಖಡ್ಗವ ಹಿಡಿದು
ದಂಡಿಯಿಂ ಮುಂದಕಡಿಯಿಡೆ ಗತಿಸ್ತಂಭಮಾಗಿರೆ ಭಯಗ್ರಸ್ತ ಮನದಿಂ
ಗಂಡುಗರ್ವವನಳಿದು ಸಾತ್ವಿಕಾಮಳ ಸುಗುಣ
ಮಂಡಿತೋತ್ತಮ ಭಕ್ತಿಭಾವದೆ ಮದೀಯ ಹೃ
ತ್ಪುಂಡರೀಕಾಂತರದೊಳೊಪ್ಪುವ ಪರಂಜ್ಯೋತಿ ತಾನೆಂದು ನಮಿಸುತಿರ್ದ|

(ಕೊಟ್ಟೂರ ಬಸವೇಶ್ವರ ಚಾರಿತ್ರ್ಯ, ಸಂ.೧೫, ಪ.೧೧)

ಮುಂದೆ ಗುರುಬಸವ ಕೊಟ್ಟೂರಿಗೆ ಬಂದು ಏಳು ದಿನಗಳವರೆಗೆ ಕಾಯ್ದು ದರ್ಶನ ಪಡೆದುಕೊಂಡು ಸಂತಸದಿಂದ ಮರಳುತ್ತಾನೆ. ಕೊಟ್ಟೂರ ಗುರುಬಸವ ನಿಜಾಮುಲಕ್ ಅಥವಾ ಅಕ್ಬರ್‌ನ ಅಂತಃಪುರದಲ್ಲಿ ಮಾಡುವ ಈ ಪವಾಡ ಒಬ್ಬ ಮುಸ್ಲಿಂ ದೊರೆ ಗುರುಬಸವನಿಗೆ ತಲೆಬಾಗುವುದನ್ನು ಸೂಚಿಸುತ್ತಿದೆ. ಈ ಹೊತ್ತಿಗೂ ಕೂಡ ಕೊಟ್ಟೂರಿನಲ್ಲಿ, ಅಕ್ಬರ್ ಬಂದು ಉಡುಗೊರೆ ಕೊಟ್ಟು ಹೋದ ಖಡ್ಗ ಮತ್ತು ಮಂಚವನ್ನು ತೋರಿಸಲಾಗುತ್ತವೆ.(ಆದರೆ ಖಡ್ಗ ಮತ್ತು ಮಂಚ ಉಡುಗೊರೆ ಕೊಟ್ಟ ಬಗ್ಗೆ ಯಾವುದೇ ಕೃತಿಗಳಲ್ಲಿ ಉಲ್ಲೇಖವಿಲ್ಲ) ಅರಸೀಕೆರೆಯಲ್ಲಿಯೂ ಕೂಡ ಕೋಲಶಾಂತಯ್ಯನಿಗೆ ಅಕ್ಬರ್ ಕೊಟ್ಟನೆಂದು ಹೇಳಲಾಗುವ ಮಂಚವೊಂದಿದೆ.

ಈ ರೀತಿ ಕೊಟ್ಟೂರ ಗುರುಬಸವ ಮಾತ್ರವಲ್ಲದೆ, ಸೂಫಿಪರಂಪರೆಯ ತಿಂಥಿಣಿ ಮೋನಪ್ಪ, ಕೊಡೇಕಲ್ ಬಸವಣ್ಣ, ಸಾವಳಗಿ ಶಿವಯೋಗಿ, ಶಿರಹಟ್ಟಿ ಫಕ್ಕೀರೇಶ ಮುಂತಾದವರು ಕಡ್ಡಾಯವಾಗಿ ತುರುಕಾಣ್ಯದ ಯಾವನಾದರೂ ಒಬ್ಬ ಪಾಚ್ಛಾ(ಬಾದಶಹ)ನನ್ನು ಎದುರಿಸಿ ಅವನ ಮುಂದೆ ಪವಾಡ ಮಾಡುತ್ತಾರೆ. 'ಶಿರಹಟ್ಟಿ ಫಕ್ಕೀರೇಶನು ಗಿಳಿಯ ರೂಪದಲ್ಲಿ ಹೋಗಿ ಅಕ್ಬರ್‌ನ ಆಸ್ಥಾನದಲ್ಲಿ ಮಹಿಮೆ ತೋರಿಸುತ್ತಾನೆ. ಆಗ 'ನಿನ್ನ ಗೌರವದ ಸಾಧನಕೆ ಸ್ವೀಕರಿಪುದಿದನು ಬಂದಾ ಆ ಧರೇಂದ್ರನು

ಶೀಲಸಿಕೆಗಳನ್ನಾಧರಿಪ ರಣಬಿಲ್ಲೆಯಂ ಕೊಟ್ಟೊಲಿಸುತ್ತಾನೆ.'(ರಹಮತ್ ತರೀಕೆರೆ, ೨೦೦೧, ಪು.೧೩೮) ಕೊಟ್ಟೂರ ಬಸವನ ಇಂತಹುದೇ ಪವಾಡಕ್ಕಾಗಿ ಆತನ ಅಷ್ಟೋತ್ತರ ಬಿಲ್ವಾರ್ಚನೆ ಸಂದರ್ಭದಲ್ಲಿ 'ದಿಲ್ಲಿ ಪಾಚ್ಛ ಸೇವಿತಾರ್ಥಾಯ ನಮಃ' ಎಂದು ಸ್ತುತಿಸಲಾಗುತ್ತದೆ.

ಅಲ್ಲದೆ ವಿಜಯದಶಮಿಯಂದು, ಕಾರ್ತಿಕೋತ್ಸವ ಮುಂತಾದ ವಿಶೇಷ ಸಂದರ್ಭಗಳಲ್ಲಿ ಅಕ್ಬರನದೆಂದು ಹೇಳಲಾಗಿರುವ ಈ ಖಡ್ಗವನ್ನು ಅಲಂಕಾರದಿಂದ, ಪೂಜ್ಯತೆಯಿಂದ ಮೆರವಣಿಗೆ ಮಾಡಲಾಗುತ್ತದೆ. ಒಬ್ಬ ಮುಸ್ಲಿಂ ದೊರೆಯ ಪ್ರತಿನಿಧಿಯಾದ ಖಡ್ಗ ಶೈವಸಂತನ ಮೆರವಣಿಗೆಯಲ್ಲಿ ಕಾಣಿಸಿಕೊಳ್ಳುವುದು ಅಂದರೆ ಏನು? ಮತ್ತು ಗುರುಬಸವನಂತಹ ವಿರಾಗಿ ಸಂತನಿಗೆ ದೊರೆತ ಖಡ್ಗದ ಉಡುಗೊರೆ ಏನನ್ನು ಸೂಚಿಸುತ್ತದೆ? ಒಂದು ರಾಜಕೀಯ ಶಕ್ತಿ ಕೇಂದ್ರವನ್ನು(ಅಕ್ಬರ್/ನಿಜಾಮುಲಕ್) ಗುರುಬಸವ ತನ್ನ ಪವಾಡ ಶಕ್ತಿಯಿಂದ ಮಣಿಸಿದ ಎಂದು ಜನ ಈ ಮಿತ್‌ನ್ನು ಕಟ್ಟಿರಬಹುದು. ಇನ್ನೊಂದು ಸಂತನ ಗೆಲುವಿನ ಮೂಲಕ ತಮ್ಮ ಕಾಲದ ಎದುರಾಳಿಯನ್ನು ಮಾನಸಿಕವಾಗಿ ಗೆಲ್ಲುತ್ತಿರಬಹುದು. ಕೊಟ್ಟೂರಿನಲ್ಲಿ ಮಾತ್ರವಲ್ಲದೆ, ಗೋಣಿಬಸವ(ಗುಮ್ಮಗೋಳ), ಜಾತ್ರಾ ಸಂದರ್ಭದಲ್ಲಿಯೂ ಕೂಡ ಖಡ್ಗ(ಕಂಡಾಯ)ವನ್ನು ಪೂಜಿಸಿ ಮೆರವಣಿಗೆ ಮಾಡಲಾಗುತ್ತದೆ. ಈ ಧಾರ್ಮಿಕ ಸಂತರ ಆಚರಣೆಗಳಲ್ಲಿ ಕಂಡುಬರುವ ಈ ಕಂಡಾಯ(ಖಡ್ಗ)ಗಳು ಸಿದ್ಧರನ್ನು ಪ್ರತಿನಿಧಿಸುತ್ತವೆ. 'ಈ ಕಂಡಾಯಗಳು ನಾಥ ಸಿದ್ಧರು-ಸೂಫಿಸಿದ್ಧರು ತಮ್ಮ ರಕ್ಷಣೆಗೆ ಹಾಗೂ ತಮ್ಮ ಸಿದ್ಧಿಯ ಸಾಧನೆಯ ಸಂದರ್ಭದಲ್ಲಿ ಶರೀರವನ್ನು ದಂಡಿಸಲು ಬಳಸುತ್ತಿದ್ದ ಆಯುಧವಾಗಿರಬೇಕು.'(ಮಹದೇವ ಶಂಕನಪುರ, ೨೦೦೨, ಪುಟ.೧೦೮) ಈ ಸಿದ್ಧಿಸಾಧನೆಯ ಉಪಕರಣವಾಗಿದ್ದ ಖಡ್ಗವು(ಕಂಡಾಯ) ಮುಂದೆ ಸಾಂಸ್ಕೃತಿಕ ಪೂಜ್ಯ ಸಂಕೇತವಾಗಿ ಉಳಿದುಕೊಂಡಿದೆ ಎನಿಸುತ್ತದೆ. ಅಲ್ಲದೆ ಈ ಕಂಡಾಯಗಳು ಸೂಫಿಸಂತರ ಗೆಳೆತನದ ಫಲವಾಗಿ ಮತ್ತು ಸೂಫಿಗಳಿಂದ ಕಲಿತ ಸಾಧನೆಗಳ ಫಲವಾಗಿ ಈ ಪರಂಪರೆಯ(ನಾಥ ಪಂಥದ) ಸಿದ್ಧರಿಗೆ ಸೇರಿರಬೇಕು(ಮಹಾದೇವ ಶಂಕರನಪುರ, ೨೦೦೨, ಪು.೧೦೯) ಸೂಫಿಗಳಲ್ಲಿ ಖಡ್ಗಗಳು ಅವರ ವ್ಯಕ್ತಿತ್ವದ ಸ್ವರೂಪದ ಜೊತೆ ಗುರುತಿಸಲ್ಪಟ್ಟಿವೆ. 'ಮೊಯಿನುದ್ದೀನ್ ಚಿಸ್ತಿಯ ಸಂಗಾತಿಯಾಗಿದ್ದ ಹಾಜಿರೂಮಿ ಬಾಬ ಬಿಜಾಪುರಕ್ಕೆ(೧೧೬೦) ಕರ್ನಾಟಕದ ಮೊದಲ ಸೂಫಿಯಾಗಿ ಬಂದಾಗ ಕೂಡ ಸಂಘರ್ಷದ ಮಾತಿಲ್ಲ. ಆದರೆ ಅನಂತರ ಸೈನಿಕ ಸೂಫಿಗಳು ಬಂದರು. ಅವರ ಹೆಸರಲ್ಲೆ ಆಯುಧಗಳ ಸೂಚನೆಗಳಿವೆ. ಉದಾಹರಣೆಗೆ ಗುಲ್ಬರ್ಗೆಯಲ್ಲಿ ಮಡಿದ ಹುಸಾಮ್ ತೀಘು-ಇ-ಬರ್ಹಾನ್ (ತೀಘು-ಇ-ಬರ್ಹಾನ್ =ಬಿಚ್ಚುಗತ್ತಿ) ಹಾಗೂ ಬಿಜಾಪುರದಲ್ಲಿ ಮಡಿದ ಫೀರ್ ಮಲಬಾರಿ ಖಂಡಾಯತ್ (ಖಂಡಾಯ = ಖಡ್ಗ), ಖಂಡಾಯತ್ ಎಂದರೆ ಖಂಡಾಯ ಧರಿಸಿದವನು. ಸೈನಿಕ ದಂಡಯಾತ್ರೆಗಳ ಜತೆಯಲ್ಲಿ ಅಥವಾ ಅವುಗಳ ಹಾದಿಯಲ್ಲಿ ಅನೇಕ ಸೂಫಿಗಳು ಓಡಾಡಿರುವುದೂ ಉಂಟು. ತಮ್ಮ ಮೇಲೆ ಪ್ರಾಣಾಂತಿಕ ಆಕ್ರಮಣ ನಡೆದಾಗ ಸೂಫಿಗಳು ಶಸ್ತ್ರ ಹಿಡಿದಿರುವುದುಂಟು.'(ರಹಮತ್ ತರೀಕೆರೆ, ೨೦೦೧, ಪು.೩೮)

ವಿರಾಗಿಯಾದ ಗುರುಬಸವನಿಗೆ ಉಡುಗೊರೆಯಾಗಿ ಬಂದ ಖಡ್ಗ ಆ ಹೊತ್ತಿನ ರಾಜಕೀಯ ಸ್ಥಿತಿಗತಿಗೆ ಹಿಡಿದ ಕನ್ನಡಿಯಾಗಿದೆ. ಈ ಹಿಂದೆಯೇ ನೋಡಿದಂತೆ ೧೬ನೇ ಶತಮಾನವು ಮಧ್ಯಕರ್ನಾಟಕ ರಾಜರುಗಳ- ಪಾಳೇಗಾರರ ಮಧ್ಯದ ನಿರಂತರವಾದ ಕಾಳಗಕ್ಕೆ ಗುರಿಯಾಗಿದ್ದಿತು. ಗುರುಬಸವನ ಖಡ್ಗ ಅಂದಿನ ರಾಜಕೀಯ ಸ್ಥಿತಿಗತಿಯ ಅನಿಶ್ಚಿತತೆಯನ್ನು ತೋರಿಸುತ್ತದೆ. ಅಲ್ಲದೆ ಗುರುಬಸವ ಸಮಾಧಿಯಾದನಂತರದ ಪವಾಡವೊಂದರ ಪ್ರಕಾರ ಸ್ವತಃ ಕೊಟ್ಟೂರ ಗುರುಬಸವನೇ ಸಿದ್ದೋಜಿ-ಮುರಾರಿ-ಮದಕರಿ ನಾಯಕರ ವಿರುದ್ಧವಾಗಿ ಯುದ್ಧಮಾಡುತ್ತಾನೆ. ಹರಪನಹಳ್ಳಿಯ ಸೋಮಶೇಖರನ ಪರವಾಗಿ ಯುದ್ಧಮಾಡಲು ಹುಲಿಯ ವಾಹನವೇರಿ ಬರುತ್ತಾನೆ.

> 'ಹೊರಗಿರುವ ಫೌಜಿಂಗೆ ಪರಮ ಜಂಗಮ ಮೂರ್ತಿ|
> ಪುರುಷಗೊಬ್ಬೊಬ್ಬ ಜಂಗಮನಾಗಿ ಕಾಣುತಿರೆ|
> ಕರಿಗೊರಲ ತ್ರಿಶೂಲ ಉರಿಗಣ್ಣು ತಲೆಬೋಳು ಕಾವಿ ಕಷಾಯಾಂಬರವನುಟ್ಟು||
> ಗುರುಬಸವಲಿಂಗ ತಾ ಹುಲಿಯ ವಾಹನವೇರಿ|
> ಕರದಲಿ ಮಿಡಿಯನಾಗರ ಬೆತ್ತ ಪಿಡಿಕೊಂಡು
> ತುರುಕರನು ಹೊಡೆದ್ಹೋಡಿಸುತ ತಾ ಸರ್ವರಲಿ ಮೆರೆದ ಚಿನ್ಮಯ ರೂಪನೊ|

(ಎ.ಎಂ. ಮಂಜನಾಥ ಶಾಸ್ತ್ರಿಗಳು(ಸಂ), ೧೯೮೫, ಪುಟ.೮)

ಹೀಗೆ ಹುಲಿಯ ಸವಾರಿ ಮಾಡುವುದು ಯೌಗಿಕ ಪಂಥಗಳಲ್ಲಿ ಕಂಡುಬರುವಂತಹುದು. ಗುರುಬಸವ ಹೀಗೆ ಒಂದು ರಾಜಕೀಯ ಕೇಂದ್ರದ ಪರವಾಗಿ ಯುದ್ಧಮಾಡುವುದು, ಈತನನ್ನು 'ವೀರವಸಂತ'(ಈ ಹಿಂದೆ ನೋಡಿದ್ದೇವೆ) ಎಂದು ಕರೆಯುತ್ತಿರುವುದು, ಅಕ್ಬರ್/ನಿಜಾಮುಲಕ್‌ನ ಅಂತಃಪುರದಲ್ಲಿ ಯುದ್ಧಮಾಡುವುದು. ಇವೆಲ್ಲ ಕೊಟ್ಟೂರ ಗುರುಬಸವ ನಾಥ-ಶೈವ-ಸೂಫಿ ಸಿದ್ದನಾಗಿದ್ದು, ಸಂತನಾದರೂ 'ಆತನಲ್ಲಿರುವ ವೀರವ್ಯಕ್ತಿತ್ವವನ್ನು ಸೂಚಿಸುತ್ತದೆ. ಈ ವ್ಯಕ್ತಿತ್ವಕ್ಕನುಗುಣವಾಗಿ ಆತ ಖಡ್ಗವನ್ನು ಹಿಡಿದಿರಬಹುದು. ನಾಥಸಿದ್ಧ-ಸೂಫಿಸಿದ್ದನಾದ ಕೊಡೇಕಲ್ ಬಸವಣ್ಣನು ಧಾರ್ಮಿಕ ಸಂತನಾಗಿದ್ದರೂ ಕೂಡ ಬೇಡ ದೊರೆ ಹನುಮಣ್ಣನಾಯಕ ದೊರೆ ಪರವಾಗಿ ಯುದ್ದಮಾಡುವುದನ್ನು ನೋಡಿದರೆ ಆ ಹೊತ್ತಿನ ಪರಿಸ್ಥಿತಿ ರೂಪಿಸಿರುವ ಅನಿವಾರ್ಯತೆ ತಿಳಿದುಬರುತ್ತದೆ.

ಪಂಚಗಣಾಧೀಶ್ವರರಲ್ಲಿ ಕೊಟ್ಟೂರ ಗುರುಬಸವನೊಬ್ಬನೇ ಹುಲಿಯ ಸವಾರಿ ಮಾಡುವುದಿಲ್ಲ. ಕೂಲಹಳ್ಳಿ ಮದ್ದಾನೇಶ್ವರನ ಮಗ ಗೋಣಿಬಸವನೂ ಹುಲಿ ಸವಾರಿ(ಬಾಗ್ ಸವಾರ) ಮಾಡುತ್ತಾನೆ. ಸಾಮಾನ್ಯವಾಗಿ ಸೂಫಿಸಂತರೆಲ್ಲ ಈ ರೀತಿ ಬಾಗ್ ಸವಾರರಾಗಿದ್ದಾರೆ. ಯಮನೂರಪ್ಪ, ಗುಲ್ಬರ್ಗಾದ ಖಾಜಬಂದೇನವಾಜ್ ಬಾಗ್ ಸವಾರರು(ಬಾಗ್=ಹುಲಿ) 'ಜನಪದ ಸಂಸ್ಕೃತಿಯ ನಾಯಕರಾದ ಸಿದ್ದಪ್ಪಾಜಿ, ಮಲೆಮಾದೇಶ್ವರರೂ ಬಾಗ್ ಸವಾರರೇ, ಯಮನೂರಿನಿಂದ ಕಾಬೂಲಿನತನಕ ನೂರಾರು ಸಂತರು ಹೀಗೆ

ಹುಲಿ ಮೇಲೆ ಬರುತ್ತಾರೆ.'(ರಮಹತ್ ತರೀಕೆರೆ, ೨೦೦೧, ಪು-೩). 'ಗೋಣಿ ಬಸವೇಶ್ವರನು ಚಿಕ್ಕಹಳ್ಳಿಯಲ್ಲಿ ಹುಲಿಯನ್ನು ಎತ್ತುಗಳನ್ನಾಗಿಸಿಕೊಂಡು ಕಾಳಸರ್ಪವನ್ನು ಬಾರಿಕೋಲಾಗಿಸಿಕೊಂಡು ನೇಗಿಲನ್ನು ತೆಗೆದುಕೊಂಡು ವ್ಯವಸಾಯ ಮಾಡುತ್ತಾನೆ.''(ಈಡಿಗರ ಚಂದ್ರಪ್ಪ, ೧೯೯೦, ಪು.೩೦-೩೧) ಇನ್ನೊಮ್ಮೆ ಬಾಗಳಿಯಲ್ಲಿ ಭಿಕ್ಷೆ ಬೇಡಲು ಅಡ್ಡಬಂದ ಊರಿನ ಜನರಿಗೆ ವೀರಭದ್ರ ದೇವಾಲಯದ ಗರ್ಭಗುಡಿಯಿಂದ ಹುಲಿಮೇಲೆ ಬಂದು ದರ್ಶನಕೊಡುತ್ತಾನೆ. ಈಗಲೂ ಕೂಡ ಕೂಲಹಳ್ಳಿ ಮಠದ ಹತ್ತಿರ ಇರುವ ಭೂಮಿಯನ್ನು ಗೋಣಿಬಸವ ಹುಲಿಯ ಮೂಲಕ ವ್ಯವಸಾಯ ಮಾಡಿದ್ದೆಂದು ತೋರಿಸಲಾಗುತ್ತದೆ. ಗುಮ್ಮಗೋಳದ ಗೋಣಿಬಸವನ ಮಠದಲ್ಲಿ ಈತ ಹುಲಿಸವಾರಿ ಮಾಡುತ್ತಿರುವ ಶಿಲ್ಪವೂ ಇದೆ. ಹುಲಿಯ ಮೇಲೆ ಕುಳಿತು ಚೇಳಿನ ಸರಪಳಿ ಹಾಕಿ ಹಾವಿನ ಚಾಟಿ ಹಿಡಿದು ಬಾಗ್ ಸವಾರನಾಗಿ ಸೂಫಿಸಂತ ಯಮನೂರಪ್ಪನೂ ಬರುತ್ತಾನೆ.

ಹೀಗೆ ಕೊಟ್ಟೂರ ಗುರುಬಸವನಾಗಲೀ ಗೋಣಿಬಸವನಾಗಲೀ ಹುಲಿ ಸವಾರಿ ಮಾಡುವುದರ ಸುತ್ತ ಹುಟ್ಟಿದ ಕತೆಗಳು ಅವರಿಗಿದ್ದ ಸೂಫಿ ಸಂತರ ಒಡನಾಟವನ್ನು, ಪ್ರಭಾವವನ್ನು ಸೂಚಿಸುತ್ತವೆ. ಸೂಫಿ ಸಂತರು ಮಾಡುವ ಇನ್ನೊಂದು ಮುಖ್ಯವಾದ ಪವಾಡವೆಂದರೆ ಮಳೆ ಸುರಿಸುವುದು. ಕೊಟ್ಟೂರ ಗುರುಬಸವ ಹಾಗೂ ಗೋಣಿಬಸವ ಈ ರೀತಿ ಮಳೆ ಪವಾಡ ಮಾಡುತ್ತಾರೆ. ಗುರುಬಸವನು ಸಿದ್ದೋಜಿ-ಮುರಾರಿ-ಮದಕರಿನಾಯಕರ ಜೊತೆ ಯುದ್ಧಮಾಡುವಾಗ ಗುಡುಗು-ಮಿಂಚಿನೊಂದಿಗೆ ಮಳೆತರಿಸುತ್ತಾನೆ. ಹಾಗೆಯೇ ಗೋಣಿಬಸವ ಉಳವತ್ತಿ-ನಿಂಬಳಗೆ ಗ್ರಾಮದಲ್ಲಿ ಮಳೆಯಿಲ್ಲದೆ ಕಷ್ಟಪಡುತ್ತಿದ್ದ ಜನರಿಗೆ ಮಳೆತರಿಸುತ್ತಾನೆ. ಮಳೆಪ್ಪಯ್ಯ, ತಿಂಥಿಣಿ ಮೋನಪ್ಪಯ್ಯ, ಮಡ್ನ್ಯಾಳದ ಅಮೋಘಸಿದ್ಧ, ಮಾನವಿಯ ಸಬ್ಜಲಿಸಾಬ್ ಮುಂತಾದ ಸೂಫಿಸಂತರೆಲ್ಲ ಈ ಪವಾಡಗಳನ್ನು ಮಾಡುತ್ತಾರೆ. ಹಾಗೆ ನೋಡಿದರೆ ಮಳೆಯ ಪ್ರಭಾವ ಇರುವ ಪ್ರದೇಶದಲ್ಲಿರುವ ಎಲ್ಲ ಸಂತರೂ ಇಂತಹ ಪವಾಡಗಳನ್ನು ಮಾಡುತ್ತಾರೆ. ಹಾಗೆಯೇ ನದಿ ತೀರದ ಸೂಫಿ ಧಾರ್ಮಿಕ ಸಂತರು ಮಾಡುವ ಪ್ರಮುಖ ಪವಾಡವೆಂದರೆ ನದಿಯನ್ನು ದಾಟುವುದು. ಕಂಬಳಿಯನ್ನು ಹಾಸಿ ಅದರ ಮೂಲಕವಾಗಿ ನದಿಯನ್ನು ದಾಟುವ ಪವಾಡ ಮಾಡುತ್ತಾರೆ. ಗೋಣಿ ಬಸವ ಕಂಬಳಿ ಹಾಸಿ ತುಂಗಾಭದ್ರ ನದಿಯನ್ನು ದಾಟಿ ಅಲ್ಲಿಪುರದಿಂದ ಹಮ್ಮಿಗಿಯ ಕಡೆ ಹೋಗುತ್ತಾನೆ. ಸೂಫಿ ಸಂತರಲ್ಲಿ ಮಾತ್ರವಲ್ಲದೆ, ನಾಥಸಿದ್ಧನಾದ ರೇವಣಸಿದ್ಧ ಕೂಡ ಮಾದಗ-ಮಾಸೂರು ಬಳಿಯ ಹೊಳೆಯೊಂದನ್ನು ಕಂಬಳಿ ಹಾಸಿ ಅದರ ಮೇಲೆ ಕೂತು ದಾಟುತ್ತಾನೆ. ನಾಥಸಿದ್ಧ-ಸೂಫಿಸಿದ್ಧರ ಪ್ರಭಾವವಿರುವ ಗೋಣಿ ಬಸವನ ಈ ಪವಾಡ ಯೋಗನೈಪುಣ್ಯವನ್ನು ಸೂಚಿಸುತ್ತದೆ. 'ಕುಂಡಲಿನಿ ಶಕ್ತಿಯನ್ನು ಉರ್ಧ್ವಮುಖಿಗೊಳಿಸಿ ಸುಷುಮ್ನಾ ನಾಡಿಯ ಮೂಲಕ ಆಜ್ಞಾಚಕ್ರವನ್ನು ಮುಟ್ಟಿದರೆ ದೇಹ ಗರಿಹಗುರಾಗುತ್ತದೆ.'(ಸುಧಾಕರ್(ಸಂ), ಪು-೧೧೩) ಈ ರೀತಿ ದೇಹ ಹಗುರ ಮಾಡಿಕೊಂಡು ಕಂಬಳಿಯಲ್ಲಿ ಹೋಗಿರಬಹುದು. ಏಕೆಂದರೆ ನಾಥಸಿದ್ಧ-ಸೂಫಿಸಿದ್ಧರಿಗೆ ಯೌಗಿಕ ವಿದ್ಯೆಯ ಬಗ್ಗೆ ಸಾಕಷ್ಟು ತಿಳುವಳಿಕೆ ಇದ್ದಿತು.

ಗೋಣಿಬಸವನಿಗೆ ಸೂಫಿ-ಇಸ್ಲಾಂನ ಪ್ರಭಾವ ಆಗಿದೆ ಎನ್ನಲು ಗುಮ್ಮಗೋಳ ಮಠವೇ ಸಾಕ್ಷಿ. ಇಸ್ಲಾಂ ಶೈಲಿಯಲ್ಲಿರುವ ಈ ಮಠದಲ್ಲಿ ಹಸಿರು ನಿಶಾನಿಯನ್ನು(ಬಾವುಟ) ದ್ವಾರಗೋಪುರದ ಮೇಲೆ ಹರಿಸಲಾಗುತ್ತದೆ. ಇದು ವಾಸ್ತುಶಿಲ್ಪದ ಮೇಲೆ ಆಗಿರುವ ಮುಸ್ಲಿಂ ಪ್ರಭಾವವನ್ನು ಸೂಚಿಸುತ್ತದೆ. ಗೋಣಿಬಸವನ ಕಾಲಜ್ಞಾನ ವಚನವಂತೂ ಅಲ್ಲಾ-ಬಸವಣ್ಣ, ಖುದಾ-ಶಿವ, ಫಾತಿಮಾಬೀಬಿ-ಪಾರ್ವತಿದೇವಿಯನ್ನು ಸಮೀಕರಿಸಿ ಇವರೆಲ್ಲ ಒಂದೇ ಎಂದು ಸಾರುತ್ತದೆ.

'ಬಸವನೇ ಅಜ್ಜ, ಬಸವನೇ ಅಜ್ಜಿ, ಬಸವನೇ ತಾಯಿ, ಬಸವನೇ ತಂದೆ' ಎಂದು ಆರಂಭವಾಗುವ ಈ ಕಾಲಜ್ಞಾನವು ಮುಂದೆ 'ಅಲ್ಲಲ್ಲಾ ಮಹಮ್ಮದ್ ರಸುಲ್ಲಾ ಎಲ್ಲಿ ನೋಡಿದರು ನರಹುಳಕ್ಕೆ ಸಿಕ್ಕ ದೇವನಲ್ಲ- ಅಲ್ಲಾ ಎಂಬವನು ಬಸವಣ್ಣ, ಖುದಾ ಎಂಬುವನು ಸಾಕ್ಷಾತ್ ಶಿವ, ಫಾತೀಮಾಬೀಬಿ ಎಂಬುವಳು ಪಾರ್ವತಿ ಎಲೇ ದೇವನಪ್ಪಾ ಬಲ್ಲಿದ ಶರ್ವಾಣಿ.'(ಅನುಬಂಧ ೫, ಬಾಲಬಸವರ ಕಾಲಜ್ಞಾನ ಸಾಹಿತ್ಯ)

ಈ ಕಾಲಜ್ಞಾನ ವಚನದಲ್ಲಿ ಗೋಣಿಬಸವನು ಶೈವ-ಇಸ್ಲಾಂನ್ನು ಸಮೀಕರಿಸುತ್ತಿದ್ದಾನೆ. ಇಲ್ಲಿಯೇ ಇದ್ದ ಶೈವ ಪರಂಪರೆಯೊಂದಿಗೆ ಹೊರಗಿನಿಂದ ಪ್ರವೇಶಿಸಿದ ಸೂಫಿ-ಇಸ್ಲಾಂ ಬದುಕಬೇಕಾದಾಗ ಮಾಡಿಕೊಂಡ ಅನುಸಂಧಾನದ ಪ್ರಕ್ರಿಯೆ ಇದು. ಅದರಲ್ಲೂ ಬಸವಣ್ಣ-ಅಲ್ಲಮರನ್ನೊಳಗೊಂಡ ಧಾರೆಯು ಸೂಫಿ-ಇಸ್ಲಾಂ ಮತ್ತು ನಾಥ ಧಾರೆಗಳ ಜೊತೆ ಬೆರೆತು ಅನೇಕ ಸಂಕರ ರೂಪಗಳನ್ನು ಸೃಷ್ಟಿಸಿದೆ. ಗೋಣಿಬಸವ, ತಿಪ್ಪೇಸ್ವಾಮಿ, ಗುರುಬಸವ ಇವರು ನಾಥಸಿದ್ಧ ಸೂಫಿಸಿದ್ದರೊಂದಿಗೆ ಕೂಡಿ ಬದುಕಬೇಕಾದಾಗ ಸೃಷ್ಟಿಸಿಕೊಂಡ ಸಂಕರಸ್ಥಿತಿ ಇದು.

ಒಟ್ಟಾರೆ ನಾಥಸಿದ್ದ-ಸೂಫಿಸಿದ್ಧರು ಪರಸ್ಪರ ಗೆಳೆತನ ಹೊಂದುವುದರ ಜೊತೆಗೆ ಈ ಎರಡೂ ಒಂದರಲ್ಲೊಂದು ಬೆರೆತು ರೂಪತಳೆದವರು ಈ ಪಂಚಗಣಾಧೀಶ್ವರರು. ಇವರು ಮುಸ್ಲಿಂನ ಗೆಳೆತನ ಹೊಂದಿದ್ದರೆನ್ನಲು ಇವರ ಬದುಕಿನ ಹಲವಾರು ಪವಾಡಗಳು, ಹುಟ್ಟಿದ ಮಿಥ್‌ಗಳು, ಸಾಕ್ಷಿಯಾಗಿವೆ. ಇಂದಿಗೂ ತಿಪ್ಪೇಸ್ವಾಮಿ ಹೊರಮಠಕ್ಕೆ, ಕೊಟ್ಟೂರ ಗುರುಬಸವನ ಜಾತ್ರೆಗೆ ಮುಸ್ಲಿಂ ಸಮುದಾಯ ಶ್ರದ್ಧೆಯಿಂದ ನಡೆದುಕೊಳ್ಳುತ್ತಿದೆ. ೧೫-೧೬ನೇ ಶತಮಾನದ ವೇಳೆಗಾಗಲೆ ಸೂಫಿಗಳು ಭಾರತದ ತುಂಬ ಅದರಲ್ಲೂ ಕರ್ನಾಟಕದಲ್ಲಿ ಕೊಡೇಕಲ್, ಮಂಟೇಸ್ವಾಮಿ, ತಿಂಥಿಣಿ ಮೋನಪ್ಪಯ್ಯನಂತಹ 'ಸಿದ್ಧ' ಅನುಭಾವಿಗಳ ಜೊತೆ ಗೆಳೆತನ ಬೆಳೆಸಿ ವ್ಯಾಪಕವಾಗಿ ಸಂಚರಿಸಿ ನಾಥ-ಸೂಫಿ ಸಿದ್ಧ ಪರಂಪರೆಗಳ ಸಂಕರಕ್ಕೆ ಕಾರಣರಾಗಿದ್ದಾರೆ. ಇಂತಹ ಗೆಳೆತನ ಮತ್ತು ಬೆರೆಯುವಿಕೆಯ ಫಲವಾಗಿ ಪಂಚಗಣಾಧೀಶರ ಪಂಥ ರೂಪುಗೊಂಡಿದೆ. ಇವರ ಆಚರಣೆಗಳಲ್ಲಿನ ಮಾದ್ಲಿಲಿ ಎಡೆ(ಮಾಲ್ಮ ಎಡೆ) ಕೊಡುವುದು, ಗುಮ್ಮಗೊಳ ಮಠದ ಮೇಲೆ ಹಸಿರು ನಿಶಾನೆ ಹಾರಿಸುವುದು, ಕೊಟ್ಟೂರಲ್ಲಿ ಮತ್ತು ಗುಮ್ಮಗೋಳದ ಮೆರವಣಿಗೆಯಲ್ಲಿ ಕಂಡಾಯ(ಖಡ್ಗ) ಪೂಜಿಸುವುದು ಇವೆಲ್ಲ ಸೂಫಿಸಿದ್ದರಿಂದ ಪಡೆದುಕೊಂಡವುಗಳಾಗಿವೆ.

ಏಕಾಂತವಾಸ, ಭಿಕ್ಷಾಟನೆ, ಅಲೆಮಾರಿತನ, ಭಂಗಿಸೇವನೆ, ಹಸಿರು ನಿಶಾನೆ, ಕಬ್ಬಿಣದ ಆಯುಧ ಇವು ನಾಥಸಿದ್ಧ-ಸೂಫಿಸಿದ್ಧರ ಸೌಮ್ಯಗಳ ಸಂಕೇತವಾಗಿದ್ದು, ಪಂಚಾಗಣಾಧೀಶ್ವರರಲ್ಲಿ ಬರುವ ಕೊಟ್ಟೂರ ಗುರುಬಸವ, ಕೂಲಹಳ್ಳಿ ಮದ್ದಾನ ಸ್ವಾಮಿ, ಗೋಣಿಬಸವ ಹಾಗೂ ನಾಯಕನಟ್ಟಿ ತಿಪ್ಪೇಸ್ವಾಮಿ ನಾಥಸಿದ್ಧ-ಸೂಫಿಸಿದ್ಧರ ಗುಣಲಕ್ಷಣಗಳ ಸಂಕರ ರೂಪವನ್ನು ಹೊಂದಿದ್ದರೆಂಬುದು ಸ್ಪಷ್ಟವಾಗುತ್ತದೆ.

## ೩.೪. ಸಂಕರತೆಯ ಇತರ ಪ್ರಕ್ರಿಯೆಗಳು

ಪಂಚಗಣಾಧೀಶ್ವರ ಪಂಥವನ್ನು ಗಮನಿಸಿದರೆ ಇಲ್ಲಿರುವ ಆಚರಣೆಗಳು, ಕಲೆ, ಸಾಹಿತ್ಯ, ಪವಾಡಗಳು ಬರಿ ಶೈವನಾಥ ಸಿದ್ಧ ಅಥವಾ ಸೂಫಿ-ಇಸ್ಲಾಂ ಪ್ರಭಾವದಿಂದ ಮಾತ್ರ ಹುಟ್ಟಿಕೊಂಡಿಲ್ಲ. ಅದೆಷ್ಟೋ ವಿಶಿಷ್ಟ ಆಚರಣೆಗಳು ಹುಟ್ಟಿಕೊಳ್ಳಲು ಭಿನ್ನ ಭಿನ್ನ ಚಾರಿತ್ರಿಕ ಒತ್ತಡಗಳೂ ಕಾರಣವಾಗಿವೆ. ಹೀಗೆ ಹುಟ್ಟಿಕೊಂಡ ಆಚರಣೆಗಳು ಸಮಕಾಲೀನ ಸಂದರ್ಭದಲ್ಲಿ ರೂಪಾಂತರವನ್ನು ಹೊಂದುತ್ತಿವೆ. 'ಈ ಸಂಕರದ ಪ್ರಕ್ರಿಯೆ ಚಾರಿತ್ರಿಕವಾದ ಯಾವುದೋ ಕಾರಣಗಳಿಂದ ಶುರುವಾಗಿರಬಹುದು ಆದರೆ ಇದನ್ನು ವಾಸ್ತವದ ಬದುಕಿನಲ್ಲಿ ನಿಜವಾಗಿ ಸಾಧ್ಯವಾಗಿಸುವುದು ಜನಸಮುದಾಯಗಳೆ. ಜನಸಮುದಾಯಗಳು ಬೇಕೆಂತಲೋ, ಅಪ್ರಜ್ಞಾಪೂರ್ವಕವಾಗಿಯೋ ತಮಗೆ ಸರಿಕಂಡ ಸಂಗತಿಗಳನ್ನು ಪಡೆಯುತ್ತಾ ಕೊಡುತ್ತಾ, ಬದುಕುತ್ತಾ ಹೋಗುತ್ತವೆ. ಕೊಡುವ ಪಡೆಯುವ ಅರಿವೇ ಇರದಂತೆ ಈ ಚಲನೆಗಳು ನಡೆಯುತ್ತಾ ಇರುತ್ತದೆ. ಈ ಕೊಡುವ ಅಥವಾ ಪಡೆಯುವ ಕ್ರಿಯೆ ಏಕಮುಖವಾಗಿರುವುದಿಲ್ಲ. ಅದು ಪರಸ್ಪರ ಪ್ರಭಾವ ಬೀರುವ ಹಂತದಲ್ಲಿ ನಿಲ್ಲದೆ ಎರಡು ಅಥವಾ ಹಲವು ಸೇರಿ, ಮೂರನೆಯದೊಂದನ್ನು ಹುಟ್ಟಿಸಿ ಬಿಡಬಹುದು. ಆದ್ದರಿಂದ ಸಂಕರವೆಂದರೆ ಕೇವಲ ಬೆರಯುವಿಕೆ ಮಾತ್ರವಲ್ಲ ಹೊಸ ರೂಪಾಂತರಗಳ ಮೂಡುವಿಕೆ ಕೂಡ.(ರಹಮತ್ ತರೀಕೆರೆ(ಸಂ), ೨೦೦೦, ಪು.೩೫೦) ಒಂದು ಜೀವಂತ ಸಮುದಾಯ ಈ ಐವರು ಧಾರ್ಮಿಕ ಸಂತರುಗಳೊಂದಿಗೆ ಈಗಲೂ ಕೂಡ ನಡೆಸುತ್ತಿರುವ ಅನುಸಂಧಾನದಿಂದಾಗಿ ಸಮಕಾಲೀನ ಸಂದರ್ಭಗಳಲ್ಲೂ ಅದೆಷ್ಟೋ ಆಚರಣೆಗಳು ಬಂದು ಸೇರುವ, ಬಿಟ್ಟು ಹೋಗುವ ಪ್ರಕ್ರಿಯೆ ನಡೆಯುತ್ತಲೆ ಇದೆ. ಹಾಗಾಗಿ ಪಂಚಗಣಾಧೀಶ್ವರ ಆಚರಣೆಗಳಲ್ಲಿ ಈ ಹೊತ್ತಿನಲ್ಲಿ ಆಗುತ್ತಿರುವ ಬದಲಾವಣೆಗಳು ಒಂದು ಸಮುದಾಯವೇ ಬಯಸುತ್ತಿರುವ ಬದಲಾವಣೆಯ ಸಂಕೇತವೇ ಆಗಿದೆ.

### ೩.೪.೧. ಹನುಮಂತನೊಂದಿಗಿನ ತಾತ್ವಿಕ ಸಂಘರ್ಷ

ಚಾರಿತ್ರಿಕ ಒತ್ತಡದಿಂದ ರೂಪುಗೊಂಡ ಒಂದು ಮಿತ್ ಎಂದರೆ ಅದು ಕುಪ್ಪಿನ ಕೇರಿ ಹನುಮಂತನಿಗೆ (ಕೂಡ್ಲಿಗಿ ತಾ) ಲಿಂಗದೀಕ್ಷೆಯನ್ನು ಈ ಐವರು ಗಣಾಧೀಶ್ವರರು ನೀಡಿದರು ಎನ್ನುವುದು. ಬಾಲಬಸವರ ತುಮನೆಪ್ಪ(ಗೊಲ್ಲರಳ್ಳಿ, ಕೂಡ್ಲಿಗಿ ತಾ.) ಹಾಡುವ ಗೋಣಿಬಸವನ ಕಾವ್ಯದಲ್ಲಿ ಕೈಲಾಸದಿಂದ ಇಳಿದ

ಐವರು ಗಣಾಧೀಶ್ವರರು ಹಂಪೆಯ ಮಾರ್ಗವಾಗಿ ಕೂಡ್ಲಿಗಿಯನ್ನು ದಾಟಿ ಕುಪ್ಪಿನ ಕೇರಿಗೆ ಬರುತ್ತಾರೆ. ಆ ಕುರಿತು 'ಆs ಕುಪ್ಪಿನಕೇರಿಗೆ ಬಂದಾರು, ಆ ಕುಪ್ಪಿನ ಕೇರಿಗೆ ಬಂದಾಗ ವಸ್ತಿ ಎಲ್ಲಿ ಮಾಡ್ಬೇಕು? ಶರಣು, ದೊಡಮಾತ್ಮುರು, ರೈತರ ಮನಿಗಿ ಹೋಗಂಗಿಲ್ಲ. ಹಾಗ ' ಆ ಎಲೂ ಇಲ್ರಪಾ ಈ ಊರಾಗ ಹನುಮಂತದೇವರ ಗುಡಿ ಐತಂತೆ ಹೋಗಾನು ಬರ್ರಿ ಅಲ್ಲಿಗೆ' ಆ ಆಂಜನೇಯನ ಗುಡಿಗೆ ಐದು ಮಂದಿ ಶರಣ್ರು ಆ ಕೂಸ್ (ಗೋಣಿಬಸವ) ತಗೊಂಡ್ ಬಂದಾರು 'ಆ ಆಂಜನೇಯ ನಾವ್ ದೊಡ್ಡ ಶರಣ್ರುಪ, ಮಾತ್ಮುರು, ಸ್ವಲ್ಪ ವಸ್ತಿ ಆತು, ಸೂರ್ಯ ಮುಣಗಿದ ಸ್ವಲ್ಪ ಜಾಗ ಕೊಡಪ, ನಿನ್ನುಗ್ಡ್ಯಾಗ ವಸ್ತಿ ಮಾಡಿ ಮುಂಜಾನಿ ಹೋಗ್ಬಿಡ್ತೀವಿ' ಆಗ ಕುಪ್ಪಿನ ಕೇರಿ ಹನುಮಂತರಾಯ ಜಾಗಕೊಟ್ನಂತೆ ಅಲ್ಲಿ ವಸ್ತಿ ಮಾಡಿದ್ರಂತೆ, ವಸ್ತಿ ಮಾಡಿ ಮುಂಜಾನೆದ್ದು ಹೋಗ ಬೇಕಲ್ರಿ ಆಗ ಕೊಟ್ರೇಶ ಹೇಳ್ದ(ಕೊಟ್ರೇಶ = ಗುರುಬಸವ). 'ಆಯ್ತಪ ಮಹಾತ್ಮ, ನಮ್ಗೆ ಮರ್ಯಾದಿ ಕೊಟ್ಟು, ಜಾಗ ಕೊಟ್ಟಾನ ವಸ್ತಿ ಮಾಡದುಕ್ಕ, ಈತುಗ ಆದ್ರ ಲಿಂಗಧಾರಣೆ ಮಾಡಿ ಹೋಗಬೇಕಪ, ಹಂಗಾ ಹೋಗ್ಬಾರ್ದು, ಆಗ ಐದು ಶರಣ್ರು ಸೇರಿ ಕುಪ್ಪಿನಕೇರಿ ಹನುಮಂತನಿಗೆ ಲಿಂಗಧಾರಣೆ ಮಾಡಿ 'ಆ ನಾವೆಲ್ಲಿರ್ತೀವಿ ನೀನಲ್ಲೆ ಇರಪಾ' ಅಂದು ಆತುಗ ಆಶಿರ್ವಾದ ಕೊಟ್ಟು ಕುಪ್ಪಿನಕೇರಿ ಬಿಟ್ಟು ಬಂದಾರು'(ಅನುಬಂಧ ೬, ಗೋಣಿಬಸವನ ಕಾವ್ಯದ ಆಯ್ದಭಾಗ) ಇದೇ ಕತೆಯೆ ಸಾಮಾನ್ಯವಾಗಿ ಜನಸಮುದಾಯದಲ್ಲಿ ಪ್ರಚಲಿತದಲ್ಲಿರುವುದು. ಆದರೆ ಬಸವಲಿಂಗ ಕವಿ ವಿರಚಿತ ಕೊಟ್ಟೂರಬಸವೇಶಚಾರಿತ್ರ್ಯದಲ್ಲಿ ಕುಪ್ಪಿನ ಕೇರಿ ಹನುಮಂತನಿಗೆ ಸಂಬಂಧಿಸಿದ ಈ ಪ್ರಸಂಗದ ಸುಳಿವೇ ಇಲ್ಲ. ಆದರೆ ಹರಪನಳ್ಳಿ ಕೆಂಪಯ್ಯನ ಆಚರಣೆಗಳನ್ನು ಬಿಟ್ಟರೆ ಉಳಿದ ನಾಲ್ವರು ಸಂತರ ಆಚರಣೆಗಳಲ್ಲಿ ಕುಪ್ಪಿನ ಕೇರಿ ಹನುಮಂತನಿಗೆ ವಿಶೇಷ ಪೂಜೆ ಸಲ್ಲುತ್ತದೆ. ಹೀಗೆ ಜನಪದರು ಈ ಐವರು ಸಂತರ ಮೂಲಕ ಹನುಮಂತನಿಗೆ ಲಿಂಗಧಾರಣೆ ಮಾಡುವುದಕ್ಕೆ ಪ್ರಬಲವಾದ ಹಿನ್ನೆಲೆ ಇದೆ.

ಹನುಮಂತನು ರಾಮಾಯಣದಲ್ಲಿ ರಾಮನ ಭಕ್ತನಾಗಿ, ಸೇವಕನಾಗಿ ಚಿತ್ರಿತಗೊಂಡಿದ್ದಾನೆ. ರಾಮ ಮೂಲತಃ ಆರ್ಯನಾದರೆ ಹನುಮಂತ ದ್ರಾವಿಡ. ಈ ಹಿನ್ನೆಲೆಯಲ್ಲಿ ನೋಡಿದರೆ 'ರಾಮ ಆರ್ಯ, ವೈಧಿಕ ಧರ್ಮ, ಸಂಸ್ಕೃತಿ ಮತ್ತು ಸಾಮ್ರಾಜ್ಯ ವಿಸ್ತಾರ ಮಾಡುತ್ತ ಆರ್ಯವರ್ತದಿಂದ ದಕ್ಷಿಣ ದ್ರಾವಿಡ ದೇಶದಾದ್ಯಂತ ತಿರುಗಾಡುವುದೇ ರಾಮಾಯಣ(ಮಹದೇವ ಶಂಕನಪುರ, ೨೦೦೨, ಪು.೪೧) ಹೀಗೆ ವಿಸ್ತಾರ ಮಾಡುತ್ತಾ ವಾನರ(ವನೌನರ)ನಾಡಿಗೆ (ಈಗಿನ ಹಂಪಿ) ಬಂದಾಗ ಆತನಿಗೆ ಸೋತು ಶರಣಾಗತನಾಗಿ ಆತನ ಅಡಿಯಾಳಾದುದರ ಸಂಕೇತವೆ ಈ ಹನುಮಂತನಾಗಿದ್ದಾನೆ. 'ರಾಮನ ಸಾಮ್ರಾಜ್ಯ ವಿಸ್ತರಣೆಯ ಪ್ರಕ್ರಿಯೆಯಲ್ಲಿ ಅವನಿಗೆ ಶರಣಾಗತರಾಗಿ ರಾಮನ ಅವತಾರವಾದ ನಾರಾಯಣನ ಒಕ್ಕಲಾದವರೆ ದಾಸರಾಗಿರಬೇಕು. ಹನುಮಂತ ರಾಮನಿಗೆ ಶರಣಾಗತನಾಗಿ ವೈಧಿಕ ವ್ಯವಸ್ಥೆಯನ್ನು ಒಪ್ಪಿಕೊಂಡ ಮೂಲ ಭಾರತೀಯ ಬುಡಕಟ್ಟು ಸಮುದಾಯಗಳ ನಾಯಕನ ಸಂಕೇತವಿರಬೇಕು. ಅಥವಾ 'ಹನುಮಂತ'ನೆಂಬ

ದೇಶೀ ಮೂಲ ನಿವಾಸಿ ನಾಯಕ ರಾಮನಿಗೆ ಶರಣಾದಂತೆ ಆತನ "ವಾನರ"ರೆಂಬ "ಕಾಡು ಜನರು" ಬುಡಕಟ್ಟು ಜನರು ಶರಣಾಗಿ ಹನುಮಂತ ರಾಮನ ದಾಸನಾದಂತೆ ಆತನ ಜನಸಮುದಾಯ ದಾಸರಾಗಿ, ದಾಸಯ್ಯ, ದಾಸ ಒಕ್ಕಲುಗಳಾಗಿ, ತಾವೆಲ್ಲಾ ರಾಮನ ಅವತಾರವಾದ ನಾರಾಯಣನ ಒಕ್ಕಲಿನವರೆಂಬ ಪರಿಕಲ್ಪನೆ ಹುಟ್ಟಿರಬಹುದು.'(ಅದೇ, ಪುಟ.೪೨) ದ್ರಾವಿಡ ಮೂಲದ ಹನುಮಂತನ ಸ್ಥಳ ಕಿಷ್ಕಿಂದೆ ಇಂದಿನ ಹಂಪೆ. ಈ ಹಂಪಿಯ ಪರಿಸರದ ಈತನು ವೈಷ್ಣವ ಪಂಥದ ರಾಮನ ಅಡಿಯಾಳಾಗಿ ಆತನ ಕಾಲಬಳಿ ದಾಸನಾಗಿ ಪುರಾಣೀಕರಣಗೊಂಡಿದ್ದಾನೆ. ಹೀಗೆ ಪುರಾಣೀಕರಣಗೊಂಡ ವೈಷ್ಣವರ ಅನುಯ್ಯಾಯಿಯಾದ ಹನುಮಂತನನ್ನು ಅದೇ ಪರಿಸರದಲ್ಲಿದ್ದ(ಹಂಪಿ) ನೂರೊಂದು ವಿರಕ್ತರಿಂದ ಪ್ರಭಾವಿತರಾದ ಪಂಚಗಣಾಧೀಶ್ವರರು ಈ Mythನ ಮೂಲಕ ವೈಷ್ಣವ ಪಂಥಕ್ಕೆ ಪ್ರತಿಕ್ರಿಯೆ ತೋರಿದ್ದಾರೆ. ಅಲ್ಲದೆ "ವಿಜಯನಗರದ ನಾಲ್ಕು ವಂಶಗಳಲ್ಲಿ ಮೂರು ವಂಶಗಳು ವೈಷ್ಣವ ಮತಕ್ಕೆ ವಿಶೇಷ ಸ್ಥಾನಮಾನ ನೀಡಿದ್ದವು. ವ್ಯಾಸರಾಯ, ಶ್ರೀಪಾದರಾಯ, ಮೊದಲಾದ ಮಾಧ್ವರು ಮುಖ್ಯ ಪ್ರಾಣನೆಂದು ಹನುಮಂತನ ಆರಾಧನೆಯನ್ನು ಸ್ವೀಕರಿಸಿದರು. ಆ ಸಾಂಸ್ಕೃತಿಕ ಮಧ್ಯಪ್ರವೇಶದ ಪರಿಣಾಮವೆಂದರೆ ಕನಕದಾಸಾದಿ ಕೆಳವರ್ಗದ ಜನರು ದಾಸತನಕ್ಕೆ ಆಕರ್ಷಿತರಾದರು.(ವ್ಯಾಸತನಕ್ಕಲ್ಲ) ಈ ಹಿನ್ನೆಲೆಯಲ್ಲಿ ಕೆಲಸ ಮಾಡಬೇಕಾಗಿ ಬಂದಿದ್ದ ವೀರಶೈವ, ಆಂಜನೇಯನ ಲಿಂಗಧಾರಣೆಯ ಮೂಲಕ ಪ್ರತಿಕ್ರಿಯೆ ತೋರಿಸಿರಬೇಕೆಂದು ತಿಳಿಯಬೇಕಾಗುತ್ತದೆ.'(ಎಸ್.ಎಸ್.ಹಿರೇಮಠ, ೧೯೯೭, ಪು.೨೨). ಕುಪ್ಪಿನ ಕೇರಿಯಲ್ಲಿ ಪ್ರತಿವರ್ಷ ರಾಮನವಮಿಯಂದು ನಡೆಯುವ ಆಂಜನೇಯನ ರಥೋತ್ಸವ ಕಾಲಕ್ಕೆ ಲಿಂಗದ ಕಾಯಿಗಳನ್ನು ಕಾಣಿಕೆಯಾಗಿ ಹನುಮಂತನಿಗೆ ಅರ್ಪಿಸುವುದು ಶ್ರೇಷ್ಠ ಎನ್ನುವ ಭಾವನೆಯಿದ್ದು, ನೂರಾರು ಜನರು ಲಿಂಗದ ಕಾಯಿಗಳನ್ನು ಹನುಮಂತನಿಗೆ ಕಾಣಿಕೆಯಾಗಿ ಅರ್ಪಿಸುತ್ತಾರೆ.

ಎರಡನೇ ಪ್ರೌಢದೇವರಾಯನ ಕಾಲದಲ್ಲಿ ವೀರಶೈವ ಕೇಂದ್ರ ಸ್ಥಳವಾದ ಹಂಪಿ ವಿಜಯಕಲ್ಯಾಣವಾಗಿ ನೂರೊಂದು ವಿರಕ್ತರಿಗೆ, ಆಶ್ರಯತಾಣವಾಗಿತ್ತು. ಚಾಮರಸ, ಕಲ್ಲುಮಠದ ಪ್ರಭುದೇವ, ಲಕ್ಕಣ್ಣ ದಂಡೇಶ, ಬತ್ತಲೇಶ್ವರ ಹೀಗೆ ಅದೆಷ್ಟೋ ವೀರಶೈವ ಕೃತಿಕಾರರಿಗೆ ಸಂಪಾದನಾಕಾರರಿಗೆ, ಸಂಕಲನಕಾರರಿಗೆ ಪ್ರಾಮುಖ್ಯತೆ ನೀಡಲಾಗಿತ್ತು. ನಂತರ ಬಂದ ಅರಸರು ವೈಷ್ಣವ ಧರ್ಮಕ್ಕೆ ಪ್ರಾಶಸ್ತ್ಯ ನೀಡಿ ಕನಕ, ಪುರಂದರ, ವ್ಯಾಸ, ವಿಜಯದಾಸ ಮುಂತಾದ ಹರಿದಾಸರಿಗೆ ಪ್ರೇರಣೆಯನ್ನು ನೀಡಿದರು. ಒಂದು ಕಾಲಕ್ಕೆ ವೀರಶೈವ ಪಂಥದ ಕೇಂದ್ರಸ್ಥಳವಾದ ಹಂಪಿ ಈಗ ವೈಷ್ಣವ ಪಂಥದ ಪ್ರಮುಖ ಸ್ಥಳವಾಯಿತು. ಇಂತಹ ಪರಿಸರದಲ್ಲಿ ಬದುಕಬೇಕಿದ್ದ ಪಂಚಗಣಾಧೀಶ್ವರರು ಹನುಮಂತನಿಗೆ ಲಿಂಗದೀಕ್ಷೆ ಮಾಡುವ ಮೂಲಕ ವೈಷ್ಣವ ಅನುಯಾಯಿಗಳಾಗಿದ್ದ ಆತನ ಭಕ್ತ ಸಮುದಾಯವನ್ನು ತಮ್ಮ ಒಕ್ಕಲಾಗಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ಹೀಗಾಗಿ ಕುಪ್ಪಿನ ಕೇರಿ ಹನುಮಂತನಿಗೆ ಈ ಸಂತನ ಜಾತ್ರೆಗಳ ಸಂದರ್ಭದಲ್ಲಿ ಮೊದಲ ಪೂಜೆ ಸಲ್ಲಿಸಲಾಗುತ್ತದೆ.

ಪಂಚಗಣಾಧೀಶ್ವರರ ಪಂಥವಲ್ಲದೆ ಮಂಟೇಸ್ವಾಮಿ ಕೊಡೇಕಲ್ ಪಂಥಗಳೂ ಹನುಮಂತನೊಂದಿಗೆ ಸಂಬಂಧವನ್ನು ಹೊಂದಿವೆ. ಮಂಟೇಸ್ವಾಮಿಗಳು ಸಂಚರಿಸಿದ, ತಂಗಿದ್ದ ಅನೇಕ ಸ್ಥಳಗಳಲ್ಲಿ ಹನುಮಂತನ ಗುಡಿಗಳು ನೆಲೆಗಳು ಇದ್ದು ಇವುಗಳ ಕುರುಹುಗಳಾಗಿ ಗುಡಿಗಳು ಕಂಡುಬರುತ್ತವೆ. ಮಂಟೇಸ್ವಾಮಿಗಳು ಸಂಚರಿಸಿದ, ತಂಗಿದ್ದ ಸ್ಥಳಗಳಾದ ಕೊಡೇಕಲ್ಲು, ಕೆಲೂರು(ಹುನುಗುಂದ ತಾಲ್ಲೂಕು), ಹಂಪಿ, ಹಲವಾಗಲು(ದಾವಣಗೆರೆ ಜಿಲ್ಲೆ), ಕಾಗಿನೆಲೆ(ಹಾವೇರಿ ಜಿಲ್ಲೆ), ಮೈಸೂರು, ಚಿಕ್ಕಲೂರು ಇವೇ ಮೊದಲಾದ ಸ್ಥಳಗಳಲ್ಲಿ ಹನುಮಂತನ ಗುಡಿಗಳಿರುವುದು ಕಂಡುಬರುತ್ತವೆ.(ಡಾ. ವೆಂಕಟೇಶ್ ಇಂದ್ವಾಡಿ, ೧೯೯೯, ಪು.೪೮-೪೯)

ಚಿಕ್ಕಲೂರು ಜಾತ್ರೆಯ ಸಂದರ್ಭದಲ್ಲಿ ಐದನೇ ದಿನ 'ಮುತ್ತತ್ತಿರಾಯನ ಸೇವೆ' ನಡೆಯುತ್ತದೆ. ಇಲ್ಲಿ ಮುತ್ತತ್ತಿರಾಯನೆಂದರೆ ಹನುಮಂತ. ಸಿದ್ದಪ್ಪಾಜಿಯ ಸ್ನೇಹಿತನಾಗಿ ಅವರ ಹಿಂಬಾಲಕನಾಗಿ ಈ ಹನುಮಂತ(ಮುತ್ತತ್ತಿರಾಯ) ಇದ್ದನೆಂದು ಮಂಟೇಸ್ವಾಮಿ ಕಾವ್ಯ ಹೇಳುತ್ತದೆ. ಈ ಸ್ನೇಹದ ಕುರುಹಾಗಿ ಜಾತ್ರೆಯ ಸಂದರ್ಭದಲ್ಲಿ ಚಿಕ್ಕಲೂರಿನಲ್ಲಿ ಹನುಮಂತನಿಗೆ ಪೂಜೆ ಸಲ್ಲಿಸಲಾಗುತ್ತದೆ.

ಹನುಮಂತನ ಒಕ್ಕಲಾಗಿರುವ ಜನ ಹೊಸಪಂಥಕ್ಕೆ ಬರುವಾಗ ತಮ್ಮ ಮೊದಲ ದೈವವನ್ನು ಜೊತೆಗಿಟ್ಟುಕೊಂಡೇ ಬಂದಿರುವರು. ಆ ನೆನಪುಗಳಿಂದ ಹೊರಬರಲಾಗದೆ, ಹೊಸ ಪರಿಸ್ಥಿತಿಗನುಗುಣವಾಗಿ ಆಚರಣೆಗಳಲ್ಲಿಯೋ ದೈವದೊಂದಿಗೋ ಸಂಕರಗೊಳಿಸಲಾಗುತ್ತದೆ. ಹಾಗಾಗಿ ಪಂಚಗಣಾಧೀಶ್ವರರೊಳಗೊಂಡಂತೆ ಹಲವಾರು ಮಧ್ಯಕಾಲೀನ ಕರ್ನಾಟಕದ ಸಂತರ ಆಚರಣೆಗಳಲ್ಲಿ ಹನುಮಂತನಿಗೆ ವಿಶೇಷ ಮಹತ್ವವಿದೆ. ಹೊರಗಿನಿಂದ ಬಂದ ದೈವಕ್ಕೆ ತಕ್ಕ ಸ್ಥಾನವೊಂದನ್ನು ತಮ್ಮ ಪಂಥದಲ್ಲಿ ಕಲ್ಪಿಸಬೇಕಾದುದು ಜನಸಮುದಾಯಕ್ಕೂ ಅನಿವಾರ್ಯವೆನಿಸುತ್ತದೆ.

### ೩.೪.೨. ವೀರಭದ್ರ-ಮಾರಮ್ಮನೊಂದಿಗಿನ ಸಂಬಂಧ

ಪಂಚಗಣಾಧೀಶ್ವರ ಪಂಥದಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿರುವುದು ಹನುಮಂತನಷ್ಟೇ ಅಲ್ಲ. ವೀರಭದ್ರ ಮತ್ತು ಮಾರಮ್ಮ ಕೂಡ ಈ ರೀತಿ ಸ್ಥಾನವನ್ನು ಗಳಿಸಿದ್ದಾರೆ. ಕೊಟ್ಟೂರಿನ ಹಿರೇಮಠ ಮೊದಲಿಗೆ ವೀರಭದ್ರ ದೇವಾಲಯವಾಗಿದ್ದಿತು. ಹಾಗೆಯೇ ನಾಯಕನಟ್ಟಿಯಲ್ಲಿನ ಒಳಮಠ ಮೊದಲಿಗೆ ಮಾರಮ್ಮನ ದೇವಾಲಯವಾಗಿದ್ದಿತು. ಇಂದು ಇವೆರೆಡೂ ಪರಿವರ್ತನೆ ಹೊಂದಿ ಈ ಭಾಗದ ಪ್ರಮುಖ ವೀರಶೈವ ಮಠಗಳಾಗಿವೆ. ಎರಡೂಕಡೆ ಹೆಚ್ಚು-ಕಡಿಮೆ ಒಂದೇ ರೀತಿಯಾದ ಮಿತ್ ಇದೆ. ಕೊಟ್ಟೂರ ಗುರುಬಸವ ಊರಿಗೆ ಬಂದು ಪ್ರಸಿದ್ಧಿ ಹೊಂದಿದನಂತರ ವೀರಭದ್ರ ದೇವಾಲಯದಲ್ಲಿ(ಈಗಿನ ಹಿರೇಮಠ) ಜನರಿಗೆ ತತ್ತ್ವೋಪದೇಶ ಮಾಡುತ್ತಿದ್ದನು. ಈ ದೇವಾಲಯಕ್ಕೆ ಬರುವ ಭಕ್ತಾದಿಗಳ ಸಂಖ್ಯೆ ಹೆಚ್ಚಾಗಿ ಇದೇ ಕೊಟ್ಟೂರ ಗುರುಬಸವನ ಹಿರೇಮಠವಾಗಿ ಪರಿಣಮಿಸಿದೆ. ಮಠದ ಗರ್ಭಗುಡಿ ಹಿಂದೆ

ವೀರಭದ್ರದೇವರ ಸಣ್ಣ ಗರ್ಭಗುಡಿ ಇದೆ. ಇದನ್ನು ನೋಡುವ ಜನ 'ಕೊಟ್ಟೂರೇಶ(ಗುರುಬಸವ) ವೀರಭದ್ರನನ್ನು ಓಡಿಸಿ(ಕೊಡದ ಗುಡ್ಡಕ್ಕೆ) ತಾನು ಇಲ್ಲಿ ಸೇರಿಕೊಂಡನು' ಎಂದು ಹೇಳುತ್ತಾರೆ. ಪ್ರಾಚೀನ ಶೈವ ಪಂಥದ ಪ್ರತೀಕನಾದ ವೀರಭದ್ರನ ದೇವಾಲಯದಲ್ಲಿ ಕೊಟ್ಟೂರ ಗುರುಬಸವನು ಇರುವುದನ್ನು ನೋಡಿದರೆ ಪ್ರಾಚೀನ ಶೈವ ಪಂಥದ ಆಚರಣೆಗಳನ್ನು ಪರಿಷ್ಕರಿಸುವ ಪ್ರಯತ್ನವನ್ನು ಗುರುಬಸವ ಮಾಡಿದ್ದಾನೆನಿಸುತ್ತದೆ. ಅಂದರೆ ೧೨ನೇ ಶತಮಾನದ ವೀರಶೈವ ಚಳುವಳಿ ಕಂಡುಕೊಂಡ ತಾತ್ವಿಕತೆಯನ್ನು ೧೫-೧೬ನೇ ಶತಮಾನದಲ್ಲಿ ಪರಿಸ್ಥಿತಿಗೆ ಅನುಗುಣವಾಗಿ ಆಚರಣೆಗೆ ತರಲು ಪ್ರಯತ್ನಿಸಿದ್ದಾನೆ ಎನಿಸುತ್ತದೆ. ಇದಕ್ಕೆ ಆಧಾರವಾಗಿ ಈಗಿರುವ ವೀರಭದ್ರನ ಗರ್ಭಗುಡಿ ಮುಂದಿರುವ ಗುರುಬಸವನ ಗರ್ಭಗುಡಿಯು ಕೊಟ್ಟೂರಿನ ಎಲ್ಲ ಆಚರಣೆಗಳಿಗೆ ಕೇಂದ್ರಸ್ಥಳವಾಗಿದ್ದು ಇಲ್ಲಿ ಸ್ಥಾವರ ಲಿಂಗ ಪೂಜೆಯಾಗಲಿ ವಿಗ್ರಹ ಆರಾಧನೆಯಾಗಲಿ ಇಲ್ಲ. ವಿಭೂತಿಗಟ್ಟಿಯೆ ಇಲ್ಲಿಯ ಸಾಕಾರ ಪೂಜಾವಸ್ತು. ವೀರಶೈವ ಅಷ್ಟಾವರಣ ಮೂರ್ತಿ ಇದ್ದು ಇದಕ್ಕೆ ಪೂಜೆ ಸಲ್ಲುತ್ತದೆ.

ವೀರಭದ್ರನ ನೆನಪಿಗೋಸ್ಕರ ಕಾರ್ತಿಕೋತ್ಸವದಂತಹ ಸಂದರ್ಭದಲ್ಲಿ ಕೊಟ್ಟೂರಿನ ಗಚ್ಚಿನ ಮಠ(ಜೀವಂತ ಸಮಾಧಿ)ದಲ್ಲಿ ಗುರುಬಸವನ ಉತ್ಸವ ಮೂರ್ತಿ ಬಂದಾಗ ವೀರಭದ್ರ ದೇವರ ಒಡಪುಗಳನ್ನು ಹೇಳಲಾಗುತ್ತದೆ. ಈ ಒಡಪು ಹೇಳಲು ಸುತ್ತ-ಮುತ್ತ ಹಳ್ಳಿಯಿಂದ ಜನರು ಬರುತ್ತಾರೆ. ರಾತ್ರಿ ಉತ್ಸವಮೂರ್ತಿ ಬರುತ್ತಿದ್ದಂತೆ(ರಾತ್ರಿ ೧-೨ ಗಂಟೆ ಆಗುತ್ತದೆ) ಒಡಪು ಪ್ರಾರಂಭವಾಗಿ ಮುಂಜಾನೆ ೩-೪ ಗಂಟೆಯವರೆಗೂ ಒಬ್ಬರಿಗಿಂತ ಒಬ್ಬರು ಸವಾಲಿನ ರೂಪದಲ್ಲಿ ಆವೇಶದಿಂದ ಹೇಳುತ್ತಾರೆ.

ಇನ್ನು ನಾಯಕನಟ್ಟಿ ಒಳಮಠವು ಇಂಥದೆ ರೀತಿಯಲ್ಲಿ ಬದಲಾವಣೆ ಆಗಿರುವುದನ್ನು ನೋಡಬಹುದು. ರಾಯದುರ್ಗದ ಮೂಲಕ ಬಂದ ತಿಪ್ಪೇಸ್ವಾಮಿ ನಾಯಕನಟ್ಟಿಯ ಮಾರಮ್ಮನ ಗುಡಿಯಲ್ಲಿ ರಾತ್ರಿ ವಿಶ್ರಾಂತಿ ತೆಗೆದುಕೊಳ್ಳಲು ಬಯಸುತ್ತಾನೆ. ಆಗ ಮಾರಮ್ಮ "ಇದು ದೇವಿಯ ಮಂದಿರ ಇಲ್ಲಿ ಪುರುಷರಿಗೆ ಮಲಗಲು ಅವಕಾಶವಿಲ್ಲ. ಬೇಕಾದರೆ ಹೊರಗಿನ ಜಗಲಿಯ ಮೇಲೆ ಮಲಗಬಹುದು ಎನ್ನುತ್ತಾಳೆ. ಶ್ರೀಗಳು ಇದು ನನಗೆ ಪರಸ್ಥಳ, ನಾವು ಬೇಕಾದರೆ ಹೊರಗಿನ ಜಗಲಿಯ ಮೇಲೆ ಮಲಗುತ್ತೇವೆ. ಈ ಜೋಳಿಗೆ ಬೆತ್ತ ಇಡಲಿಕ್ಕಾದರೂ ಸ್ಥಳಾವಕಾಶ ಮಾಡಿಕೊಡು'(ಚಂದ್ರಶೇಖರ ವಿ.ದಾವಣಗೆರೆ, ೨೦೦೧, ಪು.೨೧) ಎಂದು ಮಾರಮ್ಮನ ಅನುಮತಿ ಪಡೆದು ಜೋಳಿಗೆ ಬೆತ್ತಗಳನ್ನು ಗುಡಿಯಲ್ಲಿಟ್ಟು, ಹೊರಗೆ ಜಗಲಿ ಮೇಲೆ ರಾತ್ರಿಯನ್ನು ಕಳೆಯುವರು. ಬೆಳಗಾಗುವುದರೊಳಗೆ ಇಡೀ ಮಾರಮ್ಮನ ಗುಡಿಯ ತುಂಬಾ ಜೋಳಿಗೆ ಬೆತ್ತಗಳು ತುಂಬಿಕೊಂಡು ಮಾರಮ್ಮನಿಗೆ ನಿಲ್ಲಲು ಜಾಗವಿಲ್ಲದಂತೆ ಆಗಿರುತ್ತದೆ. ತಿಪ್ಪೇಸ್ವಾಮಿಯ ಈ ಪವಾಡವನ್ನು ಅರಿತ ಮಾರಮ್ಮ ವಡ್ಡನಳ್ಳಿಗೆ ಹೋದಳು. ಹಾಗೆ ಹೋಗುವಾಗ ೧೨ ವರ್ಷಗಳಿಗೊಮ್ಮೆ ನನ್ನ ೧೨ ಜನ ಅನುಯಾಯಿ ದೇವತೆಗಳೊಂದಿಗೆ ಬಂದು, ತಮ್ಮ ದರ್ಶನ ಪಡೆದು ರಕ್ತದ ಓಕುಳಿ ಮಾಡಿ ಸಿಡಿಯಾಡಿ ಹೋಗುವೆ'(ಅದೇ, ಪು..೧೨) ಎಂದಳು. ಇದನ್ನು ತಿಪ್ಪೇಸ್ವಾಮಿಯ 'ಜೋಳಿಗೆ ಬೆತ್ತ ಪವಾಡ' ಎಂತಲೆ ಜನಪದರು ಕರೆಯುತ್ತಾರೆ.

ಮಾರಮ್ಮನ ೧೨ ಜನ ಅನುಯಾಯಿ ದೇವತೆಗಳೆಂದರೆ ಈ ಭಾಗದ ಮ್ಯಾಸ ಕುಲದ ೧೨ ಪೆಟ್ಟಿಗೆ ದೇವತೆಗಳಾಗಿವೆ. ಈ ೧೨ ಪೆಟ್ಟಿಗೆ ದೇವತೆಗಳೊಂದಿಗೆ ಮ್ಯಾಸಜನಾಂಗದವರೆಲ್ಲರೂ ಸೇರಿ ೧೨ ವರ್ಷಗಳಿಗೊಮ್ಮೆ ಒಳಮಠದ ಹತ್ತಿರ ಮಾರಮ್ಮನ ಜಾತ್ರೆ ಮಾಡುತ್ತಾರೆ. ಆಗ ಸಿಡಿಯಾಡುವ ಪದ್ಧತಿಯೂ ಇದೆ. ಈಗ ೧೨ ವರ್ಷಗಳಿಗೆ ಬದಲು ೩೨ ವರ್ಷಗಳಿಗೊಮ್ಮೆ ಮಾರಮ್ಮನ ಜಾತ್ರೆ-ಸಿಡಿಯಾಡುವುದು ಆಚರಿಸಲಾಗುತ್ತದೆ. ಹಾಗೆ ೩೨ ವರ್ಷಗಳಿಗೊಮ್ಮೆ ಸೇರುವ ಮ್ಯಾಸಕುಲದ ೧೨ ಪೆಟ್ಟಿಗೆ ದೇವತೆಗಳೆಂದರೆ

'೧. ಪಚ್ಚಪದಿ ದೊಡ್ಡ ತಿರುಮಲ ದೇವರು(ಬೇಡಿರೆಡ್ಡಿಹಳ್ಳಿ ತಾ. ಮೊಳಕಾಲ್ಮೂರು)

೨. ಕಾಪುಕಂಪಳ ರಂಗಸ್ವಾಮಿ(ಕಂಪಳ ದೇವರಹಟ್ಟಿ, ತಾ.ಮೊಳಕಾಲ್ಮೂರು)

೩. ದಡ್ಲುಮಾರಮ್ಮ(ದೇವರಹಳ್ಳಿ ತಾ.ಚಳ್ಳಕೆರೆ),

೪. ಚಿಂತಗುಟ್ಲ ಬೋರದೇವರು(ಖುದಾಪುರ, ತಾ. ಚಳ್ಳಕೆರೆ),

೫. ಮುಂದಬೊಮ್ಮ ದೇವರು (ದೋಣಮಂಡಲ ಹಟ್ಟಿ, ತಾ.ಚಳ್ಳಕೆರೆ),

೬. ಪೆದ್ದಕ್ಕ ರಾಯಮ್ಮ(ಮಾರಮ್ಮ) (ಗೌರಸಮುದ್ರ, ತಾ.ಚಳ್ಳಕೆರೆ),

೭. ಮಂಗಪೋಟಿ ಓಬಳದೇವರು(ತಾಳಿಕೆರೆ, ತಾ.ರಾಯದುರ್ಗ),

೮. ನಲ್ಲಚೆರವು ಓಬಳದೇವರು (ರುದ್ರಮ್ಮನಹಳ್ಳಿ ತಾ.ಚಳ್ಳಕೆರೆ),

೯. ಮಲ್ಲಿನಾಯಕ ಬೊಮ್ಮದೇವರು (ವರವು, ತಾ.ಚಳ್ಳಕೆರೆ),

೧೦. ಬಂಗಾರಿ ದೇವರು(ನನ್ನಿವಾಳ, ತಾ.ಚಳ್ಳಕೆರೆ)

೧೧. ಬೋಸೆ ದೇವರು(ಬೋಸದೇವರಹಟ್ಟಿ ತಾ.ಚಳ್ಳಕೆರೆ)

೧೨. ಮಾಕನಡುಕು ಓಬಳದೇವರು(ಮಾಕನಡಕು, ತಾ.ಕೂಡ್ಲಿಗಿ)' (ಡಾ.ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, ಪು.೮೪)

ಈ 'ಜೋಳಿಗೆ ಬೆತ್ತ ಪವಾಡವು ಸ್ಥಳೀಯ ಮ್ಯಾಸಜನಾಂಗವನ್ನು ತಿಪ್ಪೇಸ್ವಾಮಿ ತನ್ನ ಒಕ್ಕಲಾಗಿಸಿಕೊಳ್ಳಲೆತ್ನಿಸುವುದರ ಸಂಕೇತವಾಗಿದೆ. ಹಿಂದುಳಿದ ವರ್ಗದ ಆರಾಧ್ಯ ದೈವದ ಸ್ಥಾನವನ್ನು ತೆರವುಗೊಳಿಸುವುದರ ಮುಖಾಂತರ ತಿಪ್ಪೇಸ್ವಾಮಿ ಮಾರಮ್ಮ ದೇವತೆಯ ಸುತ್ತಲಿರುವ ಆಚರಣೆಗಳನ್ನು ತಿರಸ್ಕರಿಸುತ್ತಿದ್ದಾನೆಯೆ? ಒಳಮಠದಲ್ಲಿರುವ ಉತ್ಸವ ಮೂರ್ತಿಯನ್ನು ಮಹಾಂತೇಶ ಲಿಂಗ ಎಂದು ಕರೆಯಲಾಗುತ್ತದೆ ತಿಪ್ಪೇಸ್ವಾಮಿಯು ಮಾರಮ್ಮ ತೆರವಾದ ನಂತರದಲ್ಲಿ ಈ ಲಿಂಗವನ್ನು ಪ್ರತಿಷ್ಠಾಪಿಸಿದ್ದಾನೆ

ಎಂದು ಹೇಳಲಾಗುತ್ತದೆ. ಮಾಂಸಹಾರ ಬಲಿಪಡೆಯುವ ಮಾರಮ್ಮನ ಗುಡಿಯಾದ ಒಳಮಠವು ಇಂದು ಲಿಂಗಾಯತ ಜಾತಿಯ ಫಣಿಯಪ್ಪನ ವಂಶದವರಿಂದ ಪೂಜೆಗೊಳ್ಳುತ್ತಲಿದೆ. ಇಲ್ಲಿ ಹೊರಮಠದಂತೆ ಯಾವುದೇ ರೀತಿ ಮಾಂಸದ ಎಡೆ ನೀಡುವ ಪದ್ಧತಿ ಇಲ್ಲ. ಒಂದು ಕಾಲದಲ್ಲಿ ಮಾರಮ್ಮನ ದೇವಾಲಯವಾಗಿದ್ದ ಒಳಮಠ ಮತ್ತು ಇದರ ಸುತ್ತಮುತ್ತಲಿನ ಆಚರಣೆಗಳನ್ನು ಗಮನಿಸಿದರೆ ಇದು ಪೂರ್ತಿ ವೀರಶೈವೀಕರಣಗೊಂಡಿದೆ ಎನ್ನುವುದು ಅರಿವಿಗೆ ಬರುತ್ತದೆ.

ಒಳಮಠದ ಮತ್ತು ಜೀವಂತ ಸಮಾಧಿಯಾದ ಹೊರಮಠದ ಆಚರಣೆಗಳನ್ನು ನೋಡಿದರೆ, ನಾಯಕನಟ್ಟಿಗೆ ಬಂದ ಆರಂಭದಲ್ಲಿ ಮಾರಮ್ಮನ ಗುಡಿಯ ಮುಂದಿನ ಪ್ರಾಣಿಬಲಿಯನ್ನು, ಸಿಡಿಯಾಡು ವುದನ್ನು ತಿರಸ್ಕರಿಸಿರುವ ತಿಪ್ಪೇಸ್ವಾಮಿ ಜೀವಂತ ಸಮಾಧಿ ಆಗುವ(ಹೊರಮಠ) ಹೊತ್ತಿಗಾಗಲೇ ಮಾಂಸ ತಿನ್ನುವ ಪ್ರಾಣಿ ಬಲಿಕೊಡುವ ಮ್ಯಾಸ ಜನಾಂಗದ ಪದ್ಧತಿಯನ್ನು ಒಪ್ಪಿಕೊಂಡಿದ್ದಾನೆ. ಈ ನೆನಪಿಗಾಗಿ ಮಾರಮ್ಮನ ಜಾತ್ರೆ ಸಂದರ್ಭದಲ್ಲಿ ೩೨ ವರ್ಷಗಳಿಗೊಮ್ಮೆ ಒಳ ಮಠದ ಹತ್ತಿರ ಪ್ರಾಣಿ ಬಲಿ, ಸಿಡಿಯಾಡುವುದು ಮ್ಯಾಸಕುಲದ ೧೨ ಪೆಟ್ಟಿಗೆ ದೇವತೆಗಳು ಸೇರುವುದು ನಡೆದುಕೊಂಡು ಬಂದರೆ, ಹೊರಮಠದ ಹತ್ತಿರ ಯಾವಾಗಲೂ ಪ್ರಾಣಿಬಲಿ ಕೊಡುವುದು ನಡೆದುಕೊಂಡು ಬಂದ ಪದ್ಧತಿಯಾಗಿದೆ.

ಈ ಇಡೀ ಪ್ರಕರಣ ಒಬ್ಬ ಸಂತನು ತನ್ನ ಶಕ್ತಿಯನ್ನು ನೆಲೆಗೊಳಿಸಲು ನಡೆಸಿದ ಪ್ರಯತ್ನದ ಫಲವೆನ್ನಬಹುದು. ಹೀಗೆ ಧಾರ್ಮಿಕ ಶಕ್ತಿಕೇಂದ್ರವಾಗಲು ಬಯಸುವ ಯಾವುದೆ ಸಂತರು ತಮ್ಮ ಜೀವನ, ಸಾಧನೆ-ಪವಾಡಗಳ ಶಕ್ತಿಯ ಮೂಲಕವೋ, ಇಲ್ಲವೆ ಸ್ಥಳೀಯವಾಗಿ ಪ್ರಭಾವ ಬೀರುತ್ತಲಿದ್ದ ಜೀವನ ಪದ್ಧತಿಯನ್ನು ಒಪ್ಪಿಕೊಳ್ಳುವ ಮೂಲಕವೋ ವರ್ತಮಾನವನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಪಳಗಿಸುತ್ತಾ, ರೂಪಿಸುತ್ತಾ ಹೋಗುತ್ತಾರೆ.

### ೩.೪.೩. ದಲಿತರ ಭಾಗವಹಿಸುವಿಕೆ

ಪಂಚಗಣಾಧೀಶ್ವರ ಪಂಥಕ್ಕೆ ಸಂಬಂಧಿಸಿದಂತೆ ಇರುವ ಮತ್ತೊಂದು ಮುಖ್ಯವಾದ ಸಂಗತಿಯೆಂದರೆ ಆಚರಣೆಗಳಲ್ಲಿ ಇವತ್ತಿಗೂ ಇರುವ ದಲಿತರ ಭಾಗವಹಿಸುವಿಕೆ. ಕೊಟ್ಟೂರು ಮತ್ತು ನಾಯಕನಟ್ಟಿ ಜಾತ್ರೆಗಳಲ್ಲಿ ದಲಿತ ಸ್ತ್ರೀ ಆರತಿ ಬೆಳಗಿದ ನಂತರವೆ ರಥೋತ್ಸವ ಮುನ್ನಡೆಯುವುದು. ಈ ಆಚರಣೆ ಬೆಳೆದು ಬರಲು ಕಾರಣವನ್ನು ಗೋಣಿಬಸವ ಚರಿತ್ರೆ ಹೀಗೆ ವಿವರಿಸುತ್ತದೆ.

'ಶಿವನ ಅಪ್ಪಣೆಯಂತೆ ಕೈಲಾಸದಿಂದ ಭೂಲೋಕಕ್ಕೆ ಇಳಿದ ಪಂಚಗಣಾಧೀಶ್ವರರು ಕುಪ್ಪಿನ ಕೇರಿಗೆ ಬರುತ್ತಾರೆ. ಅಲ್ಲಿ ಆಂಜನೇಯನಿಗೆ ಲಿಂಗಧಾರಣೆ ಮಾಡಿ ಶಿಖಾಪುರಿಗೆ(ಕೊಟ್ಟೂರು) ಬರುತ್ತಾರೆ. ಇಲ್ಲಿ ಹರಿಜನ ಕುಲದವಳಾದ ವಿಚಾರನಾರಿ ಎಂಬ ದೇವದಾಸಿ ಇದ್ದಳು. ಅವಳು ಪ್ರತಿನಿತ್ಯ ಶಿವನ ಪೂಜೆ, ಜಂಗಮರಿಗೆ ಪ್ರಸಾದ ನೀಡದೆ ಊಟ ಮಾಡುತ್ತಿರಲಿಲ್ಲ. ಹೀಗಿರುವಾಗ ಮೂರು ದಿವಸಗಳವರೆಗಾದರೂ

ಜಂಗಮರ ದರ್ಶನವಿಲ್ಲದೆ ಅನ್ನ ನೀರು ಮುಟ್ಟದೆ ಕಾಯುತ್ತಿದ್ದಳು. ಈ ಮಾರ್ಗವಾಗಿ ಬಂದ ಪಂಚಗಣಾಧೀಶ್ವರರನ್ನು ನೋಡಿ ಊಟಕ್ಕೆ ಬರಬೇಕೆಂದು ಬೇಡಿಕೊಂಡಳು. ಆದರೆ ಕೊಟ್ಟೂರ ಗುರುಬಸವ ಇವಳು ಹೀನ ಕುಲದವಳೆಂದು ಗುರುತಿಸಿ 'ಜಂಗಮರಾದ ನಾವು ಊಟ ಮಾಡಿದರೆ ಅಪವಿತ್ರರಾಗುತ್ತೇವೆಂದು' ಹೇಳಿ ಮುಂದೆ ಹೊರಡುತ್ತಾರೆ. ಆಗ ದುಃಖಿತಳಾದ ವಿಚಾರನಾರಿ ಕೋಪದಿಂದ 'ನಾನು ನಿಜವಾದ ಜಂಗಮಳಾಗಿದ್ದರೆ, ನೀವು ಶಿಖಾಪುರ(ಕೊಟ್ಟೂರು) ಪಟ್ಟಣವನ್ನು ಬಿಟ್ಟು ಹೋಗುವುದರೊಳಗಾಗಿ ನಿಮ್ಮ ಕಣ್ಣುಗಳು ಕಾಣದಾಗಲಿ' ಎಂದು ಹೇಳುತ್ತಾಳೆ. ಸ್ವಲ್ಪ ಹೊತ್ತಿಗೆ ಈ ಸಂತರು ತಮ್ಮ ಕಣ್ಣುಗಳನ್ನು ಕಳೆದುಕೊಳ್ಳುವರು. ಪಶ್ಚಾತ್ತಾಪದಿಂದ ನರಳಿದ ಅವರು ಅವಳಿಗೆ 'ನೀನು ಕೇರಿಯ ದುರ್ನಡತೆಯನ್ನು ಬಿಡಬೇಕು. ಶಿವಪೂಜೆ ಮಾಡಬೇಕು ಮತ್ತು ಲಿಂಗಧರಿಸಿಕೊಳ್ಳಬೇಕು' ಎಂದು ಶರತ್ತು ವಿಧಿಸುತ್ತಾರೆ. ಅದನ್ನು ಒಪ್ಪಿಕೊಂಡ ಅವಳಿಗೆ ಲಿಂಗಧಾರಣೆ ಮಾಡಿ ಅವಳ ಮನೆಯಲ್ಲಿ ಊಟ ಮಾಡುವರು. ಆಗ ಕೊಟ್ಟೂರ ಗುರುಬಸವ 'ಮುಂದೆ ನನ್ನ ಜಾತ್ರೆ ಸಂದರ್ಭದಲ್ಲಿ ನಿನ್ನ ಮನೆಯಿಂದ ಗಿಣ್ಣದ ಎಡೆಯನ್ನು ನನಗೆ ಅರ್ಪಿಸಿದ ನಂತರವೆ ರಥೋತ್ಸವ ಜರಗುತ್ತದೆ ಎಂದು ವಚನವಿತ್ತರು.(ಈಡಿಗರ ಚಂದ್ರಪ್ಪ, ೧೯೯೦, ಪು.೮-೧೧) ಈ ಮಿತ್ ಕೆಳವರ್ಗದವರನ್ನು ತನ್ನ ಪಂಥದೊಳಗೆ ಸೆಳೆದುಕೊಳ್ಳುತ್ತಿರುವುದನ್ನು ಸೂಚಿಸುವುದರ ಜೊತೆಗೆ ಅವರ ಒಟ್ಟು ಜೀವನದಲ್ಲಿ ಬದಲಾವಣೆಯನ್ನು ಬಯಸುತ್ತಿದೆ.

ಈಗಲೂ ಕೊಟ್ಟೂರಿನ ರಥೋತ್ಸವದ ಸಂದರ್ಭದಲ್ಲಿ ಹರಿಜನ ಕೇರಿಯ ಹತ್ತಿರ ಗುರುಬಸವನ ಪಲ್ಲಕ್ಕಿಯನ್ನು ಮೆರವಣಿಗೆಯಲ್ಲಿ ತರಲಾಗುತ್ತದೆ. ಅಲ್ಲಿ ಹರಿಜನ ಮಹಿಳೆಯೊಬ್ಬಳು ಆರತಿ ಬೆಳಗಿ ಎಡೆಯನ್ನು ಅರ್ಪಿಸುತ್ತಾಳೆ. ಈ ಕುರಿತು ಕೇರಿಯ ಹೆಂಗಸರು ಈ ಕೆಳಗಿನಂತೆ ಹಾಡುತ್ತಾರೆ.

> 'ನೆಲ ಐದು ಪಂಚಕಳಸಾದಾರತಿ ಹೊತ್ತು
> ಅರುಳಯ್ಯನ ಮಗಳೇ ಬೆಳಿಗ್ಯಾಳೆ| ನನ್ನೆಯ್ಯೋನ
> ತೇರಿ ಶೃಂಗಾರ ನೋಡೇ||

(ಅನುಬಂಧ ೩, ಗುರುಬಸವನ ಕುರಿತ ಬಿಡಿಪದಗಳು)

ಇದೇ ರೀತಿ ನಾಯಕನಟ್ಟಿ ತಿಪ್ಪೇಸ್ವಾಮಿ ಹರಳಯ್ಯನ ಮನೆಯಲ್ಲಿ ಶಿವಪೂಜೆ ಮಾಡಿ ಪ್ರಸಾದ ಸ್ವೀಕರಿಸುತ್ತಾನೆ. ಈಗಲೂ ತಿಪ್ಪೇಸ್ವಾಮಿ ಜಾತ್ರೆಯ ಸಂದರ್ಭದಲ್ಲಿ ಹರಳಯ್ಯ(ದಲಿತ)ನ ಮನೆಯ ಹೆಂಗಸರು ರಥೋತ್ಸವದ ಸಂದರ್ಭದಲ್ಲಿ ಮೊದಲ ಆರತಿ ಬೆಳಗುತ್ತಾರೆ(ಅನುಬಂಧ ೭, ಛಾಯಾಚಿತ್ರಗಳು, ಚಿತ್ರ ಸಂ.೨೯). ಇಡೀ ರಥೋತ್ಸವವು ದಲಿತರ ನೇತೃತ್ವದಲ್ಲಿಯೇ ನಡೆಯುತ್ತದೆ. ಹಾಗೆಯೇ ಕೂಲಹಳ್ಳಿಯ ಹರಿಜನ ಕೇರಿಯಲ್ಲಿ ಕೊಟ್ಟೂರ ಗುರುಬಸವ ನೆಲೆನಿಂತ ಕಾರಣಕ್ಕಾಗಿ ಕೇರಿಯಲ್ಲಿ ಗುರುಬಸವನ ಮಠ ನಿರ್ಮಿಸಲಾಗಿದೆ. ಈ ಎಲ್ಲ ಘಟನೆಗಳು ಏನನ್ನು ಸೂಚಿಸುತ್ತಿವೆ?

೧೨ನೇ ಶತಮಾನದ ನಂತರದಲ್ಲಿ ಶರಣ ಚಳುವಳಿಯ ಮೌಲ್ಯಗಳು ಕಾಣದಾದವು. ೧೫-೧೬ನೇ ಶತಮಾನಕ್ಕಾಗಲೆ ವೀರಶೈವ ಧರ್ಮ ಸಾಂಸ್ಥಿಕ ರೂಪವನ್ನು ಪಡೆಯಿತು. ಸ್ಥಾವರವನ್ನು ನಿರಾಕರಿಸಿದ

ಶರಣರಿಗೆ ದೇವಾಲಯಗಳನ್ನು ನಿರ್ಮಿಸಲಾಯಿತು. ದೇವಾಲಯ ನಿರ್ಮಾಣದಿಂದಾಗಿ ದಲಿತರನ್ನು ಮತ್ತೆ ಅದರಿಂದ ಹೊರಗಿಡಲಾಯಿತು. ಜಾತಿ ಪದ್ಧತಿಯನ್ನು ವಿರೋಧಿಸಿದ್ದ ಶರಣ ಚಳುವಳಿ ತನ್ನ ಮೌಲ್ಯವನ್ನು ಕಳೆದುಕೊಂಡಿತು. ಶೂನ್ಯ ಸಂಪಾದನೆಯಲ್ಲಿ ಜಾತಿಗೆ ಸಂಬಂಧಿಸಿದ ವಚನಗಳು ಸಿಗದೇ ಇರುವುದು ೧೫-೧೬ನೇ ಶತಮಾನದಲ್ಲಿ ವೀರಶೈವ ಪಡೆದುಕೊಂಡ ರೂಪವನ್ನು ಸೂಚಿಸುತ್ತದೆ. ಇದನ್ನು ಪರಿಷ್ಕರಿಸಲೆತ್ನಿಸಿದ ಈ ಧಾರ್ಮಿಕ ಸಂತರು ದಲಿತರಿಗೆ ಲಿಂಗಧಾರಣೆ ಮಾಡುವ ಮೂಲಕವೋ ಅವರ ಆಹಾರ ಪದ್ಧತಿಯನ್ನು ಒಪ್ಪಿಕೊಳ್ಳುವ ಮೂಲಕವೋ, ತಮಗೆ ಸಂಬಂಧಿಸಿದ ಆಚರಣೆಗಳಲ್ಲಿ ಪ್ರಾತಿನಿಧ್ಯವನ್ನು ಕೊಡಲೆತ್ನಿಸಿದ್ದಾರೆ. ಈ ಎಲ್ಲ ನೆನಪುಗಳು ಈ ಹೊತ್ತಿನ ಧಾರ್ಮಿಕ ಸಂತರ ಆಚರಣೆಗಳ ಮೂಲಕ ಉಳಿದುಕೊಂಡು ಬಂದಿವೆ.

### ೩.೪.೪. ನಾಗಪಂಥದ ಪ್ರಭಾವ

ಪಂಚಗಣಾಧೀಶ್ವರ ಪಂಥದಲ್ಲಿ ನಾಗಪ್ರತಿಮೆಗಳು ವಿಶೇಷವಾಗಿ ಕಂಡುಬರುತ್ತವೆ. ಈ ಐವರೂ ಸಂತರು ಇರುವ ಗರ್ಭಗುಡಿಗಳಲ್ಲಿನ ಮೂರ್ತಿಯ ಮೇಲೆ ನಾಗರ ಹಾವಿನ ಹೆಡೆಯ ಲೋಹದ ಪ್ರತಿಮೆಗಳಿವೆ. ಕೊಟ್ಟೂರಿನ ಗಚ್ಚಿನ ಮಠದ ಗುರುಬಸವನ(ಜೀವಂತ ಸಮಾಧಿ ಮಠ) ಪೂರ್ವಭಾಗದ ಗೋಡೆಯ ಮೇಲ್ಭಾಗದಲ್ಲಿ ಸಮನಾಂತರವಾಗಿ ಎಡಬಲ ಬದಿಗಳಲ್ಲಿ ಹಾವುಗಳನ್ನು ಬಿಡಿಸಲಾಗಿದೆ. ಮಠವನ್ನು ಪೂರ್ವಬಾಗಿಲಿನಿಂದ ಒಳಪ್ರವೇಶಿದಾಗ ಅದೇ ಗೋಡೆಯ ಒಳಭಾಗದಲ್ಲಿಯೂ ಹಾವಿನ ಚಿತ್ರವನ್ನು ಕೆತ್ತಿದ್ದಾರೆ. ಹಾಗೆಯೇ ಕೂಲಹಳ್ಳಿಯ ಮದ್ದಾನಸ್ವಾಮಿ ಮಠ ಒಳಭಾಗದ ಗುಹೆಯಲ್ಲಿ ಪಡೇವಿರುವ ಕೋಣೆಯ ಕಲ್ಲುಗೋಡೆಯಲ್ಲಿ ಏಳು ಹೆಡೆಯ ಸರ್ಪದ ಶಿಲ್ಪಾಕೃತಿ ಇದೆ. ಕೂಲಹಳ್ಳಿಯಲ್ಲಿಯೇ ಇರುವ ಜಂಬಾರದಯ್ಯನ ಗುಡಿ(ಇದು ಬಾಲಬಸವರ ಒಡೆತನಕ್ಕೆ ಸೇರಿದ್ದೆಂದು ಹೇಳಲಾಗುತ್ತದೆ)ಯನ್ನು ಮಾದಿಗರು ಪೂಜೆ ಮಾಡುತ್ತಾರೆ. ಇಲ್ಲಿ ನಾಗ ಮಂಡಲದ ಮಧ್ಯೆ ಎರಡು ಪಾದಗಳಿವೆ. ಗೋಣಿಬಸವನ ಜಾತ್ರೆಯ ಸಂದರ್ಭದಲ್ಲಿ ಈ ಮಠದ ಮೇಲೆ ನಗಾರಿ ಇಟ್ಟು ಬಾರಿಸುತ್ತಾರೆ.

ಅರಸೀಕೆರೆಯ ಗುಡಿಯಲ್ಲಿರುವ ಕಲ್ಲುಗೋಡೆಯಲ್ಲಿ ಏಳು ಹೆಡೆಯ ಸರ್ಪದ ಶಿಲ್ಪಕೃತಿ ಇದೆ. ಇಲ್ಲಿನ ಕೋಲಶಾಂತನ ಗರ್ಭಗುಡಿಯಲ್ಲಿರುವ ಪಂಚಲೋಹದ ವಿಗ್ರಹ ೧೯೪೨ರಲ್ಲಿ ಭಕ್ತರು ಮಾಡಿಸಿದ್ದು ಕಂಠಿಲಿಂಗದ ಮೇಲೆ ಹಾವಿನ ಮುಖದ ವಿಗ್ರಹವಿದೆ. ಮೊದಲು ನಾಗರ ಹೆಡೆಯಲ್ಲಿದ್ದ ದೊಡ್ಡ ಭಸ್ಮದ ಉಂಡಿಯನ್ನು ಪೂಜಿಸುತ್ತಿದ್ದರು.

ನಾಯಕನಟ್ಟಿಯ ಒಳಮಠ ಮತ್ತು ಹೊರಮಠದ ಮುಂಭಾಗದಲ್ಲಿಯೂ ಅಪಾರವಾದ ನಾಗರಕಲ್ಲುಗಳಿವೆ. ಒಳಮಠದ ಗೋಪುರ ಮತ್ತು ಗೋಡೆಯ ಭಾಗದಲ್ಲಿಯೂ ನಾಗಪ್ರತಿಮೆಗಳಿವೆ. ಹಾಗೆ ನೋಡಿದರೆ ಪಂಚಗಣಾಧೀಶ್ವರರು ಇರುವ ಮಧ್ಯಕರ್ನಾಟಕದಲ್ಲಿ ಮಾತ್ರವೇ ಈ ನಾಗರ ಶಿಲ್ಪಗಳು

ಸಿಗುತ್ತಿಲ್ಲ. ಇಡೀ ಕರ್ನಾಟಕದಾದ್ಯಂತ ನಾಗರಶಿಲ್ಪಗಳನ್ನು ಕಾಣುತ್ತೇವೆ. 'ಕದಂಬ ಕೃಷ್ಣವರ್ಮನ ದೇವಗಿರಿ ಶಾಸನದಂತೆ ಕದಂಬರು ನಾಗರೇ, ಪಲ್ಲವ, ಚೋಳ-ವಾಕಟಕ, ಪರಮಾರ, ಮೊದಲಾದ ವಂಶಗಳ ಅರಸರು. ನಾಗಕುಲದ ಮಹಿಳೆಯರನ್ನು ವಿವಾಹವಾಗುತ್ತಿದ್ದ ಉಲ್ಲೇಖಗಳಿವೆ. ಮಹಾರಾಷ್ಟ್ರ ನಾಗರ ಮೂಲ ವಾಸಸ್ಥಾನ, ಶಾತವಾಹನ ಮತ್ತು ಚುಟುಕುಲದವರು ನಾಗವಂಶೀಯರು. ಇಡೀ ಭಾರತದ ತುಂಬ ನಾಗರು ಹಬ್ಬಿದ್ದರು. ಕುರುಗೋಡು(ಬಳ್ಳಾರಿ ಜಿಲ್ಲೆ) ದೊರೆಗಳು, ಗುತ್ತಲದ(ಬಳ್ಳಾರಿ ಜಿಲ್ಲೆ) ಸಿಂಧರು ನಾಗವಂಶೀಯರೆ (ಎಸ್.ಎಸ್.ಹಿರೇಮಠ (ದಲಿತರು ನಾಗರೆ(ಲೇ) ಸಂವಾದ ಪತ್ರಿಕೆ), ೨೦೦೪, ಮಾರ್ಚ್, ಪು.೩೨)

ಪ್ರಾಚೀನ ಕಾಲದಿಂದಲೂ 'ನಾಗ' ಎನ್ನುವ ಅರಣ್ಯವಾಸಿ ಗುಂಪುಗಳು ಭಾರತದಾದ್ಯಂತ ಹರಡಿದ್ದವು. ''ನಾಗರು' ಅಥವಾ 'ನಾಗಜಾತಿ' ಎಂಬ ಹೆಸರನ್ನು ಆರ್ಯರು ಈ ಎಲ್ಲ ಅರಣ್ಯವಾಸಿಗಳನ್ನು ಒಟ್ಟಾಗಿ ಸಂಬೋಧಿಸಿ ಬಳಸಿದ ಮಾತಿರಬೇಕು. ಈ ಎಲ್ಲ ಸಮುದಾಯಗಳು ಅಥವಾ ಬಹುಪಾಲಿನವು ಹಾವನ್ನು ತಮ್ಮ ಸಮುದಾಯ ಚಿಹ್ನೆಯಾಗಿ ಹೊಂದಿದ್ದಿರಬೇಕು. ಅಥವಾ ಹಾವನ್ನು ಪೂಜಿಸುತ್ತಿದ್ದಿರಬೇಕು ಎಂಬುದೆ ಆರ್ಯರು ಅವರೆಲ್ಲರನ್ನೂ ಒಟ್ಟಿಗೆ 'ನಾಗಜಾತಿ' ಎಂದು ಕರೆಯಲು ಕಾರಣವಾಗಿರ ಬಹುದು.'(ಎಚ್.ಎಸ್.ಶ್ರೀಮತಿ(ಅನು), ೧೯೯೮, ಪು.೧೧೧) ಪ್ರಾಚೀನ ಕಾಲದಲ್ಲಿ ಆರ್ಯರಿಗೂ ನಾಗಜಾತಿಗೂ ಸಂಘರ್ಷವಿದ್ದುದನ್ನು ಮಹಾಭಾರತ ವಿವರಿಸುತ್ತದೆ. 'ನಾಗ ಜಾತಿಯನ್ನು ಕೊನೆಗಾಣಿಸಲು ಜನಮೇಜಯನು ಯಜ್ಞ ಮಾಡುತ್ತಿರುವಾಗ ಯಜ್ಞದ ಆಚರಣಾ ವಿಧಿಯ ಅಂಗವಾಗಿ ವೈಶಂಪಾಯನನು ಹೇಳಿದ ಕಥೆಯೇ ಮಹಾಭಾರತ'(ಅದೇ, ಪು.೧೧೧) ಇದರಲ್ಲಿ ಕೃಷ್ಣನು ಕಾಳಿಂಗ ಮರ್ಧನ ಮಾಡುವುದು, ಇಂದ್ರನನ್ನು ಪೂಜಿಸಿದ ಆರ್ಯರ ರಾಜನಾದ ಜನಮೇಜಯನು ತಕ್ಷಕನೊಂದಿಗೆ ಅವನ ಇಡೀ ನಾಗಜಾತಿಯನ್ನೆ ನಿರ್ನಾಮ ಮಾಡಲು ಪಣತೊಟ್ಟು ಯಜ್ಞವನ್ನು ಮಾಡುವುದು, ಅರ್ಜುನನು ಖಾಂಡವ ವನ ದಹನ ಮಾಡುವುದು ಅದರಲ್ಲಿ ತಪ್ಪಿಸಿಕೊಂಡ ನಾಗರ ಆಯುಧವೊಂದು ಕರ್ಣನ ಭತ್ತಳಿಕೆಯನ್ನು ಸೇರುವುದು ಇದೆಲ್ಲ. ನಾಗಜಾತಿಯೊಂದಿಗೆ ಇದ್ದ ಆರ್ಯರ ಸಂಘರ್ಷವನ್ನೇ ವಿವರಿಸುತ್ತವೆ. ಸಂಘರ್ಷದಲ್ಲಿ ನಾಗರು ಸಂಪೂರ್ಣವಾಗಿ ನಾಶಹೊಂದದೆ ಆರ್ಯರ ಜನಜೀವನದಲ್ಲಿ ಬೆರೆತು ಹೋದರು. ನಾಗರು ಪಶುಪಾಲಕ ವೃತ್ತಿಯೊಂದಿಗೆ ಕೃಷಿಯನ್ನು ವರ್ಣವ್ಯವಸ್ಥೆಯನ್ನು ಅಂಗೀಕರಿಸಿದರು. 'ಕೆಲವರು ಬ್ರಾಹ್ಮಣರು, ಕ್ಷತ್ರಿಯರೂ ಆಗಿಬಿಟ್ಟರು. ಹೆಚ್ಚಿನವರು ಶೂದ್ರರಾಗಿ ಆರ್ಯ ಸಮಾಜಕ್ಕೆ ಅಧೀನರಾದರು. ಜೊತೆಗೆ ಅವರ ದೇವರುಗಳು ಆರ್ಯರ ದೇವರುಗಳೊಂದಿಗೆ ಬೆರತು ಹೋದವು. ನಂತರದ ಕಾಲದಲ್ಲಿ ಹಿಂದೂ ಮತದಲ್ಲಿ ನಾಗರಹಾವಿನ ಪೂಜೆ ಹಲವು ಬಗೆಗಳಲ್ಲಿ ಕಂಡುಬರುತ್ತದೆ.'(ಅದೇ, ಪು.೧೧೯) ಈಗಲೂ ಕೂಡ ಶೂದ್ರರೆ ಹೆಚ್ಚಾಗಿ ನಾಗರ ಪೂಜೆಯನ್ನು ಮಾಡುವುದು. ಶೂದ್ರ ಜನಾಂಗದವರು ಪೂಜಿಸುವ ಮಾರಮ್ಮ-ಊರಮ್ಮ-ದುರ್ಗಮ್ಮ ಮುಂತಾದ ಸ್ತ್ರೀ ದೇಗುಲದ ಎದುರು ಅಂಗಳದ ಕಟ್ಟೆಯಲ್ಲಿ

ಸಾಮಾನ್ಯವಾಗಿ ನಾಗಪ್ರತಿಮೆಗಳಿರುತ್ತವೆ. ನಾಗಪಂಚಮಿ ಹಬ್ಬವನ್ನು ಗ್ರಾಮೀಣ ಪ್ರದೇಶದಲ್ಲಿ ವಿಶೇಷವಾಗಿ ಆಚರಿಸಲಾಗುತ್ತದೆ.

ನಾಯಕನಟ್ಟಿಯ ಒಳಮಠದ (ಇದು ಮೊದಲಿಗೆ ಮಾರಮ್ಮನಗುಡಿ ಆಗಿತ್ತು) ಹತ್ತಿರದ ಬಯಲಿನಲ್ಲಿ ಸಾಕಷ್ಟು ನಾಗರ ಪ್ರತಿಮೆಗಳಿವೆ. ಗೋಣಿ ಬಸವನ ಚರಿತ್ರೆಯಲ್ಲಿ ಗೋಣಿಬಸವನ ಮೈಗೆ ಏರಿದ ವಿಷವನ್ನು ಬಾಲಬಸಪ್ಪ ನಾಗರಹಾವಿನ ವೇಷದಲ್ಲಿ ಬಂದು ವಿಷವನ್ನು ಹೀರಿ ಗೋಣಿಬಸವನನ್ನು ಬದುಕಿಸಿದ ಪ್ರಸಂಗವನ್ನು ವಿವರಿಸುತ್ತದೆ. ಬಾಲಬಸವರು ಕಾಲಜ್ಞಾನ ಸಾರುವಾಗಲೂ ನಾಗರಬೆತ್ತವನ್ನು ಹಿಡಿದಿರುತ್ತಾರೆ. ಹೀಗೆ ಪಂಚಗಣಾಧೀಶ್ವರರ ಪಂಥದಲ್ಲಿ ನಾಗಪ್ರತಿಯಮೆಯು ವಿಶೇಷವಾಗಿ ಕಂಡುಬರುತ್ತದೆ. ಇದಕ್ಕೆ ಮುಖ್ಯವಾಗಿ ನಾಗಪೂಜೆಯು ಜನಸಮುದಾಯದಲ್ಲಿ ಪ್ರಚಲಿತವಾಗಿದ್ದ ಆರಾಧನೆಯಾಗಿತ್ತು. ಅದರಲ್ಲೂ ನಾಗಪೂಜೆಯನ್ನು ಸಮೃದ್ಧಿಯ ಸಂಕೇತವೆಂದು ಜನ ಸಮುದಾಯ ಭಾವಿಸಿದೆ. ಸುಗ್ಗಿಯ ಕಾಲದಲ್ಲಿ ಬರುವ ನಾಗರ ಪಂಚಮಿ ಹಬ್ಬದಂದು ಮಣ್ಣಿನಲ್ಲಿ ನಾಗಪ್ರತಿಮೆಯನ್ನು ಮಾಡಿ ಅದಕ್ಕೆ ಹಾಲೆರೆಯುವ ಆಚರಣೆ ಗ್ರಾಮೀಣ ಪ್ರದೇಶದಲ್ಲಿ ಈಗಲೂ ಉಳಿದುಕೊಂಡು ಬಂದಿದೆ. ಹೀಗೆ ಪೂಜೆ ಮಾಡುವುದರಿಂದ ಮಳೆ-ಬೆಳೆ ಸಮೃದ್ಧಿ ಆಗುತ್ತದೆಂದು ನಂಬಲಾಗಿದೆ. ಹಾಗಾಗಿ ದುಡಿಯುವ ವರ್ಗವು ಯಾವಾಗಲೂ ನಾಗರ ಪ್ರತಿಮೆಯನ್ನು ಪೂಜ್ಯ ಭಾವನೆಯಿಂದ ಆರಾಧಿಸುತ್ತಾ ಬಂದಿದೆ. ಈ ದುಡಿಯುವ ವರ್ಗಗಳೇ ಪಂಚಗಣಾಧೀಶ್ವರರಿಗೂ ನಡೆದುಕೊಳ್ಳುವುದರಿಂದ ನಾಗಪೂಜೆಯನ್ನು ಈ ಪಂಥದೊಟ್ಟಿಗೆ ಬೆರೆಸಿದ್ದಾರೆ. ಶಿಲ್ಪಕಲೆಯ ಮೂಲಕ, ಲೋಹದ ಪ್ರತಿಮೆಗಳ ಮೂಲಕ ಅದನ್ನು ಅಭಿವ್ಯಕ್ತಿಸಿದ್ದಾರೆ. ಹಾಗಾಗಿ ಈ ಐವರು ಸಂತರ ದೇವಾಲಯಗಳ ಮೂರ್ತಿಗಳಲ್ಲಿ ನಾಗರ ಹಾವಿನ ಪ್ರತಿಮೆ ವಿಶೇಷವಾಗಿ ಕಂಡುಬರುತ್ತದೆ.

## ೩.೫. ಸಮಕಾಲೀನ ಒತ್ತಡಗಳಿಂದುಂಟಾದ ರೂಪಾಂತರಗಳು

ಸಧ್ಯದ ಪರಿಸ್ಥಿತಿಯಲ್ಲಿ ಪಂಚಗಣಾಧೀಶ್ವರರ ಆಚರಣೆಗಳಲ್ಲಿ ಆಗುತ್ತಿರುವ ಬದಲಾವಣೆಗಳು ತೀವ್ರ ಕುತೂಹಲವನ್ನೂ ಕೆರಳಿಸುತ್ತಿವೆ. ಬೇಡ ಜನಾಂಗದವರು ಹೆಚ್ಚಿರುವ ನಾಯಕನಟ್ಟಿಯ ಹೊರಮಠದ ಗರ್ಭಗುಡಿಯಲ್ಲಿ ಮಾಂಸವನ್ನು ಎಡೆಕೊಡುವ ಪದ್ಧತಿ ಮೊದಲಿನಿಂದಲೂ ಇದೆ. ಇಲ್ಲಿನ ಪೂಜಾರಿಗಳು ಮ್ಯಾಸಬೇಡರು. ಆದರೆ ಇತ್ತೀಚಿನ ೮-೧೦ ವರ್ಷಗಳಿಂದ ಗರ್ಭಗುಡಿಯಲ್ಲಿ ಎಡೆಯನ್ನು ಸ್ವೀಕರಿಸದೆ ಗುಡಿಗೆ ಹೋಗುವ ದ್ವಾರಬಾಗಿಲಿನಲ್ಲಿರುವ ಪೂಜಾರಿಯ ಮನೆಯಲ್ಲಿ ಭಕ್ತರು ಎಡೆಯನ್ನು ತಂದು ಒಪ್ಪಿಸುವ ಪದ್ಧತಿಯನ್ನು ಜಾರಿಗೆ ತಂದಿದ್ದಾರೆ. ಈ ಬಗ್ಗೆ ಪ್ರಶ್ನಿಸಿದಾಗ ಹೊರಮಠದ ಪೂಜಾರಿಗಳು 'ಗರ್ಭಗುಡಿಯಲ್ಲಿ ಮಾಂಸ ಎಡೆಕೊಡುವುದರಿಂದ ಮಾಂಸ ತಿನ್ನದ ಲಿಂಗಾಯತರು, ಜಂಗಮರು ಈ ಮಠಕ್ಕೆ ಬರುತ್ತಿಲ್ಲ. ಹಾಗಾಗಿ ಎಲ್ಲರನ್ನೂ ಈ ಮಠಕ್ಕೆ ಬರುವಂತೆ ಮಾಡಲು ಈ ಪದ್ಧತಿಯನ್ನು ಜಾರಿಗೆ

ತಂದಿದ್ದೇವೆ' ಎಂದು ಹೇಳಿದರು. ಹೊರಮಠಕ್ಕೆ ಈಗಲೂ ಬೇಡರು, ಕುರುಬರು, ಕೆಳವರ್ಗದವರು ಹೆಚ್ಚಾಗಿ ಬರುತ್ತಾರೆ. ಲಿಂಗಾಯತರು-ಜಂಗಮರನ್ನೊಳಗೊಂಡ ಉನ್ನತವರ್ಗಗಳು ಒಳಮಠಕ್ಕೆ ಹೆಚ್ಚಾಗಿ ಬರುತ್ತಾರೆ.

ಹೊರಮಠದಲ್ಲಾಗಿರುವ ಬದಲಾವಣೆ ಉನ್ನತವರ್ಗಗಳನ್ನು ತನ್ನತ್ತ ಸೆಳೆದುಕೊಳ್ಳಬೇಕೆನ್ನುವ ಪೂಜಾರಿಯ ಬಯಕೆ ಮಾತ್ರವಾಗಿರದೆ ಸಾಮಾಜಿಕವಾಗಿ ಮೇಲುಸ್ತರದೊಂದಿಗೆ ಗುರುತಿಸಿಕೊಳ್ಳಬೇಕೆನ್ನುವ ಹಠವೂ ಕಾರಣವಾಗಿದೆ. ಸಾಮಾಜಿಕ ಸ್ಥಾನಮಾನಕ್ಕಾಗಿ ಮೇಲ್ವರ್ಗದೊಂದಿಗೆ ಗುರುತಿಸಿಕೊಳ್ಳಬೇಕೆನ್ನುವ ಪ್ರಯತ್ನ ಮತ್ತು ತಮ್ಮ ಆಹಾರ ಪದ್ಧತಿಯನ್ನು ಕೈಬಿಡಲಾಗದ ಅಸಹಾಯಕತೆ ಈ ತೊಳಲಾಟದಲ್ಲಿ ಎರಡೂ ಕಡೆ ಇರಬೇಕಾಗಿರುವ ಅನಿವಾರ್ಯತೆಯಿಂದ ಈ ಪದ್ಧತಿಯನ್ನು ರೂಢಿಸಿಕೊಳ್ಳಲಾಗಿದೆ.

ಈ ತರಹದ ಬದಲಾವಣೆಗಳು ನಾಯಕನಟ್ಟಿಗೆ ಮಾತ್ರ ಸೀಮಿತವಾಗಿಲ್ಲ. ಒಂದು ಕಾಲದಲ್ಲಿ ಬೇಡರ ಕನಕವ್ವನ ಮಗನಾಗಿ ಹುಟ್ಟಿದ ಗೋಣಿಬಸವ ನಂತರದಲ್ಲಿ ಕುರುಬರ ವಡ್ಡೆಟ್ಟೆವ್ವನನ್ನು ಮದುವೆಯಾಗುತ್ತಾನೆ. ಮಾದಿಗರಿಗೆ ದೀಕ್ಷೆ ನೀಡುತ್ತಾನೆ. ಹೀಗೆ ಜಾತ್ಯಾತೀತ ಗುಣಗಳನ್ನು ಮೈಗೂಡಿಸಿಕೊಂಡಿದ್ದ ಕೂಲಹಳ್ಳಿ ಗೋಣಿಬಸವನ ಮಠದ ಸ್ವಾಮಿಗಳು ಮೂಲತಃ ಬೇಡ ಜನಾಂಗದವರು. ಆದರೆ ಇವತ್ತು ಜಂಗಮರೆಂದು ಹೇಳಿಕೊಳ್ಳುತ್ತಿದ್ದಾರೆ. ಜಂಗಮರ ಜಾತಿಯೊಂದಿಗೆ ಮಾತ್ರ ವೈವಾಹಿಕ ಸಂಬಂಧವನ್ನು ಏರ್ಪಡಿಸಿ ಕೊಳ್ಳುತ್ತಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಕ್ರಿ.ಶ.೧೯೮೦ರ ಸುಮಾರಿಗೆ ಉಜ್ಜಿನಿ ಪೀಠವು ಒಂದು ನಿರ್ಣಯವನ್ನು ಹೊರಡಿಸಿದೆ. ಆ ಪ್ರಕಾರ ಕೂಲಹಳ್ಳಿ ಗೋಣಿಬಸವ ಮಠದ ಸ್ವಾಮಿಗಳು ಜಂಗಮರೆಂತಲೂ ಇವರಿಗೆ ಜಂಗಮರೊಂದಿಗೆ ವೈವಾಹಿಕ ಸಂಬಂಧ ನಡೆಯಲು ಅನುಮತಿಯನ್ನು ನೀಡಿದೆ. ಕೂಲಹಳ್ಳಿ ಮಠ ಉಜ್ಜಿನಿ ಪೀಠದೊಂದಿಗೆ ನಿಕಟ ಸಂಬಂಧವನ್ನು ಇತ್ತೀಚೆಗೆ ಹೊಂದುತ್ತಿದೆ. ಈ ರೀತಿ ನಿಕಟ ಸಂಬಂಧ ಮತ್ತು ಬೆಂಬಲದ ಮೂಲಕ ಕೂಲಹಳ್ಳಿ ಮಠದ ಭಕ್ತರನ್ನು ತನ್ನ ಅಧೀನಕ್ಕೆ ಬರುವಂತೆ ಮಾಡಲು ಉಜ್ಜಿನಿ ಪೀಠ ಪ್ರಯತ್ನಿಸುತ್ತಿರುವಂತಿದೆ. ಗೋಣಿಬಸವ ಕಾವ್ಯ ಹಾಡುವ ಬಾಲಬಸವರಿಗೆ ಇತ್ತೀಚೆಗೆ ದೀಕ್ಷೆಯನ್ನು ನೀಡುತ್ತಿದೆ. ಅಲ್ಲದೆ ಕೂಲಹಳ್ಳಿ ಜಾತ್ರೆ-ವಿಶೇಷ ಸಂದರ್ಭಗಳಲ್ಲಿ ಉಜ್ಜಿನಿ ಪೀಠದ ಜಗದ್ಗುರುಗಳು ಮಠಕ್ಕೆ ಭೇಟಿಯನ್ನು ಕೊಡುತ್ತಾರೆ.

ಆದರೆ ಗುಮ್ಮಗೋಳದ ಗೋಣಿಬಸವನ ಮಠದಲ್ಲಿ ಈ ರೀತಿಯ ಯಾವುದೇ ಗೊಂದಲಗಳೂ ಇಲ್ಲ. ಅಲ್ಲಿಯ ಸ್ವಾಮಿಗಳು 'ನಮ್ಮ ದೇವರಿಗೆ ಜಾತಿಯಿಲ್ಲ ನಮಗಿನ್ನೇನು' ಎನ್ನುವ ಮಾತನ್ನು ಆಡುತ್ತಾರೆ. ಇಂಥದೇ ಜಾತಿ ಎಂದು ಹೇಳಿಕೊಳ್ಳುವುದಿಲ್ಲ. ಆದರೆ ಸರಕಾರಿ ದಾಖಲಾತಿಯಲ್ಲಿ 'ಬೇಡ ಜನಾಂಗದವರು' ಎಂದು ನಮೂದಿಸಲಾಗುತ್ತದೆ. ಈಗಲೂ ಅವರು ಮಾದಿಗ-ಬೇಡ-ಕುರುಬ ಜನಾಂಗದೊಂದಿಗೆ ವೈವಾಹಿಕ ಸಂಬಂಧವನ್ನು ಏರ್ಪಡಿಸಿಕೊಳ್ಳುತ್ತಿದ್ದಾರೆ.

ಇದೇ ಗೋಣಿಬಸವನ ಕಾವ್ಯ ಹಾಡುವ ಬಾಲಬಸವರು ಸದ್ಯದಲ್ಲಿ ವಿಚಿತ್ರವಾದ ಬಿಕ್ಕಟ್ಟಿನಲ್ಲಿ ಸಿಲುಕಿದ್ದಾರೆ. ಕಾರಣ ಮಾದಿಗರಿಗೆ ದೀಕ್ಷೆ ನೀಡಿದ ಗೋಣಿಬಸವ ಅವರನ್ನು ಬಾಲಬಸವರೆಂದು ಕರೆದು ಅವರಿಗೆ ಕಾಲಜ್ಞಾನ ಸಾರಲಿಕ್ಕೆ ಕರ್ಣಕುಂಡಲಗಳನ್ನು, ನಾಗಬೆತ್ತವನ್ನು ಕೊಟ್ಟು ತನ್ನ ಒಕ್ಕಲಾಗಿಸಿಕೊಂಡಿದ್ದಾನೆ. ಇದರಿಂದಾಗಿ ಅಂದಿನಿಂದ ಇವರು ಮಾಂಸಹಾರವನ್ನು ತ್ಯಜಿಸಿದ್ದಾರೆ. ಅಲ್ಲದೆ ಕಾಲಜ್ಞಾನ ಸಾರುವಾಗ ಮಡಿ-ಮೈಲಿಗೆಯಿಂದ ಲಿಂಗಾಯಿತರಂತೆ ನಡೆದುಕೊಳ್ಳುತ್ತಾರೆ. ಇದರಿಂದಾಗಿ ಮಾದಿಗರಲ್ಲಿಯೇ ಇವರು ಒಂದಷ್ಟು ಶ್ರೇಷ್ಟ ಎನ್ನುವ ನಂಬಿಕೆ ಇದೆ. ಇದರಿಂದಾಗಿ ಮಾದಿಗ ಜನಾಂಗದವರು ಇವರೊಂದಿಗೆ ವೈವಾಹಿಕ ಸಂಬಂಧವನ್ನು ಏರ್ಪಡಿಸಿಕೊಳ್ಳುತ್ತಿಲ್ಲ. ಈ ಜನಾಂಗಕ್ಕೆ (ಬಾಲಬಸವ) ಮಾದಿಗರು ಹೆಣ್ಣುಗಳನ್ನು ಕೊಡುತ್ತಾರೆ. ಆದರೆ ತಾವು ತಂದುಕೊಳ್ಳುವುದಿಲ್ಲ. ಇದರಿಂದ ಬಾಲಬಸವ ಜನಾಂಗದ ಹೆಂಗಸರನ್ನು ಬಸವಿಯರನ್ನಾಗಿ ಬಿಡಲಾಗುತ್ತದೆ. ಇಲ್ಲವೆ ತಮ್ಮ-ತಮ್ಮಲ್ಲಿಯೇ ವಿವಾಹ ಮಾಡಿಕೊಳ್ಳಲಾಗುತ್ತಿದೆ. ದೀಕ್ಷೆಯ ಮೂಲಕ, ಮಡಿ-ಮೈಲಿಗೆ ಮೂಲಕ, ಮಾಂಸಹಾರ ತ್ಯಜಿಸುವ ಮೂಲಕ ಇವರು ಲಿಂಗಾಯತರಂತೆ ವರ್ತಿಸುತ್ತಿದ್ದರೂ ಲಿಂಗಾಯತರು ಇವರನ್ನು ಯಾವತ್ತಿಗೂ ದೂರ ಇಟ್ಟಿದ್ದಾರೆ. ಹೀಗಾಗಿ ಬಾಲಬಸವರ ಪ್ರಮುಖ ವಕ್ತವಾದ ತುಮನೆಪ್ಪ ತನ್ನ ಮೊಮ್ಮಕ್ಕಳಿಗೆ 'ಬಾಲಬಸವ ದೀಕ್ಷೆ' ಕೊಡಿಸುವ ಬಗ್ಗೆ ಗೊಂದಲದಲ್ಲಿದ್ದಾನೆ. ದೀಕ್ಷೆ ಕೊಡಿಸಿದರೆ ಮುಂದೆ ಆ ಹೆಣ್ಣು ಮಕ್ಕಳ ಬದುಕು ರೂಪಗೊಳ್ಳುವ ಬಗ್ಗೆ ಆತಂಕದಿಂದಿದ್ದಾನೆ. ಈ ಆತಂಕ ಬರೀ ತುಮನೆಪ್ಪನದು ಮಾತ್ರವಲ್ಲ. ಒಟ್ಟು ಬಾಲಬಸವ ಜನಾಂಗದ್ದೂ ಹೌದು. ಸದ್ಯದ ಸಾಮಾಜಿಕ ಪರಿಸ್ಥಿತಿಯಿಂದುಂಟಾದ ಈ ಆತಂಕ ಒಟ್ಟು ಬದುಕನ್ನು, ಆಚರಣೆಗಳನ್ನು ಬದಲಾಯಿಸಿಕೊಳ್ಳಲು ಒತ್ತಾಯಿಸುತ್ತಿದೆ.

ಕೊಟ್ಟೂರಿಗೆ ಸಂಬಂಧಿಸಿದಂತೆ ಜಾತ್ರೆ ಮತ್ತು ಕಾರ್ತಿಕೋತ್ಸವದಲ್ಲಿ ಪ್ರಾರಂಭವಾಗಿರುವ ಮುಖ್ಯ ಆಚರಣೆ ಎಂದರೆ 'ಕೊಟ್ಟೂರೇಶ್ವರ ಮಾಲೆ' ಧರಿಸುವುದು. ಯಾವುದಾದರೂ ಸ್ವಾಮಿಗಳ ಮೂಲಕ ಜಾತಿ-ಬೇಧ ಎಣಿಸದೆ ಯಾರು ಬೇಕಾದರೂ 'ಕೊಟ್ಟೂರೇಶ್ವರ ಮಾಲೆ'ಯನ್ನು ಧರಿಸಬಹುದು. ಅಂತಹವರು ಬಿಳಿಯ ಅಂಗಿ, ಬಿಳಿಯ ಲುಂಗಿ ಹಾಗೂ ಕೆಂಪು ವಸ್ತ್ರವನ್ನು ಧರಿಸಬೇಕು. ಕಾಲಲ್ಲಿ ಚಪ್ಪಲಿಯನ್ನು ಧರಿಸುವಂತಿಲ್ಲ. ಜಾತ್ರಾ ಸಂದರ್ಭದಲ್ಲಿ ಒಂದು ತಿಂಗಳು ಮುಂಚಿತವಾಗಿ ಈ 'ಮಾಲೆ' ಧರಿಸಲು ಪ್ರಾರಂಭಿಸಿದರೆ, ಕಾರ್ತಿಕಮಾಸದ ಸಂದರ್ಭದಲ್ಲಿ ದೀಪಾವಳಿಯಿಂದ ಆರಂಭವಾಗಿ ಡಿಸೆಂಬರ್ ನಲ್ಲಿ ನಡೆಯುವ ಕಾರ್ತಿಕೋತ್ಸವಕ್ಕೆ ಇದು ಪೂರ್ಣಗೊಳ್ಳುತ್ತದೆ. ಈ ಅವಧಿಯ ಮಧ್ಯದಲ್ಲಿ ಸೋಮವಾರದಂದು ಮಠದಲ್ಲಿ(೧೯೯೭-೨೦೦೨ರವರೆಗೆ ಚಾನುಕೋಟಿ ಸ್ವಾಮಿಗಳ ನೇತೃತ್ವದಲ್ಲಿ ನಡೆದರೆ ೨೦೦೩ರಲ್ಲಿ ಭೂತಭುಜಂಗ ಸ್ವಾಮಿಗಳ ಮಠದಲ್ಲಿ ಅವರ ನೇತೃತ್ವದಲ್ಲಿ ನಡೆಯಿತು) ಗುರುಗಳ ಮೂಲಕ ಈ ಮಾಲೆಯನ್ನು ಧರಿಸಬಹುದಾಗಿದೆ. ಬೇರೆ ಊರಿನ ಭಕ್ತಾದಿಗಳು ಆ ಊರಿನ ಜಂಗಮರಿಂದ, ಮಠದ ಸ್ವಾಮಿಗಳಿಂದ ಈ ಮಾಲೆಯನ್ನು ಧರಿಸಬಹುದಾಗಿದೆ. ೧೯೯೭ರಲ್ಲಿ ಕೊಟ್ಟೂರಿನಲ್ಲಿ ಈ ಪದ್ಧತಿ

ಆರಂಭವಾದಾಗ ೮ ಜನ ಮಾತ್ರ 'ಕೊಟ್ಟೂರೇಶ್ವರ ಮಾಲೆ' ಧರಿಸಿದ್ದರು. ೨೦೦೩ರಲ್ಲಿ ಒಟ್ಟಾರೆ ೫೦೦೦ಕ್ಕಿಂತ ಹೆಚ್ಚು ಭಕ್ತಾದಿಗಳು ಈ 'ಮಾಲೆ' ಧರಿಸಿದ್ದಾರೆ. ಹೀಗೆ ಧರಿಸುವ ಭಕ್ತಾದಿಗಳು ಪ್ರಾರ್ಥನೆ, ಧ್ಯಾನಗಳ ಮೂಲಕ ದೇಹವನ್ನು ಶುದ್ಧವಾಗಿಟ್ಟುಕೊಳ್ಳತಕ್ಕದ್ದು. ತಾವು ಇದ್ದ ಊರಿನಲ್ಲಿಯೆ ಪ್ರತಿದಿನ ಕೊಟ್ಟೂರೇಶ್ವರ(ಗುರುಬಸವ) ಪೂಜೆಯನ್ನು ಸಾಮೂಹಿಕವಾಗಿ ಮಾಲೆ ಧರಿಸಿದವರು ಮಾಡತಕ್ಕದ್ದು.

ಇದೇ ರೀತಿ ನಾಯಕನಟ್ಟಿಯಲ್ಲಿ 'ರುದ್ರಾಕ್ಷಿ ಮಾಲೆ' ಎಂದು ಕರೆಯಲಾಗುತ್ತದೆ. ಅಲ್ಲಿಯೂ ಇದೇ ಪದ್ಧತಿ ಇದ್ದು ಮಾಲೆ ಧರಿಸಿದವರು ಬಿಳಿಯ ಅಂಗಿ, ಕಾವಿಯ ಲುಂಗಿ, ಮತ್ತು ಕೆಂಪು ವಸ್ತ್ರವನ್ನು ಧರಿಸತಕ್ಕದ್ದು. ಪ್ರತಿವರ್ಷ ಧನುರ್ಮಾಸದಲ್ಲಿ ಈ ಪದ್ಧತಿ ಪ್ರಾರಂಭವಾಗಿ ಮಕರ ಸಂಕ್ರಾತಿಯಂದು ಮುಗಿಯುತ್ತದೆ. ಇಲ್ಲಿ ಇದು ೨೦೦೦ನೇ ಇಸ್ವಿಯಿಂದ ಆರಂಭವಾಗಿದೆ. ಈ ಮಾಲೆ ಧರಿಸುವುದರ ಜೊತೆ 'ಅಕ್ಷಯ ಬುತ್ತಿ' ಎಂಬ ವಿಶಿಷ್ಟ ಆಚರಣೆಯೂ ಇದೆ. ತಿಪ್ಪೇಸ್ವಾಮಿ ಘಣಿಯಪ್ಪ ಮತ್ತು ಭಕ್ತಾದಿಗಳೊಂದಿಗೆ ಊಟ ಮಾಡುವ ಪ್ರಸಂಗ ಬಂದಾಗ ಇದ್ದ ಸ್ವಲ್ಪ ಬುತ್ತಿಯನ್ನೆ ಎಲ್ಲರಿಗೂ ಹೊಟ್ಟೆ ತುಂಬುವಂತೆ ಪವಾಡ ಮಾಡಿದ್ದನ್ನು 'ಅಕ್ಷಯ ಬುತ್ತಿ' ಪವಾಡ ಎನ್ನಲಾಗುತ್ತದೆ. ಅದರ ನೆನಪಿಗೋಸ್ಕರ ಮಾಲೆ ಧರಿಸಿದವರು 'ಅಕ್ಷಯ ಬುತ್ತಿ' ಎಂದು ಅಕ್ಕಿ, ಒಣಕೊಬ್ಬರಿ, ಬೆಲ್ಲ, ಉತ್ತುತ್ತಿ, ಅರಿಷಿಣ ಕೊಂಬು ಹೊಂದಿರುವ ಬಟ್ಟೆಯ ಗಂಟನ್ನು ಕಟ್ಟಿಕೊಂಡು ಅದನ್ನು ಸಂಕ್ರಾಂತಿಯ ದಿನದಂದು ದೇವಾಲಯಕ್ಕೆ ದಾಸೋಹ ಮಾಡಲು ಒಪ್ಪಿಸಬೇಕು.

ಕೊಟ್ಟೂರು ಮತ್ತು ನಾಯಕನಟ್ಟಿಯ ಈ 'ಮಾಲೆ' ಧರಿಸುವ ಆಚರಣೆಯು ಶಬರಿಮಲೆ ಸ್ವಾಮಿ ಅಯ್ಯಪ್ಪ ದೇವರಿಗೆ ಹಾಕುವ 'ಮಾಲೆ'ಯನ್ನು ಹೋಲುತ್ತದೆ. ದಕ್ಷಿಣ ಭಾರತದಾದ್ಯಂತ ಅಯ್ಯಪ್ಪನ ಭಕ್ತರು ಒಂದೇ ರೀತಿಯ ಸಮವಸ್ತ್ರಧರಿಸಿ ಸಂಕ್ರಾಂತಿಯಂದು ಶಬರಿ ಮಲೆಗೆ ಹೋಗುವುದನ್ನು ನೋಡಿದರೆ ಕೊಟ್ಟೂರು ಮತ್ತು ನಾಯಕನಟ್ಟಿಗಳಲ್ಲಿ ಇದನ್ನು ಅನುಸರಿಸುವ ಪ್ರಯತ್ನ ಮಾಡುತ್ತಿದ್ದಾರೆ ಎನಿಸುತ್ತದೆ. ಇದನ್ನು ಮೊಟ್ಟಮೊದಲು ಆರಂಭಿಸಿದ ಕೊಟ್ಟೂರಿನ ಚಾನುಕೋಟಿ ಶ್ರೀ ಸಿದ್ದಲಿಂಗ ಸ್ವಾಮಿಗಳ ಪ್ರಕಾರ 'ಇದು ಬೇರೆ ಊರಿನ ಭಕ್ತರೊಂದಿಗೆ ಕೊಟ್ಟೂರ ಗುರುಬಸವನನ್ನು ಆಪ್ತಗೊಳಿಸುವ ಹಾಗೂ ಮಾಲೆ ಧರಿಸಿದವರೆಲ್ಲ ನಮ್ಮವರು ಎಂದು ಗುರುತಿಸುವ, ಕೊಟ್ಟೂರ ಗುರುಬಸವನನ್ನು ಜಾತಿ ಬೇಧವಿಲ್ಲದೆ, ಬಡವ-ಶ್ರೀಮಂತ ಎನ್ನದೆ ಎಲ್ಲರ ಹತ್ತಿರವೂ ಒಯ್ಯುವ ಪ್ರಯತ್ನದಿಂದಾಗಿ ಮಾಡಿ ಎಂದಿದೆ' ಎನ್ನುತ್ತಾರೆ.

ಹಾಗೆ ಹೊಸದಾಗಿ ಬಂದು ಸೇರಿದ ಮತ್ತೊಂದು ಆಚರಣೆ ಎಂದರೆ ಕೊಟ್ಟೂರ ಕಾರ್ತಿಕೋತ್ಸವದಂದು ನಡೆಯುವ 'ಲಕ್ಷದೀಪೋತ್ಸವ.' ಅಪಾರ ಖರ್ಚು-ವೆಚ್ಚಗಳನ್ನು ಉಂಟುಮಾಡುವ ಈ ಆಚರಣೆ ೧೯೯೨ರಿಂದ ಜಾರಿಗೆ ಬಂದಿದೆ. ಕೊಟ್ಟೂರಿನ ದೇವಾಲಯಕ್ಕೆ ೩೨ ಲಕ್ಷ ರೂಪಾಯಿಗಳನ್ನು ಖರ್ಚುಮಾಡಿ ೨೦೦೩ರಲ್ಲಿ ಬೆಳ್ಳಿರಥವನ್ನೂ ಮಾಡಿಸಲಾಗಿದೆ. ಕಾರ್ತಿಕೋತ್ಸವದಂದು ಉತ್ಸವ ಮೂರ್ತಿಯನ್ನು

ಪಲ್ಲಕ್ಕಿಯಲ್ಲಿಟ್ಟು ಮೆರವಣಿಗೆ ಪದ್ಧತಿಯು ೨೦೦೩ ರಿಂದ ಬೆಳ್ಳಿರಥದಲ್ಲಿಟ್ಟು ಮೆರವಣಿಗೆ ಮಾಡುವ ಪದ್ಧತಿಯಾಗಿ ಮಾರ್ಪಟ್ಟಿದೆ. ಬೆಂಗಳೂರಿನಲ್ಲೊಂದು ಕೊಟ್ಟೂರ ಗುರುಬಸವನಿಗೆ ದೇವಾಲಯ ಕಟ್ಟಲು ಪ್ರಯತ್ನಿಸಲಾಗುತ್ತಿದೆ. ಅದಕ್ಕಾಗಿ ಜಿಲ್ಲೆಯ ರಾಜಕಾರಣಿಗಳನ್ನು ಸೇರಿಸಿ ಬೆಂಗಳೂರಿನಲ್ಲೊಂದು ಬೃಹತ್ ಸಮಾರಂಭವನ್ನು ಮಾಡಲಾಗಿದೆ.

ಹುಚ್ಚನಂತೆ ಬಂದ ಕೊಟ್ಟೂರ ಗುರುಬಸವ ಪಡೆದುಕೊಳ್ಳುತ್ತಿರುವ ರೂಪಾಂತರ, ರಾಯದುರ್ಗದಲ್ಲಿ ಕೆಂಪಯ್ಯನ ಆಡಂಬರವನ್ನು ಗೇಲಿ ಮಾಡಿದ ತಿಪ್ಪೇಸ್ವಾಮಿ ಆಚರಣೆಗಳು ಇವತ್ತು ಪಡೆದುಕೊಳ್ಳುತ್ತಿರುವ ವೈಭವ, ಗೋಣಿಬಸವನ ಭಕ್ತರ ಸಂದಿಗ್ಧತೆ ಇವೆಲ್ಲ ಸಂಸ್ಕೃತಿ ಚರಿತ್ರೆಯಲ್ಲಿ ತಪ್ಪಿಸಿಕೊಳ್ಳಲಾಗದ ಬೆಳವಣಿಗೆಗಳು ಅನ್ನಿಸುತ್ತದೆ. ಒಟ್ಟಾರೆ ನಾಥಸಿದ್ಧ, ಶೈವಸಿದ್ಧ ಸೂಫಿಸಿದ್ದರಿಂದ ಪ್ರಭಾವ ಪಡೆದು ಚಾರಿತ್ರಿಕ ಮತ್ತು ಸಮಕಾಲೀನ ಒತ್ತಡಗಳಿಂದಾಗಿ ಪಂಚಗಣಾಧೀಶ್ವರ ಪಂಥವು ಹೊಸ ಹೊಸ ರೂಪವನ್ನು ಪಡೆಯುತ್ತಿದೆ.

## ಅಧ್ಯಾಯ ೪

# ಗಣಪರಿಕಲ್ಪನೆ

೪.೧. ಗಣ ಎಂದರೇನು?

೪.೨. ಗಣ ಮತ್ತು ಕುಲ ಸಂಬಂಧಗಳು

೪.೩. ವೀರಶೈವ ಪರಿಭಾಷಿಕ ಪದವಾಗಿ ಗಣ, ಗಣಂಗಳು

೪.೪. ೧೨ನೇ ಶತಮಾನದ ಗಣತತ್ವಗಳು

೪.೪.೧. ಇಷ್ಟಲಿಂಗ

೪.೪.೨. ಕಾಯಕ-ದಾಸೋಹ

೪.೪.೩. ಸ್ತ್ರೀ ಸಮಾನತೆ

೪.೫. ವಿವಿಧ ಗಣ ಸಮೂಹಗಳು

೪.೬. ಪಂಚಗಣಾಧೀಶ್ವರರ ಪರಿಕಲ್ಪನೆ

# ಗಣಪರಿಕಲ್ಪನೆ

ಪಂಚಗಣಾಧೀಶ್ವರರ ಜೀವನ ವಿವರವನ್ನು ತಿಳಿದುಕೊಳ್ಳುವ ಮೊದಲು 'ಗಣ' ಎಂದರೇನು? 'ಗಣ'ದ ಮೂಲಾರ್ಥವೇನು? ವೀರಶೈವ ಪಾರಿಭಾಷಿಕ ಪದವಾಗಿ 'ಗಣ' ಎನ್ನುವ ಪದ ಪಡೆದುಕೊಂಡ ರೂಪಾಂತರ ಎಂತಹುದು? ಪಂಚಗಣಾಧೀಶ್ವರರಿಗೂ ಈ ಗಣ ಪದಕ್ಕೂ ಇರುವ ಸಂಬಂಧ ಎಂತಹುದು? ಪಂಚಗಣಾಧೀಶ್ವರರು ಯಾರು? ಇವುಗಳನ್ನು ವಿರಚಿಸಿಕೊಳ್ಳುವುದು ಅಗತ್ಯವಾಗಿದೆ.

## ೪.೧. ಗಣ ಎಂದರೇನು?

ಪ್ರಾಚೀನ ಭಾರತದ ಇತಿಹಾಸವನ್ನು ಗಮನಿಸಿದರೆ ಅದು ಈಗಿನಂತೆ ರಾಜಕೀಯವಾಗಿ, ಭೌಗೋಳಿಕವಾಗಿ ಒಂದಾಗಿ ಎಂದೂ ಗುರುತಿಸಿಕೊಂಡಿಲ್ಲ. ಅಂದಿನ ಜೀವನ ಸಾಮೂಹಿಕವಾಗಿ ಶ್ರಮಪಡುತ್ತಾ, ಸಾಮೂಹಿಕ ವಾಗಿ ಅನುಭೋಗಿಸುತ್ತಾ ಬದುಕುತ್ತಿದ್ದುದು ಕಂಡುಬರುತ್ತದೆ. ಇದಕ್ಕೆ ಉತ್ಪಾದನಾ ವಿಧಾನದಲ್ಲಿ ವೈವಿಧ್ಯತೆ ಇಲ್ಲದಿದ್ದುದೂ ಕಾರಣವಾಗಿದೆ. ಏನನ್ನಾದರೂ ಪಡೆಯಬೇಕಿದ್ದರೆ ಅದು ಸಾಮೂಹಿಕ ಶ್ರಮದಿಂದ ಮಾತ್ರ ಸಾಧ್ಯವಾಗಿತ್ತು. ಹೀಗೆ ಬದುಕುತ್ತಿದ್ದ ಹಲವಾರು ಗುಂಪುಗಳು ಅಂದು ಅಸ್ತಿತ್ವದಲ್ಲಿದ್ದವು. ಇಂತಹ 'ಶಕ್ತಿಯುತವಾದ ಕ್ರಿಯಾಶಾಲಿ ಸ್ವಾವಲಂಬಿ ಗುಂಪುಗಳನ್ನೇ ಏಂಜಲ್ಸ್ 'ಗಣ' ಎಂದು ಗುರುತಿಸುತ್ತಾನೆ.'(ಎಸ್.ಎ.ಡಾಂಗೆ ೧೯೮೩ ಪುಟ.೩೮) ಈ ಗಣ ವ್ಯವಸ್ಥೆಯಲ್ಲಿ ಪ್ರತ್ಯೇಕವಾದ ರಾಜ್ಯವ್ಯವಸ್ಥೆಯಾಗಲಿ ನಿರ್ದಿಷ್ಟ ಪ್ರದೇಶವಾಗಲೀ, ಸ್ವಂತ ಆಸ್ತಿಯಾಗಲೀ, ವರ್ಗವ್ಯವಸ್ಥೆಯಾಗಲೀ ಇರಲಿಲ್ಲ. ಇಲ್ಲಿ ಸಾಮೂಹಿಕ ಜವಾಬ್ದಾರಿ ಎನ್ನುವುದಿತ್ತು. ಗಣದ ಸದಸ್ಯತನವು ವಂಶಪರಂಪರೆಯಿಂದ ಅಥವಾ ರಕ್ತ ಸಂಬಂಧಗಳಿಂದ ನಿರ್ಧಾರವಾಗುತ್ತಿತ್ತು. ಯಜ್ಞ ಪದ್ಧತಿಯಲ್ಲಿಯೂ ಕೂಡ ಎಲ್ಲರೂ ರಕ್ತ ಸಂಬಂಧಿಗಳಾಗಿದ್ದು, ಅದು ಆರ್ಯರು ಗುರುತಿಸಿದ ಒಂದು ಗಣ ವ್ಯವಸ್ಥೆಯಾಗಿತ್ತು.

ಈ ಗಣ ವ್ಯವಸ್ಥೆಯು ಮಾತೃ ಪ್ರಧಾನ ಸಮಾಜವಾಗಿತ್ತು. ಇಲ್ಲಿ ಪುರುಷರಿಗಿಂತ ಸ್ತ್ರೀ ಮುಖ್ಯಳಾಗಿದ್ದಳು. ಇಲ್ಲಿ ಹುಟ್ಟಿದ ಮಕ್ಕಳನ್ನು ತಾಯಿಯ ಮೂಲಕವೇ ಗುರುತಿಸಲಾಗಿತ್ತು. ಇದಕ್ಕೆ ಮುಖ್ಯವಾಗಿ ಸ್ತ್ರೀ ಎಷ್ಟು ಮಂದಿ ಗಂಡಸರೊಂದಿಗೆ ಬೇಕಾದರು ಮುಕ್ತವಾಗಿ ಲೈಂಗಿಕ ಸಂಕರ್ಪ ಪೊಂದುವುದು ಕಾರಣವಾಗಿತ್ತು. ಹಾಗಾಗಿ ಹುಟ್ಟಿದ ಮಕ್ಕಳೆಲ್ಲ ಇಡೀ ಗಣದ ಸ್ವತ್ತಾಗಿದ್ದರು. ಮಹಾಭಾರತದಲ್ಲಿ ಗುರುತಿಸಲ್ಪಟ್ಟಿರುವ ಹದಿನೆಂಟು ಗಣಗಳು ಬೆಳೆದು ಬಂದಿರುವುದೂ ಹದಿನೆಂಟು ಸ್ತ್ರೀಯರಿಂದಲೇ. ಆ ಗಣಗಳು ಮತ್ತು ಮೂಲ ಸ್ತ್ರೀಯರೆಂದರೆ, ೧. ಅದಿತ್ಯರು(ಅದಿತಿ), ೨. ದೈತ್ಯರು(ದಿತಿ),

೩. ದಾನವರು(ದನು), ೪. ಕಾಲಕೇಯರು(ಕಾಲ), ೫. ವೈನತೇಯರು(ವಿನತ), ೬. ಕದ್ರುವೇಯರು(ಕದು), ೭. ಮೌನೇಯರು(ಮುನಿ), ೮. ಪ್ರಧೇಯರು(ಪ್ರಧಾ), ೯. ಕಪಿಲರು(ಕಪಿಲಾ), ೧೦. ಕಾರ್ತಿಕೇಯರು(ಕೃತ್ತಿಕಾ), ೧೧. ಸೈನ್ಹಿಕೇಯರು(ಸಿನ್ಹಿಕಾ), ೧೨. ಪೌಲೋಮರು(ಪ್ರತೋಮ), ೧೩. ವಾಸವರು(ವಸು), ೧೪. ವಿಶ್ವರು(ವಿಶ್ವಾ), ೧೫.ಮರುತ್ಮಂತರು (ಮರುತ್ಮನಿ), ೧೬. ಭಾನವರು(ಭಾನು), ೧೭. ಮುಹೂರ್ತರು(ಮುಹೂರ್ತ), ೧೮. ಸಾದ್ಯರು(ಸಾದ್ಯ) (ಅದೇ, ಅನುಬಂಧ)

ಗಣ ಪದ್ಧತಿಯ ಕೆಲವು ಮುಖ್ಯ ಲಕ್ಷಣಗಳೆಂದರೆ 'ಸಾಮೂಹಿಕ ಶ್ರಮ ಮತ್ತು ಸಾಮೂಹಿಕ ಅನುಭೋಗ' ಇಲ್ಲಿ ವ್ಯಕ್ತಿಗತ ಎನ್ನುವುದಾವುದೂ ಇರಲಿಲ್ಲ. ಯಜ್ಞ ಮತ್ತಿತರ ಸಂದರ್ಭಗಳಲ್ಲಿ ಗಣವನ್ನು ಸಂಘಟಿಸುವ ಕೆಲಸ ಕಾರ್ಯಗಳನ್ನು ನಿರ್ದೇಶಿಸಲು ಒಬ್ಬನನ್ನು ಮೇಲ್ವಿಚಾರಕನನ್ನಾಗಿ ನೇಮಿಸಲಾಗುತ್ತಿತ್ತು. ಕೆಲಸ ಮುಗಿದ ತಕ್ಷಣ ಮೇಲ್ವಿಚಾರಕನ ಹುದ್ದೆ ಕರಗಿ ಅವನು ಗುಂಪಿನ ಸದಸ್ಯನಾಗುತ್ತಿದ್ದ. 'ಜನಾಭಿಪ್ರಾಯ ಮತ್ತು ಸಾಮಾಜಿಕ ಅಗತ್ಯಗಳ ಕಾರಣದಿಂದಾಗಿ ಪ್ರತಿಯೊಬ್ಬನೂ ತನ್ನ ಸಾಮೂಹಿಕ ಜವಾಬ್ದಾರಿಗೆ ಬದ್ಧನಾಗಿದ್ದ. ಸಣ್ಣ ಸಣ್ಣ ತಪ್ಪುಗಳನ್ನು ಎಲ್ಲರೂ ಒಟ್ಟಾಗಿ ಸರಿಪಡಿಸುತ್ತಿದ್ದರು. ಗಣದ ಸದಸ್ಯನನ್ನು ಕೊಲೆ ಮಾಡುವಂತಹ ಯಾವುದೇ ದೊಡ್ಡ ಅಪರಾಧಕ್ಕೆ ಗಡಿಪಾರು ಶಿಕ್ಷೆ ಕಾದಿತ್ತು. ಒಬ್ಬಂಟಿಯಾಗಿ ಕಾನೂನನ್ನು ಜಾರಿಗೊಳಿಸಲು ಬೇಕಾಗುವ ವ್ಯವಸ್ಥೆ ಅಥವಾ ಸೈನ್ಯ ಇಲ್ಲದಿದ್ದುದರಿಂದ ಅಲ್ಲಿ ತೆರಿಗೆಯೂ ಇರಲಿಲ್ಲ. ನೇರವಾಗಿ ಉತ್ಪಾದನೆಯಲ್ಲಿ ಭಾಗವಹಿಸದಿದ್ದರೂ ಮುದುಕರಿಗೆ, ಮತ್ತು ಮಕ್ಕಳಿಗೆ ಕೊಡುವಂತೆ ಸದಸ್ಯರಿಂದ ಆರಿಸಲ್ಪಟ್ಟ ಮೇಲ್ವಿಚಾರಕರಿಗೂ ಶ್ರಮದ ಫಲವನ್ನು ಕೊಡಲಾಗುತ್ತಿತ್ತು.(ಅದೇ, ಪು.೩೮-೩೯)

'ಗಣ' ಎನ್ನುವ ಪದವು ಸಂಸ್ಕೃತದ 'ಜನೆ' ಧಾತುವಿನಿಂದ ಹುಟ್ಟಿದೆ. ಇದರ ಅರ್ಥ 'ಹುಟ್ಟಿಸು, ಉತ್ಪಾದಿಸು' ಎಂದಾಗಿದೆ. ಈ ಪದಗಳು ಮನುಷ್ಯನಿಗೆ ಮುಖ್ಯವಾಗಿರುವ ಲೈಂಗಿಕ ಮತ್ತು ಆರ್ಥಿಕ ಅರ್ಥವನ್ನು ಕೊಡುತ್ತಿವೆ. ಯಜ್ಞ ಎನ್ನುವ ಪದವೂ ಇದನ್ನೇ ಸೂಚಿಸುತ್ತಿದೆ. 'ಯಜ್ಞವೆಂದರೆ ವಸ್ತುಗಳನ್ನು ಮತ್ತು ಮನುಷ್ಯರನ್ನು ಸೃಷ್ಟಿಸುವ ಒಂದು ಸಂಘಟನಾತ್ಮಕ ಉತ್ಪಾದನಾ ವಿಧಾನವಾಗಿದೆ.(ಅದೇ, ಪು.೨೭)

'ಮಾರ್ಗನರು' ಲೈಂಗಿಕ ವ್ಯವಸ್ಥೆಗೆ ಸಾಮಾನ್ಯವಾಗಿ ಉಪಯೋಗಿಸಿದ 'ಜೆನ್ '(Gen) ಎಂಬ ಲ್ಯಾಟಿನ್ ಶಬ್ದವು ಗ್ರೀಕ್ ಮೂಲದ ಜೆನೋಸ್ (Genos) ಎಂಬ ಶಬ್ದದಿಂದ ಬಂದಿದೆ. ಇದರ ಮೂಲವು ಸಂಸ್ಕೃತದ 'ಜನ್' ಎಂದರೆ ಸೃಷ್ಟಿಸು ಎನ್ನುವುದೇ ಆಗಿದೆ.'(ಅದೇ, ಪು.೪೧) ಪ್ಲೇಟ್‌ರಂತಹ ಪಾಶ್ಚಾತ್ಯ ವಿದ್ವಾಂಸರು 'ಗಣ' ಪದಕ್ಕೆ ಟ್ರೈಬ್ (ಬುಡಕಟ್ಟು) ಎಂಬ ಅರ್ಥವನ್ನು ನೀಡಿರುವುದುಂಟು.

ಗಣಗಳ ಜೀವನವಿಧಾನವೇ ಬುಡಕಟ್ಟುಗಳ ಜೀವನವಿಧಾನವೂ ಆಗಿರುವುದರಿಂದ ಇವೆರೆಡು ಒಂದೇ ಆಗಿದೆ. ಇಂತಹ ಗಣಗಳ ಒಳಗಡೆ ಕುಲಗಳಿದ್ದು, ಒಂದೊಂದಕ್ಕೂ ಪೂರ್ವಿಕವೆನಿಸುವ ಒಂದು

ಲಾಂಛನವಿದೆ. ಇದನ್ನೇ ಪಾಶ್ಚಾತ್ಯ ಭಾಷೆಯಲ್ಲಿ ಟೋಟೆಂಮ್ ಎನ್ನಲಾಗಿದೆ. ಜಾನಪದರು ಇಂತಹ ಲಾಂಛನಗಳನ್ನು ಬೆಡಗು-ಬಳಿ-ಪಡಿ, ನಾತಿಗೋತಿ ಇತ್ಯಾದಿಯಾಗಿ ಕರೆಯುತ್ತಾರೆ.(ಪಿ.ಎಸ್.ಪಾಟೀಲ್, ೨೦೦೦, ಪು.೩)

## ೪.೨. ಗಣ-ಕುಲ(ಗೋತ್ರ) ಸಂಬಂಧಗಳು

ಈ ಕುಲಗಳು ಹೇಗೆ ಹುಟ್ಟಿಕೊಂಡವು? ಈ ಕುಲ ಲಾಂಛನಗಳು ಹೇಗೆ ನಿರ್ಮಾಣವಾದವು? ಎನ್ನುವ ಕುರಿತು ಡಿ.ಡಿ. ಕೋಸಾಂಬಿಯವರು Introduction to the study of Indian History ಪುಸ್ತಕದಲ್ಲಿ ಚರ್ಚಿಸಿದ್ದಾರೆ.

ಆಹಾರ ಸಂಗ್ರಹಣೆಗಾಗಿ ಬೇಟೆಯಾಡಿ ಜೀವಿಸಬೇಕಿದ್ದ ಪ್ರಾಚೀನರು ಪರಾವಲಂಬಿಗಳಾಗಿ ಗುಂಪು-ಗುಂಪುಗಳಾಗಿ ಬದುಕುವುದು ಅನಿವಾರ್ಯವಾಗಿತ್ತು. ಇದು ಪ್ರತಿಯೊಬ್ಬರಿಗೂ ರಕ್ಷಣೆ ನೀಡುತ್ತಿದ್ದುದಲ್ಲದೆ, ಗುಂಪಿನಲ್ಲಿ ಆಹಾರ ಸಿಗದವರಿಗೆ ಹಂಚಿಕೊಳ್ಳುವ ಅವಕಾಶವನ್ನು ಒದಗಿಸುತ್ತಿತ್ತು. ಪರಸ್ಪರ ಹಂಚಿಕೊಳ್ಳುವ ಈ ಗುಂಪುಗಳು ವ್ಯವಸ್ಥೀಕೃತಗೊಂಡಾಗ ಪ್ರಮುಖವಾಗಿ ಎರಡು ಅಂಶಗಳು ನಿರ್ಮಾಣಗೊಂಡವು. '೧. ಆಹಾರವನ್ನು ಹಂಚಿಕೊಳ್ಳುವ ಕ್ರಿಯೆ ಅನಿವಾರ್ಯ ಸಂಪ್ರದಾಯವಾಗಿ ರೂಪುಗೊಳ್ಳುವುದು, ೨. ಲೈಂಗಿಕ ಸಂಬಂಧಗಳು ಹೊರಗಿನ ಗುಂಪುಗಳೊಂದಿಗೆ ನಿಷಿದ್ಧವೆಂಬುದನ್ನು ಒಪ್ಪಿಕೊಳ್ಳುವುದು. ಅಂದರೆ ಒಂದು ಗುಂಪಿನ ಸ್ತ್ರಿ ಪುರುಷರು ಇನ್ನೊಂದು ಗುಂಪಿನವರೊಂದಿಗೆ(ತಮ್ಮ ಗುಂಪಿಗೆ ಸೇರಿದವರೊಂದಿಗೆ) ಬೆರೆಯುವುದು ನಿಷಿದ್ಧವೆನಿಸುತ್ತದೆ. ಆಯಾ ಗುಂಪಿನವರು ತಮ್ಮ ಗುಂಪಿನವರೊಂದಿಗೆ ಮಾತ್ರವೇ ಲೈಂಗಿಕ ಸಂಬಂಧಗಳನ್ನು ಇರಿಸಿಕೊಳ್ಳಬೇಕು.'(ಎಚ್.ಎಸ್.ಶ್ರೀಮತಿ(ಅನು), ೧೯೯೮, ಪು.೨೯).

ಈ ರೀತಿಯ ಗುಂಪು, ಅಥವಾ ಗಣಗಳು ನಿಗದಿತ ಸ್ಥಳದಲ್ಲಿಯೇ ಸಂಚಾರ ಮಾಡುತ್ತಿದ್ದುದರಿಂದ ಅಲ್ಲಿ ಸಿಗುವ ಪ್ರಾಣಿ, ಹಣ್ಣು ಹಂಪಲಗಳಿಗೆ ಹೊಂದಿಕೊಳ್ಳಬೇಕಾಗುತ್ತದೆ. ಇದರಿಂದಾಗಿ ಆಹಾರದಲ್ಲಿ ಪ್ರಧಾನ ವೈವಿಧ್ಯತೆ ಕಂಡುಬರುತ್ತಿರಲಿಲ್ಲ. ಸಿಗುವ ಆಹಾರವನ್ನು ಸಂಗ್ರಹಿಸುವ ಇಲ್ಲವೆ ಪ್ರಾವಿಣ್ಯತೆಗಳಿಸಿಕೊಳ್ಳುವ ಮೂಲಕ ಉತ್ಪಾದನೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದರು. ಈ ರೀತಿಯ ಉತ್ಪಾದನೆ ನಿರ್ದಿಷ್ಟವಾದ ಸಸ್ಯಹಾರ ಇಲ್ಲವೇ ಮಾಂಸಹಾರಕ್ಕೆ ಸೀಮಿತವಾಗಿರುತ್ತಿತ್ತು. 'ಹೀಗೆ ಒಂದು ಸಮುದಾಯ ತನಗೆ ಮಾತ್ರ ವಿಶಿಷ್ಟವೆನಿಸಿದ ಪದಾರ್ಥವನ್ನು (ಕಾಳು-ಕಡ್ಡಿಯೋ, ಹಣ್ಣು-ಹಂಪಲೋ, ಯಾವುದೇ ಪ್ರಾಣಿ ಇರಬಹುದು) ಗುರುತಿಸಿ, ಅದನ್ನು ತನ್ನ ಅಂಕಿತವೆಂದು ಭಾವಿಸಿ ತಿಳಿಯಲಾರಂಭಿಸುತ್ತದೆ. ಆ ಸಮುದಾಯಕ್ಕೆ ಹೀಗೆ ಅಂಕಿತವೆನಿಸಿದ ಆಹಾರ ಪದಾರ್ಥದೊಂದಿಗಿನ ಸಂಬಂಧ ಕೇವಲ ಭೋಜನ-ಭೋಕ್ತ ಸಂಬಂಧ ಮಾತ್ರವೆ ಎಂಬಂತೆ ನಿಲ್ಲದೆ ಒಂದು ಬಗೆಯ ಆಧ್ಯಾತ್ಮ ಸಂಬಂಧವಿರುವಂತೆ ತೋರತೊಡಗುತ್ತದೆ. ಆಗ ತಾವೆಲ್ಲರೂ ಅದರ ಅಂಶವೆ ಎಂಬಂತೆಯೂ ಅದರೊಂದಿಗೆ ತಾವು

ಸಹಧರ್ಮಿಗಳೆಂದೂ ಆ ಸಮುದಾಯದವರು ಒಪ್ಪಿಕೊಳ್ಳುತ್ತಾರೆ. ಅದನ್ನೇ ಪೂಜಿಸುತ್ತಾರೆ.'(ಎಚ್.ಎಸ್. ಶ್ರೀಮತಿ(ಅನು), ೧೯೯೮, ಪು.೩೦) ಹೀಗೆ ಆಹಾರ ಪದ್ಧತಿಯಲ್ಲಿ ಬರುವ ಸಸ್ಯವನ್ನೋ, ಪ್ರಾಣಿಯನ್ನೋ ಪೂಜಿಸುವುದರಿಂದ ಅದನ್ನು ಪಡೆಯುವಲ್ಲಿ ಸಫಲರಾಗುತ್ತೇವೆ ಎಂದು ನಂಬುತ್ತಾರೆ.

ನಂತರದಲ್ಲಿ ಅರಣ್ಯ ಸಮುದಾಯಗಳ ಆಹಾರ ಸಂಗ್ರಹಣ ವಿಧಾನವು ಕೃಷಿ ಸಮಾಜವಾಗಿ ರೂಪುಗೊಂಡಾಗ ಅವರ ಸಮುದಾಯದ ಅಂಕಿತಗಳು ಮನೆಯ ಹೆಸರಾಗಿ ಉಳಿದುಕೊಂಡವು. ಇಂತಹ ಕುಲ ಅಥವಾ ಗೋತ್ರಗಳ ಪಟ್ಟಿಯನ್ನು ಅಶ್ವಲಾಯನ ಶ್ರೌತ ಸೂತ್ರಗಳಲ್ಲಿ ಕೊಟ್ಟಿದ್ದು ಅವುಗಳನ್ನು ದೇವಿ ಪ್ರಸಾದ ಚಟ್ಟೋಪಾಧ್ಯಾಯ ಅವರು 'ಲೋಕಾಯುತ'ದಲ್ಲಿ ನಮೂದಿಸಿದ್ದಾರೆ. 'ವತ್ಸ(ಕರುಗಳು), ಶುನಕ(ನಾಯಿಗಳು), ರಿಕ್ಷ(ಕರಡಿ), ಭಾರದ್ವಜ(ಒಂದು ರೀತಿಯ ಹಕ್ಕಿ), ಮುದ್ಗಲ(ಒಂದು ರೀತಿಯ ಮೀನು), ಕಪಿ(ಕೋತಿಗಳು), ಅಜ(ಆಡುಗಳು), ರೇಣು(ಪರಾಗ ರೇಣುಗಳು), ಗೌತಮ(ಆಕಳುಗಳು), ವೇಣು(ಬಿದುರು), ಕಾಶ್ಯಪ(ಆಮೆ), ಶೌಂಡಿಲ್ಯ(ಒಂದು ರೀತಿಯ ಹಕ್ಕಿ), ಕುಶಿಕ(ಗೂಬೆ), ಮಂಡೂಕ(ಕಪ್ಪೆ), ದಾರ್ಭಾ(ಹುಲ್ಲು), ತಿತ್ತರ(ಗಿಳಿ)'(ಪುರಾಣಂ ಸುಬ್ರಹ್ಮಣ್ಯ ಶರ್ಮಾ(ಅನು), ೨೦೦೦, ಪು.೩೭). ಈ ಎಲ್ಲ ಗೋತ್ರಗಳು ಆಯಾ ಪ್ರಾಣಿಗಳನ್ನು ಸಮುದಾಯ ಅಂಕಿತ ಚಿಹ್ನೆಯಾಗಿ ಪಡೆದಿದ್ದ ಅರಣ್ಯವಾಸಿಗಳದ್ದಾಗಿವೆ. ಅರಣ್ಯ ಸಮುದಾಯಗಳ ಜ್ಞಾನ, ಆರ್ಥಿಕತೆ, ಸಂಖ್ಯಾಬಲ ಬೆಳೆದಂತೆ, ಬೇಟೆಯ ಅಭ್ಯಾಸವನ್ನು ಬಿಟ್ಟು ಬೇರೆ ರೀತಿಯಲ್ಲಿ ದುಡಿಯುವಂತಾದಾಗ ಅವರ ಸಮುದಾಯಗಳ ಚಿಹ್ನೆಗಳು ಅವರ ಮನೆಯ ಚಿಹ್ನೆಗಳಾದವು. ಈ ಮನೆತನದ ಚಿಹ್ನೆಗಳು(ಗೋತ್ರ)ಗಣದ ಸರ್ವಸ್ವವಾಗಿತ್ತು. ಏಕೆಂದರೆ ಗೋತ್ರದಲ್ಲಿನ ಎಲ್ಲರೂ ರಕ್ತ ಸಂಬಂಧಿಗಳು. ವೈರಿಗಳೇ ಇರಲಿಲ್ಲ. ಆದಿ ಆರ್ಯರ 'ಯಜ್ಞ' ಸಮುದಾಯಕ್ಕೆ ತನ್ನ ಗೋತ್ರಕ್ಕಿಂತ ಹೊರಗಿನ, ತನ್ನ ಅಗ್ನಿಗಿಂತ ದೂರವಾದ ವೈವಾಹಿಕ ಸಂಬಂಧವನ್ನು ಕಲ್ಪಿಸಿಕೊಳ್ಳಲೂ ಕೂಡ ಸಾಧ್ಯವಿರಲಿಲ್ಲ. ಹೀಗಾಗಿ ಜೀವನಾವಶ್ಯಕ ವಸ್ತುಗಳನ್ನು ಉತ್ಪಾದಿಸಲು, ಬೇಟೆಯಾಡಲು ಗೋತ್ರವು ಮೂಲಾಧಾರವಾಗಿತ್ತು. ಲೈಂಗಿಕ ಸಂಬಂಧಗಳು ಕೂಡ 'ಸಗೋತ್ರ'ದಲ್ಲಿಯೇ ಹೊಂದಿರ ಬೇಕಾಗುತ್ತಿತ್ತು.

ಈ ರೀತಿ ಚಿಹ್ನೆಯನ್ನು ಹೊಂದಿರುವ ಒಂದೊಂದು ಗೋತ್ರಕ್ಕೂ ಒಬ್ಬೊಬ್ಬ ಅಧಿನಾಯಕನಿರುತ್ತಾನೆ. ಆತನಿಗೆ ಗಣಾಧಿಪತಿ, ಗಣಪತಿ, ಗಣನಾಯಕ ಎನ್ನಲಾಗುತ್ತಿತ್ತು. ಈಗ ಪೂಜಿಸಲ್ಪಡುತ್ತಿರುವ ಗಣಪತಿ ಒಬ್ಬನೇ ಅಲ್ಲ. ಈ ರೀತಿಯ ಗಣಪತಿಗಳು ಪ್ರತಿ ಗುಂಪಿನಲ್ಲೂ ಇರುತ್ತಿದ್ದರು. 'ವಾಜಸನೇಯ ಸಂಹಿತೆಯಲ್ಲಿ ಗಣಪತಿಗಳು ಎಂಬ ಬಹುವಚನವನ್ನು ಉಪಯೋಗಿಸಿದ್ದಾರೆ. ಮಾನವಗೃಹ್ಯ ಸೂತ್ರಗಳಲ್ಲಿ ನಾಲ್ವರು ವಿನಾಯಕರಿದ್ದಂತೆ ಹೇಳಿರುವರು. ಯಾಜ್ಞಾವಲ್ಕ್ಯನು ಮಾತ್ರ ಗಣಪತಿಗಳು ಅಸಂಖ್ಯಾತವಾಗಿದ್ದಂತೆ ವರ್ಣಿಸಿರುವನು. ಮಹಾಭಾರತ ಸಹ ಈ ರೀತಿಯಲ್ಲಿಯೆ ಕಾಲಕ್ರಮೇಣ ನಾಲ್ವರು ವಿನಾಯಕರನ್ನು ಕುಗ್ಗಿಸಿ ಒಬ್ಬ ವಿನಾಯಕನೊಂದಿಗೆ ಸರಿಪಡಿಸಿಕೊಳ್ಳುವುದು ನಡೆದಿದೆಯೆಂದು ಭಂಡಾರಕರ್ ಅವರು ವ್ಯಾಖ್ಯಾನಿಸಿದ್ದಾರೆ.'(ಪುರಾಣಂ ಸುಬ್ರಹ್ಮಣ್ಯ ಶರ್ಮಾ(ಅನು), ೨೦೦೦, ಪು.೧೩)

ಗಣಪತಿಗಳು ಯಾವುದಾದರೂ ಚಿಹ್ನೆಯನ್ನು ಹೊಂದಿರಬಹುದಾಗಿತ್ತು. ಕೆಲವರು ಎತ್ತನ್ನು ಸಂಕೇತವಾಗಿ ಹೊಂದಿದ್ದರೆ, ಇನ್ನು ಕೆಲವರು ಹಾವಿನ ಸಂಕೇತವನ್ನು ಹೊಂದಿದ್ದರು. 'ಗ್ರೀಕ್ ಇತಿಹಾಸಕಾರರ ಪ್ರಕಾರ ಅಲೆಗ್ಸಾಂಡರ್ ದಂಡಯಾತ್ರೆಯ ಕಾಲಕ್ಕಾಗಲೆ ಇಲಿ ಸಂಕೇತ ಪಡೆದ ಗಣಗಳಿದ್ದಂತೆ ಸಾಕ್ಷ್ಯಾಧಾರಗಳಿರುವುವು. ಗ್ರೀಕ್ ಇತಿಹಾಸಕಾರರು ಈ ಇಲಿ ಸಂಕೇತ ಪಡೆದ ಪಂಗಡಗಳ ಬಗ್ಗೆ ಹೇಳಿದ್ದಾರೆ.(ಅದೇ, ಪು.೧೬)

ಮುಂದೆ ಅರಣ್ಯ ಸಮುದಾಯಗಳಲ್ಲಾದ ಮುಖ್ಯವಾದ ಬದಲಾವಣೆ ಎಂದರೆ ಹಲವಾರು ಸಮುದಾಯಗಳು ಆಹಾರ ಸಂಗ್ರಹಣೆಗಾಗಿ ಸಂಚರಿಸುತ್ತಿರುವಾಗ ಒಂದೆಡೆ ಸೇರಿ ಅವೆಲ್ಲವೂ(ಅಂದರೆ ವಿವಿಧ ಚಿಹ್ನೆ ಹೊಂದಿದ ಗಣ-ಗೋತ್ರಗಳು) ಕೂಡಿ ಬಾಳಲಾರಂಭಿಸಿ ಒಂದು ವೈವಿಧ್ಯಮಯ ಬುಡಕಟ್ಟು ಅಥವಾ ಗಣವಾಗಿ ರೂಪು ತಳೆದದ್ದು. ವಿವಿಧ ಗಣ ಸಮುದಾಯಗಳು ಒಂದೆಡೆ ಸೇರಿದಾಗ ಅವರ ಮಧ್ಯದಲ್ಲಿ ಸಂಗ್ರಹಿಸಿದ ಆಹಾರದ ವಿನಿಮಯ ಆರಂಭವಾಯಿತು. ಇದರಿಂದಾಗಿ ಅವರು ಸೇವಿಸುವ ಆಹಾರದಲ್ಲಿ ವೈವಿಧ್ಯತೆ ಹೆಚ್ಚಾಯಿತು. ಲೈಂಗಿಕ ವಿಷಯದಲ್ಲಿ ಇದು ಸಾಕಷ್ಟು ವಿಚಿತ್ರವಾದ ಬದಲಾವಣೆಯನ್ನು ತಂದಿತು. ಬದಲಾದ ಈ ವಿಚಿತ್ರ ಪರಿಸ್ಥಿತಿಯನ್ನು ಡಿ.ಡಿ. ಕೋಸಾಂಬಿಯವರು ಈ ರೀತಿ ವಿವರಿಸುತ್ತಾರೆ. 'ಈವರೆಗೆ ಹೊರ ಸಮುದಾಯಗಳೊಂದಿಗೆ ಲೈಂಗಿಕ ಸಂಬಂಧವನ್ನು ಬೆಳೆಸುವುದು ನಿಷಿದ್ಧವೆನಿಸಿತ್ತು. ಆದರೆ ಈಗ ಗಣವೊಂದು ರೂಪು ತಳೆದ ಮೇಲೆ ಒಂದೇ ಸಮುದಾಯದ ಒಳಗೆ ಲೈಂಗಿಕ ಸಂಬಂಧಗಳು ನಿಷಿದ್ಧವೆನಿಸುತ್ತವೆ. ಸಮುದಾಯದೊಳಗೆ ಅಂತರ್‌ಸಂಬಂಧಗಳಾಗುವಂತಿಲ್ಲ. ಒಂದು ಸಮುದಾಯಕ್ಕೆ ಸೇರಿದವರೆಲ್ಲ 'ಸಗೋತ್ರ'ರೆನಿಸುತ್ತಾರೆ. ಆದರೆ ಒಟ್ಟು ಬುಡಕಟ್ಟು ತನ್ನಾಚೆಗಿನ ಸಂಬಂಧವನ್ನು ನಿಷೇಧಿಸುವ ನಿಯಮವನ್ನು ಪಾಲಿಸುತ್ತದೆ. ಅಂದರೆ ಒಂದು ಬುಡಕಟ್ಟಿನವರು ತಮ್ಮ ಬುಡಕಟ್ಟಿನದೆ ಇತರ ಸಮುದಾಯಗಳೊಂದಿಗೆ ಸಂಬಂಧ ಬೆಳೆಸಬೇಕೆ ಹೊರತು ಬೇರೆ ಬುಡಕಟ್ಟಿನ ಸಮುದಾಯಗಳೊಂದಿಗೆ ಸಂಬಂಧ ಬೆಳೆಸುವಂತಿಲ್ಲ. ಒಂದೇ ಬುಡಕಟ್ಟಿನ ಸಮುದಾಯಗಳ ನಡುವೆ ಸಾಮೂಹಿಕ ವಿವಾಹಗಳು ಕೂಡ ಈ ಹಂತದಲ್ಲಿ ಪ್ರಾರಂಭವಾಯಿತು'.(ಎಚ್.ಎಸ್.ಶ್ರೀಮತಿ(ಅನು), ೧೯೯೮, ಪು.೩೧) ಹೀಗೆ ಅತ್ಯಂತ ಅನಾಗರಿಕ ಹಂತದ ಅರಣ್ಯವಾಸಿಗಳು ತಮ್ಮ ನೂರಾರು ವರ್ಷಗಳ ಅನುಭವ ಮತ್ತು ಸೂಕ್ಷ್ಮಾವಲೋಕನದ ಮೂಲಕ 'ಸಗೋತ್ರ' ಮದುವೆಯನ್ನು ನಿಷೇಧಿಸಿ ಬೇರೊಂದು ಗೋತ್ರದೊಂದಿಗೆ ಸಂಬಂಧವನ್ನೇರ್ಪಡಿಸಿಕೊಳ್ಳಲು ಆರಂಭಿಸಿದರು.

ಈ ಹಂತದಲ್ಲಿ ವಿಚಿತ್ರವಾದ ಪದ್ಧತಿ ಆಹಾರ ಸೇವನೆಯಲ್ಲಿ ಆರಂಭವಾಯಿತು. ಈವರೆಗೆ ಯಾವ ಆಹಾರ, ಸಮುದಾಯದ(ಗಣ) ಅಥವಾ ಗೋತ್ರದ ಪ್ರಮುಖ ಆಧಾರವಾಗಿತ್ತೋ, ಯಾವುದು ಗೋತ್ರದ ಅಥವಾ ಮನೆತನದ ಚಿಹ್ನೆಯಾಗಿತ್ತೋ ಅದರ ಮೇಲೆ ಪೂಜ್ಯ ಭಾವನೆ ಬೆಳೆದು ಅದನ್ನು ತಿನ್ನುವುದು ಪಾಪ, ಅಶುಭ ಎನ್ನುವಂತಹ ಭಾವನೆ ಬೆಳೆಯಿತು. ಅಂದರೆ ಕಾಶ್ಯಪ(ಆಮೆ) ಗೋತ್ರದವರಿದ್ದಾರೆಂದರೆ ಅವರು ಆಮೆಗಳನ್ನು ಕೊಲ್ಲುವಂತಿಲ್ಲ. ಅದನ್ನು ಪೂಜಿಸಬೇಕು, ತಿನ್ನಬಾರದು ಎನ್ನುವಂತಹ ಆಚರಣೆಗಳು ಪ್ರಾರಂಭವಾದವು.

ಹೀಗೆ ಅರಣ್ಯ ಸಮುದಾಯಗಳು ಆಹಾರ ಉತ್ಪಾದನೆಗಾಗಿ, ಬೇಟೆಗಾಗಿ ಪರಾವಲಂಬಿಗಳಾಗಿ, ಗುಂಪಾಗಿ ಜೀವಿಸಲಾರಂಭಿಸಿದರು. ಹಾಗೆ ಜೀವಿಸುವಾಗ ತಮ್ಮ ಬದುಕಿಗೆ ಆಧಾರವಾದ ಆಹಾರವನ್ನೋ, ಪ್ರಾಣಿಯನ್ನೋ, ಸಂಕೇತವಾಗಿಸಿಕೊಂಡರು. ಒಂದುಗೂಡಿದ ಗುಂಪುಗಳು ಗಣಗಳಾದರೆ ಮುಂದೆ ಆ ಗಣಗಳು ಇನ್ನೊಂದು ಗಣದೊಂದಿಗೆ ಕಲಹವನ್ನೋ, ಹೊಂದಾಣಿಕೆಯನ್ನೋ ಮಾಡಿಕೊಂಡು ಬೆರೆತಾಗ ಒಂದೇ ಗಣದಲ್ಲಿ ಹಲವಾರು ಸಂಕೇತಗಳನ್ನು ಹೊಂದಿದ ಗುಂಪುಗಳು ನಿರ್ಮಾಣವಾದವು. ವೈವಿಧ್ಯಮಯ ಸಂಕೇತಗಳ ಗಣಗಳು ಒಂದೇ ಗಣದಲ್ಲಿ ಸೇರಿದಾಗ ಆ ಸಂಕೇತಗಳು ಮನೆತನದ ಚಿಹ್ನೆಗಳಾಗಿ ಗೋತ್ರಗಳೊ, ಕುಲಗಳೊ ಎನ್ನಿಸಿಕೊಂಡವು.

## ೪.೩. ವೀರಶೈವ ಪಾರಿಭಾಷಿಕ ಪದವಾಗಿ ಗಣ, ಗಣಂಗಳು

೧೨ನೇ ಶತಮಾನದ ವೀರಶೈವ ಚಳುವಳಿಯನ್ನು ಗಮನಿಸಿದರೆ ಜಾತಿ ತಾರತಮ್ಯಗಳಿಲ್ಲದೆ ಎಲ್ಲರೂ ಸಮಾನರು ಎನ್ನುವ ಭಾವನೆ ಶರಣರ ಆದರ್ಶವಾಗಿತ್ತು. ಅವರು ಭೋದಿಸಿ ಆಚರಣೆಗೆ ತಂದ ಕಾಯಕ, ದಾಸೋಹ, ಪದ್ಧತಿಗಳಾಗಲಿ, 'ಇಷ್ಟಲಿಂಗ'ದ ಪರಿಕಲ್ಪನೆಯಾಗಲೀ ಪ್ರಾಚೀನ ಅರಣ್ಯ ಸಮುದಾಯಗಳ 'ಗಣ' ಪದ್ಧತಿಯು ಒಳಗೊಂಡ ಲಕ್ಷಣವನ್ನು ಒಳಗೊಂಡಿದೆ. ವೀರಶೈವ ಚಳುವಳಿಯಲ್ಲಿ ಪ್ರಯೋಗಿಸಲ್ಪಟ್ಟ ಗಣ, ಗಣಂಗಳು, ಗಣಪದವಿ ಮುಂತಾದ ಪದಗಳ ಮೂಲ ಎಲ್ಲಿಯದು? ವೀರಶೈವ ಪುರಾಣ ಗ್ರಂಥಗಳಲ್ಲಿ ತಮ್ಮ ಕೃತಿಯ ನಾಯಕ ಕೈಲಾಸದಲ್ಲಿ ಒಬ್ಬ ಗಣನೊ ಗಣನಾಯಕನೊ ಆಗಿದ್ದು ಶಿವನಾಜ್ಞೆಯಿಂದ ಈ ಲೋಕದಲ್ಲಿ ಶಿವ ಭಕ್ತನಾಗಿ ಜನಿಸಿ ಮತ್ತೆ ಗಣಪದವಿಗೇರುವನು ಎಂದು ವರ್ಣಿಸಲಾಗಿದೆ. ಶರಣರ ವಚನಗಳನ್ನು ಸಂಗ್ರಹಿಸಿ ಕೃತಿ ರಚನೆ ಮಾಡಿದ ಗುಬ್ಬಿಯ ಮಲ್ಲಣಾರ್ಯ (ಗಣಭಾಷಿತ ರತ್ನಮಾಲೆ) ವಚನಗಳನ್ನು 'ಗಣಭಾಷಿತ'ಗಳೆಂದು ಹೇಳುವ ಮೂಲಕ ಶರಣರನ್ನು 'ಗಣ' ಎಂದು ಸೂಚಿಸುತ್ತಾನೆ. ೧೨ನೇ ಶತಮಾನದ ಪಂಡಿತಾರಾಧ್ಯ ಶಿವಶರಣರನ್ನು ಕುರಿತು ರಚಿಸಿರುವ ತನ್ನ ಕೃತಿಗೆ 'ಗಣ ಸಹಸ್ರನಾಮಾವಳಿ' ಎಂದು ಕರೆದಿದ್ದಾನೆ. ಶರಣರ ಅದೆಷ್ಟೋ ವಚನಗಳಲ್ಲಿ ಗಣ, ಗಣಂಗಳು, ಗಣನಾಥ, ಗಣೇಶ್ವರ ಎನ್ನುವ ಪದವನ್ನು ಮತ್ತೆ ಮತ್ತೆ ಬರುತ್ತವೆ.

> ಆದಿಯ ಲಿಂಗವ ತೋರಿದ ಅನಿಮಿಷನ ಕಂಡೆನಯ್ಯ ಇಂದು,
> ಕೃತಯುಗದ ಸ್ಕಂದನೆಂಬ ಗಣೇಶ್ವರನ ಕಂಡೆನಯ್ಯ ಇಂದು,
> ತ್ರೇತಾಯುಗದ ನೀಲಲೋಹಿತನೆಂಬ ಗಣೇಶ್ವರನ ಕಂಡೆನಯ್ಯಾ ಇಂದು,
> ದ್ವಾಪರಯುಗದ ವೃಷಭನೆಂಬ ಗಣೇಶ್ವರನ ಕಂಡೆನಯ್ಯ ಇಂದು,
> ಎನ್ನ ಕಂಡವರನೂ ನಿನ್ನ ಕಂಡವರನೂ
> ಇಂದು ಕಂಡೆ ಕಾಣಾ ಗುಹೇಶ್ವರಾ|

(ಡಾ.ಆರ್.ಸಿ.ಹಿರೇಮಠ, ಡಾ.ಎಂ.ಎಸ್.ಸುಂಕಾಪುರ(ಸಂ), ೧೯೭೬, ಪು.೩೦೩

ಅಲ್ಲಮನ ಈ ವಚನವು ಗಣನಾಯಕರ ಒಂದು ಪರಂಪರೆಯನ್ನೇ ಸೂಚಿಸುತ್ತಿದೆ. ಹಾಗಾದರೆ ಪ್ರಾಚೀನ ಗಣ ಪದ್ಧತಿಗೂ ಶರಣರು ಉಪಯೋಗಿಸುವ 'ಗಣ' ಗಣೇಶ್ವರಕ್ಕೂ ಇರುವ ಸಂಬಂಧ ಎಂತಹುದು? ಪ್ರಾಚೀನ ಗಣಪದ್ಧತಿ ಶಿವಶರಣರ ಮೂಲಕ ಮುಂದುವರಿದು ಕೊಂಡು ಬಂದಿತೆ? ಹಾಗೆ ಕಾಣಿಸಿಕೊಳ್ಳುವಾಗ ಅದು ಪಡೆದುಕೊಂಡ ರೂಪ ಎಂತಹುದು? ಎನ್ನುವುದನ್ನು ಗಮನಿಸಬೇಕಿದೆ.

ಪ್ರಾಚೀನ ಗಣ ಪದ್ಧತಿ ಮತ್ತು ವೀರಶೈವ ಗಣದ ಕುರಿತು ಅಧ್ಯಯನ ಮಾಡಿದ ಪಿ.ಎಸ್.ಪಾಟೀಲರ ಪ್ರಕಾರ ಈ ಎರೆಡಕ್ಕೂ ನಿಕಟ ಸಂಬಂಧವಿದೆ. ಶರಣರು ಕಾಯಕ ದಾಸೋಹಗಳಂತಹ ಪರಿಕಲ್ಪನೆಗಳನ್ನು ಪಡೆದಿದ್ದೆ ಆದಿಮ ಗಣ ಜೀವನ ಪದ್ಧತಿಯಿಂದ ಶರಣರು 'ಇಷ್ಟಲಿಂಗ'ವನ್ನು ತಮ್ಮ ಗುಂಪಿನ ಲಾಂಛನವನ್ನಾಗಿಸಿಕೊಂಡು ಅದರಡಿಯಲ್ಲಿ ಒಟ್ಟುಗೂಡಿ ಚಳುವಳಿಯನ್ನು ರೂಪಿಸಿದರು. 'ಲಿಂಗಿ ಅಥವಾ ಲಿಂಗಾಯತ' ಎಂಬ ಪದಕ್ಕೂ ಪ್ರಾಚೀನ ಸಮೂಹ ಸ್ವಗಣವೆಂದೇ ಅರ್ಥವಿರುವ ಸೂಚನೆ ಈ ಕೆಳಗಿನ ಶ್ಲೋಕದಂತಹ ಆಧಾರಗಳಿಂದ ಸಿಕ್ಕುತ್ತದೆ.

> 'ಲಿಂಗಿನಃ ಶ್ರೇಣಿ ಪೂಗಶ್ಚ
> ವಣಿಗ್ವ್ರಾತಾಸ್ತಥಾ ಪರೇ
> ಸಮೂಹಸ್ಥಾಚ ಯೇ ಚಾನ್ಯೇ ಈ
> ವರ್ಗಾಸ್ಥಾನ ಬ್ರವಿತ್ ಭೃಗುಃ

ಗಣಕ್ಕೆ ಸಮನಾರ್ಥವಾಗಿ ಸಂಘ, ವ್ರಾತಗಳಂತೆ ಶ್ರೇಣಿ, ಪೂಗ, ಜಾತ ಪದಗಳೂ ಪ್ರಯೋಗವಾಗುತ್ತವೆ. ಅದೇ ಅರ್ಥದಲ್ಲಿ ಲಿಂಗಿನಃ ಪದವೂ ಪ್ರಯೋಗವಾಗುವುದೆಂದು ಈ ಶ್ಲೋಕದಿಂದ ಕಂಡುಬರುತ್ತದೆ. ಆದ್ದರಿಂದ ಲಿಂಗಾಯತ ಉಪದೇಶವನ್ನು ಗಣಾಯತ ಉಪದೇಶವೆಂದು ಹೇಳುವುದರಲ್ಲಿ ಯಾವ ದುರಾನ್ವಯವೂ ಕಂಡುಬರಲಾರದು. ಇವುಗಳ ಪೈಕಿ 'ವ್ರಾತ' ಎಂಬ ಪದವನ್ನು ಮಧ್ಯಯುಗೀನ ಭಾಷ್ಯಕಾರರು ಶರೀರಾಯಾಸದಿಂದ ಅಥವಾ ಕಾಯಕದಿಂದಲೇ ಉಪಜೀವಿಸುವ ಜನಗಳೆಂದೂ, ಬುದ್ಧಿ ವೈಭವದಿಂದ ಉಪಜೀವಿಸುವವರಲ್ಲವೆಂದೂ ವಿವರಿಸಿದ್ದಾರೆ. ಆದ್ದರಿಂದಲೇ ಅವರನ್ನು ಪತಿತರೆಂದು ಭಾವಿಸಲಾಗುತ್ತದೆ. ವ್ರಾತ್ಯರನ್ನು ಮೇಲೆತ್ತಿ ಚಾತುರ್ವರ್ಣ ಸಮಾಜದ ಸದಸ್ಯತ್ವಕ್ಕೆ ಅರ್ಹಗೊಳಿಸಲು ವ್ರಾತ್ಯ ಸ್ತೋಮವೆಂಬ ಯಜ್ಞವಿಧಿಯನ್ನು ಯೋಜಿಸಲಾಗಿದೆ. ಇಂತಹುದೇ ಧಾರ್ಮಿಕ ಅಪಾವಿತ್ರ್ಯ ಅಂಟದ ಅತಿ ಶೂದ್ರಾದಿಗಳನ್ನು ಪಂಚಮರೆಂದೂ ಕರೆಯಲಾಗುತ್ತದೆ. ಪಂಚಮರೆಂದರೆ ಚಾತುರ್ವರ್ಣ ಬೇಧ್ಯದಿಂದ ಬಾಹ್ಯರಾಗಿರುವವರು ಅಥವಾ ಇನ್ನೂ ಗಣಗಳಾಗಿ ಅಥವಾ ವ್ರಾತರಾಗಿ ಬದುಕುವವರು ಎಂದರ್ಥ. ಲಿಂಗಾಯತರನ್ನು 'ಪಂಚಮರು' ಎಂದು ವರ್ಣಿಸುವ ಸುಪ್ರಭೇಧಾಗಮದ ಸೂತ್ರ(ಪಂಚಮಾಲಿಂಗಿನ ಸ್ಮೃತಾಃ ಇತರೇ ಚಲಿಂಗ ಧಾರಿಣಃ) ಲಿಂಗಾಯತರು ಗಣ ಮಾದರಿಯ ಜೀವನ ನಡೆಸುವವರು ಎಂದರ್ಥವನ್ನೇ ಕೊಡುತ್ತದೆ.'(ಪಿ.ಎಸ್.ಪಾಟೀಲ್, ೨೦೦೦, ಪು.೩೫-೩೬)

ಈ ರೀತಿ ಆದಿಗಣ ಪದ್ಧತಿಯ ಜೀವನವನ್ನು ನಡೆಸುತ್ತಿದ್ದ ಸಂಪ್ರದಾಯವು ಬಸವಣ್ಣನ ಚಳುವಳಿಗೆ ಪ್ರೇರಕವಾಗಿರಬೇಕು. ಏಕೆಂದರೆ ಬಸವಣ್ಣ ಜನಿಸಿದ ಪರಿಸರದಲ್ಲಿಯೇ ಇದ್ದ ಕೂಡಲಸಂಗಮವು 'ಕಪ್ಪಡಿ ಸಂಪ್ರದಾಯ'ದ ಕೇಂದ್ರ ಸ್ಥಳವಾಗಿದೆ ಈ ಕಪ್ಪಡಿ ಸಂಪ್ರದಾಯದ ಜಂಗಮರು ಕಾಳಮುಖ-ಪಾಶುಪತ ಪಂಥಗಳ ಹಾಗೆ ದೇವಾಲಯಗಳನ್ನೋ, ಆಸ್ತಿ-ಅಂತಸ್ತುಗಳನ್ನೋ ಹೊಂದಿರದೆ ತಿರುಕ ಜಂಗಮರಿಗಿಂತ ಅತ್ಯಂತ ಕೆಳವರ್ಗದ ಜನರಿಂದ ಕೂಡಿದುದಾಗಿತ್ತು. ಕೂಡಲ ಸಂಗಮದಲ್ಲಿ ಈಗಲೂ ಕಪ್ಪಡಿ ಮಠವನ್ನು ನೋಡಬಹುದಾಗಿದೆ. ಬಸವಣ್ಣ, ಚೆನ್ನಬಸವಣ್ಣ, ಅಕ್ಕನಾಗಮ್ಮ, ಮುಂತಾದ ಶರಣರಿಗೆ ದೇವರನ್ನು ಸ್ಥಾವರ ರೂಪದಲ್ಲಿ ಪೂಜಿಸುವ ಕಾಳಮುಖ ಪಾಶುಪತದವರಿಗಿಂತ ಹೆಚ್ಚಾಗಿ ಕಾಯಕ ಮಾಡಿ ಬದುಕುತ್ತಿದ್ದ ಕೆಳವರ್ಗದವರಿಂದ ಕೂಡಿದ 'ಕಪ್ಪಡಿ ಸಂಪ್ರದಾಯ' ಅಪಾರ ಪ್ರಭಾವ ಬೀರಿದೆ. 'ಇದು ವೃಷಭಗಣೇಶ್ವರ ಸಂಪ್ರದಾಯವಾಗಿರುವಂತೆ ತೋರುತ್ತದೆ. ಇದೇ ಸಂಪ್ರದಾಯದವರಾದ ಅನಿಮಿಷಯ್ಯ-ಅಲ್ಲಮಯ್ಯಗಳನ್ನು ಕುರಿತು ಬಸವಾದಿ ಪ್ರಮಥರಿಗಿರುವ ವಿಶೇಷ ಭಕ್ತಿ-ಭಾವನೆಗೆ ಕಾರಣ ಇದಾಗಿರಬಹುದು. ಈ ಸಂಪ್ರದಾಯದ ಜನರು ಸಮಾಜದ ಕೆಳವರ್ಗದ ವೃತ್ತಿಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ. ಸಂಗಮದ ಕಪ್ಪಡಿ ಮಠದ ಸ್ಮೃತಿ ಇಂದಿಗೂ ಇರುವುದು ಕೂಡಲ ಸಂಗಮದ ಚಲುವಾದಿಗಳಲ್ಲಿ ಮಾತ್ರ. ಶ್ರೇಷ್ಟ ಕುಲದ ಲಿಂಗಾಯತರಲ್ಲಿಲ್ಲ. ಜೇಡರ ದಾಸಿಮಯ್ಯ, ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ಮಡಿವಾಳ ಮಾಚಿತಂದೆಗಳಂತಹ ಶಿವಶರಣರು ಹಾಗೂ ಅವರ ಸಂಪ್ರದಾಯಗಳೆಲ್ಲ ಈ ಕಪ್ಪಡಿ ಮಠದ ಸಂಪ್ರದಾಯದಂತಹ ಸಂಪ್ರದಾಯಗಳೆ ಇದ್ದಿರಲು ಸಾಕು. ತಮ್ಮವನೆ ಆದ ಬಸವಣ್ಣ ಕಲ್ಯಾಣದ ರಾಜ್ಯ ಭಂಡಾರಿಯಾದಾಗ ಕಲ್ಯಾಣದಲ್ಲಿ ಅವರೆಲ್ಲ ಬಸವಣ್ಣನ ಸುತ್ತು ಅಣೆಸೆರೆದರೆಂದು ತೋರುತ್ತದೆ'(ಪಿ.ಎಸ್.ಪಾಟೀಲ್, ೨೦೦೦, ಪು.೬-೭) ಮುಂದೆ ಅವರು ತಮ್ಮ ಸುತ್ತಲಿದ್ದ ಪರಿಸರದಲ್ಲಿನ ಸಾಮಾಜಿಕ ಅಸಮಾನತೆ, ಸ್ತ್ರೀಶೋಷಣೆ, ಜಾತಿಪದ್ಧತಿ, ಸ್ಥಾವರ ಪೂಜೆ ಮುಂತಾದವುಗಳನ್ನು ಬದಲಾಯಿಸಿ ಆದಿಗಣ ಪದ್ಧತಿಯ ರೀತಿಯಲ್ಲಿ ಬದುಕಲು ಯತ್ನಿಸಿದರು. ಮಠಾಧಿಪತಿ-ಸ್ಥಾನಾಧಿಪತಿಗಳನ್ನು ನಿರಾಕರಿಸಿ ಕಪ್ಪಡಿ ಸಂಪ್ರದಾಯದ ರೀತಿಯಲ್ಲಿ ತಿರುಗುತ್ತ ಕಾಯಕ ಮಾಡುತ್ತಿದ್ದ ಜಂಗಮರನ್ನು ಸಮಾಜದಲ್ಲಿ ಉನ್ನತ ಸ್ಥಾನಕ್ಕೇರಿಸಿದರು.

ಒಟ್ಟಾರೆ ಆದಿಗಣ ಮಾದರಿಯ ಜೀವನ ಪದ್ಧತಿಯಲ್ಲಿ ಬದುಕನ್ನು ರೂಪಿಸಲು ೭ನೇ ಶತಮಾನದಲ್ಲಿ ಮತ್ತೆ ಪ್ರಯತ್ನಿಸಲಾಯಿತು. ೧೨ನೇ ಶತಮಾನದ ಶರಣ ಚಳುವಳಿಗೆ ವ್ಯವಸ್ಥಿತ ಚೌಕಟ್ಟನ್ನು ನೀಡಿದ ಚೆನ್ನಬಸವಣ್ಣನು ಶರಣರಿಗೆ ನೀತಿಸಂಹಿತೆಯನ್ನು ಸೂಚಿಸುತ್ತಿರುವ ವಚನವೊಂದು ಪ್ರಾಚೀನ ಗಣಮಾದರಿಯ ಎಲ್ಲ ಲಕ್ಷಣಗಳನ್ನು ಹೊಂದಿರುವುದನ್ನು ನೋಡಬಹುದಾಗಿದೆ.

> ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರವೆಂಬ
> ಪಂಚಾಚಾರದ ಆಚರಣೆಯೆಂತೆಂಬಡೆ
> ಲಿಂಗವಲ್ಲದೆ ಅನ್ಯವರಿಯದಿಹುದೆ ಲಿಂಗಾಚಾರ

ಸಜ್ಜನ ಕಾಯಕದಲ್ಲಿ ತಂದು ಗುರುಲಿಂಗ ಜಂಗಮಕ್ಕೆ ನೀಡಿ
ಸತ್ಯಶುದ್ಧನಾಗಿಹುದೆ ಸದಾಚಾರ
ಶಿವಭಕ್ತರಲ್ಲಿ ಕುಲಗೋತ್ರ ಜಾತಿವರ್ಣಾಶ್ರಮವನರಸದೆ
ಅವರೊಪ್ಪುದ ಕೊಂಬುದೇ ಶಿವಾಚಾರ
ಶಿವಾಚಾರದ ನಿಂದೆಯ ಕೇಳದಿಹುದೆ ಗಣಾಚಾರ
ಶಿವಶರಣರೇ ಹಿರಿಯರಾಗಿ ತಾನೆ ಕಿರಿಯನಾಗಿ
ಭಯಭಕ್ತಿಯಿಂದ ಆಚರಿಸುವಡೆ ಭೃತ್ಯಾಚಾರ
ಇಂತಿ ಪಂಚಾಚಾರವುಳ್ಳ ಭಕ್ತರ ಒಕ್ಕುದನಿಕ್ಕಿ ಸಲಹಯ್ಯ
ಪ್ರಭುವೇ ಕೂಡಲ ಚೆನ್ನಸಂಗಮದೇವಾ (೩-೧೬೧೧)

(ಆರ್.ಸಿ.ಹಿರೇಮಠ, ಎಂ.ಎಸ್.ಸಂಕಾಪುರ(ಸಂ), ೧೯೭೬, ಪು.೩೧೨)

ಈ ವಚನವು ಶರಣರು ಬದುಕುವಾಗ ಪಾಲಿಸಬೇಕಾದ ಐದು ಆಚಾರಗಳ ಬಗ್ಗೆ ಹೇಳುತ್ತಿದೆ. ಮೊದಲನೆಯ ಲಿಂಗಾಚಾರವು ಶರಣರಿಗೆ ಇರಬೇಕಾದ ಲಿಂಗನಿಷ್ಠೆಯನ್ನು ಸೂಚಿಸುತ್ತಿದೆ. ಶಿವಲಿಂಗವನ್ನು ಬಿಟ್ಟು ಅನ್ಯದೈವವನ್ನು ಇದು ಮನ್ನಿಸುವುದಿಲ್ಲ. ದೇವರಾದ ಶಿವನನ್ನು ಲಿಂಗ ಸಂಕೇತದ ಮೂಲಕ ಪೂಜಿಸುವುದೆ ಹೊರತು ಪೌರಾಣಿಕ ಜಗತ್ತಿನ ವರ್ಣಮಯ ರೂಪದಲ್ಲಿ ಪೂಜಿಸುವುದಿಲ್ಲ. ಇದು ಪ್ರಾಚೀನ ಅರಣ್ಯ ಸಮುದಾಯವು ಸಂಕೇತಗಳ, ಲಾಂಛನಗಳ ಮೂಲಕ ಗುರುತಿಸಿಕೊಳ್ಳುತ್ತಿದ್ದ ಗಣಪದ್ಧತಿಗೆ ಸಮನಾಗಿದೆ. ಪ್ರಾಚೀನ ಗಣಗಳಲ್ಲಿ ಜನರು ತನ್ನ ಗಣಕ್ಕೆ, ಸಂಕೇತಕ್ಕೆ, ಲಾಂಛನಕ್ಕೆ ನಿಷ್ಠೆಯನ್ನು ವ್ಯಕ್ತಪಡಿಸುತ್ತಿದ್ದರು. ಅದರಿಂದ ಹೊರಬರುವ ಅಥವಾ ಗಣಬದಲಾಯಿಸುವ ವ್ಯವಸ್ಥೆ ಇರುವುದಿಲ್ಲ. ಎರಡನೇಯದು ಸದಾಚಾರ 'ಸಜ್ಜನ ಕಾಯಕದಲ್ಲಿ ತಂದು ಗುರುಲಿಂಗ ಜಂಗಮಕ್ಕೆ ನೀಡಿ ಸತ್ಯಶುದ್ಧನಾಗಿಹುದೆ ಸದಾಚಾರ' ಎನ್ನುತ್ತಿರುವ ಚೆನ್ನಬಸವಣ್ಣ, ಶರಣರು ಒಳ್ಳೆಯ ನಡತೆಯಿಂದ ಕಾಯಕವನ್ನು ಮಾಡಿ ಬಂದ ಗಳಿಕೆಯನ್ನು ಸಮುದಾಯಕ್ಕೆ (ಗುರು, ಲಿಂಗ, ಜಂಗಮಕ್ಕೆ) ಅರ್ಪಿಸಬೇಕೆಂದು ಹೇಳುತ್ತಿದ್ದಾನೆ. ಅಂದರೆ ಪ್ರಾಚೀನ ಗಣ ಪದ್ಧತಿಯಲ್ಲಿದ್ದ 'ಸಾಮೂಹಿಕ ಶ್ರಮ-ಸಾಮೂಹಿಕ ಅನುಭೋಗ' ಎನ್ನುವ ಅಂಶವನ್ನು ಇಲ್ಲಿ ಒತ್ತಿ ಹೇಳುತ್ತಿದ್ದಾನೆ. ಸದಾಚಾರದಲ್ಲಿ ಕಾಯಕ ಮತ್ತು ದಾಸೋಹಗಳ ಪ್ರಾಮುಖ್ಯತೆಯನ್ನು ಕಾಣಬಹುದು. ಮೊದಲನೆಯ ಲಿಂಗಾಚಾರವು ತೀವ್ರ ಗಣನಿಷ್ಠೆಯನ್ನು ವ್ಯಕ್ತಪಡಿಸಿದರೆ ಎರಡನೇ ಸದಾಚಾರವು ಗಣಗಳಲ್ಲಿನ ಪ್ರತಿ ವ್ಯಕ್ತಿಯ ಶ್ರಮಕ್ಕೆ, ಅವನ ಅನುಭೋಗಕ್ಕೆ ಒತ್ತನ್ನು ಕೊಡುತ್ತಿದೆ. ಮೂರನೆಯದಾಗಿ ಶಿವಾಚಾರ, ಇಲ್ಲಿ ಶಿವನೊಬ್ಬನೆ ಎಂದು ಒಪ್ಪಿಕೊಂಡಾಗ ಅವನ ಭಕ್ತರೆಲ್ಲ ಒಂದೇ ಕುಟುಂಬದ ಸದಸ್ಯರು ಎಂದು ಹೇಳಲಾಗುತ್ತಿದೆ. ಇಲ್ಲಿ ಕುಲವಾಗಲಿ, ಜಾತಿ-ಗೋತ್ರಗಳಾಗಲಿ ಈ ರೀತಿಯ ಯಾವುದೇ ತಾರತಮ್ಯವಿಲ್ಲ. ಯಾವುದೇ ಮೇಲು ಕೀಳೆಂಬ ಭಾವನೆಗಳಿಲ್ಲ. ಪ್ರಾಚೀನ ಗಣ ಪದ್ಧತಿಯಲ್ಲಿದ್ದ ಮುಖ್ಯ ಲಕ್ಷಣಗಳಲ್ಲಿ ಕೂಡ ಜಾತಿ ಭೇದಗಳಿಲ್ಲದೆ ಬದುಕುವುದು

ಕೂಡ ಒಂದಾಗಿದೆ. ಈ ತರಹದ ಬೇಧಗಳು ಗಣಪದ್ಧತಿಯ ವಿಕಾಸಕಾಲದಲ್ಲಿ ಹುಟ್ಟಿಕೊಂಡವುಗಳಾಗಿವೆ. ಇಲ್ಲಿ ಎಲ್ಲರೂ ಒಂದೇ ಕುಟುಂಬದವರಾಗಿದ್ದು, ತಮ್ಮ ಗಣಕ್ಕೆ ನಿಷ್ಠೆಯನ್ನು ಸೂಚಿಸುತ್ತಿದ್ದರು. ನಾಲ್ಕನೆಯದಾಗಿ ಗಣಾಚಾರ-'ಶಿವಾಚಾರದ ನಿಂದೆಯ ಕೇಳದಿಹುದೆ ಗಣಾಚಾರ' ಎನ್ನುವ ಮೂಲಕ ಇಲ್ಲಿಯೂ ಕೂಡ ಚೆನ್ನಬಸವಣ್ಣ ತೀವ್ರವಾದ ಶಿವನಿಷ್ಠೆಯನ್ನು ಸೂಚಿಸುತ್ತಿದ್ದಾನೆ. ತನ್ನ ಸಮುದಾಯದ ಬಗ್ಗೆ ಹಾಗೂ ಪರಂಪರೆಯ ಬಗ್ಗೆ ಉಗ್ರವಾದ ನಿಷ್ಠೆಯನ್ನು ಈ ಆಚಾರ ಸೂಚಿಸುತ್ತಿದೆ. ಪ್ರಾಚೀನ ಗಣಪದ್ಧತಿಯಲ್ಲಿಯೂ ತನ್ನ ತನ್ನ ಗುಂಪಿಗೆ ತೀವ್ರ ನಿಷ್ಠೆಯನ್ನು ಗಣಸಮೂಹದ ಎಲ್ಲರೂ ತೋರಿಸುತ್ತಿದ್ದರು. ಗಣದ ಹೊರಗಿನವರೆಲ್ಲ ಅವರಿಗೆ ಶತ್ರುಗಳಾಗಿದ್ದರು. ಪ್ರಾಚೀನ ಗಣ-ಗಣಗಳಲ್ಲಿ ಕಲಹಗಳುಂಟಾದಾಗ ಸೆರೆಸಿಕ್ಕ ಅನ್ಯ ಗಣದವರನ್ನು ಕೊಲ್ಲಲಾಗುತ್ತಿತ್ತು. ಮುಂದೆ ವೀರಶೈವ ಗಣಾಚಾರವು ಇದನ್ನೇ ಪ್ರಧಾನ ಲಕ್ಷಣವನ್ನಾಗಿ ಹೊಂದಿತು. ೧೨ನೇ ಶತಮಾನದ ನಂತರದಲ್ಲಿ ಲಿಂಗಾಯತರ ಬಗ್ಗೆ ವೀರನಿಷ್ಠೆ ಹೊಂದಿದ ಈ ಗಣಾಚಾರದವರು ಅನ್ಯಮತದ ದೇವಾಲಯಗಳನ್ನು, ಪ್ರತಿಪಾದಕರನ್ನು ಹೊಡೆದು ಹಾಕುವಲ್ಲಿ ಪ್ರಮುಖ ಪಾತ್ರವಹಿಸಿದರು. ಅಂತಿಮವಾದುದು ಭೃತ್ಯಾಚಾರ-ಇದು ಸೇವಾ ಮನೋಭಾವವನ್ನು ಭಕ್ತರಲ್ಲಿ 'ಎನಗಿಂತ ಕಿರಿಯರಿಲ್ಲ' ಎನ್ನುವ ವಿನಮ್ರತೆಯನ್ನು ಸೂಚಿಸುತ್ತದೆ.

೧೨ನೇ ಶತಮಾನದ ಶರಣರು ತಮ್ಮ ಬದುಕನ್ನು ರೂಪಿಸಿಕೊಳ್ಳುವಾಗ ಹೊಂದಬೇಕಾದ ಅಗತ್ಯತೆಯನ್ನು ಐದು ಆಚಾರಗಳನ್ನೊಳಗೊಂಡ ಈ ವಚನ ಸೂಚಿಸುತ್ತಿದೆ. ಇದು ಸಂಪೂರ್ಣವಾಗಿ ಪ್ರಾಚೀನ ಗಣ ಮಾದರಿಯದಾಗಿದ್ದು ಮುಂದೆ ಶರಣರ ಎಲ್ಲ ಸಿದ್ಧಾಂತಗಳಲ್ಲೂ, ಆಲೋಚನೆಗಳಲ್ಲೂ ಹೇಗೆ ಇದು ಪ್ರಭಾವ ಬೀರಿತು ಎನ್ನುವುದನ್ನು ನೋಡಬಹುದು.

## ೪.೪. ೧೨ನೇ ಶತಮಾನದ ಗಣ ತತ್ವಗಳು

೧೨ನೇ ಶತಮಾನದ ಶರಣರು ಇಷ್ಟಲಿಂಗ, ಕಾಯಕ, ದಾಸೋಹ, ಸ್ತ್ರೀ ಸಮಾನತೆ, ಜಾತ್ಯಾತೀತ ಭಾವನೆ ಮುಂತಾದ ತತ್ವಗಳೆಲ್ಲವುಗಳನ್ನು ಪ್ರಾಚೀನ ಗಣಮಾದರಿಯ ಜೀವನ ವಿಧಾನದಿಂದ ಪಡೆದುಕೊಂಡಿದ್ದಾರೆ. ಬದಲಾದ ಪರಿಸ್ಥಿತಿಯಲ್ಲಿ ಉಂಟಾಗಿದ್ದ ಸ್ಥಾವರ, ಜಂಗಮ, ಸ್ತ್ರೀ-ಪುರುಷ, ಮೇಲು-ಕೀಳು ಎನ್ನುವ ಅಸಮಾನತೆಗಳನ್ನು ಕಿತ್ತುಹಾಕಲು ಗಣಜೀವನದಿಂದ ಮಾತ್ರ ಸಾಧ್ಯವೆಂದು ಬಸವಾದಿ ಶರಣರು ಅರಿತಿದ್ದರು. ಈಗಾಗಲೇ ಈ ರೀತಿಯ ಗಣಮಾದರಿಯ ಜೀವನ ನಡೆಸುತ್ತಿದ್ದ ಶೈವ ಪರಂಪರೆಯೊಂದು ಬಸವಾದಿ ಶರಣರಿಗೆ ಪರಿಚಯವಿದ್ದಿತು. ಪ್ರಮಥಗಣ, ರುದ್ರಗಣ, ವೃಷಭಗಣ, ತಿಷಷ್ಠಿ ಪುರಾತನ ಗಣ, ತೇರಸಗಣ, ಷೋಡಶಗಣಗಳ ಸದಸ್ಯರೆಲ್ಲರನ್ನು ಪೂಜ್ಯ ಭಾವನೆಯಿಂದ ಕಾಣುತ್ತಿದ್ದರು. ಅವರನ್ನು ತಮ್ಮ ವಚನಗಳಲ್ಲಿ ಸ್ಮರಿಸಿರುವುದನ್ನು ಈಗಾಗಲೇ ಕೆಲವು ವಚನಗಳಲ್ಲಿ ಗಮನಿಸಿದ್ದೇವೆ. ಈ ಗಣ ಪರಂಪರೆಯನ್ನು ಮುಂದುವರಿಸಿದ ೧೨ನೇ ಶತಮಾನದ ಶಿವಶರಣರು ೭೭೦

ಅಮರಗಣಗಳೆಂದೂ, ಲಕ್ಷದ ತೊಂಬತ್ತಾರು ಸಾವಿರ ಗಣಂಗಳೆಂದೂ ಪ್ರಸಿದ್ಧಿ ಪಡೆದಿದ್ದಾರೆ. ಇವರ ಕೆಲವು ಪ್ರಮುಖ ತತ್ವಗಳನ್ನು ಗಮನಿಸಿದರೆ ಅದು ಪ್ರಾಚೀನ ಗಣಮಾದರಿಯಿಂದ ಪ್ರಭಾವಿತವಾಗಿರುವುದು ಕಂಡುಬರುತ್ತದೆ.

### ೪.೪.೧. ಇಷ್ಟಲಿಂಗ

ಪ್ರಾಚೀನ ಅರಣ್ಯವಾಸಿಗಳಲ್ಲಿ ಸಂಕೇತ, ಲಾಂಛನ ಅಥವಾ ಚಿಹ್ನೆ ಇಲ್ಲದ ಗಣಗಳೆ ಇಲ್ಲ. ಪ್ರತಿಯೊಂದು ಗಣವೂ ತನ್ನ ಜೀವನಕ್ಕಾಧಾರವಾದ ಪ್ರಾಣಿಯನ್ನೋ, ಸಸ್ಯವನ್ನೋ, ವಸ್ತುವನ್ನೋ, ಲಾಂಛನವನ್ನಾಗಿ ಸ್ವೀಕರಿಸಿದ್ದು ಕಂಡುಬರುತ್ತದೆ. ಇಂತಹ ಲಾಂಛನಕ್ಕೂ ಗಣಕ್ಕೂ ಯಾವುದೇ ಭಿನ್ನತೆ ಇರುವುದಿಲ್ಲ. ಯಾವುದೆ ಗಣವನ್ನು ಅದರ ಲಾಂಛನದ ಮೂಲಕವೆ ಗುರುತಿಸಲಾಗುತ್ತಿತ್ತು. ೧೨ನೇ ಶತಮಾನದ ಶರಣರ ಇಷ್ಟಲಿಂಗವು ಆ ಸಮುದಾಯದ ಲಾಂಛನವಾಗಿದೆ. ಈ ಇಷ್ಟಲಿಂಗವನ್ನು ಕೊರಳಿಗೆ ಧರಿಸುತ್ತಿದ್ದು ಅದು ವ್ಯಕ್ತಿಯೊಂದಿಗೆ ಅಭಿನ್ನವಾಗಿತ್ತು.

> ಹರಿವ ನದಿಗೆ ಮೈಯೆಲ್ಲ ಕಾಲು,
> ಉರಿವ ಅಗ್ನಿಗೆ ಮೈಯೆಲ್ಲ ನಾಲಿಗೆ,
> ಬೀಸುವ ಗಾಳಿಗೆ ಮೈಯೆಲ್ಲ ಮುಖ(ಕೈ?),
> ಗುಹೇಶ್ವರಾ, ನಿಮ್ಮ ಶರಣಂಗೆ
> ಸರ್ವಾಂಗವೆಲ್ಲವೂ ಲಿಂಗ.

(ಡಾ.ಆರ್.ಸಿ.ಹಿರೇಮಠ, ಡಾ.ಎಂ.ಎಸ್.ಸುಂಕಾಪುರ(ಸಂ), ೧೯೭೬, ಪು.೪೬೭)

ಅಲ್ಲಮಪ್ರಭುವಿನ ಈ ವಚನವು ಶರಣರು ಲಿಂಗದೊಂದಿಗೆ ಹೊಂದಿದ್ದ ಅಭಿನ್ನ ಸಂಬಂಧವನ್ನು ಸೂಚಿಸುತ್ತದೆ. ಇಂತಹ ಲಿಂಗವನ್ನು ಧರಿಸಿದವರನ್ನೆಲ್ಲ ಭಕ್ತರೆಂದೂ, ಲಿಂಗದೀಕ್ಷೆ ಹೊಂದಿಲ್ಲದವರನ್ನು ಭವಿಗಳೆಂದೂ ಕರೆದು ಉಗ್ರವಾಗಿ ಖಂಡಿಸಲಾಗುತ್ತಿತ್ತು. ಲಿಂಗವುಳ್ಳವನನ್ನು ಜಾತಿ-ಬೇಧ ಎಂದೆಣಿಸದೆ ತಮ್ಮ ಕುಟುಂಬದ ಸದಸ್ಯನಂತೆ ಕಾಣಲಾಗುತ್ತಿತ್ತು. ಅಲ್ಲಮನ ಈ ಕೆಳಗಿನ ವಚನ ಇಂತಹ ಧೋರಣೆ ಯನ್ನು ಪ್ರಬಲವಾಗಿ ಪ್ರತಿಪಾದಿಸುತ್ತದೆ.

> ಯಾವ ಜಾತಿಯಾದಡು ಆಗಲಿ ಪುರಾತನರ ಚರಿತ್ರೆಯಲ್ಲಿ ನಡೆದು
> ಗುರುಲಿಂಗ ಜಂಗಮಕ್ಕೆ ಅರ್ಥ ಪ್ರಾಣಾಭಿಮಾನಂ ಕೊಟ್ಟು
> ಅಹಂಕಾರವಳಿದಂತಹ ಮಹಾತ್ಮರ
> ಬಾಯ ತಂಬುಲವ ಮೆಲುವೆ, ಬೀಳುಡುಗೆಯ ಹೊದೆವೆ
> ಅವರ ಪಾದರಕ್ಷೆಗಳೆರೆಡನೂ
> ಮಂಡೆಯ ಮೇಲೆ ಹೊತ್ತುಕೊಂಡು ಬದುಕುವೆನಯ್ಯಾ

ಈ ಗಣಂಗಳ ದಾಸಾನುದಾಸ ನಾನು

ಜನ್ಮ ಜನ್ಮದಲಿ ಆಗುವೆ ಕಾಣಾ ಗುಹೇಶ್ವರಾ.(೨.೯೨೦)

'ತಂಬುಲ, ಬೀಳುಡುಗೆ ಧರಿಸುವುದು, ಪಾದರಕ್ಷೆ ಕಾಯುವುದು ಮತ್ತು ಅವುಗಳನ್ನು ಮಂಡೆಯ ಮೇಲೆ ಹೊತ್ತುಕೊಳ್ಳುವುದು, ಮುಂತಾದವು ಅತ್ಯುನ್ನತ ಪಾವಿತ್ರತೆ ಸಾಧಿಸಿಕೊಂಡ ಅಪರೂಪದ ಸಾಧಕರಾದ ಪುರಾತನ ಶಿವಶರಣರಿಗೆ ಸಂಬಂಧಿಸಿದವುಗಳಾಗಿವೆ.'(ಟಿ.ಆರ್.ಚಂದ್ರಶೇಖರ್(ಅನು), ೨೦೦೦, ಪು.೪೫) ಪ್ರಾಚೀನ ಆರ್ಯರ ಗಣಪದ್ಧತಿಯು ಶೈವಪಂಥಗಳಲ್ಲಿದ್ದು ಅವರನ್ನು ಅಲ್ಲಿ ಯಾವುದೇ ಜಾತಿ ಆಧಾರದ ಮೇಲೆ ಗುರುತಿಸದೆ ಗೌರವಿಸಲಾಗಿತ್ತು. ಅಂತಹ ಶರಣರ ದಾಸಾನುದಾಸ ನಾನು ಎಂದು ಹೇಳುವ ಮೂಲಕ ಅಲ್ಲಮ ಆ ಪರಂಪರೆಯ ಶರಣರನ್ನು ಗೌರವಿಸಿದ್ದಾನೆ.

ಲಿಂಗ ಧರಿಸಿದವರಿಗೆ ಯಾವುದೇ ಜಾತಿ ಇರುತ್ತಿರಲಿಲ್ಲ. ಲಿಂಗ ಧರಿಸಿದವರೆಲ್ಲ ತಮ್ಮ ಪೂರ್ವಾಶ್ರಮದ ಸಂಬಂಧಗಳನ್ನೆಲ್ಲಾ ಕಡಿದುಕೊಂಡು ಜಾತಿ ಆಧಾರಿತ ವಿಂಗಡನೆಯನ್ನು ತ್ಯಜಿಸಿದ್ದರು. ಇಲ್ಲಿ ಎಲ್ಲಾ ಜಾತಿಗಳೂ ಒಂದೇ ಆಗಿದ್ದವು. 'ಆವ ಕುಲವಾದಡೇನು? ಶಿವಲಿಂಗವಿದ್ದವನೆ ಕುಲಜನು ಕುಲವನರಸುವರೆ ಶರಣರಲ್ಲಿ, ಜಾತಿಸಂಕರನಾದ ಬಳಿಕ? ಎಂದು ಬಸವಣ್ಣ ಪ್ರಶ್ನಿಸಿದನು ೧೨ನೇ ಶತಮಾನದಲ್ಲಿದ್ದ ಶರಣರ(ಲಕ್ಷದ ತೊಂಬತ್ತಾರು ಸಾವಿರ ಗಣಂಗಳಿಗೆ) ಇಷ್ಟಲಿಂಗ ಎನ್ನುವುದು ಪ್ರಾಚೀನ ಗಣಪದ್ಧತಿಯ ಲಾಂಛನ, ಸಂಕೇತ, ಚಿಹ್ನೆಯನ್ನೆ ಹೋಲುತ್ತಿದ್ದು ಈ ಪ್ರಾಚೀನ ಗಣಪದ್ಧತಿಗಳಲ್ಲಿನ ಎಲ್ಲ ಲಕ್ಷಣಗಳೂ ಇಷ್ಟಲಿಂಗ ಧರಿಸಿದ ಶರಣ ಚಳುವಳಿಯಲ್ಲಿ ಕಂಡುಬರುತ್ತದೆ. 'ಗಣದ ಉಪಾಸಕರಾದ ವಚನಕಾರರು ಲಿಂಗಭಕ್ತಿ ಮುಖೇನ ತಮ್ಮ ಗಣಭಕ್ತಿಯನ್ನು ವ್ಯಕ್ತಪಡಿಸುತ್ತಾರೆ. ಗಣಜೀವನದ ಅಧ್ಯಯನ ನಡೆಸಿದ ಅನೇಕ ತಜ್ಞರು ಇಂತಹ ಲಿಂಗನಿಷ್ಠೆಯನ್ನು ಗಣಲಾಂಛನ ಅಥವಾ ಟೋಟೆಂ ಪೂಜೆಗೆ ಸಮವೆಂದು ಭಾವಿಸಿದ್ದಾರೆ.'(ಪಿ.ಎಸ್.ಪಾಟೀಲ್, ೨೦೦೦, ಪು.೬೬)

### ೪.೪.೨. ಕಾಯಕ-ದಾಸೋಹ ತತ್ವಗಳು

ಪ್ರಾಚೀನ ಗಣಜೀವನ ಸಾಮೂಹಿಕ ಶ್ರಮದಿಂದ ಕೂಡಿದ್ದು ಅಲ್ಲಿ ವೈಯಕ್ತಿಕ ಶ್ರಮವಾಗಲಿ, ಅನುಭೋಗವಾಗಲಿ ಇಲ್ಲ. ಅಲ್ಲಿರುವುದು 'ಸಾಮೂಹಿಕ ಶ್ರಮ-ಸಾಮೂಹಿಕ ಅನುಭೋಗ' ಮಾತ್ರ. ಏಕೆಂದರೆ ಪ್ರಾಚೀನ ಕಾಲದಲ್ಲಿ ಉತ್ಪಾದಕ ಶಕ್ತಿಗಳಾಗಲಿ, ಉಪಕರಣ ಬಳಕೆಯಾಗಲಿ ತೀರ ಪ್ರಾಥಮಿಕ ಅವಸ್ಥೆಯಲ್ಲಿದ್ದು, ಮನುಷ್ಯನ ಸಾಮೂಹಿಕ ಶ್ರಮದಿಂದ ಮಾತ್ರ ಆಹಾರವನ್ನು ಪಡೆಯುವುದು ಇಲ್ಲವೆ, ಪ್ರಾಣಿಯ ಬೇಟೆಯನ್ನೊ ಮಾಡಬಹುದಾಗಿತ್ತು. ಎಷ್ಟೋ ಸಲ ಎಲ್ಲರೂ ಶ್ರಮಪಟ್ಟರೂ ಆಹಾರ ಸಿಗದೆ ಹೋಗುವ ಸಂಭವವೂ ಇರುತ್ತಿತ್ತು. ಹೀಗಾಗಿ ಕಾಯಕ ವಿನಃ ಜೀವನ ಎನ್ನುವುದು ಕಲ್ಪನೆಗೂ ಅಸಾಧ್ಯ ವಿಷಯವಾಗಿತ್ತು. ಕಾರಣ ಪ್ರಾಚೀನ ಗಣ ಜೀವನದಲ್ಲಿ ಕಾಯಕನಿಷ್ಠೆ ಅತ್ಯಂತ ಅನಿವಾರ್ಯವಾದ,

ಪವಿತ್ರವಾದ, ಅನುಲ್ಲಂಘನೀಯವಾದ ವಿಷಯವಾಗಿತ್ತು. ಈ ರೀತಿ ಕಾಯಕದಿಂದ ಬಂದ ಪ್ರತಿಫಲವನ್ನು ಗಣಕ್ಕೆ ಒಪ್ಪಿಸಬೇಕಾಗುತ್ತಿತ್ತು. ಇಲ್ಲಿ ವೈಯಕ್ತಿಕ ಪ್ರತಿಫಲ ಎಂಬುದಿಲ್ಲ. ಗಣ ಜೀವನದಲ್ಲಿ ಖಾಸಗಿ ಒಡೆತನ ಎಂಬುದು ಇರದೆ ಇಲ್ಲಿ ಸರ್ವಸಮಾನತೆ ಪ್ರಮುಖ ಅಂಶವಾಗಿದೆ. ಇಲ್ಲಿ ಎಲ್ಲರೂ ಗಣ ಸಂತಾನದವರು. ಅವರು ತಮ್ಮ ಗಣಕ್ಕೆ ತೀವ್ರ ನಿಷ್ಠೆಯನ್ನು ತೋರಬೇಕಾಗುತ್ತಿತ್ತು. ಹಾಗಾಗಿ ಒಬ್ಬ ವ್ಯಕ್ತಿಗೆ ತನ್ನದು ಎಂಬ ಯಾವ ಸ್ವತ್ತು ಇರದೆ ಎಲ್ಲವೂ ಗಣದ ಸ್ವತ್ತಾಗಿರುತ್ತಿತ್ತು.

ಇಂತಹ ಪ್ರಾಚೀನ ಗಣಜೀವನದ ಆದರ್ಶವನ್ನೇ ತಮ್ಮ ಜೀವನದ ಆದರ್ಶವೆಂದು ಭಾವಿಸಿದ ೧೨ನೇ ಶತಮಾನದ ಶರಣರಿಗೆ ಕಾಯಕ-ದಾಸೋಹ ತತ್ವಗಳು ಅತ್ಯಂತ ಪ್ರಮುಖವಾದ ಅಂಶಗಳೆನಿಸಿದವು. ಒಟ್ಟು ೧೨ನೇ ಶತಮಾನದ ಚಳುವಳಿ ಕಾಯಕ ಜೀವಿಗಳಿಂದ ಕೂಡಿದುದಾಗಿತ್ತು. ಅಂಬಿಗರ ಚೌಡಯ್ಯ (ಅಂಬಿಗ) ಡೋಹರ ಕಕ್ಕಯ್ಯ(ಡೋಹರ) ಹಡಪದ ಅಪ್ಪಣ್ಣ(ಕ್ಷೌರಿಕ), ಜೇಡರ ದಾಸಿಮಯ್ಯ(ನೇಯ್ಗೆ), ವೈದ್ಯ ಸಂಗಣ್ಣ(ವೈದ್ಯ), ಬಹುರೂಪಿ ಚೌಡಯ್ಯ(ವಿಧೂಷಕ), ಮಡಿವಾಳ ಮಾಚಯ್ಯ(ಅಗಸ) ಆಯ್ದಕ್ಕಿ ಲಕ್ಕಮ್ಮ(ಅಕ್ಕಿ ಆರಿಸುವ ಕಾಯಕ), ಸೂಳೆ ಸಂಕವ್ವೆ(ವೇಶ್ಯೆ) ಮುಂತಾದವರೆಲ್ಲ ತಮ್ಮ ಕಾಯಕವನ್ನು ಅತ್ಯಂತ ನಿಷ್ಠೆಯಿಂದ ಮಾಡುವವರಾಗಿದ್ದರು. ಆಯ್ದಕ್ಕಿ ಮಾರಯ್ಯನಂತೂ 'ಕಾಯಕವೇ ಕೈಲಾಸ' ಎನ್ನುವ ಮೂಲಕ ಕಾಯಕದ ಮಹತ್ವವನ್ನು ಸಾರಿದ್ದಾನೆ.

ಶರಣರ ದೃಷ್ಟಿಯಲ್ಲಿ ಕಾಯಕವೆನ್ನುವುದು ಸ್ವಂತಕ್ಕಾಗಿ ಗಳಿಸಬೇಕೆಂಬ ಆಸೆಯಿಂದ ಮಾಡುವ ಶ್ರಮವಲ್ಲ. ದುಡಿಮೆಗೆ ಪ್ರತಿಫಲವಾಗಿ ಬಂದ ಕೂಲಿ, ಖಾಸಗೀ ಒಡೆತನಕ್ಕೆ ಸೇರಿಕೊಳ್ಳದೇ ಅದು ಗಣಕ್ಕೆ ಸೇರುವಂತಹುದಾಗಿರುತ್ತದೆ. ಈ ಬಗ್ಗೆ ಬಸವಣ್ಣನವರ ವಚನವೊಂದು ಈ ರೀತಿ ಹೇಳುತ್ತದೆ.

'ನಾನು ಆರಂಭವ ಮಾಡುವೆನಯ್ಯ ಗುರುಪೂಜೆಗೆಂದು,
ನಾನು ಬೆವಹಾರ ಮಾಡುವೆನಯ್ಯ ಲಿಂಗಾರ್ಚನೆಗೆಂದು,
ನಾನು ಪರ ಸೇವೆಯ ಮಾಡುವೆನಯ್ಯಾ ಜಂಗಮ ದಾಸೋಹಕ್ಕೆಂದು,
ನಾನಾವ ಕರ್ಮವ ಮಾಡಿದಡೆಯೂ
ಆ ಕರ್ಮ ಫಲಭೋಗವ ನೀನು ಕೊಡುವೆ ಎಂಬುದ ನಾ ಬಲ್ಲೆನು
ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದು ಕ್ರಿಯೆಯ ಮಾಡೆನು.
ನಿಮ್ಮ ಸೊಮ್ಮಿಂಗೆ ಸಲಿಸುವೆನು
ನಿಮ್ಮಾಣೆ ಕೂಡಲಸಂಗಮದೇವಾ ! ~~(೧-೭೦೯)~~

(ಡಾ.ಆರ್.ಸಿ.ಹಿರೇಮಠ, ಡಾ.ಎಂ.ಎಸ್.ಸುಂಕಾಪುರ(ಸಂ), ೧೯೭೬, ಪು.೧೭೮)

ಬಸವಣ್ಣನ ಪ್ರಕಾರ ಸಕಲ ಸಂಪತ್ತೂ ಶಿವನ ಕೃಪೆ(ಈ ಶಿವ ಮತ್ತು ಗಣಲಾಂಛನ ಲಿಂಗ ಎರಡೂ ಒಂದೆ). ಆದ್ದರಿಂದ ಶಿವನಿಂದ ಬಂದ ದ್ರವ್ಯವನ್ನು ಮರಳಿ ಶಿವಸ್ವರೂಪಿಯಾದ ಗುರುಲಿಂಗ ಜಂಗಮಕ್ಕೆ ಅರ್ಪಿಸುತ್ತೇನೆ ಎನ್ನುತ್ತಿದ್ದಾನೆ.('ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದು ಕ್ರಿಯೆಯ ಮಾಡೆನು)

ಈ ರೀತಿ ಕಾಯಕದಿಂದ ಗಳಿಸಿದ್ದನ್ನು ಸಮುದಾಯಕ್ಕೆ ಅರ್ಪಿಸುವ ಬಗ್ಗೆ ಆತ ಪ್ರಮಾಣವನ್ನು ಈ ವಚನದಲ್ಲಿ ಮಾಡುತ್ತಿದ್ದಾನೆ. (ನಿಮ್ಮ ಸೊಮ್ಮಿಂಗೆ ಸಲಿಸುವೆನು ನಿಮ್ಮಾಣೆ ಕೂಡಲಸಂಗಮದೇವಾ') ಇದೇ ದಾಸೋಹ. ಕಾಯಕದ ಮೂಲ ಉದ್ದೇಶವೇ ಸಮುದಾಯದ ಹಿತಕ್ಕಾಗಿ ಅರ್ಪಿಸುವುದು. ಇಲ್ಲಿ ಖಾಸಗಿ ಒಡೆತನ ಎಂಬುದೇ ಇಲ್ಲ. 'ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ ಇಂದಿಂಗೆ, ನಾಳೆಂಗೆ' ಎಂದೆನ್ನದೆ, ಪ್ರತಿದಿನವೂ ಕಾಯಕವನ್ನು ಮಾಡಿ ಅದನ್ನು ಸಮುದಾಯಕ್ಕೆ ಅರ್ಪಿಸತಕ್ಕದ್ದು. ಶರಣರ ಪ್ರಕಾರ ದಾಸೋಹರಹಿತ ಕಾಯಕಕ್ಕಾಗಲೀ, ಕಾಯಕರಹಿತ ದಾಸೋಹಕ್ಕಾಗಲೀ ಮಹತ್ವವಿಲ್ಲ. ಇವೆರಡೂ ವೀರಶೈವದಲ್ಲ ನೈತಿಕತೆಯ ತಿರುಳುಗಳಾಗಿವೆ. ದಾಸೋಹವು ಕಾಯಕದ ಫಲವೂ ಹೌದು ಮತ್ತು ಉದ್ದೇಶವೂ ಹೌದು. ಕಾಯಕದಲ್ಲಿ ಯಾವುದೇ ಕೀಳುತನ ಎಂಬುದಿಲ್ಲ. ಯಾರು ಯಾವುದಾದರೂ ಕಾಯಕವನ್ನು ಮಾಡಬಹುದಾಗಿತ್ತು. ಮತ್ತು ಎಲ್ಲ ರೀತಿಯ ಕಾಯಕಗಳನ್ನು ಸಮಾನ ರೀತಿಯಲ್ಲಿ ನೋಡಲಾಗುತ್ತಿತ್ತು. 'ಆವ ಕಾಯಕವ ಮಾಡಿದರೂ ಒಂದೇ ಕಾಯಕವಯ್ಯಾ'(ಗಂಗಮ್ಮ) ಎಂದು ತಿಳಿಸಲಾಗಿತ್ತು. ಇಂತಹ ಕಾಯಕದಿಂದ ಬಂದ ಪ್ರತಿಫಲವನ್ನು ದಾಸೋಹದ ಮೂಲಕ ಸಮುದಾಯದ ದುರ್ಬಲರಿಗೆ, ವೃದ್ಧರಿಗೆ ನೀಡಲಾಗುತ್ತಿತ್ತು. ಇದರಿಂದಾಗಿ ಪ್ರಬಲ-ದುರ್ಬಲ, ಮೇಲು-ಕೀಳು ಮುಂತಾದ ಅಸಮಾನತೆಗಳು ಅಳಿದು ಭ್ರಾತೃತ್ವ ಬೆಳೆಯಲು ಸಾಧ್ಯವಾಯಿತು. ಖಾಸಗಿ ಸಂಪತ್ತು ಸಂಗ್ರಹಿಸುವುದನ್ನು ಚಳುವಳಿ ಉಗ್ರವಾಗಿ ಖಂಡಿಸಿತು. 'ಹಾವು ತಿಂದವರ ನುಡಿಸಬಹುದು, ಗರ ಹೊಡೆದವರ ನುಡಿಸಬಹುದು ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ' ಎಂದು ಬಸವ ಸ್ವಯಂ ಪ್ರೇರಿತ ಸಂಪತ್ತಿನ ಸಂಗ್ರಹವನ್ನು ತಿರಸ್ಕರಿಸಿದನು. ಹಾಗಾಗಿ ಶರಣರು ತನ್ನದು ಎಂದು ಏನನ್ನೂ ಇಟ್ಟುಕೊಳ್ಳದೆ, ಎಲ್ಲವನ್ನೂ ಸಮುದಾಯಕ್ಕೆ ಅರ್ಪಿಸುವಂತಾಯಿತು.

ಪ್ರಾಚೀನ ಗಣಮಾದರಿಯ ಜೀವನ ಪದ್ಧತಿಯನ್ನು ೧೨ನೇ ಶತಮಾನದಲ್ಲಿ ಮತ್ತೆ ತರಬೇಕೆಂದು ಪ್ರಯತ್ನಿಸಿದ ಶರಣರು ಹಿಂದಿನ ಕಾಲದಲ್ಲಿ ದೈಹಿಕ ಶ್ರಮಕ್ಕೆ ಮತ್ತು ಸಮುದಾಯದ ಹಿತಕ್ಕೆ ಕೊಡುತ್ತಿದ್ದ ಮಹತ್ವವನ್ನು ಕಾಯಕ-ದಾಸೋಹಗಳಂತಹ ತತ್ವಗಳ ಮೂಲಕ ಜೀವನದಲ್ಲಿ ಅಳವಡಿಸಿಕೊಂಡರು.

### ೪.೪.೩. ಸ್ತ್ರೀ ಸಮಾನತೆ

ಪ್ರಾಚೀನ ಗಣಜೀವನ ಮಾತೃಪ್ರಧಾನವಾಗಿತ್ತು. ಅಲ್ಲಿ ಗಂಡು-ಹೆಣ್ಣು ಎಂಬ ಅಸಮಾನತೆ ಇರಲಿಲ್ಲ. ಉತ್ಪಾದನೆಯ ಪ್ರಾಥಮಿಕ ಹಂತವಾದ ಪ್ರಾಚೀನ ಗಣಪದ್ಧತಿಯಲ್ಲಿ ಎಲ್ಲರೂ ಕೂಡಿ ಬಾಳುತ್ತಿದ್ದರು. ಹೆಣ್ಣು ಯಾರೊಂದಿಗಾದರೂ ಲೈಂಗಿಕ ಸಂಪರ್ಕವನ್ನು ಇಟ್ಟುಕೊಳ್ಳಬಹುದಾಗಿತ್ತು. ಹಾಗಾಗಿ ಹುಟ್ಟುವ ಮಕ್ಕಳನ್ನು ಈಗಿನಂತೆ ತಂದೆಯ ಹೆಸರಿನೊಂದಿಗೆ ಗುರುತಿಸದೆ, ತಾಯಿಯ ಮೂಲಕ ಗುರುತಿಸಲಾಗುತ್ತಿತ್ತು. ಮಕ್ಕಳನ್ನು ಹೆತ್ತು ಸಾಕುವ ತಾಯಿಯ ಸುತ್ತ ಸಮಾಜ ಕೇಂದ್ರಿತವಾಗಿತ್ತು. ಹಾಗಾಗಿ ಪ್ರಾಚೀನ

ದೇವರುಗಳೆಲ್ಲ ಸ್ತ್ರೀಯರೆ ಆಗಿದ್ದರು. ಮಹಾಭಾರತದಲ್ಲಿ ಹೆಸರಿಸಲಾಗಿರುವ ಹದಿನೆಂಟು ಗಣಗಳನ್ನು ಸ್ತ್ರೀಯರಿಂದಲೆ ಗುರುತಿಸಿರುವುದನ್ನು ನೋಡಿದರೆ ಆ ಸಂದರ್ಭದಲ್ಲಿ ಸ್ತ್ರೀಯ ಪ್ರಾತಿನಿಧ್ಯ ಎಷ್ಟಿತ್ತೆಂಬುದು ಸ್ಪಷ್ಟವಾಗುತ್ತದೆ.

ಮುಂದೆ ಉತ್ಪಾದನಾ ಶಕ್ತಿಗಳು ವಿಕಾಸ ಹೊಂದಿದಂತೆ ಆಹಾರ ಸಂಗ್ರಹಣೆ ಹೆಚ್ಚಾಗಿ ಖಾಸಗಿ ಆಸ್ತಿಯನ್ನು ಕ್ರೂಢೀಕರಿಸುವುದು ಸಾಧ್ಯವಾಯಿತು. ಇದರಿಂದಾಗಿ ಶ್ರೀಮಂತ ಬಡವ ಎನ್ನುವ ವರ್ಗಬೇಧ ಉಂಟಾಗಿ ಹೊನ್ನು ಮಣ್ಣಿನೊಂದಿಗೆ ಹೆಣ್ಣನ್ನೂ ಸಂಪತ್ತಿನಂತೆ ಕಾಣಲಾಯಿತು. ಪುರುಷ ಪ್ರಧಾನ ವ್ಯವಸ್ಥೆ ಜಾರಿಗೆ ಬಂದ ಈ ಸಂದರ್ಭದಲ್ಲಿ ಸ್ತ್ರೀಯು ಪೂರ್ತಿಯಾಗಿ ಗಂಡಿನ ಅಡಿಯಾಳಾಗಿ ಯಾವುದೇ ಸ್ವಾತಂತ್ರ್ಯವಿಲ್ಲದೆ ಶೋಷಣೆಗೊಳಗಾದಳು.

ಬದಲಾದ ಕಾಲಮಾನಕ್ಕನುಗುಣವಾಗಿ ೧೨ನೇ ಶತಮಾನದಲ್ಲಿ ಶರಣರು ಸ್ತ್ರೀಗೆ ಸಮಾಜದಲ್ಲಿ ಮತ್ತೆ ಪ್ರಾಮುಖ್ಯತೆಯನ್ನು ತಂದುಕೊಟ್ಟರು. ಹಾಗೆ ಸ್ತ್ರೀಗೆ ಪ್ರಾಮುಖ್ಯತೆಯನ್ನು ಕೊಡುವಾಗ ಪ್ರಾಚೀನ ಗಣ ಪದ್ಧತಿಯಲ್ಲಿದ್ದಂತೆ ಸ್ವೇಚ್ಛ ಕಾಮ ಪ್ರವೃತ್ತಿಯನ್ನು ಕೈಬಿಟ್ಟು ಸ್ತ್ರೀಗೆ ಶಿಕ್ಷಣವನ್ನು, ಸಮುದಾಯದ ಇತರ ಚಟುವಟಿಕೆಗಳಲ್ಲಿ ಸಮಾನ ಅವಕಾಶಗಳನ್ನು ಒದಗಿಸಿಕೊಟ್ಟರು.

'ಶರಣಸತಿ ಲಿಂಗಪತಿ' ಎನ್ನುವ ಮೂಲಕ ಒಟ್ಟು ಶರಣ ಸಮುದಾಯವನ್ನೆ ಸ್ತ್ರೀ ಎನ್ನುವಂತೆ ಚಿತ್ರಿಸುತ್ತಾರೆ. ತಮ್ಮ ಗಣದ ಲಾಂಛನವಾದ ಲಿಂಗವನ್ನು ಪತಿ(ಗಂಡೆಂದು) ಎಂದು ಭಾವಿಸಿ ಅದಕ್ಕೆ ನಿಷ್ಠೆಯನ್ನು ತೋರುತ್ತಾರೆ. ಪ್ರಾಚೀನ ಗಣಪದ್ಧತಿಯೂ ಇದೇ ರೀತಿ ಮಾತೃಪ್ರಧಾನವಾಗಿದ್ದು, ಗಣಲಾಂಛನಕ್ಕೆ ತೀವ್ರವಾದ ನಿಷ್ಠೆಯನ್ನು ತೋರಲಾಗುತ್ತಿತ್ತು. ೧೨ನೇ ಶತಮಾನದಲ್ಲಿ ಸ್ತ್ರೀಗೆ ಕೊಟ್ಟ ಪ್ರಾಧಾನ್ಯತೆಯಿಂದಾಗಿ ಅಕ್ಕಮಹಾದೇವಿಯಂತಹ ದಿಗಂಬರೆ ಅನುಭವ ಮಂಟಪದಲ್ಲಿ ಎಲ್ಲರೊಂದಿಗೆ ಚರ್ಚಿಸಲು ಸಾಧ್ಯವಾಯಿತು. ನೀಲಾಲೋಚನೆ, ಗಂಗಾಬಿಕೆ, ಮುಕ್ತಾಯಕ್ಕನಂತಹ ಸ್ತ್ರೀಯರು, ಸೂಳೆ ಸಂಕವ್ವೆ, ಕದಿರೆ ಕಾಯಕದ ರಮ್ಮೆವ್ವೆ, ಆಯ್ದಕ್ಕಿ ಲಕ್ಕಮ್ಮನಂತಹ ಕೆಳವರ್ಗದವರೂ ವಚನಗಳನ್ನು ಬರೆಯಲು ಸಾಧ್ಯವಾಯಿತು. ಅಕ್ಕಮಹಾದೇವಿ ತನ್ನದೊಂದು ವಚನದಲ್ಲಿ 'ಎನ್ನ ದೇವ ಚೆನ್ನಮಲ್ಲಿಕಾರ್ಜುನ ನೆಂಬ ಗುರುವಂಗೆ ಜಗವೆಲ್ಲ ಹೆಣ್ಣು ನೋಡಾ ಅಯ್ಯಾ' ಎಂದು ಹೇಳುತ್ತಾಳೆ. ಸಿದ್ಧರಾಮನಂತಹವರು 'ಹೆಣ್ಣು ಹೆಣ್ಣಲ್ಲ, ಹೆಣ್ಣು ರಾಕ್ಷಸಿಯಲ್ಲ, ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ' ಎಂದು ಹೇಳುತ್ತಾರೆ.

ಹೀಗೆ ತಮ್ಮ ಚಳುವಳಿಯಲ್ಲಿ ಸ್ತ್ರೀಗೆ ಸಮಾನ ಸ್ಥಾನಮಾನವನ್ನು ನೀಡಿದ ಶರಣರು ವೈದಿಕ ಧರ್ಮ ಅದುವರೆಗೂ ಸ್ತ್ರೀಯನ್ನು ಹೀನವಾಗಿ ನಡೆಸಿಕೊಂಡಿದ್ದನ್ನು ಖಂಡಿಸಿ ಪ್ರಾಚೀನ ಗಣಮಾದರಿಯಲ್ಲಿ ಸ್ತ್ರೀಗಿರುವ ಉನ್ನತ ಸ್ಥಾನಮಾನವನ್ನು ಬದಲಾದ ಪರಿಸ್ಥಿತಿಗನುಗುಣವಾಗಿ ಮರಳಿ ತಂದುಕೊಡುವ

ಪ್ರಯತ್ನವನ್ನು ಮಾಡಿದ್ದಾರೆ. ಪ್ರಾಚೀನ ಗಣ ಜೀವನವನ್ನು ಆಧರಿಸಿ ಬದುಕಬೇಕೆಂದು ಅಭಿಲಾಷೆ ಹೊಂದಿದ ೧೨ನೇ ಶತಮಾನದ ಶರಣರಿಗೆ ಸ್ತ್ರೀಗೆ ಸಮಾಜದಲ್ಲಿ ಉನ್ನತ ಸ್ಥಾನಮಾನವನ್ನು ತಂದುಕೊಡುವುದು ಪ್ರಮುಖ ಅವಶ್ಯಕತೆಯಾಗಿತ್ತು.

## ೪.೫. ವಿವಿಧ ಗಣಸಮೂಹಗಳು

೧೨ನೇ ಶತಮಾನದ ಶರಣ ಚಳುವಳಿ ತಾನು ಜಾರಿಗೆ ತಂದ ಇಷ್ಟಲಿಂಗ, ಕಾಯಕ, ದಾಸೋಹ, ಸ್ತ್ರೀ ಸಮಾನತೆ ಮುಂತಾದ ತತ್ವ ಸಿದ್ಧಾಂತಗಳಲ್ಲಿ ಪ್ರಾಚೀನ ಗಣ ಜೀವನ ಪದ್ಧತಿಯನ್ನು ಅನುಸರಿಸುವುದು ಕಂಡುಬರುತ್ತದೆ. ಹಾಗಾಗಿ ಬಸವಾದಿ ಶರಣರನ್ನು ಲಕ್ಷದ ತೊಂಬತ್ತಾರು ಸಾವಿರ ಗಣಂಗಳೆಂದೊ, ಅಮರಗಣಂಗಳೆಂದೊ ಕರೆಯಲಾಗುತ್ತದೆ. ಈ ಶರಣರು ಬರೆದ ವಚನಗಳನ್ನು ಗುಬ್ಬಿಯ ಮಲ್ಲಣಾರ್ಯ (೧೫ನೇ ಶತಮಾನ) 'ಗಣಭಾಷಿತರತ್ನ ಮಾಲೆ' ಎಂದು ಕರೆಯುತ್ತಾನೆ. ಅಲ್ಲದೆ ೧೨ನೇ ಶತಮಾನದ ಶರಣರು ಬರೆದ ಹಲವಾರು ವಚನಗಳಲ್ಲಿ ನಮಗೆ ಪ್ರಮಥಗಣ, ರುದ್ರಗಣ, ವೃಷಭಗಣ, ತಿಷಷ್ಠಿ ಪುರಾತನ ಗಣ, ಷೊಡಶಗಣ, ತೇರಸಗಣ, ದಶಗಣ ಮುಂತಾದ ಗಣಗಳ ವಿಂಗಡನೆಗಳೂ ಕಂಡುಬರುತ್ತವೆ.

ಮರ್ತ್ಯಲೋಕದ ಮಹಾಮನೆ ಹಾಳಾಗಿ ಹೋಗಬಾರದೆಂದು
ಕರ್ತಾರನಟ್ಟಿದನಯ್ಯ ಒಬ್ಬ ಶರಣನ
ಆ ಶರಣ ಬಂದು ಕಲ್ಯಾಣವೆಂಬ ಶಿವಪುರವ ಕೈಲಾಸವ ಮಾಡಿ
ರುದ್ರಗಣ ಪ್ರಮಥಗಣಂಗಳೆಲ್ಲರ ಹಿಡಿತಂದು
ಅಸಂಖ್ಯಾತರೆಂಬ ಹೆಸರಿಟ್ಟು ಕರೆದು
ಭಕ್ತಿಯ ಕುಲಸ್ಥಳದ ಶೃತದೃಷ್ಟ ಪವಾಡದಿಂದ ಮೆರೆಯೆಂದು ತೋಳ
ಜಗವರಿಯಲು ಶಿವಾಚಾರದ ಧ್ವಜವನೆತ್ತಿಸಿ
ಮರ್ತ್ಯಲೋಕ ಶಿವಲೋಕವೆರಡಕ್ಕೆ ನಿಚ್ಚಣಿಗೆಯಾದನು
ಆ ಶಿವಶರಣನ ಮನೆಯೊಳಗಿಪ್ಪ ಶಿವಗಣಂಗಳ ತಿಂತಿಳಿಯ ಕಂಡು
ಎನ್ನ ಮನ ಉಬ್ಬಿ ಕೊಬ್ಬಿ ಓಲಾಡುತ್ತಿದ್ದೆನಯ್ಯ
ನಮ್ಮ ಗುಹೇಶ್ವರನ ಶರಣ ಸಂಗನಬಸವಣ್ಣನ
ದಾಸೋಹದ ಘನವೇನೆಂದೆನಬಹುದು ನೋಡಾ ಸಿದ್ಧರಾಮಯ್ಯ|

(ಡಾ.ಆರ್.ಸಿ.ಹಿರೇಮಠ, ಡಾ.ಎಂ.ಎಸ್.ಸುಂಕಾಪುರ(ಸಂ), ೧೯೭೬, ಪು.೩೪೯)

ಅಲ್ಲಮಪ್ರಭುವಿನ ಈ ವಚನದಲ್ಲಿ ಕಂಡುಬರುವ ರುದ್ರಗಣ, ಪ್ರಮಥ ಗಣಗಳಾಗಲಿ ಇನ್ನಿತರ ವೀರಶೈವ ಕೃತಿಕಾರರು ನಮೂದಿಸಿದ ಗಣಗಳಾಗಲಿ ಅವು ಪ್ರಾಚೀನ ಗಣಮಾದರಿಯ ರೀತಿಯಲ್ಲಿ ಜೀವನ ನಡೆಸುತ್ತಿದ್ದ ಶೈವಪಂಥಕ್ಕೆ ಸೇರಿದವುಗಳು. ಈ ವಿವಿಧ ಗಣಗಳ ಬಗ್ಗೆ ಬಸವಣ್ಣನ ಸಮಕಾಲೀನನಾದ ಪಂಡಿತಾರಾಧ್ಯನು ಬರೆದ 'ಗಣಸಹಸ್ರ ನಾಮಾವಳಿ' ಎನ್ನುವ ಕೃತಿ ಹೆಚ್ಚಿನ ವಿವರಣೆಯನ್ನು ನೀಡುತ್ತದೆ.

ಈ ಕೃತಿಯಲ್ಲಿ ನಮೂದಿಸಿರುವಂತೆ ಪ್ರಮಥಗಣರು-೪೬೫, ರುದ್ರಗಣರು-೧೭೧, ವೃಷಭ ಯೋಗಾಚಾರ್ಯರು -೨೮, ತ್ರಿಷಷ್ಠಿ ಪುರಾತನರು-೬೩, ಷೋಡಶಗಣರು-೧೬, ತೇರಸಗಣರು-೧೩, ದಶಗಣರು-೧೦, ಅಮರಗಣಂಗಳು-೨೩೪ ಒಟ್ಟಾಗಿ ಒಂದು ಸಾವಿರ ಗಣಸದಸ್ಯರ ಬಗ್ಗೆ ಈ ಕೃತಿ ಉಲ್ಲೇಖಿಸುತ್ತದೆ. 'ಇವುಗಳಲ್ಲಿ ಪ್ರಮಥಗಣ-ರುದ್ರಗಣದವರು ಲೌಕಿಕ ವ್ಯಕ್ತಿಗಳಲ್ಲ, ಅವರು ಶಿವಲೋಕದ ಶಿವನ ಗಣಕ್ಕೆ ಸೇರಿದವರು. ಇನ್ನುಳಿದ ಆರು ಗಣಗಳು ಕಾಲದಿಂದ ಕಾಲಕ್ಕೆ ಕ್ರಮವಾಗಿ ವೀರಶೈವರಿಗೆ ಪೂಜ್ಯರಾದ ಚಾರಿತ್ರಿಕ ವ್ಯಕ್ತಿಗಳ ಸಾಂಘಿಕ ಸಮೂಹಗಳು'(ಎಲ್.ಬಸವರಾಜ(ಸಂ), ೧೯೬೩, ಪು.೭), ಮೂರನೆಯವರಾದ ಯೋಗಾಚಾರ್ಯರು ಅಥವಾ ವೃಷಭಗಣದವರು ಪಾಶುಪತ ಪಂಥದ ಸಂತ ಪರಂಪರೆಗೆ ಸೇರಿದವರು. ಈ ಗಣಗಳ ಸದಸ್ಯರ ಬಗ್ಗೆ ಸಿದ್ಧನಂಜೇಶ ಗುರುರಾಜ ಚಾರಿತ್ರ್ಯದ ೯ನೇ ಸಂಧಿಯಲ್ಲಿ ವಿವರಿಸುತ್ತಾ(ಪದ್ಯ-೩೫) ಅಭಿರಾಮ, ಗೌತಮ, ಶಿಖಂಡಿಸ್ವಾಮಿ, ನಕುಲೀಶ ಮುಂತಾದವರೆ ಈ ವೃಷಭಗಣದವರೆನ್ನುತ್ತಾನೆ. ನಾಲ್ಕನೇಯವರಾದ ತ್ರಿಷಷ್ಠಿ ಪುರಾತನ ಗಣಗಳ ಕುರಿತು ನಮಗೆ ಸಾಕಷ್ಟು ತಿಳಿದುಬರುತ್ತದೆ. ಇವರು ತಮಿಳುನಾಡಿನ ನಾಯನಾರ್‌ಗಳಾಗಿದ್ದು, ಇವರ ಬಗ್ಗೆ ಹರಿಹರನು 'ತ್ರಿಷಷ್ಠಿ ಪುರಾತನರ ರಗಳೆ' ಎನ್ನುವ ಕೃತಿಯನ್ನು ಬರೆದಿದ್ದಾನೆ. 'ಪ್ರಾಚೀನ ಶೈವಪಂಥದವರಾದ ಈ ಅರವತ್ತು ಮೂರು ಜನ ನಾಯನಾರ್ ಗಳಿಗೂ ಮುಂದೆ ಬಂದ ವೀರಶೈವರಿಗೂ ಒಂದೇ ಬಗೆಯ ಶಿವಾಗಮಗಳು(ಕ್ರಮವಾಗಿ ಪೂರ್ವೋತ್ತರ ಭಾಗಗಳು) ಆಧಾರ'(ಅದೇ, ಪು.೭) ಆಗಿರುವುದನ್ನು ನೋಡಿದರೆ ಈ ತ್ರಿಷಷ್ಠಿ ಪುರಾತನ ಗಣಗಳ ಮುಂದುವರೆದ ಪರಂಪರೆಯೆ ಈ ವೀರಶೈವ ಅಮರಗಣಂಗಳು(ಲಕ್ಷದ ತೊಂಬತ್ತಾರು ಸಾವಿರ ಗಣ) ಮತ್ತು ನೂತನ ಗಣಂಗಳು ಎನಿಸುತ್ತದೆ. ಈ ತ್ರಿಷಷ್ಠಿ ಪುರಾತನಗಣದ ಸದಸ್ಯರುಗಳೆಂದರೆ ತಿರುನೀಲಕಂಠ, ಮರೆಮಿಂಡದೇವ, ಕಲಿಗಣನಾಥ, ಕರಿಕಾಲಮ್ಮೆ, ವೀರಪೆರ್ಮಾಡಿದೇವ, ಕಲಿಕಂಬ ಕಣ್ಣಪ್ಪ, ಪಿಳ್ಳೈನೈನಾರು, ಮುಂತಾದ ಅರವತ್ಮೂರು ಜನ ಸದಸ್ಯರಿದ್ದಾರೆ. ತ್ರಿಷಷ್ಠಿ ಪುರಾತನ ಗಣದ ನಂತರದವರೆಂದರೆ ಷೋಡರ ಗಣದವರು. ಈ ಗಣದ ಸದಸ್ಯರೆಂದರೆ ಹೊನ್ನಯ್ಯ, ಪಾಂಡ್ಯನಾಯಕ, ನಾಗಿದೇವ, ಗುಡ್ಡವ್ವೆ, ಚಿಕ್ಕುಲಿಗೆ ನಾಗಯ್ಯ, ಕಂದುಲಿಗೆ ನಾಗಿದೇವತೆ, ಪಡಿಹಾರಿ ಸೋಮಯ್ಯ, ಬಾಚಲದೇವಿ, ಕಿನ್ನರ ಬ್ರಹ್ಮಯ್ಯ, ಮುಂತಾದವರು. ಇವರುಗಳಲ್ಲಿ ಪ್ರಮುಖಳಾದವಳೆಂದರೆ ಗುಡ್ಡವ್ವೆ. ಇವಳ ಬಗ್ಗೆ ಲಕ್ಕಣ್ಣ ದಂಡೇಶನು ತನ್ನ ಶಿವತತ್ವ ಚಿಂತಾಮಣಿಯಲ್ಲಿ ವಿವರಿಸಿದ್ದಾನೆ. ಈ ಕೃತಿಯಲ್ಲಿ ವಿವರಿಸಿದಂತೆ(೩೬ನೇ ಸಂಧಿ) ಶಿವನ ಉಗ್ರಪ್ರತಿಪಾದಕರಾದ ಈ ಷೋಡಶಗಣದವರು ತಮ್ಮ ತಲೆಗಳನ್ನು ಕತ್ತರಿಸಿಕೊಂಡು ಕೈಲಾಸವನ್ನು ಸೇರಿದವರಾಗಿದ್ದಾರೆ. ಶಿವಗಣದ ಬಗೆಗೆ ಪ್ರಶ್ನಾತೀತ ನಿಷ್ಠೆಯನ್ನು ಈ ಷೋಡಶಗಣದ ಸದಸ್ಯರಲ್ಲಿ ಕಾಣುತ್ತೇವೆ.

ನಂತರ ಬಂದವರು ತೇರಸಗಣದವರು 'ಇವರು ವೀರಶೈವಕ್ಕೆ ಧಕ್ಕೆ ಬಂದಾಗ ಅದರ ರಕ್ಷಣೆಗಾಗಿ ಪ್ರಾಣವನ್ನು ಪಣವಾಗಿಟ್ಟ ಮೂರುಡಿಗೆ ನಾಚಯ್ಯನೆಂಬುವನ ಬೆಂಬಲಿಗರಾಗಿದ್ದ ವೀರ 'ಶಿವ ಸಹೋದರು

ಹರಿಹರನು ಮಾರುಡಿಗೆ ನಾಚಯ್ಯನ ರಗಳೆಯಲ್ಲಿ ತೇರಸರ ಪ್ರಸ್ತಾಪ ಮಾಡಿ ಅವರಿಗೂ ನಾಚಯ್ಯನಿಗೂ ಇದ್ದ ಈ ಸಂಬಂಧವನ್ನು ಸ್ಪಷ್ಟಪಡಿಸಿದ್ದಾನೆ.'(ಎಲ್.ಬಸವರಾಜು, ೧೯೬೩, ಪು.೯) ಈ ತೇರಸ ಗಣದ ಇನ್ನಿತರ ಸದಸ್ಯರೆಂದರೆ ಸಿಂಗಿದೇವ, ಬೊಮ್ಮಸೆಟ್ಟಿ, ಸಾತ್ವಿಕ ಸಂಗಯ್ಯ, ಪಡಿಹಾರಿ ಬಸವ, ಮೋಳಿಗೆಯ ನಿಜಸಂಗವ್ವ, ಹೂವಿನ ಬಾಚಿದೇವಯ್ಯ, ಜಂಗಮಪ್ರೇಮಿ ಬೊಪ್ಪಲ ದೇವಿ ಮುಂತಾದವರಿದ್ದಾರೆ. ತೇರಸಗಣದ ಮಾರುಡಿಗೆ ನಾಚಯ್ಯನು 'ತನ್ನ ಬಳಿ ಬಂದ ದಶಗಣದ ಸಿಂಗಿದೇವನಿಗೆ ಸಕಲ ರೋಗಂಗಳಿಗೆ ಸರ್ವಪ್ರಸಾದಮಂ ಶರಣರರಿಯಲು ಕೊಟ್ಟು ಉಪದೇಶವಿತ್ತು ಕೈಲಾಸಕೆ ಸಂದ'(ಎಲ್. ಬಸವರಾಜು, ೧೯೬೩, ಪು.೯) ಬಗ್ಗೆ ವಿವರಣೆ ಇದೆ. ಇದು ದಶಗಣದವರು ತೇರಸಗಣದ ಮುಂದಿನ ಪರಂಪರೆ ಎಂದು ಸ್ಪಷ್ಟಪಡಿಸುತ್ತದೆ. ದಶಗಣದಲ್ಲಿ ಬರುವ ಸಿಂಗಿದೇವನು ಮಾರುಡಿಗೆ ನಾಚಯ್ಯನ ಶಿಷ್ಯನಾಗಿದ್ದಾನೆ. ಈ ಗಣದ ಇನ್ನಿತರ ಸದಸ್ಯರೆಂದರೆ, ಬೊಪ್ಪಲದೇವಿ, ಕಾಳವ್ವೆ, ಚಾರುಬೀಚಯ್ಯ, ಮಾಯದೇವ, ಮೈಲಿಸಿಂಗಿದೇವ, ಕಾಮಲದೇವ ಮುಂತಾದವರಿದ್ದಾರೆ.

ದಶಗಣದ ನಂತರ ಬರುವವರೆ ೧೨ನೇ ಶತಮಾನದ ಅಮರಗಣಂಗಳು ಅಥವಾ ಲಕ್ಷದ ತೊಂಬತ್ತಾರು ಸಾವಿರ ಗಣಂಗಳು ಪಂಡಿತಾರಾಧ್ಯ(೧೨ನೇ ಶತಮಾನ) ಬರೆದಿರುವ 'ಗಣಸಹಸ್ರ ನಾಮಾವಳಿ'ಯಲ್ಲಿ ಅಮರಗಣಂಗಳ ಸಂಖ್ಯೆ ೨೩೪ ಎಂದಾಗಿದೆ. ಆದರೆ ಇದು ನಿಖರವಾದ ಸಂಖ್ಯೆಯಲ್ಲ. ಏಕೆಂದರೆ ೧೨ನೇ ಶತಮಾನದ ಶರಣರೆ ತಮ್ಮ ವಚನಗಳಲ್ಲಿ 'ಲಕ್ಷದ ತೊಂಬತ್ತಾರು ಸಾವಿರ' ಶಿವಶರಣರು ಇರುವ ಬಗ್ಗೆ ಹೇಳಿಕೊಂಡಿದ್ದಾರೆ. ೧೫ನೇ ಶತಮಾನದ ಶಿವಗಣಪ್ರಸಾದಿ ಮಹಾದೇವಯ್ಯ, ತೋಂಟದ ಸಿದ್ಧಲಿಂಗಯತಿಗಳು, ವಿರೂಪಾಕ್ಷ ಪಂಡಿತ(ಚೆನ್ನಬಸವಪುರಾಣ) ೧೨ನೇ ಶತಮಾನದ ಶರಣರನ್ನು ೭೭೦ ಅಮರಗಣಂಗಳೆಂದು ವಿವರಿಸುತ್ತಾರೆ. 'ಡಾ.ಪಿ.ಜಿ. ಹಳಕಟ್ಟಿಯವರು 'ಏಳುನೂರ ಎಪ್ಪತ್ತು ಅಮರಗಣಾಧೀಶ್ವರ ಚರಿತ್ರೆಗಳು' ಎಂಬ ಗ್ರಂಥದಲ್ಲಿ ಪಾಲ್ಕುರಿಕೆಯ ಸೋಮನಾಥ ಹೇಳಿದ ೨೩೪ ಅಮರಗಣಂಗಳ ಚರಿತ್ರೆಗಳನ್ನು ಕೊಟ್ಟು ಇನ್ನುಳಿದ ೫೩೬ ಹೆಸರುಗಳನ್ನು ಪಂಡಿತಾರಾಧ್ಯ, ಪಾಲ್ಕುರಿಕೆ ಸೋಮನಾಥರು ಕೊಡುವ ಪ್ರಮಥಗಣ, ರುದ್ರಗಣ, ಯೋಗಾಚಾರ್ಯ ಮೊದಲಾದ ಗುಂಪುಗಳಿಂದ ಆಯ್ದುಕೊಳ್ಳುತ್ತಾರೆ.'(ಡಾ.ಆರ್.ಸಿ. ಹಿರೇಮಠ, ೧೯೭೨, ಪು.೨೪)

ಪ್ರಮಥಗಣದಿಂದ ಇಲ್ಲಿಯವರೆಗಿನ(ಲಕ್ಷದ ತೊಂಬತ್ತಾರು ಸಾವಿರ ಗಣಂಗಳು) ಎಲ್ಲ ಗಣಗಳ ಸದಸ್ಯರನ್ನು ಸಿದ್ದನಂಜೇಶ ತನ್ನ ಕೃತಿ ಗುರುರಾಜ ಚಾರಿತ್ರ್ಯದ ೯ನೇ ಸಂಧಿಯಲ್ಲಿ ಭಕ್ತಿಪೂರ್ವಕವಾಗಿ ಸ್ಮರಿಸುತ್ತಾನೆ.

> 'ಪ್ರಮಥಗಣರುದ್ರ ವೃಷಭಯೋಗಾಚಾರ್ಯ
> ರಮಲರರುವತ್ತುಮೂವರ ಷೊಡಶರ್ಕಳಂ
> ಸುಮತಿಗಳ ತೇರಸರ ದಶಗಣರಸಂಖ್ಯಾತ ಸತ್ ಪುರಾತನರ ದಿವ್ಯ

ವಿಮಲ ದಶಶತನಾಮ ಸಂಕೀರ್ತನಂಗಳಂ
ಕ್ರಮದಿಂದುಲುಂ ತ್ರಿಸಂಧ್ಯಾಕಾಲದೊಳು ಬಿಡದೆ
ಪ್ರಮುದಿತ ಮನೋತ್ಸಾಹದಿಂದ ಬರೆದೋದಿದೊಡೆ ಸಕಲಷ್ಟಸಿದ್ಧಿಯಹುದು'|

(ಸಂ.ಶಿ. ಭೂಸನೂರಮಠ(ಸಂ), ೧೯೫೦, ಪು.೧೮೪)

ಸಾಮಾನ್ಯವಾಗಿ ಎಲ್ಲ ವೀರಶೈವ ಕೃತಿಕಾರರು ಈ ಮೇಲಿನಂತೆ ಗಣ ಸಮೂಹದ ಬಗ್ಗೆ ಪೂಜ್ಯಭಾವನೆಯನ್ನೇ ವ್ಯಕ್ತಪಡಿಸಿದ್ದಾರೆ. ಈ ಎಲ್ಲ ಗಣಸಮೂಹದ ನಂತರದಲ್ಲಿ 'ನೂತನ ಗಣಂಗಳು' ಎನ್ನುವ ಇನ್ನೊಂದು ಶರಣ ಸಮೂಹದ ಬಗ್ಗೆ ಲಕ್ಕಣ್ಣ ದಂಡೇಶ(ಶಿವತತ್ವ ಚಿಂತಾಮಣಿ), ಗುಬ್ಬಿಯ ಮಲ್ಲಣಾರ್ಯ(ವೀರಶೈವಾಮೃತ ಪುರಾಣ), ಸಿದ್ಧನಂಜೇಶ(ಗುರುರಾಜ ಚಾರಿತ್ರ್ಯ), ವಿರೂಪಾಕ್ಷ ಪಂಡಿತ(ಚೆನ್ನಬಸವ ಪುರಾಣ), ಮುಂತಾದ ಕೃತಿಕಾರರು ವಿವರಿಸುತ್ತಾರೆ. ೧೨ನೇ ಶತಮಾನದ ನಂತರ ಬಂದ ಎಲ್ಲ ಶರಣರನ್ನು ಈ 'ನೂತನ ಗಣಂಗ'ಳಲ್ಲಿ ಸೇರಿಸಲಾಗಿದೆ. ಸಿದ್ದನಂಜೇಶ ಗುರುರಾಜ ಚಾರಿತ್ರ್ಯದಲ್ಲಿ

ಹರನ ಮೆಚ್ಚಿಸಿ ಕಾಯವೆರಸಿ ಕೈಲಾಸಕ್ಕೆ
ಹರುಷದಿಂ ಪೋದನೂತನ ಪುರಾತನರ ವಿಮಲ
ಚರಿತಮಂ ಪೇಳಿ ಕರುಣಿಸವೇಳ್ಳಯೆಂದು ಶ್ರೀ ಚರಣದೊಳು ಬಿದ್ದುನುತಿಪ

(ಗುರುರಾಜಚಾರಿತ್ರ್ಯ, ಸಂ.೧೦, ಪ.೧)

ಚೆನ್ನವೀರಾಂಬೆಗೆ ಸಿದ್ದನಂಜೇಶನು ಈ ನೂತನ ಗಣಂಗಳ ಬಗ್ಗೆ ವಿವರಿಸುತ್ತಾನೆ. ೧೧ನೇ ಸಂಧಿಯಲ್ಲಿ ಶಿವತತ್ವ ಚಿಂತಾಮಣಿಯಲ್ಲಿ ವಿವರಿಸಿದ ಲೀಲೆಯ ರಮಣಯ್ಯ, ನಾಗರಸ, ಸೂಚಿಕಾಯಕದ ನಾಗಪ್ಪ, ಕೆಂಬಾವಿ ಬೋಗಣ್ಣ, ಅಮುಗಿದೇವಯ್ಯ, ಸೊಪ್ಪೆಯ ಬಸವಣ್ಣಯ್ಯ ಮುಂತಾದ ಶರಣರ ಬಗ್ಗೆ ವಿವರಿಸುತ್ತಾನೆ. ೧೨ನೇ ಸಂಧಿಯಲ್ಲಿ ವೀರಶೈವಾಮೃತ ಪುರಾಣದಲ್ಲಿ ವಿವರಿಸಿದ ಮಂಡೆಯ ಪ್ರಭುಸ್ವಾಮಿ, ಸೋವೂರ ಚಿಕ್ಕಬಸವ, ದುರ್ಗದ ಬೊಮ್ಮಿತಂದೆ ಪದ್ಮರಾಜ ಮುಂತಾದವರ ಬಗ್ಗೆ ವಿವರಿಸುತ್ತಾನೆ. ೧೩, ೧೪, ೧೫ನೇ ಸಂಧಿಗಳಲ್ಲಿ ತನ್ನ ಕಾಲದಲ್ಲಿ ಬದುಕಿದ್ದ ವರ್ತಮಾನದ ಶಿವಶರಣ ಗಣಂಗಳ ಬಗ್ಗೆ ವಿವರಿಸುತ್ತಾನೆ. ಇದರಲ್ಲಿ ನೂರೊಂದು ವಿರಕ್ತರು, ತೋಂಟದ ಸಿದ್ಧಲಿಂಗಯತಿ, ಮಳೆಯ ಮಲ್ಲೇಶ, ಕೊಟ್ಟೂರ ಗುರುಬಸವ, ಮದ್ದಾನೆಯ ಸಿದ್ದಲಿಂಗಯ್ಯ, ಹುಚ್ಚರಾಚಯ್ಯ, ಕಾರಿಗೆಹಳ್ಳಿ ಶಾಂತಯ್ಯ, ಮಂಟೇದಯ್ಯ ಮುಂತಾದವರ ಬಗೆಗೆ ವಿವರಿಸುತ್ತಾನೆ.

ಪ್ರಮಥಗಣದಿಂದ ಆರಂಭವಾದ ಶೈವಗಣ ಪರಂಪರೆ ನೂತನಗಣಂಗಳವರೆಗೆ ವಿವಿಧ ಕಾಲಘಟ್ಟಗಳಲ್ಲಿ ಬೆಳೆದು ಬಂದಿದೆ. ಹಾಗೆ ಬರುವಾಗ ಶಿವಭಕ್ತಿ, ಲಿಂಗದೀಕ್ಷೆ, ವಿಭೂತಿ, ರುದ್ರಾಕ್ಷಿಯಂತಹ ಕೆಲ ಅಂಶಗಳನ್ನು ಆರಂಭದಿಂದ ಕೊನೆಯವರೆಗೂ ಮುಂದುವರಿಸಿಕೊಂಡು ಬಂದಿವೆ. ಆದರೆ ಸಂಪೂರ್ಣವಾಗಿ ಪ್ರಾಚೀನ ಗಣಪದ್ಧತಿಯ ರೀತಿಯಲ್ಲಿಯೇ ಈ ಶಿವಗಣಗಳು ಬದುಕಿದ್ದವೇ? ಎನ್ನುವ ಬಗ್ಗೆ ಅನುಮಾನ

ಗಳಿವೆ. ನಮಗೆ ಪ್ರಮಥಗಣ, ರುದ್ರಗಣ, ವೃಷಭಗಣ, ತ್ರಿಷಷ್ಠಿ ಪುರಾತನ ಗಣ, ಷೋಡಶಗಣ, ದಶಗಣಗಳ ಸದಸ್ಯರ ಬಗ್ಗೆ ಸ್ಪಷ್ಟ ಶಾಸನಾಧಾರಗಳಾಗಲೀ ಇನ್ನಿತರ ನಿಖರ ಮಾಹಿತಿಗಳು ದೊರೆಯಲಾರವು. ದೊರೆಯುವುದೆಲ್ಲ ಭಕ್ತಿ ಪರವಶತೆಯಲ್ಲಿ ಬರೆದ ಬರೀ ಪುರಾಣ-ಪುಣ್ಯಕಥೆಗಳೆ ಆಗಿವೆ. ಆದರೆ ೧೨ನೇ ಶತಮಾನದ ಅಮರಗಣಂಗಳ ಬಗ್ಗೆ ಮತ್ತು ನಂತರದ ನೂತನಗಣಂಗಳ ಬಗ್ಗೆ ನಮಗೆ ನಿಖರ ಆಧಾರಗಳು ದೊರೆಯುತ್ತವೆ. ಇವುಗಳನ್ನು ಆಧರಿಸಿ ಹೇಳುವುದಾದರೆ, ೧೨ನೇ ಶತಮಾನದ ನಂತರದ ನೂತನಗಣಂಗಳ ಜೀವನ ವಿಧಾನಕ್ಕೂ ಪ್ರಾಚೀನ ಗಣಮಾದರಿಯ ಜೀವನಕ್ಕೂ ಸಾಕಷ್ಟು ಅಂತರಗಳು ಕಂಡುಬರುತ್ತವೆ.

೧೨ನೇ ಶತಮಾನದಲ್ಲಿನ ಚಳುವಳಿಗಾರರು ಪ್ರಾಚೀನ ಗಣಮಾದರಿಯ ಜೀವನವನ್ನು ಅನುಸರಿಸಲು ಕಾಯಕ-ದಾಸೋಹ, ಸ್ತ್ರೀ ಸಮಾನತೆ, ಜಾತ್ಯಾತೀತತೆ, ಲಿಂಗದೀಕ್ಷೆ ಮುಂತಾದ ಸಿದ್ಧಾಂತಗಳನ್ನು ಅನುಷ್ಠಾನಕ್ಕೆ ತರುವುದರ ಮೂಲಕ ಯಶಸ್ವಿಯಾದರೂ ಕೂಡ ಅಂತ್ಯದಲ್ಲಿ, ಚಳುವಳಿ ಕ್ಷೋಬೆಯಲ್ಲಿ ಅಂತ್ಯಗೊಂಡಿತು. ಕಾರಣ ೧೨ನೇ ಶತಮಾನದಲ್ಲಿದ್ದುದು ವರ್ಗ-ವಿಭಕ್ತವಾದ ಸಮಾಜ. ಈ ಸಮಾಜದ ಸದಸ್ಯರು ಗಣ ಸಂಬಂಧಿಗಳಾಗಿರದೆ ಪ್ರಾದೇಶಿಕ ವ್ಯವಸ್ಥೆಗೆ, ದಂಡಾಧಿಕಾರಿಗಳಿಗೆ, ಆಳುವ ವರ್ಗಗಳಿಗೆ ಅಧೀನವಾಗಿ ಬದುಕಬೇಕಾದ ಅನಿವಾರ್ಯತೆ ಇರುತ್ತದೆ. ಸ್ವತಃ ಚಳುವಳಿಯ ನಾಯಕನೆನಿಸಿಕೊಂಡ ಬಸವಣ್ಣನೆ ಆಳುವ ವರ್ಗದ ಬಿಜ್ಜಳನ ಆಸ್ಥಾನದ ಭಂಡಾರಿ ಆಗಿದ್ದ. ಬಸವಾದಿ ಶರಣರು ಎಷ್ಟೇ ಲಾಂಛನನಿಷ್ಠ ಪ್ರಾಚೀನ ಗಣಮಾದರಿಯ ಜೀವನ ನಡೆಸಲು ಪ್ರಯತ್ನಿಸಿದರೂ ಬಿಜ್ಜಳ ಎಂಬ ಆಳುವ ವರ್ಗದ ಪ್ರತಿನಿಧಿಗೆ, ಹಲವಾರು ಕಟ್ಟುಪಾಡುಗಳಿದ್ದ ರಾಜ್ಯದ ಆಡಳಿತ ವ್ಯವಸ್ಥೆಗೆ, ಸಾಮಾಜಿಕ ವ್ಯವಸ್ಥೆಗೆ ಅಧೀನರಾಗಿರಬೇಕಾಗಿತ್ತು. ಲೈಂಗಿಕತೆಯಂತ ವಿಷಯಗಳಲ್ಲಿ ನೈತಿಕತೆಯನ್ನು ಬೋಧಿಸಲಾಗುತ್ತಿತ್ತು. ಹಾಗಾಗಿ ಪ್ರಾಚೀನ ಗಣಮಾದರಿಯ ಮುಕ್ತ ಲೈಂಗಿಕತೆಯಂತಹ ಅಂಶಗಳನ್ನು ಅವರು ವಿರೋಧಿಸಿದರು. ತಾನು, ತನ್ನ ಮಕ್ಕಳು, ತನ್ನ ಸಂಸಾರ ಎನ್ನುವಂತಹ ಸ್ವಹಿತ ಅಂಶಗಳಂತೂ ಯಾವತ್ತೂ ಅನಿವಾರ್ಯ ಕ್ರಿಯೆಯಗಳಾಗಿವೆ. ಇವೆಲ್ಲ ಪ್ರಾಚೀನ ಗಣ ಮಾದರಿಗೆ ವಿರೋಧವಾಗಿದೆ.

ಅಲ್ಲದೆ ೧೨ನೇ ಶತಮಾನದಲ್ಲಾಗಲಿ ಅದರ ಪೂರ್ವದಲ್ಲಾಗಲೀ ಚೋಳ, ಪಾಂಡ್ಯ, ಪಲ್ಲವ, ಚಾಳುಕ್ಯರ ಮಧ್ಯದಲ್ಲಿ ನಿರಂತರವಾದ ಯುದ್ಧಗಳು ಸಂಭವಿಸುತ್ತಿದ್ದವು. ಸಮಾಜದಲ್ಲಿ ಉತ್ಪಾದಕ ಶಕ್ತಿಗಳು ವಿಕಾಸಹೊಂದಿ ಅಧಿಕ ಸಂಪತ್ತು ಕ್ರೂಢೀಕರಣಗೊಂಡಿತು. ಇದೇ ಹೊತ್ತಿನಲ್ಲಿ ಸಂತೆಗಳ ನಿರ್ಮಾಣದಿಂದಾಗಿ ಉತ್ಪಾದಕ ವಸ್ತುಗಳ ವಿನಿಮಯವು ಸಾಧ್ಯವಾಗಿತ್ತು. ಇದರಿಂದಾಗಿ ಕಾಯಕ ವರ್ಗಗಳಲ್ಲಿ ಸಂಪತ್ತಿನ ಸಂಗ್ರಹ ಸಾಧ್ಯವಾಗಿತ್ತು. ಬಸವಾದಿ ಶರಣರ ಉಪದೇಶಕ್ಕೆ ಅನುಗುಣವಾಗಿ ಕಾಯಕವರ್ಗಗಳು ದುಡಿದ ಸಂಪತ್ತನ್ನು ದಾಸೋಹದ ಮೂಲಕ ಸಮುದಾಯಕ್ಕೆ ಅರ್ಪಿಸಿದರೂ ಕೂಡ ಆತನ(ಬಸವನ) ನಂತರದ ಕಾಲದಲ್ಲಿಯೂ ದಾಸೋಹ ಎನ್ನುವುದು ಆದರ್ಶವಾಗಿ ಆಚರಣೆಯಲ್ಲಿ

ಉಳಿಯಲೇ ಇಲ್ಲ. ೧೨ನೇ ಶತಮಾನದ ನಂತರ ಪ್ರಾಚೀನ ಗಣ ಮಾದರಿಯ ಜನಜೀವನದ ಅಂಶವಾದ 'ಸಾಮೂಹಿಕ ಶ್ರಮ-ಸಾಮೂಹಿಕ ಅನುಭೋಗ' ಎನ್ನುವ ಜೀವನ ಶೈಲಿಗೆ ಮರಳಲು ಮತ್ತೆ ಶಿವಶರಣರು ಸಾಂಘಿಕವಾಗಿ ಪ್ರಯತ್ನಿಸಲೆ ಇಲ್ಲ. ದುಡಿದ ಸಂಪತ್ತನ್ನು ದಾಸೋಹದ ಮೂಲಕ ಸಮುದಾಯಕ್ಕೆ ಅರ್ಪಿಸುವುದೆಂದರೆ ಸ್ವಸಂಪತ್ತಿಗೆ ಜೀವನ ಸೌಖ್ಯಕ್ಕೆ ತಿಲಾಂಜಲಿ ಇತ್ತಂತೆಯೇ ಎನ್ನುವುದು ತಿಳಿದಿತ್ತು. ಕಾರಣ ೧೨ನೇ ಶತಮಾನದ ಅಮರಗಣಂಗಳ ಚಳುವಳಿ ಒಂದು ಆದರ್ಶವಾಗಿ ಉಳಿಯಿತೆ ಹೊರತು ಆಚರಣೆಗೆ ಬರಲಿಲ್ಲ. ಇದರಿಂದಾಗಿ ನಂತರದ ಕಾಲದಲ್ಲಿ ದಾಸೋಹ, ಸ್ತ್ರೀ ಸಮಾನತೆ, ಕಾಯಕ, ಜಾತ್ಯಾತೀತತೆ ಬರೀ ಧಾರ್ಮಿಕ ಡಂಭಾಚಾರಗಳಾದವು. ದಾಸೋಹ ತತ್ವವನ್ನು ಬೋಧಿಸುತ್ತಿದ್ದ ಶರಣರೇ ೧೫ನೇ ಶತಮಾನದ ಹೊತ್ತಿಗಾಗಲೆ ಸಮುದಾಯಕ್ಕೆ ತಮ್ಮದೆಲ್ಲವನ್ನು ಅರ್ಪಿಸುವ ಬದಲು ಸಮಾಜದಿಂದಲೆ ಅಪಾರ ದಾನ-ದತ್ತಿಗಳನ್ನು ಪಡೆದು ಶ್ರೀಮಂತರಾದರು. ಶರಣರ ಕೇಂದ್ರಸ್ಥಳಗಳಾದ ದೇವಾಲಯಗಳು ೧೨ನೇ ಶತಮಾನದ ನಂತರದ ಕಾಲದಲ್ಲಿ ಮೇಲ್ವರ್ಗದ ಶ್ರೀಮಂತಿಕೆಯ ಬೃಹತ್ ಸಂಸ್ಥೆಗಳಾದವು. ಸ್ತ್ರೀಯನ್ನು ಪ್ರಾಚೀನ ಗಣ ಜೀವನಕ್ಕೆ ವಿರುದ್ಧವಾಗಿ ದಾಸ್ಯಳನ್ನಾಗಿಸಿ ಪುರುಷರ ಅಧೀನಳನ್ನಾಗಿಸಿಕೊಂಡರು. ಶೂನ್ಯ ಸಂಪಾದನೆ, ತೋಂಟದ ಸಿದ್ದಲಿಂಗ ಯತಿಗಳ ಕಾಲಕ್ಕಾಗಲೆ ಜಾತ್ಯಾತೀತತೆ, ಸ್ತ್ರೀ ಸಮಾನತೆ ಎನ್ನುವ ತತ್ವಗಳು ೧೨ನೇ ಶತಮಾನದ ಆದರ್ಶದಿಂದ ದೂರ ಸರಿದಿದ್ದವು. ೧೨ನೇ ಶತಮಾನದ ನಂತರದಲ್ಲಿ ಭಕ್ತಿ ಎನ್ನುವುದು ಲಾಂಛನನಿಷ್ಠೆ(ಲಿಂಗ ನಿಷ್ಠೆ)ಯಿಂದ ವ್ಯಕ್ತಿನಿಷ್ಠೆಗೆ, ನಾಯಕನಿಷ್ಠೆಗೆ ಬದಲಾಯಿತು. ಶಿವಸ್ತುತಿ ಅಥವಾ ಲಿಂಗಸ್ತುತಿಗಿಂತ ಬಸವಾದಿ ಶರಣರನ್ನು, ನೂರೊಂದು ವಿರಕ್ತರನ್ನು, ತೋಂಟದ ಸಿದ್ದಲಿಂಗಯತಿಗಳ ಶಿಷ್ಯ ಪರಂಪರೆಯನ್ನು ಸ್ತುತಿಸಿ ಪುರಾಣಗಳು, ಕಾವ್ಯ ಕಥೆಗಳು ಹುಟ್ಟಿಕೊಂಡವು.

## ೪.೬. ಪಂಚಗಣಾಧೀಶ್ವರ ಪರಿಕಲ್ಪನೆ

೧೨ನೇ ಶತಮಾನದ ಚಳುವಳಿಯ ನಂತರದ ಗಣಸಮೂಹವನ್ನು 'ನೂತನಗಣಂ'ಗಳು ಎಂದು ಕರೆಯಲಾಗುತ್ತದೆ ಎನ್ನುವುದನ್ನು ಈಗಾಗಲೇ ಗಮನಿಸಿದ್ದೇವೆ. ಈ ನೂತನ ಗಣಂಗಳ ಬಗ್ಗೆ, ಅದರ ಸದಸ್ಯರ ಜೀವನ ವಿವರದ ಬಗ್ಗೆ ಲಕ್ಕಣದಂಡೇಶ(ಶಿವತತ್ವ ಚಿಂತಾಮಣಿ), ಮಲ್ಲಣಾರ್ಯ(ವೀರಶೈವಾಮೃತ ಪುರಾಣ), ಸಿದ್ದನಂಜೇಶ(ಗುರುರಾಜ ಚಾರಿತ್ರ್ಯ), ವಿರೂಪಾಕ್ಷ ಪಂಡಿತ(ಚೆನ್ನಬಸವ ಪುರಾಣ)ರು ವಿವರಿಸಿದ್ದಾರೆ.

'ಭೂತಳದೊಳೊರ್ತಮಾನದೊಳು ಶಿವಕೃಪೆವಡೆದ ನೂತನ ಪುರಾತನದ ಕಥೆಗಳಂ' ಹೇಳುವ ಸಿದ್ದನಂಜೇಶ ನೂರಾರು ಶರಣರ ಚರಿತ್ರೆಯ ಜೊತೆ ಕೊಟ್ಟೂರ ಗುರುಬಸವರಾಜನ ಚರಿತ್ರೆಯನ್ನು(೧೪ನೇ ಸಂಧಿ, ಪದ್ಯ ೩೦-೫೭) ಗುರುರಾಜ ಚಾರಿತ್ರ್ಯದಲ್ಲಿ ವಿವರಿಸಿದ್ದಾನೆ. ಹಾಗೆ ವಿವರಿಸುವಾಗ ಮದ್ದಾನೆ ಸಿದ್ದಲಿಂಗಯ್ಯ(ಕೂಲಹಳ್ಳಿ ಮದ್ದಾನೀಶ), ಕೋಲಶಾಂತಯ್ಯರ(ಅರಸೀಕೆರೆ ಕೋಲಶಾಂತ) ಹೆಸರುಗಳನ್ನು

ನೂತನ ಗಣಂಗಳ ಪಟ್ಟಿಯಲ್ಲಿ ಹೆಸರಿಸಿದ್ದಾನೆ. ವಿರೂಪಾಕ್ಷ ಪಂಡಿತನು ಚೆನ್ನಬಸವ ಪುರಾಣದಲ್ಲಿ ನೂರೊಂದು ವಿರಕ್ತರು ಮತ್ತು ತೋಂಟದ ಸಿದ್ಧಲಿಂಗಯತಿಗಳ ಬಗ್ಗೆ ವಿವರಿಸಿ ನಂತರ

'ಅಲ್ಲಲ್ಲಿ ನಾನಾ ಪವಾಡಮಂ ಮೆರೆವುತಿರ|
ಲಲ್ಲಲ್ಲಿ ಗಣನಾಥರುದಿಸಿ ಚರರೂಪಿನಿಂ|
ದಲ್ಲಲ್ಲಿ ಪೂಜೆಗೊಳುತ್ತೈದಿ ತೋಂಟದಯತಿಯ ಸಾರಲತಿ ಪ್ರೀತಿಯಿಂದೆ||
ಮೆಲ್ಲಮೆಲ್ಲನೆ ತೋಂಟದಾರ್ಯರಾ ವಿರತರೊಳ್|
ಬಲ್ಲಬಲ್ಲರೊಳು ತತ್ವಾನುಭಾವಂಗಳಿಂ|
ಸೊಲ್ಲುಸೊಲ್ಲಗೆ ಪರಮ ಷಟ್ಸ್ಥಲವನುಸಿರ್ವರಾ ವಿರತರಾರೆಂದೆನೆ||'

(ಚೆನ್ನಬಸವ ಪುರಾಣ, ಸಂ.೬೩.ಪ.೪೬)

ಎಂದು ವಿವಿಧ ಭಾಗದಲ್ಲಿ ಪವಾಡದಿಂದ ಮೆರೆಯುತ್ತಿದ್ದ ನೂರಾರು ಗಣನಾಥರ ಪಟ್ಟಿಯನ್ನು ಕೊಟ್ಟಿದ್ದಾನೆ. ಆ ಪಟ್ಟಿಯಲ್ಲಿ ಕೊಟ್ಟೂರ ಬಸವೇಶವನನ್ನು ಸೂಚಿಸಿದ್ದಾನೆ.(೬೩ನೇ ಸಂಧಿ ೫೫ನೇ ಪದ್ಯ). ಆದರೆ ಎಲ್ಲಿಯೂ ಪಂಚಗಣಾಧೀಶ್ವರರನ್ನು ಒಟ್ಟಾಗಿ ಹೆಸರಿಸಿಲ್ಲ. 'ಪಂಚಗಣಾಧೀಶ್ವರರು' ಎನ್ನುವ ಪದವೆ ಲಿಖಿತ ಪರಂಪರೆಯಲ್ಲಿ ಎಲ್ಲಿಯೂ ಉಲ್ಲೇಖವಾಗಿಲ್ಲ. ಕೊಟ್ಟೂರ ಗುರುಬಸವನ ಜೀವನದ ಬಗ್ಗೆಯೆ ಇರುವ ಬಸವಲಿಂಗ ಕವಿಯ 'ಶ್ರೀ ಕೊಟ್ಟೂರ ಬಸವೇಶ್ವರ ಚಾರಿತ್ರ್ಯ'ದಲ್ಲಿ ಎಲ್ಲಿಯೂ ಕೂಡ 'ಪಂಚಗಣಾಧೀಶ್ವರ' ಎನ್ನುವ ಪದ ಬಳಕೆಯಲಿಲ್ಲ. ಈ ಪಂಚಗಣಾಧೀಶ್ವರರಲ್ಲಿ ಕೋಲಶಾಂತ ಮತ್ತು ಮದ್ದಾನೇಶ್ವರರ ಹೆಸರುಗಳು ಮಾತ್ರ ಅಲ್ಲಲ್ಲಿ ಕಂಡುಬರುತ್ತವೆ. ಕ್ರಿ.ಶ. ೧೭೦೦ರಲ್ಲಿ ಶಿಶುಪುರದ ಸಿದ್ಧಲಿಂಗಾಚಾರ್ಯ ಬರೆದ 'ಷಟ್ಸ್ಥಲ ಶಿವಾಯಣ' ಎನ್ನುವ ಕೃತಿಯು ಪಂಚಗಣಾಧೀಶ್ವರರಲ್ಲಿ ಕೆಂಪಯ್ಯನನ್ನು ಹೊರತು ಪಡಿಸಿ ಉಳಿದ ನಾಲ್ಕು ಮಂದಿ ಶರಣರನ್ನು ಒಟ್ಟಾಗಿ ಹೆಸರಿಸಿದೆ.(ದ್ವಿತೀಯ ಸ್ಕಂದ ೩೦ನೇ ಪದ್ಯ)

'ವೃದ್ಧಚಾರ್ಯ ನಿಮಿಷನ ವೃಷಭನ
ಸಿದ್ಧರಾಮಪ್ರಭುವ ಮರುಳನ
ಸಿದ್ಧಲಿಂಗನ ಕೋಲಶಾಂತನ ಕೊಟ್ಟೂರೇಶ್ವರನ|
ಮುದ್ದಾಸಂಗನ ರುದ್ರಮುನಿಯ ಪ್ರ
ಸಿದ್ಧಯೋಗ ಸಮಾಧಿಗಿಂತತಿ
ಮುದ್ದೆನಿಸಿತಹ ಬಸವ ಪ್ರಭು ಶಿವಯೋಗ ಮಂಟಪವು||'

(ಡಾ.ಎಂ.ಎಂ. ಕಲ್ಬುರ್ಗಿ, ಡಾ.ಸಿ.ಪಿ. ಕೃಷ್ಣಕುಮಾರ್(ಸಂ), ೧೯೯೯, ಪು.೧೩)

ಇಲ್ಲಿ ಬರುವ ಮುದ್ದುಸಂಗನೆಂದರೆ ಮದ್ದಾನಿ ಸಿದ್ದಲಿಂಗಯ್ಯ ಅಥವಾ ಮದ್ದಾನಸ್ವಾಮಿ ಆಗಿದ್ದು ಕೂಲಹಳ್ಳಿ ಮದ್ದಾನೀಶ್ವರರಿಗೆ ಈ ರೀತಿಯಲ್ಲಿ ವಿವಿಧ ಹೆಸರುಗಳಿವೆ. ಈತನನ್ನು 'ಗುರುರಾಜ

ಚಾರಿತ್ರ್ಯ'ದಲ್ಲಿ ಮದ್ದಾನಿ ಸಿದ್ಧಲಿಂಗಯ್ಯ ಎಂದು ಕರೆದರೆ ಬಾಲಬಸವರ ಗೋಣಿಬಸವ ಕಾವ್ಯದಲ್ಲಿ ಕೆಲ ಭಾಗಗಳಲ್ಲಿ 'ಮುದ್ದುಸಂಗ' ಎಂದು ಕರೆಯಲಾಗಿದೆ.

ಹರಪನಹಳ್ಳಿಯಲ್ಲಿ ಐಕ್ಯನಾಗಿರುವ ಚೀಲಾಳಸ್ವಾಮಿಯ ಕಥೆ ಹೇಳುವ 'ಷಟ್ಸ್ಥಲ ಶಿವಾಯಣ' ಕಾವ್ಯದ ಈ ಮೇಲಿನ ಪದ್ಯವನ್ನು ನೋಡಿದರೆ ಕ್ರಿ.ಶ. ೧೭೦೦ರಲ್ಲಾಗಲೆ ಈ ನಾಲ್ವರೂ ಒಟ್ಟಾಗಿ ಗುರುತಿಸಿ ಕೊಳ್ಳುತ್ತಿದ್ದರು ಅನ್ನಿಸುತ್ತದೆ. ಇನ್ನು ಹರಪನಹಳ್ಳಿಯ ಕೆಂಪಯ್ಯನನ್ನು ಈ ಕಾವ್ಯದಲ್ಲಿ ಉಲ್ಲೇಖಿಸದಿರಲು ಕಾರಣ ಆತ ಚೀಲಾಳಸ್ವಾಮಿಯು(೧೬೧೫ ಕ್ರಿ.ಶ) ಜೀವಂತ ಸಮಾಧಿಯಾದ ನಂತರದಲ್ಲಿ ಇದ್ದನೆಂದು ಊಹಿಸಬಹುದಾಗಿದೆ. ಈ ಐವರು ಸಂತರ ಬಗೆಗೆ ನಮಗೆ ಸ್ಪಷ್ಟ ಆಧಾರಗಳು ಸಿಗದೇ ಇರುವುದರಿಂದ ಏನನ್ನೂ ನಿಖರವಾಗಿ ಹೇಳಲು ಸಾಧ್ಯವಾಗುವುದಿಲ್ಲ.

ಲಿಖಿತ ಪರಂಪರೆಯನ್ನು ಆಧರಿಸಿ ಹೇಳುವುದಾದರೆ 'ಪಂಚಗಣಾಧೀಶ್ವರರು' ಎನ್ನುವ ಪರಿಕಲ್ಪನೆ ಸುಳ್ಳು ಎಂದಾಗುತ್ತದೆ. ಆದರೆ ಮದ್ಯಕರ್ನಾಟಕ ಭಾಗದ ಲಕ್ಷಾಂತರ ಜನರು ನಾಯಕನಹಟ್ಟಿ ತಿಪ್ಪೇಸ್ವಾಮಿ, ಕೊಟ್ಟೂರ ಗುರುಬಸವ, ಕೂಲಹಳ್ಳಿ ಮದ್ದಾನೀಶ, ಅರಸೀಕೆರೆ ಕೋಲಶಾಂತ, ಹರಪನಳ್ಳಿ ಕೆಂಪಯ್ಯ ಇವರನ್ನು ಒಟ್ಟಾಗಿ 'ಪಂಚಗಣಾಧೀಶ್ವರರು' ಎಂದೇ ಕರೆಯುತ್ತಾರೆ. ಪ್ರತ್ಯೇಕವಾಗಿ ಬದುಕಿರಬಹುದಾದ ಇವರನ್ನು 'ಪಂಚಗಣಾಧೀಶ್ವರರು' ಎಂದು ಒಟ್ಟುಗೂಡಿಸಿ ಕರೆಯಲು ಕಾರಣವೇನು? ಇದಕ್ಕೆ 'ಪಂಚಪೀಠ'ಗಳು ಅಥವಾ 'ಪಂಚಸಮಯ'ಗಳು ಎನ್ನುವ ವೀರಶೈವಧರ್ಮದ ಗುರು-ವಿರಕ್ತ ಪರಿಕಲ್ಪನೆ ಗಳೇನಾದರೂ ಕಾರಣವೆ? ಏಕೆಂದರೆ ವೀರಶೈವ ಧರ್ಮದಲ್ಲಿ ಗುರುಪರಂಪರೆ ಮತ್ತು ವಿರಕ್ತ ಪರಂಪರೆ ಎನ್ನುವ ಎರೆಡು ಪ್ರಬೇಧಗಳಿವೆ. ಗುರುಪರಂಪರೆಯಲ್ಲಿ ಪಂಚಪೀಠಗಳು(ಉಜ್ಜಿನಿ ಪೀಠ, ಬಾಳೆ ಹೊನ್ನೂರು ಪೀಠ, ಶ್ರೀಶೈಲ ಪೀಠ, ಕೇದಾರ ಪೀಠ, ಕಾಶೀ ಪೀಠ) ಇರುವಂತೆ ವಿರಕ್ತರಲ್ಲಿ ಪ್ರಮುಖವಾಗಿ ಪಂಚಸಮಯಗಳು(ಕುಮಾರ ಸಮಯ, ಚೀಲಾಳ ಸಮಯ, ಕೆಂಪಿನ ಸಮಯ, ಮುರಿಘೀ ಸಮಯ, ಸಂಪಾದನಾ ಸಮಯ) ಅಸ್ಥಿತ್ವದಲ್ಲಿವೆ. ಮೊದಲನೆಯವರಿಗೆ ಪಂಚಾಚಾರದಲ್ಲಿ ನಿಷ್ಠೆ ಇದ್ದರೆ, ಎರಡನೆಯವರಿಗೆ ೧೨ನೇ ಶತಮಾನದ ಬಸವ ಅಲ್ಲಮರಲ್ಲಿ ನಿಷ್ಠೆ ಇದೆ.

ಪಂಚಪೀಠಗಳಲ್ಲಿ ಒಂದಾದ ಉಜ್ಜಿನಪೀಠ(ಮರುಳರಾಧ್ಯ) ಪಂಚಗಣಾಧೀಶ್ವರರು ಇರುವ ಪರಿಸರ ದಲ್ಲಿಯೇ(ಬಳ್ಳಾರಿ ಜಿಲ್ಲೆ, ಕೂಡ್ಲಿಗಿ ತಾಲ್ಲೂಕು, ಉಜ್ಜಿನಿಯಲ್ಲಿ) ಇದೆ. ಹಾಗೆಯೇ ಪಂಚಸಮಯ ಗಳಲ್ಲಿನ ಮುರುಘೀ ಸಮಯ(ಚಿತ್ರದುರ್ಗ), ಚೀಲಾಳ ಸಮಯ(ಹರಪನಳ್ಳಿ)ಗಳೂ ಕೂಡ ಇದೇ ಪರಿಸರದಲ್ಲಿದ್ದು, ಅಪಾರವಾದ ದಾನ-ದತ್ತಿಗಳನ್ನು ಪಡೆದಿವೆ. 'ಚಿತ್ರದುರ್ಗದ ಮುರುಘಾಸ್ವಾಮಿ ಮಠ ಮತ್ತು ಹುಬ್ಬಳ್ಳಿಯ ಮೂರು ಸಾವಿರ ಮಠಗಳು(ಇವು ಮುರಿಘಾ ಸಮಯ ಮತ್ತು ಕುಮಾರ ಸಮಯ ಮಠಗಳು) ತಮ್ಮ ಅಧಿಪತ್ಯದಲ್ಲಿ ಒಂದೊಂದಕ್ಕೆ ಮೂರುಸಾವಿರ ಮಠಗಳು ಇವೆಯೆಂದೂ ಶಾಖಾ ಮಠಗಳ ಜಂಗಮರು ತಮ್ಮ ಮಠದ ಲೆಕ್ಕಪತ್ರಗಳನ್ನು ಅವುಗಳಿಗೆ ಒಪ್ಪಿಸಬೇಕಾಗುವುದೆಂದೂ

ಹೇಳಲಾಗುತ್ತದೆ.'(ಟಿ.ಆರ್.ಚಂದ್ರಶೇಖರ್ (ಅನು), ೨೦೦೦) ಚೀಲಾಳ ಸಮಯಕ್ಕೆ ಸಂಬಂಧಿಸಿದಂತೆ ಗದುಗಿನ ತೋಂಟದಾರ್ಯ ಮಠ, ಇಳಕಲ್ಲಿನ ಚಿತ್ತರಗಿ ಮಠ, ಕೊಪ್ಪಳದ ಗವಿಮಠ, ಉರವಕೊಂಡದ ಗವಿಮಠ ಶಾಖಾಮಠಗಳಾಗಿದ್ದು ಅಪಾರ ಸಂಪತ್ತನ್ನು ಹೊಂದಿದೆ.

ಹಾಗೆಯೇ 'ಪಂಚಪೀಠಗಳಲ್ಲಿ ಒಂದಾದ ಉಜ್ಜಿಯನಿ ಸದ್ಧರ್ಮಪೀಠವು ವೀರಶೈವ ಧರ್ಮ ತತ್ವವನ್ನು ಪ್ರಚಾರಗೊಳಿಸಲು ತನ್ನ ಸಂಸ್ಕಾರಣ ಕ್ರಿಯೆಗಳನ್ನು ನಡೆಸಿಕೊಂಡು ಹೋಗಲು ದೇಶದ ಉದ್ದಗಲಕ್ಕೂ ಸುಮಾರು ೨೮,೦೦೦ ಶಾಖಾಮಠಗಳನ್ನು ಸ್ಥಾಪಿಸಿದೆ. ಅವು ಕರ್ನಾಟಕ, ಮಹಾರಾಷ್ಟ್ರ, ತಮಿಳುನಾಡು, ಮಧ್ಯಪ್ರದೇಶ, ಆಂಧ್ರ ಪ್ರದೇಶ ಮುಂತಾದ ರಾಜ್ಯಗಳಲ್ಲಿವೆ'(ಡಾ.ಆರ್.ಎಂ.ಷಡಕ್ಷರಯ್ಯ, ೨೦೦೩, ಪು.೧೧೭)

ಹೀಗೆ ಗುರು-ವಿರಕ್ತ ಮಠಗಳೆರೆಡೂ ತಮ್ಮ ಅಸ್ತಿತ್ವಕ್ಕಾಗಿ ಮಠಗಳನ್ನು ಶಾಖಾಮಠಗಳನ್ನು ಕಟ್ಟಿಕೊಂಡು ಅಪಾರವಾದ ದಾನ-ದತ್ತಿಗಳನ್ನು ಪಡೆದುಕೊಂಡಿವೆ. ಹಾಗೆ ದಾನದತ್ತಿಗಳನ್ನು ನೀಡುತ್ತಿದ್ದ ಉನ್ನತ ವರ್ಗಗಳ ಹಿತಾಸಕ್ತಿಯನ್ನು ಕೂಡ ಈ ಮಠಗಳು ಬೆಂಬಲಿಸಿವೆ. ಏಕೆಂದರೆ ಉಜ್ಜಿನಿ ಪೀಠದ ಉತ್ತರಾಧಿಕಾರತ್ವಕ್ಕೆ ಸಂಬಂಧಿಸಿದಂತೆ ಜಂಗಮರು-ಸಾದರ ಮಧ್ಯ ನಡೆದ ಸಂಘರ್ಷವು ೧೮ನೇ ಶತಮಾನದ ಉತ್ತರಾರ್ಧದಲ್ಲಿ ಸಿರಿಗೆರೆ ಮಠದ ಸ್ಥಾಪನೆಗೆ ಕಾರಣವಾಗಿದೆ. ಜಂಗಮ ಹಿತಾಸಕ್ತಿಯನ್ನು ಮಾತ್ರ ಹೊಂದಿದ ಸಾದರ ಲಿಂಗಾಯತರು ೧೮೧೭ರಲ್ಲಿ, ಸಿರಿಗೆರೆ ಮಠವನ್ನು ಸ್ಥಾಪಿಸಿದರು. ಈ ಸಂಘರ್ಷ ವಿರಕ್ತರ ಸಮಯ ಪರಂಪರೆಯಲ್ಲಿಯೂ ಇದೆ. ಮುರುಘೀ ಸಮಯ ಮತ್ತು ಚೀಲಾಳ ಸಮಯಗಳ ಮಧ್ಯದ ಸಂಘರ್ಷವನ್ನು 'ಮಹಾಲಿಂಗೇಂದ್ರ ವಿಜಯ' ಮತ್ತು 'ಷಟ್ಸ್ಥಲ ಶಿವಾಯಣ' ಕೃತಿಗಳು ವಿವರಿಸಿವೆ.

ಈ ಸಂಘರ್ಷಗಳಿಂದಲ್ಲದೆ ಪ್ರಾಚೀನ ವೈದಿಕ-ಹಿಂದೂ ಸಂಪ್ರದಾಯವನ್ನು ಅನುಸರಿಸುತ್ತಿದ್ದ ಗುರುಪೀಠದ ಸ್ವಾಮಿಗಳು ಕೆಳವರ್ಗದಿಂದ, ದುಡಿಯುವ ವರ್ಗದಿಂದ ಯಾವತ್ತು ದೂರಾಗಿಯೆ ಉಳಿದಿದ್ದಾರೆ. ೧೮ನೇ ಶತಮಾನದ ಆದಿಯಲ್ಲಾಗಲೆ ಅಡ್ಡಪಲ್ಲಕ್ಕಿ ಮಹೋತ್ಸವ, ಮೆರವಣಿಗೆಗಳನ್ನು ನಡೆಸುವುದರ ಮೂಲಕ 'ವೀರಶೈವ ವಿರಕ್ತ ಸ್ವಾಮಿಗಳು ತಮ್ಮ ಸಂಪ್ರದಾಯವಾದಿ ಮಠಗಳಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ ಹಕ್ಕುಗಳನ್ನು ಸ್ಥಾಪಿಸಲು ಪ್ರಯತ್ನಿಸಿದರು.'(ಟಿ.ಆರ್.ಚಂದ್ರಶೇಖರ್(ಅನು), ೨೦೦೦, ಪು.೩೧೫)

ಗುರು-ವಿರಕ್ತ ಮಠಗಳು ಈ ರೀತಿಯ ಸಂಘರ್ಷ, ಸ್ವಜಾತಿಯತೆಯಿಂದಾಗಿ ಈ ಭಾಗದಲ್ಲಿ ವಾಸಿಸುತ್ತಿದ್ದ ಪ್ರಾಚೀನ ಗಣಮಾದರಿಯ ಜೀವನವನ್ನು ಇನ್ನೂ ತಮ್ಮ ದಿನಬದುಕಿನಲ್ಲಿ ಅಲ್ಪಸ್ವಲ್ಪ ಅನುಸರಿಸುತ್ತಿದ್ದ ಬೇಡ, ಕುರುಬ, ಕಾಡುಗೊಲ್ಲ, ಮಾದಿಗ ಮುಂತಾದ ಬುಡಕಟ್ಟು ಸಮುದಾಯಗಳು

ದೂರಾದವು. ಈ ಕೆಳವರ್ಗಗಳು ಪರ್ಯಾಯ ಆಧಾರಕ್ಕಾಗಿ ಹುಡುಕಾಟದಲ್ಲಿದ್ದವು. ತಮ್ಮ ಜೀವನ-ಪವಾಡಗಳ ಮೂಲಕ ನಾಯಕನಟ್ಟಿ ತಿಪ್ಪೇಸ್ವಾಮಿ, ಕೊಟ್ಟೂರ ಗುರುಬಸವ, ಕೂಲಹಳ್ಳಿ ಮದ್ದಾನಸ್ವಾಮಿ ಹರಪನಳ್ಳಿ ಕೆಂಪಯ್ಯ, ಅರಸೀಕೆರೆ ಕೋಲಶಾಂತಯ್ಯರು ಈ ಜನಾಂಗಗಳಿಗೆ ಪ್ರಾಮುಖ್ಯತೆಯನ್ನು ನೀಡಿದ್ದರು. ಲಿಂಗದೀಕ್ಷೆಯ ಮೂಲಕ, ಕೆಳವರ್ಗಗಳ ಮನೆಗಳಲ್ಲಿ ಊಟ ಮಾಡುವ ಮೂಲಕವೋ ಅವರ ಆಹಾರ ಪದ್ದತಿಯನ್ನು ಒಪ್ಪಿಕೊಳ್ಳುವ ಮೂಲಕವೋ ತುಳಿತಕ್ಕೊಳಗಾಗಿದ್ದವರನ್ನು ಸಮಾನರಂತೆ ಕಂಡಿದ್ದರು. ಈಗಲೂ ಈ ಐವರು ಸಂತರ ಆಚರಣೆ-ಉತ್ಸವಗಳಲ್ಲಿ ಕೆಳವರ್ಗದವರು ಪ್ರಾಮುಖ್ಯತೆಯನ್ನು ಪಡೆದಿರುವುದನ್ನು ಗಮನಿಸಬಹುದಾಗಿದೆ.

ಪಂಚಪೀಠ ಮತ್ತು ಪಂಚಸಮಯಗಳ ಸಂತರಿಗಿಂತ ಭಿನ್ನವಾಗಿ ತಮ್ಮನ್ನು ಸಮಾಜದಲ್ಲಿ ಸಮಾನರಂತೆ ಕಂಡಿದ್ದ ಈ ಐವರು ಸಂತರನ್ನು ಒಟ್ಟುಗೂಡಿಸಿ ಜನಸಮುದಾಯವು 'ಪಂಚಗಣಾಧೀಶ್ವರರು' ಎಂದು ಕರೆದಿದೆ. ಆ ಮೂಲಕ ಕಾವ್ಯ, ಕತೆ, ಆಚರಣೆಗಳನ್ನು ಕಟ್ಟಿಕೊಂಡಿದೆ. ಈಗಲೂ ಕೂಡ ಕೆಳವರ್ಗದ ಸಮುದಾಯಗಳು 'ಪಂಚಗಣಾಧೀಶ್ವರರ' ಆಚರಣೆ, ಜಾತ್ರೆ-ಉತ್ಸವಗಳಲ್ಲಿ ಅಪಾರ ಪ್ರಮಾಣದಲ್ಲಿ ನೆರೆಯುವುದನ್ನು ಕಾಣಬಹುದು.

## ಅಧ್ಯಾಯ ೫

# ಪಂಚಗಣಾಧೀಶ್ವರರ ಜೀವನ ವಿವರ

**೫.೧. ನಾಯಕನಟ್ಟಿ ತಿಪ್ಪೇಸ್ವಾಮಿ**

೫.೧.೧. ತಿಪ್ಪೇಸ್ವಾಮಿ ಬಗೆಗಿರುವ ಚಾರಿತ್ರಿಕ ಗೊಂದಲಗಳು

೫.೧.೨. ಶೈವ ನಾಥಸಿದ್ದನಾಗಿ ತಿಪ್ಪೇಸ್ವಾಮಿ

೫.೧.೩. ಬೇಡ (ನಾಯಕ) ಜನಾಂಗದ ಸ್ಥಿತ್ಯಂತರ

೫.೧.೪. ಸಮಾಧಿಯಾದ ನಂತರದ ಪವಾಡಗಳು

**೫.೨. ಕೊಟ್ಟೂರು ಗುರುಬಸವ**

೫.೨.೧. ಗುರುಬಸವನ ಕುರಿತ ಚಾರಿತ್ರಿಕ ವಿವರಗಳು

೫.೨.೨. ಶೈವ-ನಾಥಸಿದ್ಧನಾಗಿ ಗುರುಬಸವ

೫.೨.೩. ಕೊಟ್ಟೂರಗುರುಬಸವ ಮತ್ತು ಪ್ರಭುತ್ವದೊಟ್ಟಿಗಿನ ಸಂಬಂಧ

**೫.೩. ಕೂಲಹಳ್ಳಿ ಮದ್ದಾನಸ್ವಾಮಿ**

೫.೩.೧. ಮದ್ದಾನಸ್ವಾಮಿ ಮತ್ತು ಗೋಣಿಬಸವನ ವೈವಾಹಿಕ ಸಂಬಂಧಗಳು

೫.೩.೨. ಪಶುಪಾಲನಸಂಸ್ಕೃತಿ, ಬೇಟೆಸಂಸ್ಕೃತಿಯು, ಕೃಷಿಸಂಸ್ಕೃತಿಯಾಗಿ ಪರಿವರ್ತನೆ

೫.೩.೩. ಜನಪದರ ಆರಾಧ್ಯದೈವವಾಗಿ ಶೈವ-ನಾಥಸಿದ್ಧ ಗೋಣಿಬಸವ

೫.೩.೪. ಬಾಸಬಸವರು

**೫.೪. ಹರಪನಹಳ್ಳಿ ಕೆಂಪಯ್ಯ, ಅರಸೀಕೆರೆ ಕೋಲಶಾಂತ**

೫.೪.೧. ಚಾರಿತ್ರಿಕ ವಿವರಗಳು

೫.೪.೨. ದೊರಕಿದ ಅತ್ಯಲ್ಪ ಮಾಹಿತಿಗಳು

# ಪಂಚಗಣಾಧೀಶ್ವರರ ಜೀವನ ವಿವರ

ಸಂತರ ಜೀವನವನ್ನು ಕುರಿತು ಭಾರತೀಯ ಜನಸಮುದಾಯ ಕಟ್ಟಿಕೊಡುವ ಕ್ರಮ ವಿಶಿಷ್ಟವಾದುದು. ನಮ್ಮಲ್ಲಿ ಜೀವನವನ್ನು ಅಖಂಡವಾಗಿ ಕಾಣುವ ಕ್ರಮವಿದೆ. ಇಲ್ಲಿನ ಸಂತರ ಜೀವನ ಒಂದು ಬಿಂದುವಿನಂದ ಆರಂಭವಾಗಿ ಮರಳಿ ಅಲ್ಲಿಗೆ ಬಂದು ಸೇರುವ ವೃತ್ತಾಕಾರ ಚಲನೆಯದು. ಅಂದರೆ ಸಂತರ ಜೀವನ ಕೈಲಾಸದಿಂದ ಆರಂಭವಾಗಿ ಮರಳಿ ಕೈಲಾಸಕ್ಕೆ ಬಂದು ಸೇರುವಲ್ಲಿ ಮುಕ್ತಾಯಗೊಳ್ಳುವ ಪದ್ಧತಿಯನ್ನು ಅನುಸರಿಸುತ್ತಾರೆ. ಜೀವನ ಚರಿತ್ರೆಯನ್ನು ಹುಟ್ಟು, ಬಾಲ್ಯ, ಯೌವ್ವನ, ಮುಪ್ಪು ಎನ್ನುವ ಕ್ರಮಬದ್ಧತೆಯಲ್ಲಿ ಅಧ್ಯಯನ ಮಾಡುವುದಾಗಲಿ, ರಚನೆ ಮಾಡುವುದಾಗಲಿ ವಸಾಹತು ಶಿಕ್ಷಣದಿಂದ ಬಂದುದಾಗಿದೆ. ಇಲ್ಲಿನ ಎಷ್ಟೋ ಸಂತರು ಸಾವಿರಾರು ವರ್ಷಗಳು ಬದುಕಿರುವ ರೀತಿಯಲ್ಲಿ ಜನಸಮುದಾಯಗಳು ಕತೆ ಕಟ್ಟುತ್ತವೆ.

ಬಸವಲಿಂಗ ಕವಿ ಕೂಡ ಗುರುಬಸವನು ಕೈಲಾಸದಿಂದಲೇ ಜೀವನ ಆರಂಭ ಮಾಡಿದನೆಂದು ವಿವರಿಸುತ್ತಾನೆ. ಮೌಖಿಕ ಕೃತಿ-ಬಾಲಬಸವರ ಗೋಣಿಬಸವನ ಕಾವ್ಯ ಕೂಡ ಪಂಚಗಣಾಧೀಶ್ವರರು ಕೈಲಾಸದಿಂದ ಬಂದರೆಂದು ಆರಂಭಿಸುತ್ತದೆ. ಕನ್ನಡದಲ್ಲಿನ ಪಠ್ಯಗಳು (ಅದು ಮೌಖಿಕ ಇರಲಿ-ಲಿಖಿತ ಇರಲಿ) ೧೨ನೇ ಶತಮಾನದೊಂದಿಗೆ ಸಮೀಕರಿಸಿಕೊಂಡೇ ರಚನೆಗೊಳ್ಳುತ್ತವೆ. 'ಕೊಟ್ಟೂರ ಬಸವೇಶ್ವರ ಚಾರಿತ್ರ್ಯ' ಕೃತಿಯು ಗುರುಬಸವನು ಕಲ್ಯಾಣದ ಬಸವಣ್ಣನು ಒಂದೇ ಎನ್ನುತ್ತದೆ(ಸಂಧಿ ೧, ಪದ್ಯ ೭೯). ಮೌಖಿಕ ಕಾವ್ಯಗಳಾದ ಮಂಟೇಸ್ವಾಮಿ, ಮಲೆಮಾದೇಶ್ವರಗಳು ಸಹಿತ ೧೨ನೇ ಶತಮಾನದ ಅಲ್ಲಮನೊಂದಿಗೆ ಸಮೀಕರಣಗೊಂಡಿವೆ.

ಹೀಗೆ ಜೀವನ ಚರಿತ್ರೆಗಳು ಅಖಂಡವಾಗಿ ಕಾಲಾತೀತವಾಗಿ ರಚನೆಗೊಳ್ಳುವ ಪ್ರಕ್ರಿಯೆ, ಕ್ರಮಬದ್ಧವಾಗಿ ಇರಬೇಕೆಂದು ಬಯಸುವ, ವಸಾಹತು ಚಿಂತನೆಯಿಂದೊಡಗೂಡಿದ ಅಧ್ಯಯನಕಾರರನ್ನು ಕಂಗೆಡಿಸುತ್ತವೆ. ಈ ಹಿನ್ನೆಲೆಯಲ್ಲಿ ಪಂಚಗಣಾಧೀಶ್ವರರ ವಿವರನ್ನು ಇಲ್ಲಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

ಪಂಚಗಣಾಧೀಶ್ವರರ ಬಗ್ಗೆ ನಮಗೆ ಲಿಖಿತ ಆಧಾರಗಳು ಸಿಗದೇ ಇರುವುದರಿಂದ ಮತ್ತು ಲಿಖಿತವಾಗಿ 'ಪಂಚಗಣಾಧೀಶ್ವರರು' ಎನ್ನುವ ಪರಿಕಲ್ಪನೆಯೇ ಇಲ್ಲದಿರುವುದರಿಂದ ನಾವು ಮೌಖಿಕ ಆಧಾರಗಳನ್ನೇ ಇಟ್ಟುಕೊಂಡು ಈ ಐವರು ಸಂತರ ಜೀವನ ಚರಿತ್ರೆಯನ್ನು ಕಟ್ಟಬೇಕಿದೆ. ಈ ಮೌಖಿಕ ಆಧಾರಗಳಿಂದ ಕಟ್ಟುವ ಚರಿತ್ರೆಯಲ್ಲಿ ಸಮುದಾಯದ ಸಮಕಾಲೀನ ಬಾಳಿನ ಅನೇಕ ಒತ್ತಡಗಳೂ ಭಾಗವಹಿಸುವುದರಿಂದ

ಇಲ್ಲಿ 'ಪಂಚಗಣಾಧೀಶ್ವರ' ಪರಿಕಲ್ಪನೆಯೆಂದರೆ ಅವರನ್ನು ಪೂಜಿಸುವ ಸಮುದಾಯದ ಕಥನವೇ ಆಗಿದೆ. ಈ ಐವರು ಗಣಾಧೀಶ್ವರರ ತಂದೆ-ತಾಯಿಗಳ ಬಗ್ಗೆಯಾಗಲಿ, ಹುಟ್ಟಿದ ಸ್ಥಳ, ದಿನಾಂಕಗಳ ಬಗ್ಗೆಯಾಗಲಿ ಯಾವುದೇ ನಿಖರ ಮಾಹಿತಿಗಳು ದೊರೆಯಲಾರವು. ಸಮುದಾಯಕ್ಕೆ ಈ ಐವರು ಸಂತರ ಮೂಲವನ್ನು ಅರಿಯುವ ಆಸಕ್ತಿ ಇಲ್ಲ. ತಂದೆ-ತಾಯಿ ಸ್ಥಳ ಮುಂತಾದವುಗಳನ್ನು ತಿಳಿದುಕೊಳ್ಳದೆ ಶಿವಾಜ್ಞೆಯನ್ನು ಪಾಲಿಸಲು ಬಂದ ಗಣಾಧೀಶ್ವರರು ಎಂದು ತಿಳಿಯುವ ಈ ಪರಿ ಪ್ರಾಚೀನ ಗಣಮಾದರಿಯದ್ದು. ಪ್ರಾಚೀನ ಗಣ ಜೀವನದಲ್ಲಿ ಪ್ರತಿಯೊಬ್ಬರೂ ಗಣದ ಸದಸ್ಯರಾಗಿದ್ದರು. ಎಲ್ಲರನ್ನೂ ಗಣ ಚಿಹ್ನೆಯ ಮೂಲಕವೇ ಗುರುತಿಸಲಾಗುತ್ತಿತ್ತು. ಗಣ ಪದ್ಧತಿಯ ಜೀವನವನ್ನು ಇನ್ನೂ ತಮ್ಮಲ್ಲಿ ಉಳಿಸಿಕೊಂಡಿರುವ, ಸಮುದಾಯವು ಇವರನ್ನು ಶಿವನಾಜ್ಞೆ (ಇಲ್ಲಿ ಶಿವ ಬೇರೆಯಲ್ಲ, ಗಣ ಚಿಹ್ನೆ ಲಿಂಗ ಬೇರೆಯಲ್ಲ) ಪಾಲಿಸಲು ಬಂದ ಗಣಾಧೀಶ್ವರರೆನ್ನುವ ಮೂಲಕ ಅನ್ಯಸ್ಮೃತಿಗಳನ್ನೆಲ್ಲಾ ಕಳೆದು ಸಮುದಾಯದ ಪರವಾಗಿಸಿಕೊಳ್ಳುತ್ತಿವೆ.

ಗೋಣಿ ಬಸವನ ಕಾವ್ಯದ ಪ್ರಕಾರ ಕೈಲಾಸ(ಕಲ್ಯಾಣ ಪಟ್ಟಣ)ದಲ್ಲಿ ಶಿವಪಾರ್ವತಿಯವರ, ಮದುವೆ ನಡೆಯುತ್ತಿರುತ್ತದೆ. ಆ ಮದುವೆಯಲ್ಲಿ ನೂರಾರು ಶರಣರು ಸೇರಿರುತ್ತಾರೆ. ಅವರೆಲ್ಲ ಮದುವೆ ಮುಗಿಸಿಕೊಂಡು ಹೋಗುತ್ತಾರೆ. ಆದರೆ ಕೆಲವು ಮಂದಿ ಶರಣರು ಶಿವನಲ್ಲಿಯೇ ಉಳಿದುಕೊಳ್ಳುತ್ತಾರೆ. ಅವರುಗಳೆಂದರೆ

'ಐದು ಮಂದಿ ಶರಣರಯ್ಯೋ
ಐದು ಮಂದಿ ಶರಣರಿದ್ದಾರಯ್ಯೋ
ಐದು ಮಂದಿ ಶರಣರಯ್ಯೋ
ಐದು ಮಂದಿ ಶರಣರಿದ್ದಾರಯ್ಯೋ'

ಐದು ಮಂದಿ ಶರಣ್ರು ಯಾರ್‍ಯಾರು? ಅಂತ ಕೇಳ್ದ್ರೆ, ಮದ್ದಾನ ಸ್ವಾಮಿಗಳು, ಕಣಗಲಿ ಕೆಂಪಯ್ಯ, ಕೋಲಶಾಂತಯ್ಯ, ಹಟ್ಟಿ ತಿಪ್ಪಣ್ಣ, ಕೋಟ್ರೇಶ.(ಅನುಬಂಧ ೬, ಗೋಣಿ ಬಸವನ ಕಾವ್ಯ, ಆಯ್ದ ಭಾಗ) ಈ ಐದು ಮಂದಿ ಶರಣರು ಶಿವ-ಪಾರ್ವತಿ ಮದುವೆ ಕಾರ್ಯ ಮುಗಿಸಿಕೊಂಡು ಹೊರಡಬೇಕೆನ್ನುವಾಗ ಅಲ್ಲಿಯೇ ಇದ್ದ ಗೋಣಿ ಚೀಲದಲ್ಲಿ ಮಗುವೊಂದು ಇರುವುದು ಕಂಡುಬರುತ್ತದೆ. ಆ ಮಗುವನ್ನು ತಂದು ಶಿವನಿಗೊಪ್ಪಿಸುತ್ತಾರೆ. ಗೋಣಿ ಚೀಲದಲ್ಲಿ ಈ ಮಗು ದೊರೆತಿದ್ದರಿಂದ ಈತನಿಗೆ ಗೋಣಿಬಸವನೆಂದು ನಾಮಕರಣ ಮಾಡಿ ಐವರು ಶರಣರೊಂದಿಗೆ ಭೂಲೋಕಕ್ಕೆ ಕಳುಹಿಸುತ್ತಾರೆ. ಭೂಲೋಕದ ಹಂಪಿಗೆ ಬಂದು ಅಲ್ಲಿಂದ

"ಕೂಡ್ಲಿಗಿಗೆ ಬಂದಾರಯ್ಯೋ
ಕೂಡ್ಲಿಗಿ ಹಿಂದ ಮಾಡಿ





ಕುಪ್ಪಿನ ಕೇರಿಗೆ ಬಂದಾರಯ್ಯೋ
ಅವ್ರು ಕುಪ್ಪಿನಕೇರಿಗೆ ಬಂದಾರಯ್ಯೋ
ಅಲ್ಲಿಗೆ ಸೂರ್ಯ ಮುಳುಗ್ಯಾನಯ್ಯೋ'

(ಅನುಬಂಧ ೬, ಗೋಣಿಬಸವನ ಕಾವ್ಯದ ಆಯ್ದ ಭಾಗ)

ಆ ಕುಪ್ಪಿನಕೇರಿಯಲ್ಲಿ ರಾತ್ರಿ ಉಳಿದುಕೊಳ್ಳಲು ಆಲೋಚಿಸಿ ಅಲ್ಲಿನ ಹನುಮಂತನ ಗುಡಿಗೆ ಹೋಗುತ್ತಾರೆ. ಅಲ್ಲಿ ಲಿಂಗವಿಲ್ಲದ ಹನುಮಂತನಿಗೆ ಲಿಂಗದೀಕ್ಷೆಯನ್ನು ನೀಡುತ್ತಾರೆ. ಆ ಮೂಲಕ ವೈಧಿಕ ಪರಂಪರೆಯ ಅನುಯಾಯಿ ಆಗಿದ್ದ ರಾಮನ ಸೇವಕ ಹನುಮಂತನನ್ನು ಮರಳಿ ವೀರಶೈವೀಕರಣಗೊಳಿಸುತ್ತಾರೆ. ಹಂಪಿಯ ಪರಿಸರದಲ್ಲಿ ೧೦೧ ವಿರಕ್ತರ ನಂತರದ ವೈಷ್ಣವ ಧರ್ಮದ ಉನ್ನತಿಗೆ, ಇವರು ಹನುಮಂತನಿಗೆ ಲಿಂಗ ದೀಕ್ಷೆ ನೀಡುವ ಮೂಲಕ ಪ್ರತಿಕ್ರಿಯೆಯನ್ನು ನೀಡಿದ್ದಾರೆ.

ಈಡಿಗರ ಚಂದ್ರಪ್ಪನಿಂದ ರಚಿತವಾಗಿರುವ 'ಗೋಣಿಬಸವನ ಚರಿತ್ರೆ'ಯ ಪ್ರಕಾರ ಈ ಐವರು ಸಂತರು ಕುಪ್ಪಿನಕೇರಿಯಿಂದ ಕೊಟ್ಟೂರಿಗೆ ಬರುತ್ತಾರೆ. ಕೊಟ್ಟೂರಿನಲ್ಲಿ 'ವಿಚಾರನಾರಿ'ಎಂಬ ಹರಿಜನ ಹೆಂಗಸೊಬ್ಬಳು ದಾಸೋಹ ಮಾಡದೆ ಊಟ ಮಾಡುತ್ತಿರಲಿಲ್ಲ. ಅವಳು ಜಂಗಮರ ಬರುವಿಕೆಗಾಗಿ ಕಾಯುತ್ತಿದ್ದಳು. ಈ ಐವರು ಸಂತರು ಕುಪ್ಪಿನಕೇರಿಯಿಂದ ಕೊಟ್ಟೂರಿಗೆ ಬರುತ್ತಿದ್ದಂತೆ ಇವರನ್ನು ಕಂಡು ಪ್ರಸಾದ ಸ್ವೀಕರಿಸಲು ಕೇಳಿಕೊಳ್ಳುತ್ತಾಳೆ. ಇವಳನ್ನು ಪರೀಕ್ಷಿಸಲು ಹರಿಜನ ಕುಲದವಳೆಂದು ಗುರುತಿಸಿ ಪ್ರಸಾದ ಸ್ವೀಕರಿಸಲು ನಿರಾಕರಿಸಿದರು. ಅದಕ್ಕೆ ವಿಚಾರನಾರಿ 'ನಾನು ಹುಟ್ಟಿದ್ದು ಹೀನ ಕುಲದಲ್ಲಾದರೂ ಶಿವಪೂಜೆಯ ಮೂಲಕ ಜಂಗಮಳಾಗಿದ್ದೇನೆ' ಎಂದು ಭಿನ್ನವಿಸಿಕೊಳ್ಳುತ್ತಾಳೆ. ಆದರೂ ಅವಳ ಪ್ರಸಾದವನ್ನು ನಿರಾಕರಿಸಿ ಸಂತರು ಮುಂದಕ್ಕೆ ಹೋಗುವರು. ಇದರಿಂದ ಕೋಪಗೊಂಡ ವಿಚಾರನಾರಿ 'ಓ ಜಂಗಮ ಮಹಾಶಯರೇ ನಾನು ಎಷ್ಟೊಂದು ನಯ-ವಿನಯದಿಂದ ಅಂಗಲಾಚಿ ಬೇಡಿಕೊಂಡರೂ ಸಹ ನಾನು ಹೀನ ಜಾತಿಯವಳೆಂಬ ಗರ್ವದಿಂದ ನನ್ನನ್ನು ಧಿಕ್ಕರಿಸಿ ಹೊರಟಿದ್ದರಿಂದ ಮತ್ತು ಇದುವರೆಗೆ ನಾನು ಸದಾ ಕಾಲ ಜಂಗಮರ ಸೇವೆಯಲ್ಲಿ ಇದ್ದಿದ್ದೇ ನಿಜವಾಗಿದ್ದರೆ, ನನ್ನಲ್ಲಿ ಪತಿವ್ರತಾ ಧರ್ಮವಿದ್ದರೆ ನೀವು ಈ ಶಿಖಾಪುರದ ಕ್ಷೇತ್ರವನ್ನು(ಕೊಟ್ಟೂರು) ಬಿಟ್ಟು ಹೋಗುವುದರೊಳಗಾಗಿ ನಿಮ್ಮೈವರಿಗೂ ಸಹ ಕಣ್ಣುಗಳು ಕಾಣಿಸದಂತಾಗಲಿ' ಎಂದು ಶಿವನನ್ನು ಮನದಲ್ಲಿ ಸ್ಮರಿಸಿ ಶಾಪಕೊಟ್ಟಳು'(ಈಡಿಗರ ಚಂದ್ರಪ್ಪ, ೧೯೯೦, ಪು.೯).

ಪ್ರತಿಷ್ಠಿತರ ಚರಿತ್ರೆಗಿಂತ ಭಿನ್ನವಾಗಿರುವ ಈ ಜನಪದ ಪಠ್ಯದಲ್ಲಿ ಪಂಚಗಣಾಧೀಶ್ವರರು ಸಾಮಾನ್ಯ ಹೆಂಗಸೊಬ್ಬಳಿಂದ ಶಾಪಕ್ಕೆ ಒಳಗಾಗುವುದು ಏನನ್ನು ಸೂಚಿಸುತ್ತಿದೆ? ಏಕೆಂದರೆ ಬಸವಲಿಂಗಕವಿ ಬರೆದ 'ಕೊಟ್ಟೂರು ಬಸವೇಶ್ವರ ಚಾರಿತ್ರ್ಯ'ದಾದ್ಯಂತ ಗುರುಬಸವ ಹಲವಾರು ಪವಾಡಗಳನ್ನು ಮಾಡುವ, ತಪ್ಪಿದವರಿಗೆ ಶಿಕ್ಷೆ ನೀಡುವ ವ್ಯಕ್ತಿಯಾಗಿ ವಿಜೃಂಭಿಸುತ್ತಾನೆ. ಆದರೆ ಜನಪದರು ತಮ್ಮ ಸಾಂಸ್ಕೃತಿಕ

ನಾಯಕರ ಬಗೆಗೆ ಕಟ್ಟುವ ಇಂತಹ ಮಿತ್‌ಗಳಲ್ಲಿ ಅವರ ಸಮಕಾಲೀನ ಅನೇಕ ಒತ್ತಡಗಳು ಭಾಗವಹಿಸುತ್ತಿರುತ್ತವೆ. ಅದಕ್ಕಾಗಿ ಪ್ರತಿಷ್ಠಿತ ಚರಿತ್ರೆಗಿಂತ ಭಿನ್ನವಾಗಿ ತಮ್ಮ ನಾಯಕನನ್ನು ಸಾಮಾನ್ಯ ಮನುಷ್ಯರಂತೆ, ತಮಗೆ ಆಪ್ತನಾಗುವಂತೆ, ಆತನೊಂದಿಗೆ ಆತ್ಮೀಯತೆಯನ್ನು ಕಾವ್ಯದ ಮೂಲಕ ಅಭಿವ್ಯಕ್ತಿಸುತ್ತಿರುತ್ತಾರೆ. ಹಾಗಾಗಿ ಇಲ್ಲಿ ಸಾಮಾನ್ಯರಂತೆ ಈ ಐವರು ಸಂತರು ಶಾಪಕ್ಕೊಳಗಾಗುತ್ತಾರೆ.

ವಿಚಾರನಾರಿಯ ಶಾಪದಿಂದ ಕಣ್ಣು ಕಳೆದುಕೊಂಡ ಸಂತರು ಮರಳಿ ಬಂದು ಕ್ಷಮೆ ಬೇಡಿ ಪ್ರಸಾದವನ್ನು ಸ್ವೀಕರಿಸಿದರು. ಕೊಟ್ಟೂರ ಗುರುಬಸವನ ಜಾತ್ರೆಯಲ್ಲಿ ಇವತ್ತಿಗೂ ಹರಿಜನ ಕೇರಿಯ ವಿಚಾರನಾರಿಯ ವಂಶಸ್ಥರ ಮನೆಯಿಂದ ಎಡೆತಂದು (ಅನುಬಂಧ ೭, ಛಾಯಾಚಿತ್ರಗಳು, ಚಿತ್ರ ಸಂ.೨೯) ಆ ಹೆಂಗಸು ಆರತಿ ಬೆಳಗಿದ ನಂತರವೇ ರಥೋತ್ಸವವು ಜರುಗುತ್ತದೆ.

ಕೊಟ್ಟೂರನ್ನು ಬಿಟ್ಟ ಶರಣರು ಬಾಗಳಿಗ್ರಾಮಕ್ಕೆ(ಹರಪನಳ್ಳಿ.ತಾ) ಬರುತ್ತಾರೆ. ಅಲ್ಲಿರುವ ಕಲ್ಲೇಶ್ವರ ದೇವಸ್ಥಾನದಲ್ಲಿ ಲಿಂಗಪೂಜೆಯನ್ನು ಮಾಡುತ್ತಾ ಅಲ್ಲಿಯೇ ನೆಲೆಸುತ್ತಾರೆ. ಒಂದು ದಿನ ಮದ್ದಾನಸ್ವಾಮಿ, ಲಿಂಗಪೂಜೆಗೆಂದು, ಹೂವುಗಳನ್ನು ತರಲು ಹತ್ತಿರವಿರುವ ಗ್ರಾಮ ಶೃಂಗಾರತೋಟಕ್ಕೆ ಹೋಗುತ್ತಾನೆ. ಆ ಶೃಂಗಾರ ತೋಟಕ್ಕೆ ಕನಕವ್ವ ಎಂಬ ಬೇಡ ಹೆಂಗಸು ಬರುತ್ತಾಳೆ. ಇವಳನ್ನು ಹರಪನಳ್ಳಿ ಪಾಳೇಗಾರರ ಮನೆತನದವಳೆಂದು 'ಗೋಣಿ ಬಸವ ಚರಿತ್ರೆ' ಹೇಳಿದರೆ, ಅವಳು ಚಿಗಟೇರಿ ಶಿವನಯ್ಯನ ತಂಗಿ ಎಂದು ಬಾಲಬಸವರ ಗೋಣಿಬಸವನ ಕಾವ್ಯ ಹೇಳುತ್ತದೆ.

ಅವಳನ್ನು ಮದ್ದಾನಸ್ವಾಮಿ ತನ್ನ ನೇತ್ರಗಳಿಂದ ನೋಡುತ್ತಿದ್ದ ಹಾಗೆ ಪ್ರಜ್ಞೆತಪ್ಪಿ ಬೀಳುತ್ತಾಳೆ. ಮದ್ದಾನಸ್ವಾಮಿ ಕಲ್ಲೇಶ್ವರ ದೇವಸ್ಥಾನಕ್ಕೆ ಮರಳಿ ಬಂದು, ನಡೆದ ಎಲ್ಲ ವಿವರವನ್ನು ತಿಳಿಸುತ್ತಾನೆ. 'ಮದ್ದಾನಸ್ವಾಮಿ ಹುದಲಿಗೆ ಬಿದ್ದ' ಎಂದು ತಿಳಿದು ಐವರು ಸಂತರು ಬೇರೆ-ಬೇರೆ ಹೋಗಲು ಇಚ್ಛಿಸುತ್ತಾರೆ. ಮದ್ದಾನಸ್ವಾಮಿ ಬಾಗಳಿಯ ಹತ್ತಿರವೇ ಇರುವ ಕೂಲಹಳ್ಳಿಯಲ್ಲಿ ಉಳಿದರೆ ಕೋಲಶಾಂತನು ಅರಸೀಕೆರೆಯಲ್ಲಿ(ಹರಪನಾಳ್ಳಿ ತಾ.), ಕೆಂಪಯ್ಯ ಹರಪನಳ್ಳಿಯಲ್ಲಿ, ಗುರುಬಸವ ಕೊಟ್ಟೂರಿನಲ್ಲಿ, ನಾಯಕನಟ್ಟಿಯಲ್ಲಿ ತಿಪ್ಪೇಸ್ವಾಮಿ ಉಳಿದುಕೊಳ್ಳುವರು.

ಬೇರೆ-ಬೇರೆ ಕ್ಷೇತ್ರಗಳಿಗೆ ತೆರಳಿದ ಈ ಐವರು ಸಂತರೂ ತಮ್ಮ ಜೀವನ-ಸಾಧನೆ, ಪವಾಡಗಳ ಮೂಲಕ ಮಧ್ಯ ಕರ್ನಾಟಕದ ಜನರ ಆರಾಧ್ಯ ದೈವವಾಗಿದ್ದಾರೆ. ಇವರ ಜೀವನ ವಿವರವನ್ನು ಪ್ರತ್ಯೇಕವಾಗಿ ಮುಂದೆ ವಿವರಿಸಲಾಗಿದೆ.

### ೫.೧. ನಾಯಕನಟ್ಟಿ ತಿಪ್ಪೇಸ್ವಾಮಿ

ಪಂಚಗಣಾಧೀಶ್ವರರಲ್ಲಿಯೇ ಅತ್ಯಂತ ವೈಶಿಷ್ಟ್ಯಪೂರ್ಣವಾದ ವ್ಯಕ್ತಿಯೆಂದರೆ ನಾಯಕನಟ್ಟಿ ತಿಪ್ಪೇಸ್ವಾಮಿ. ಬೇಡ ಜನಾಂಗದ ಆರಾಧ್ಯ ದೈವವಾದ ಈತನ ಸಮಾಧಿ ಸ್ಥಳ ಎಂದು ಹೇಳಲಾಗುವ ಹೊರಮಠದ

ಮುಸ್ಲಿಂ ವಾಸ್ತುಶಿಲ್ಪ, ಮಾಂಸ ಎಡೆಕೊಡುವ ಪದ್ಧತಿ, ಮ್ಯಾಸ ಬೇಡ ಕುಲದ ಪೂಜಾರಿ, ಕೊಬ್ಬರಿ ಸುಡುವುದು ಇತ್ಯಾದಿಗಳೆಲ್ಲ ಈತನ ಬದುಕು ಸಂಕೀರ್ಣವಾದುದು ಎಂಬುದನ್ನು ಸೂಚಿಸುತ್ತಿವೆ. ಶೈವನಾಥ ಸಿದ್ಧನಾಗಿದ್ದ ಈತನು ನಾಕಯನಟ್ಟಿ ಸುತ್ತಮುತ್ತಲಿನ ಭಾಗದಲ್ಲಿ ೭ ಕೆರೆ, ೭ ಪುರಗಳನ್ನು ಕಟ್ಟಿಸುವುದರ ಮೂಲಕ ಬೇಡ ಜನಾಂಗವನ್ನು ಒಂದೆಡೆ ನೆಲೆ ನಿಲ್ಲುವಂತೆ ಮಾಡಲು ಪ್ರಯತ್ನಿಸಿದ್ದಾನೆ. ಆ ಮೂಲಕ ಅವರ ಜೀವನ ಪದ್ಧತಿ ಬದಲಾವಣೆಗೊಳ್ಳುವಂತೆ ಮಾಡಿದ್ದಾನೆ. ಅದಕ್ಕಾಗಿ ಅವರ ಆಹಾರ ಪದ್ಧತಿಯನ್ನು ಒಪ್ಪಿಕೊಳ್ಳುವ ಮೂಲಕ ಮ್ಯಾಸಬೇಡರವನನ್ನೇ ಪೂಜಾರಿಯಾಗಿ ಸ್ವೀಕರಿಸಿದ್ದಾನೆ. ತಿಪ್ಪೆಯ ಮೇಲಿನ ಪ್ರಸಂಗ, ಹರಳಯ್ಯನ ಮನೆಯ ಊಟದ ಪ್ರಸಂಗ, ಮಾಂಸಹಾರ ಪದ್ದತಿ, ತನ್ನ ಸುತ್ತಮುತ್ತಲಿನ ಸ್ಥಳಗಳನ್ನೇ ಪವಿತ್ರೀಕರಿಸುವುದು ಇತ್ಯಾದಿ. ಕೀಳೆಂದು ಪರಿಗಣಿಸಲ್ಪಟ್ಟ ಸಂಗತಿಗಳನ್ನು ಈತ ಮೌಲೀಕರಿಸುತ್ತಾನೆ. ಈತನ ಬಗೆಗೆ ಲಿಖಿತ ಮಾಹಿತಿಗಳಿಗಿಂತ ಮೌಖಿಕ ಪರಂಪರೆಯಲ್ಲಿ ಕಾಡುಗೊಲ್ಲರು, ಬೇಡ ಜನಾಂಗದವರ ಹಾಡುಗಳೇ ಸಾಕಷ್ಟು ಮಾಹಿತಿಗಳನ್ನು ಕೊಡುತ್ತವೆ. ಅವುಗಳನ್ನು ಈ ಮುಂದೆ ವಿವೇಚಿಸಲಾಗಿದೆ.

### ೫.೧.೧. ತಿಪ್ಪೇಸ್ವಾಮಿ ಬಗೆಗಿರುವ ಚಾರಿತ್ರಿಕ ಗೊಂದಲಗಳು

ನಾಯಕನಟ್ಟಿಯು ಮ್ಯಾಸಬೇಡರ ೧೨ ಪೆಟ್ಟಿಗೆ ದೇವರುಗಳ ಪ್ರಮುಖ ಸ್ಥಳವಾಗಿದೆ. ಶ್ರೀಶೈಲದ ಕಡೆಯಿಂದ ಬಂದು ವಾಸಮಾಡುತ್ತಿರುವ ಮ್ಯಾಸ ಬೇಡರಿಗೆ ತಿಪ್ಪೇಸ್ವಾಮಿ ಕುಲದೈವವಾಗಿ ಆರಾಧನೆ ಗೊಳ್ಳುತ್ತಿದ್ದಾನೆ. ಈತನಿಗೆ ಸಂಬಂಧಿಸಿದಂತೆ ನಮಗೆ ಲಿಖಿತವಾದ ಮಾಹಿತಿಗಳು ದೊರೆಯುವುದಿಲ್ಲ. ಆದರೆ ತಿಪ್ಪೇಸ್ವಾಮಿಯ ಜೀವನದ ಬಗೆಗಿನ ಮೌಖಿಕ ವಿವರಗಳು ಈತನು ಬದುಕಿದ್ದ ಪರಿಸರದ ಬಗೆಗೆ ಮಾಹಿತಿಯನ್ನು ಕೊಡುತ್ತವೆ. ಈತನು ಸುತ್ತಾಡಿದ ಹಲವಾರು ಸ್ಥಳಗಳು, ಮಠಗಳು, ಸಮುದಾಯದ ಮಿತ್‌ಗಳು ಈತನ ಕಾಲದ ಕುರಿತು ಮಾಹಿತಿಗಳನ್ನು ಕೊಡುತ್ತವೆ. ಈತನ ಸಂಬಂಧವಾಗಿ ಆಚರಿಸುವ ಹರಕೆ, ಸಂಪ್ರದಾಯ, ಆಚರಣೆಗಳು ನಂಬಿಕೆಗಳು ಈತನೊಬ್ಬ ಐತಿಹಾಸಿಕ ವ್ಯಕ್ತಿಯಾಗಿದ್ದನೆಂದೂ, ತನ್ನ ಹಲವಾರು ಸಾಮಾಜಿಕ ಕಾರ್ಯಗಳಿಂದ ಅಂದು ಸಮುದಾಯದ ಬಹುಮುಖ್ಯ ಆಧಾರವಾಗಿದ್ದನೆಂದು ತಿಳಿಸುತ್ತವೆ.

'ಕರ್ನಾಟಕ ಸಂಸ್ಕೃತಿ ಸಂಶೋಧನೆ'ಯ ಪ್ರಕಾರ ರುದ್ರಮುನಿ ರೇವಣಸಿದ್ಧರ ಶಿಷ್ಯ. 'ಗುರುಪರಂಪರೆಯಲ್ಲಿ ಎರಡನೇ ಗುರುವಾದ ರುದ್ರಮುನಿಯು ಮುಕ್ತಿಮುನಿಯೆಂಬ ಶಿಷ್ಯನನ್ನು ಹೊಂದಿರುವುದು ತಿಳಿದುಬರುತ್ತದೆ. ಇಲ್ಲಿ ರೇವಣಸಿದ್ಧನ ಕಾಲ ೧೦೫೦ ರಿಂದ ೧೧೭೦ ಎಂದು ಗುರುತಿಸಲಾಗಿದೆ.'(ಕಪಟರಾಳ್ ಕೃಷ್ಣರಾವ್, ೧೯೭೦, ಪು.೧-೧೩). ಈತನ ಶಿಷ್ಯನಾದ ರುದ್ರಮುನಿಯು ೧೨ನೇ ಶತಮಾನಕ್ಕೆ ಸೇರಿದವನಾಗಿದ್ದಾನೆ. ಆದರೆ ತಿಪ್ಪೇಸ್ವಾಮಿಗೆ ಸಂಬಂಧಿಸಿದ ಯಾವುದೇ ಜೀವನ ಘಟನೆಗಳು, ಮಿತ್‌ಗಳು ೧೨ನೇ ಶತಮಾನಕ್ಕೆ ಹೊಂದಿಕೆಯಾಗುವುದಿಲ್ಲ.

ಇನ್ನು ಗೋಸಲ ಗುರುಪರಂಪರೆಯನ್ನು ಕುರಿತಂತೆ ಸಿದ್ಧಲಿಂಗಯತಿಯ ವಚನವೊಂದು ರುದ್ರಮುನಿಯ ಕುರಿತು ಈ ರೀತಿ ಹೇಳುತ್ತದೆ.

'ಅನಾದಿ ಗಣೇಶ್ವರನ ಶಿಷ್ಯ ಆದಿಗಣೇಶ್ವರ
ಆದಿ ಗಣೇಶ್ವರನ ಶಿಷ್ಯ ನಿರ್ಮಾಯನೆಂಬ ಗಣೇಶ್ವರ
ನಿರ್ಮಾಯನೆಂಬ ಗಣೇಶ್ವರನ ಶಿಷ್ಯ ಜ್ಞಾನಾನಂದ ಗಣೇಶ್ವರ
ಜ್ಞಾನಾನಂದನೆಂಬ ಗಣೇಶ್ವರನ ಶಿಷ್ಯ ಆತ್ಮಗಣೇಶ್ವರ
ಆತ್ಮಗಣೇಶ್ವರನ ಶಿಷ್ಯ ಆಧ್ಯಾತ್ಮಗಣೇಶ್ವರ
ಆಧ್ಯಾತ್ಮ ಗಣೇಶ್ವರನ ಶಿಷ್ಯ ರುದ್ರನೆಂಬ ಗಣೇಶ್ವರ
ರುದ್ರನೆಂಬ ಗಣೇಶ್ವರನ ಶಿಷ್ಯ ಬಸವಪ್ರಭುದೇವರು.
---------------------------------
---------ಮಹಾಲಿಂಗ ಗುರುಶಿವಸಿದ್ದೇಶ್ವರ ಪ್ರಭುವೆ'

(ಆರ್.ಸಿ.ಹಿರೇಮಠ(ಸಂ), ೧೯೮೩, ಪು.೩)

ಮೇಲಿನ ವಚನದ ಪ್ರಕಾರ ಗೋಸಲ ಗುರುಪರಂಪರೆಯಲ್ಲಿ ರುದ್ರಮುನಿ ಎಂಬುವವನು ಎರಡನೆಯವನು. ಈತನ ಬಗ್ಗೆ 'ಷಟ್ಸ್ಥಲಪ್ರಭೆ' ಕೃತಿಯು 'ಈತನು ತಿರುಣಾಮಲೆ, ತೀರ್ಥಮಲೆ, ಹದಿನಾಡಸೀಮೆ, ಎಳಂದೂರು, ನಿಡುಗಲ್ಲು, ನಾಯಕನಟ್ಟಿಯಲ್ಲಿ ಸಂಚಾರಮಾಡಿ ನಿಡುಗಲ್ಲಿನ ವಾಲ್ಮೀಕಿ ಕುಲದರಸನಿಗೆ ಉಪದೇಶ ಮಾಡಿ, ಪರಮತೀಯರನ್ನು ಪರಾಭವಗೊಳಿಸಿ, ನಾಯಕನಟ್ಟಿಯಲ್ಲಿ ಸಮಾಧಿ ಹೊಂದಿದನು. ತಿಪ್ಪೆಯಲ್ಲಿ ಮಠಕಟ್ಟಿಸಿ ಯೋಗ ಸಮಾಧಿ ಮಾಡಿರುವುದರಿಂದ ತಿಪ್ಪೇರುದ್ರಸ್ವಾಮಿ ಎಂದು ಕರೆಯುತ್ತಾರೆ'(ಡಾ.ಆರ್.ಸಿ.ಹಿರೇಮಠ, ೧೯೭೨, ಪು.೩೦೧) ಎಂದು ಹೇಳಿದೆ. ಇದು ಕೂಡ ನಿಖರವಾಗಿಲ್ಲ. ಮೇಲಿನ ವಚನದಲ್ಲಿ ಬರುವ ರುದ್ರಮುನಿಗೂ ಮತ್ತು ನಾಯಕನಟ್ಟಿಯಲ್ಲಿ ಸಮಾಧಿಯಾದ ತಿಪ್ಪೇಸ್ವಾಮಿಗೂ ಕಾಲದ ಅಂತರ ಸಾಕಷ್ಟಿದೆ. ವಚನದಲ್ಲಿ ಬರುವ ರುದ್ರಮುನಿಯ ಕಾಲ ನೂರೊಂದು ವಿರಕ್ತರಿಗಿಂತ ಹಿಂದೆ ಇದೆ. ಈತನು ನಿಡುಗಲ್ಲಿನ ವಾಲ್ಮೀಕಿ ಕುಲದ ಅರಸನಿಗೆ ಉಪದೇಶ ಮಾಡಿರಲಿಕ್ಕೆ ಸಾಧ್ಯವಿಲ್ಲ. ಕಾರಣ ಆ ಸಂದರ್ಭದಲ್ಲಿ ನಿಡಗಲ್ಲಿನಲ್ಲಿ ಬದುಕಿದ್ದ ಯಾವುದೇ ವಾಲ್ಮೀಕಿ(ಬೇಡ)ಕುಲದ ಅರಸರ ಆಳ್ವಿಕೆಯ ಕುರಿತು ಐತಿಹಾಸಿಕ ದಾಖಲೆಗಳಿಲ್ಲ. ಹಾಗೆ ನಿಡಗಲ್ಲು ದೊರೆಗೆ ಉಪದೇಶ ಮಾಡಿದ ತಿಪ್ಪೇಸ್ವಾಮಿ ೧೬-೧೭ನೇ ಶತಮಾನಕ್ಕೆ ಸಂಬಂಧಿಸಿದವನಾಗಿದ್ದಾನೆ. ಏಕೆಂದರೆ ನಿಡುಗಲ್ಲಿನ ಹೊಟ್ಟೆಪ್ಪ ನಾಯಕನಿಗೆ ಮತ್ತು ನಾಯಕನಟ್ಟಿಯ ಬೋಡಿಮಲ್ಲಪ್ಪನಾಯಕನಿಗೆ ಕದನ ಏರ್ಪಟ್ಟಾಗ ತಿಪ್ಪೇಸ್ವಾಮಿ ಪ್ರತ್ಯಕ್ಷವಾಗಿ ಉಪದೇಶ ನೀಡಿದನೆಂದು ತಿಪ್ಪೇಸ್ವಾಮಿ ಜೀವನದಲ್ಲಿನ ಮಿತ್ ಹೇಳುತ್ತದೆ. ಹೀಗೆ ಉಪದೇಶ ಪಡೆದ ಹೊಟ್ಟೆಪ್ಪನಾಯಕ(೧೬೫೩) ಹಾಗೂ ಕದನದಲ್ಲಿ ಪಾಲ್ಗೊಂಡ ನಾಯಕನಟ್ಟಿ ಬೋಡಿಮಲ್ಲಪ್ಪನಾಯಕ(೧೬೬೧-೧೬೭೧) ಇಬ್ಬರೂ ಸಮಕಾಲೀನರಾಗಿದ್ದಾರೆ.

ಅಲ್ಲದೆ ತಿಪ್ಪೇಸ್ವಾಮಿಗೆ ಸಂಬಂಧಿಸಿದಂತೆ ಇರುವ ಮಿತ್‌ನ ಪ್ರಕಾರ ಈತ ೭ ಕೆರೆ, ೭ ಪುರಗಳನ್ನು ಕಟ್ಟಿಸಿದನೆಂದು ಹೇಳುತ್ತದೆ. ಈ ೭ ಕೆರೆ ೭ ಪುರಗಳು ಬೋಡಿಮಲ್ಲಪ್ಪನ ಕಾಲದಲ್ಲಿಯೇ ನಿರ್ಮಾಣವಾಗಿವೆ. (ಅನುಬಂಧ ೧, ನಾಯಕನಟ್ಟಿ ಬಖೈರು) ಜನಪದ ಸಾಹಿತ್ಯದ ಪ್ರಕಾರ ತಿಪ್ಪೇಸ್ವಾಮಿಯು ಜಗಲೂರು ಪಾಪನಾಯಕನೊಂದಿಗೆ ಬದುಕಿದ್ದನೆಂದು ಹೇಳಲಾಗುತ್ತದೆ.

'ಅಟ್ಟೀಯ ತಿಪ್ಪಯ್ಯ ಜಗಲೂರ ಪಾಪಯ್ಯ
ಚಿಕ್ಕೆರಿ ಕೋಡಿ ಬಸವಯ್ಯ ಜೊತೆಕೂಡಿ
ಲೆತ್ತವಾಡ್ಯಾರೆ ಕೆರೆಯಾಗೆ?'

(ಅನುಬಂಧ ೨, ತಿಪ್ಪೇಸ್ವಾಮಿ ಕಾವ್ಯ)

ಇಲ್ಲಿ ಬರುವ ಜಗಲೂರು ಪಾಪನಾಯಕನ ಕಾಲವನ್ನು ೧೫೭೦ ಎಂದು ತಿಳಿಯಲಾಗಿದೆ. ಬೋಡಿಮಲ್ಲಪ್ಪನಾಯಕ ಮತ್ತು ಜಗಲೂರು ಪಾಪನಾಯಕನಿಗೆ ಒಂದು ಶತಮಾನದ ಕಾಲ ವ್ಯತ್ಯಾಸವಾಗುತ್ತದೆ. ಆರಂಭದಲ್ಲಿ ತಿಪ್ಪೇಸ್ವಾಮಿಯು ಪಾಪನಾಯಕನೊಂದಿಗಿದ್ದ, ನಂತರ ನಾಯಕನಟ್ಟಿಗೆ ಬಂದಿರಬೇಕು. ಒಟ್ಟಾರೆ ಈ ಎಲ್ಲ ಆಧಾರಗಳು ತಿಪ್ಪೇಸ್ವಾಮಿ ೧೬ನೇ ಶತಮಾನದ ಉತ್ತರಾರ್ಧ, ೧೭ನೇ ಶತಮಾನದ ಪೂರ್ವಾರ್ಧದಲ್ಲಿ ಬದುಕಿದ್ದನೆಂದು ಸ್ಪಷ್ಟಪಡಿಸುತ್ತದೆ.

### ೫.೧.೨. ಶೈವ-ನಾಥಸಿದ್ಧನಾಗಿ ತಿಪ್ಪೇಸ್ವಾಮಿ

ಕರ್ನಾಟಕದ ಶರಣ ಪರಂಪರೆಗೆ ಶೈವ-ನಾಥಸಿದ್ಧರ ಪ್ರಭಾವ ಬಹಳ ದೊಡ್ಡದು. ೧೨ನೇ ಶತಮಾನದ ಪೂರ್ವದಿಂದಲೂ ಕರ್ನಾಟಕದ ಧಾರ್ಮಿಕ ಪರಿಸರದಲ್ಲಿ ಶೈವ-ನಾಥಸಿದ್ಧರು ಪ್ರಬಲರಾದವರಾಗಿದ್ದವರು. ೧೨ನೇ ಶತಮಾನದ ಅಲ್ಲಮ, ಸಿದ್ಧರಾಮರಿಗೆ ನಾಥ-ಶೈವ ಪಂಥಗಳ ಪ್ರಭಾವ ಇರುವುದು ಅವರ ಜೀವನ ಚರಿತ್ರೆ ಮತ್ತು ವಚನಗಳನ್ನು ನೋಡಿದರೆ ತಿಳಿದು ಬರುತ್ತದೆ. ಮುಂದೆ ನೂರೊಂದು ವಿರಕ್ತರಿಗೆ, ತೋಂಟದ ಸಿದ್ಧಲಿಂಗ ಯತಿಗಳ ಶಿಷ್ಯರಿಗೆ, ಮೌಖಿಕ ಪರಂಪರೆಯ ಕೊಡೇಕಲ್, ಬಸವಣ್ಣ, ತಿಂಥಿಣಿ ಮೋನಪ್ಪಯ್ಯ, ಮಂಟೇಸ್ವಾಮಿ, ಮಲೆಮಾದೇಶ್ವರ ಮುಂತಾದವರಿಗೂ ಶೈವ-ನಾಥಸಿದ್ಧರ ಪ್ರಭಾವವಿದೆ.

ಪಂಚಗಣಾಧೀಶ್ವರರಲ್ಲಿ ಒಬ್ಬನಾದ ನಾಯಕನಟ್ಟಿ ತಿಪ್ಪೇಸ್ವಾಮಿಯ ಜೀವನ ಆಚರಣೆಗಳನ್ನು ಗಮನಿಸಿದರೆ ಈತನು ಶೈವ-ನಾಥಸಿದ್ಧನಾಗಿದ್ದನು ಎಂಬುದು ತಿಳಿದುಬರುತ್ತದೆ. ಈಗಲೂ ಈತನ ಜಾತ್ರೆಯಲ್ಲಿ ನಾನಾ ರಾಜ್ಯಗಳಿಂದ ಬಂದು ಸೇರುವ ಸಾಧುಗಳು, ಅಲ್ಲಿ ಮಾರಾಟವಾಗುವ ಭಂಗಿ, ಸುರೆ ಮುಂತಾದುವೆಲ್ಲ ಈತನು ಸಿದ್ಧಪಂಥದನೆಂಬುದನ್ನು ಸ್ಪಷ್ಟಪಡಿಸುತ್ತವೆ. ತನ್ನ ಹಲವಾರು ಪವಾಡಗಳ ಮೂಲಕ ಕೀಳೆಂದು ಪರಿಗಣಿಸಲ್ಪಟ್ಟವುಗಳನ್ನು ಮೌಲೀಕರಿಸುವ, ಅಪ್ರತಿಷ್ಠವಾದವುಗಳನ್ನು ಪ್ರತಿಷ್ಠಗೊಳಿಸುವ ಕ್ರಿಯೆಯನ್ನು ತಿಪ್ಪೇಸ್ವಾಮಿ ಮಾಡಿದ್ದಾನೆ. ಇದು ಸಿದ್ಧಪರಂಪರೆಯ ಲಕ್ಷಣ. ತಿಪ್ಪೇಸ್ವಾಮಿಯ ಈ ಮುಂದಿನ ಪವಾಡಗಳನ್ನು ಗಮನಿಸಿದರೆ ಈತನು ಸಿದ್ಧಪಂಥದವನಾಗಿದ್ದನೆಂಬುದು ಸ್ಪಷ್ಟವಾಗುತ್ತದೆ.

ಜನಸಮುದಾಯದಲ್ಲಿರುವ ನಂಬಿಕೆಯ ಪ್ರಕಾರ ಪಂಚಗಣಾಧೀಶ್ವರರಿಂದ ಬೇರ್ಪಟ್ಟ ತಿಪ್ಪೇಸ್ವಾಮಿ ಬಾಗಳಿಯಿಂದ ನಿಡುಗಲ್ಲಿಗೆ ಬರುತ್ತಾನೆ. ನಿಡುಗಲ್ಲ ದೊರೆಗಳು ಕೃಷಿ ಭೂಮಿಗಾಗಿ ಕಾಲುವೆಗಳನ್ನು ತೆಗೆಸುತ್ತಿದ್ದು ಅಲ್ಲಿ ಕೂಲಿಯಾಳುಗಳೊಂದಿಗೆ ಸಂಘರ್ಷಕ್ಕಿಳಿಯುತ್ತಾನೆ.(ಗಮನಿಸಿ, ಅಧ್ಯಾಯ-೫.೧.೩) ಅವರು ಕಳ್ಳಿ ಹಾಲನ್ನು ಕುಡಿಸುತ್ತಾರೆ, ತಾವೇ ತೋಡಿದ ಕಾಲುವೆಯಲ್ಲಿ ತಿಪ್ಪೇಸ್ವಾಮಿಯನ್ನು ಮುಚ್ಚಿ ಹಾಕುತ್ತಾರೆ. ಕೂಲಿಯಾಳುಗಳು ಊರು ಸೇರುವುದರೊಳಗೆ ಅಲ್ಲಿ ಪ್ರತ್ಯಕ್ಷನಾಗುತ್ತಾನೆ. ಇದು ತಿಪ್ಪೇಸ್ವಾಮಿಗೆ ಸಾಧ್ಯವಾಗಿದ್ದು ಆತ ಸಿದ್ಧಪಂಥದ ಸಾಧಕನಾಗಿರುವುದರಿಂದಲೇ. ಏಕೆಂದರೆ, ಸಿದ್ಧಪಂಥದಲ್ಲಿ ಯೌಗಿಕ ವಿದ್ಯೆಗೆ ಅಪಾರವಾದ ಮಹತ್ವವಿದೆ. ಯೋಗ ನೈಪುಣ್ಯದಿಂದ ಘರ್ಹಾ(ಸಮಾಧಿ) ಸ್ಥಿತಿಗೆ ಹೋಗುವುದು ಸಾಧ್ಯವಿದೆ. ಕರ್ನಾಟಕದ ಅದೆಷ್ಟೋ ಸಂತರು ಈ ರೀತಿಯ ಪವಾಡಗಳನ್ನು ಮಾಡುತ್ತಾರೆ. ಕೊಟ್ಟೂರ ಗುರುಬಸವ ಒಂದು ವಾರದ ತನಕ ನೀರಿನಲ್ಲಿ ಸಮಾಧಿಯಾದ ಪವಾಡವಿದೆ. ಅಲ್ಲದೆ ನಿಡುಗಲ್ಲಿನ ದೊರೆಗೆ(?) ಏಳು ಜನ ಪುತ್ರರನ್ನು ಕರುಣಿಸುತ್ತಾನೆ. ಮಕ್ಕಳಿಲ್ಲದವರಿಗೆ ಮಕ್ಕಳನ್ನು ಕೊಡುವುದು ಕೂಡ ಸಿದ್ಧ ಪಂಥದ ಪವಾಡಗಳಲ್ಲಿ ಸಾಮಾನ್ಯವಾಗಿ ಕಂಡುಬರುವಂತಹುದು.

ನಿಡುಗಲ್ಲಿನಿಂದ ರಾಯದುರ್ಗಕ್ಕೆ ಬಂದ ತಿಪ್ಪೇಸ್ವಾಮಿ ಅಲ್ಲಿ ಕೆಂಪಯ್ಯನ ವೈಭವದ ಮೆರವಣಿಗೆ ಹೋಗುತ್ತಿರುವುದನ್ನು ನೋಡುತ್ತಾನೆ. ತಿಪ್ಪೆಯ ಮೇಲೆ ಹುಚ್ಚನಂತೆ ನಿಂತು ಆತನ ಆಡಂಬರವನ್ನು ಹಾಸ್ಯ ಮಾಡುತ್ತಾನೆ. ಇದರಿಂದ ಪ್ರತಿಷ್ಠಿತ ಎನಿಸಿಕೊಳ್ಳುವ ಜೀವನದ ಬಗ್ಗೆ ಕೆಂಪಯ್ಯನಲ್ಲಿ ತಿರಸ್ಕಾರ ಹೊಂದಿ ಬದಲಾಗುತ್ತಾನೆ.

ಈ ರೀತಿ ತಿಪ್ಪೆಯ ಮೇಲೆ ನಿಂತು ಪವಾಡ ಮಾಡಿದ್ದಕ್ಕಾಗಿಯೇ 'ತಿಪ್ಪೇಸ್ವಾಮಿ' ಎನ್ನುವ ಹೆಸರು ಬಂತು ಎಂದು ನಾಯಕನಟ್ಟಿ ಭಾಗದಲ್ಲಿರುವ ಜನರು ಹೇಳುತ್ತಾರೆ. ವೈದಿಕ ಸಮುದಾಯದಲ್ಲಿ ಕೀಳೆಂದು ಭಾವಿಸಲ್ಪಟ್ಟ ತಿಪ್ಪೆಯ ಮೇಲೆ ನಿಂತು ಆಡಂಬರದ ಮೆರವಣಿಗೆಯನ್ನು ವಿರೋಧಿಸುವುದು ಏನನ್ನು ಸೂಚಿಸುತ್ತಿದೆ? ಈತನ ಹುಚ್ಚುತನ ಯಾವುದರ ಸಂಕೇತ?

ತಿಪ್ಪೇ ತಿಪ್ಪೆಂದರೆ ತಿಪ್ಪೇಯ ತಿರುಪಣ್ಣ
ತಿಪ್ಪೇ ಮೇಲಿಪ್ಪೆ ಮರನುಟ್ಟಿ | ತಿಪ್ಪೇಸ್ವಾಮಿ
ತಾವೊಳ್ಳೆದೆಂದು ನೆಲೆನಿಂತ ||

(ಡಾ.ಕೃಷ್ಣಮೂರ್ತಿ ಹನೂರು, ೧೯೯೩, ಪು.೨೮೦)

ಈ ಪದ್ಯದಲ್ಲಿ ತಿಪ್ಪೇಸ್ವಾಮಿ ತಿಪ್ಪೆತಾವೊಳ್ಳೆದೆಂದು ನೆಲೆನಿಂತ ಬಗ್ಗೆ ಉಲ್ಲೇಖವಿದೆ. ಇದು ಏನನ್ನು ಸೂಚಿಸುತ್ತಿದೆ?

ಸಾಮಾನ್ಯವಾಗಿ ಸಿದ್ಧಪಂಥದ ಯೋಗಿಗಳು ವೈದಿಕ ವಿರೋಧಿ ಅಂಶಗಳನ್ನು ತಮ್ಮ ಜೀವನದಲ್ಲಿ ಹಠದಿಂದ ಮೌಲೀಕರಿಸುವ ಪ್ರಯತ್ನ ಮಾಡುತ್ತಾರೆ. ತಿಪ್ಪೇಸ್ವಾಮಿ ಜೀವನದಲ್ಲಿ ಬರುವ ತಿಪ್ಪೆ, ಮಾಂಸ,

ಭಂಗಿ, ಇವೆಲ್ಲವುಗಳೂ ಪ್ರತಿಷ್ಠಿತ ಎನಿಸಿಕೊಳ್ಳುವ ವೈಧಿಕ ಧರ್ಮ ವಿರೋಧಿಸುವಂತಹವುಗಳಾಗಿವೆ. ಪಲ್ಲಕ್ಕಿಯ ಮೆರವಣಿಗೆ, ಆಡಂಬರ ಇವೆಲ್ಲವುಗಳು ಕೆಂಪಯ್ಯ ರೂಢಿಸಿಕೊಳ್ಳುತ್ತಿದ್ದ ವೈಧಿಕ ಸಂಸ್ಕೃತಿಯ ಲಕ್ಷಣಗಳಾಗಿದ್ದು, ಅದನ್ನು ಅತ್ಯಂತ ನಿಕೃಷ್ಟ ಎನಿಸಿಕೊಳ್ಳುವ 'ತಿಪ್ಪೆ'ಯ ಮೇಲೆ ನಿಂತು ವಿರೋಧಿಸುವ ಮೂಲಕ ಆತನಿಗೆ ಬುದ್ಧಿಕಲಿಸುತ್ತಾನೆ. ಇದು ಸಿದ್ಧಪಂಥದ ಲಕ್ಷಣವಾಗಿದ್ದು ಈ ಪರಂಪರೆಯಲ್ಲಿನ ಸಿದ್ಧರು ಸಾಮಾನ್ಯವಾಗಿ ಕೆಳವರ್ಗದಿಂದ ಬಂದವರಾಗಿದ್ದು ತಮ್ಮ ಜೀವನದಲ್ಲಿ ಕಂಡುಬರುವ ಸಾಮಾನ್ಯ ವಿಷಯಗಳಿಂದಲೇ ಪ್ರತಿಷ್ಠಿತ ಎನಿಸಿಕೊಳ್ಳುವ ಅಂಶಗಳನ್ನು ವಿರೋಧಿಸುತ್ತಾರೆ. ಅದಕ್ಕಾಗಿ ಅವರು ನಿತ್ಯ ಬದುಕಿನಲ್ಲಿ ಕೀಳೆಂದು, ತುಚ್ಛೀಕರಿಸಲ್ಪಟ್ಟ ಅಂಶಗಳನ್ನು ತೆಗೆದುಕೊಳ್ಳುತ್ತಾರೆ. ತಿಪ್ಪೇಸ್ವಾಮಿ ಜೀವನದಲ್ಲಿ ಬರುವ ತಿಪ್ಪೆ, ಮಾಂಸ, ಭಂಗಿ ಇವೆಲ್ಲವುಗಳು ಅಪ್ರತಿಷ್ಠಿತವಾದವುಗಳನ್ನು ಮೌಲೀಕರಿಸುವ ಸಂಕೇತವಾಗುತ್ತವೆ. ಇದಕ್ಕೆ ಮುಖ್ಯವಾಗಿ ಸಿದ್ಧಪಂಥದಲ್ಲಿನ ಯೋಗಿಗಳು ಹೆಚ್ಚಾಗಿ ನಿಮ್ನ ವರ್ಗದಿಂದ ಬಂದವರಾಗಿರುವುದು ಕಾರಣವಾಗಿದೆ. ಗೋರಖ್‌ನಾಥನಿಂದ ಪರಿವರ್ತಿತವಾದ ನಾಥಸಿದ್ಧರಲ್ಲಿ ೧೨ ಶಾಖೆಗಳಿವೆ. ಅವುಗಳಲ್ಲಿ 'ಪಾಗಲ್‌ಪಂಥ' ಎಂಬುದು ಹುಚ್ಚುವರ್ತನೆಗೆ ಹೆಸರಾದುದು. ಈ ಹುಚ್ಚುತನದ ಮೂಲಕ ಸಿದ್ಧರು ಧಾರ್ಮಿಕ ಸಾಮಾಜಿಕ ಶಿಷ್ಟಾಚಾರಗಳನ್ನು ಮೀರಿ ನಿರಂಕುಶ ಮತಿಗಳಾಗಿ ವರ್ತಿಸುತ್ತಾರೆ. ತಿಪ್ಪೇಸ್ವಾಮಿಯು ಹುಚ್ಚನಂತೆ ವರ್ತಿಸುವುದು ಆತ ನಾಥಸಿದ್ಧನೆಂಬುದನ್ನು ಸ್ಪಷ್ಟಪಡಿಸುತ್ತದೆ.

ಕೀಳನ್ನು ಮೌಲೀಕರಿಸುವ ಇಲ್ಲವೆ ಪ್ರತಿಷ್ಠಿತ ಎನಿಸಿಕೊಳ್ಳುವ ಮೌಲ್ಯಗಳನ್ನು ಒಡೆಯುವ ತಿಪ್ಪೇಸ್ವಾಮಿಯ ಪವಾಡಗಳು ಈ ಮೇಲಿನದೊಂದೇ ಅಲ್ಲ. ಆತನ ಜೀವನದಲ್ಲಿ ಹಲವಾರು ಬಾರಿ ಕಂಡುಬರುತ್ತದೆ. ನಾಯಕನಟ್ಟಿಯ ದೊರೆ ಬೋಡಿಮಲ್ಲಪ್ಪನಾಯಕ(೧೬೬೧-೧೬೭೧) ೭ ಕೆರೆ, ೭ ಪುರಗಳನ್ನು ಕಟ್ಟುವಲ್ಲಿ ತಿಪ್ಪೇಸ್ವಾಮಿಯು ನೆರವಾಗುತ್ತಾನೆ. ಈ ಕೆಲಸಗಳನ್ನು ಮುಗಿಸಿದ ದೊರೆ, ತಿಪ್ಪೇಸ್ವಾಮಿಗೆ ೭೭ ಬಿರುದಾವಳಿಗಳನ್ನು ಅರ್ಪಿಸಿ( ಈ ಬಗ್ಗೆ ಅಧ್ಯಾಯ ೫.೧.೩ರಲ್ಲಿ ವಿವರಿಸಲಾಗಿದೆ), ಕಾಶಿವಿಶ್ವನಾಥ, ರಾಮೇಶ್ವರಕ್ಕೆ ಹೋಗಬೇಕೆಂದು ಇಚ್ಛೆ ವ್ಯಕ್ತಪಡಿಸುತ್ತಾನೆ. ಆಗ ತಿಪ್ಪೇಸ್ವಾಮಿ ದೊರೆ ಹಾಗು ಪರಿವಾರದವರನ್ನು ಹಿರೇಕೆರೆಯ ತೂಬಿನ ಹತ್ತಿರ ಕರೆದುಕೊಂಡು ಬಂದು 'ಹರದಾರಿ ದೂರ ಹೋಗಿ, ಪೂರ್ವಕ್ಕೆ ಮಠ ಕಾಣವುದು ಅಲ್ಲಿರುವುದೇ ಕಾಶಿವಿಶ್ವನಾಥ, ಅಲ್ಲಿಂದ ದಕ್ಷಿಣಕ್ಕೆ ಲಿಂಗವಿದೆ. ಇವುಗಳ ದರ್ಶನ ಪಡೆದರೆ ಕಾಶಿರಾಮೇಶ್ವರಗಳ ದರ್ಶನ ಪಡೆದಂತಾಗುತ್ತದೆ ಎಂದು ಹೇಳುತ್ತಾನೆ(ಚಂದ್ರಶೇಖರ.ವಿ ದಾವಣಗೆರೆ, ೨೦೦೨, ಪು.೨೫). ಆ ಮೂಲಕ ಪ್ರತಿಷ್ಠಿತ ಎನ್ನುವ ತೀರ್ಥಕ್ಷೇತ್ರಗಳನ್ನು, ನಿರಾಕರಿಸಿ ತನ್ನ ನೆಲವನ್ನೇ ಪವಿತ್ರೀಕರಿಸುತ್ತಾನೆ.

ಮತ್ತೊಮ್ಮೆ ಹಲವಾರು ಜನ ತೀರ್ಥಕ್ಷೇತ್ರಕ್ಕೆ ಹೊರಟಾಗ ಅವರಲ್ಲಿ ಒಬ್ಬನಿಗೆ ಮಣ್ಣಿನ ಮಡಿಕೆಯ ಚೂರೊಂದನ್ನು ಕೊಟ್ಟು, ಉಡುದಾರಕ್ಕೆ ಕಟ್ಟಿಕೊಳ್ಳಲು ಹೇಳುತ್ತಾನೆ. ಅವರೆಲ್ಲ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ ಮರಳಿ ಬಂದಾಗ ಮಡಿಕೆ ಚೂರು ಬದಲಾವಣೆ ಆಗದಿದ್ದುದನ್ನು ಕಂಡು 'ಬರೀ ನೀರಿನಲ್ಲಿ

ಮುಳುಗಿದರೆ, ಕಾಶಿ ರಾಮೇಶ್ವರಗಳಿಗೆ ಕೈ ಮುಗಿದರೆ ಮಾತ್ರ ಯಾವುದೇ ಬದಲಾವಣೆ ಆಗಲಾರದು, ಬದಲಾವಣೆ ಅಂತರಂಗದಲ್ಲಿ ಸಂಭವಿಸಬೇಕಿದೆ' ಎಂದು ಎಲ್ಲರನ್ನೂ ಕರೆದುಕೊಂಡು ತಾವೇ ನಿರ್ಮಿಸಿದ ಕಾಶೀಪುರದ ಕಾಲುವೆಯಲ್ಲಿ ಆ ಮಡಿಕೆಯ ಚೂರನ್ನು ಅದ್ದಿ ತೆಗೆದಾಗ ಆ ಮಡಿಕೆ ಚೂರು ಬಂಗಾರವಾಗುತ್ತದೆ(ಅದೇ, ಪು.೨೬).

ಈ ಮೇಲಿನ ಎರಡು ಪವಾಡಗಳು ಸ್ಥಳೀಯತೆಯನ್ನು ಮೌಲೀಕರಿಸುವ ಪ್ರಯತ್ನದಿಂದ ಕೂಡಿದವು ಗಳಾಗಿವೆ. ತಿಪ್ಪೇಸ್ವಾಮಿ ತನ್ನ ಜೀವನದಲ್ಲಿನ ಈ ತರಹದ ಪವಾಡಗಳ ಮೂಲಕ ಸಾಮಾನ್ಯ ಜನಜೀವನಕ್ಕೆ ಹತ್ತಿರವಾಗುವ ಹಾಗು ಅವರ ಬದುಕಿನ ಸಾಮಾನ್ಯ ಅಂಶಗಳನ್ನು ಮೌಲೀಕರಿಸುವ ಮೂಲಕ ಆ ಸಮುದಾಯದಲ್ಲಿ ಬದುಕುವ ಚೈತನ್ಯವನ್ನು, ಉತ್ಸಾಹವನ್ನು ವಿಶ್ವಾಸವನ್ನು ತುಂಬುತ್ತಿದ್ದಾನೆ.

ತಿಪ್ಪೇಸ್ವಾಮಿ ನಾಯಕನಟ್ಟಿಗೆ ಬರುವಾಗ ಕತ್ತಲಾಗಿದ್ದರಿಂದ ಫಣಿಯಪ್ಪ ತನ್ನಲ್ಲಿರುವ ಕೊಬ್ಬರಿ ಸುಟ್ಟು ಬೆಳಕು ಮಾಡಿ ದಾರಿಕಾಣುವಂತೆ ಮಾಡುತ್ತಾನೆ. ಇದರ ನೆನಪಿಗೆ ಈಗಲೂ ಜಾತ್ರೆ ಸಂದರ್ಭದಲ್ಲಿ ಕೊಬ್ಬರಿ ಸುಡಲಾಗುತ್ತದೆ. ಈ ರೀತಿ ಉತ್ಸವಗಳಲ್ಲಿ ಬೆಳಕನ್ನು ಆರಾಧಿಸುವುದು ನಾಥಸಿದ್ಧರ ಲಕ್ಷಣವಾಗಿದೆ.(ಈ ಬಗ್ಗೆ ಅಧ್ಯಾಯ-೬ರಲ್ಲಿ ವಿವರಿಸಲಾಗಿದೆ)

ತಿಪ್ಪೇಸ್ವಾಮಿಯನ್ನು ಶೈವ-ನಾಥಸಿದ್ಧನೆನ್ನಲು ಅಕ್ಷಯಬುತ್ತಿ ಪವಾಡ, ಸತ್ತೆಮ್ಮೆ ಹಾಲು ಕರೆಯುವುದು, ವಡೇವಿಗೆ ಅಕ್ಷಯ ಶಕ್ತಿ ನೀಡುವ ಪವಾಡ ಸಾಕ್ಷಿಯಾಗಿವೆ. ಫಣಿಯಪ್ಪನ ಜೊತೆ ರಾಯದುರ್ಗದಿಂದ ನಾಯಕನಟ್ಟಿಗೆ ಬರುವಾಗ 'ಬಿಳಿನೀರಿನ ಚಿಲುಮೆ' ಹತ್ತಿರ ಊಟಕ್ಕೆ ಕುಳಿತು ಕೊಳ್ಳುತ್ತಾರೆ. ಸ್ವಲ್ಪವೇ ಇದ್ದ ಬುತ್ತಿ ಇವರಿಬ್ಬರು ಊಟ ಮಾಡಿದರೂ ತಿಪ್ಪೇಸ್ವಾಮಿ ಪವಾಡ ಶಕ್ತಿಯಿಂದ ಇನ್ನು ಹಾಗೆಯೇ ಉಳಿಯುತ್ತದೆ.

ಬುತ್ತೀ ಬಿಚಿಕಂಡು ಊಟ ಮಾಡಲುವಾಗ
ಆತ ತಿಪ್ಪಯ್ಯ ಒದಗೀದ-ನೆ ಫಣಿಯಪುಗೆ
ಊಟಕೆ ನನಗೆ ಇಡಿರೆಂದ-ತಿಪ್ಪಯ್ಯಾಗೆ
ಬುತ್ತೀ ನೀ ತಕ್ಕ ಉಣ್ಣಪ್ಪ
ಬುತ್ತೀನೆ ತಕ್ಕಂಡು ನೀ ಉಣ್ಣುವ ಸ್ವಾಮಿ
ಬಾಳ ಹಸುವಾಗಿ ಬಂದಿದೀಯ
ನಾನೊಬ್ಬಾನೆ ಬುತ್ತಿ ಉಣ್ಣಲ್ಲ ಫಣಿಯಪ್ಪ
ಇಬ್ಬಾರು ಊಟ ಮಾಡಾರೆ
ಇಬ್ಬಾರು ಉಂಡಾರೆ ಮುಗಿಯಾದು ಬುತ್ಯಲ್ಲಿ
ಇದ್ದಂಗೆ ಬುತ್ತಿ ಇರವೋದು-ತಿಪ್ಪಯ್ಯಾನ
ಸತ್ಯ ಅಲ್ಲೀಗೆ ಒದಗ್ಯಾವು

(ಅನುಬಂಧ-೨, ತಿಪ್ಪೇಸ್ವಾಮಿ ಕಾವ್ಯ)

ಈ ರೀತಿಯಲ್ಲಿ ಬುತ್ತಿ ಅಕ್ಷಯವಾಗುವುದರ ಪವಾಡ ಮಾಡಿದ 'ಬಿಳಿನೀರಿನ ಚಿಲುಮೆ' ಎನ್ನುವ ಸ್ಥಳ ಮೊಳಕಾಲ್ಮೂರು ತಾಲೂಕು ಕೊಂಡ್ಲಹಳ್ಳಿಯಿಂದ ಪೂರ್ವದಲ್ಲಿ ಒಂದು ಕಿಲೋಮೀಟರ್ ದೂರದಲ್ಲಿದೆ. ಇಲ್ಲೊಂದು ತಿಪ್ಪೇಸ್ವಾಮಿ ದೇವಸ್ಥಾನವೂ ಇದೆ. ಈ ರೀತಿ 'ಅಕ್ಷಯ ಬುತ್ತಿ'ಯ ಪವಾಡ ಮಾಡಿದ ನೆನಪಿಗಾಗಿ ಈಗಲೂ 'ತಿಪ್ಪೇಸ್ವಾಮಿಮಾಲೆ' ಹಾಕುವವರು ಅಕ್ಷಯ ಬುತ್ತಿಯನ್ನು ಕಟ್ಟಿ ತಿಪ್ಪೇಸ್ವಾಮಿಗೆ ಅರ್ಪಿಸುತ್ತಾರೆ.(ಈ ಬಗ್ಗೆ ಅಧ್ಯಾಯ-೬ರಲ್ಲಿ ವಿವರಿಸಲಾಗಿದೆ)

ಫಣಿಯಪ್ಪನ ಮನೆಯಲ್ಲಿ ಉಳಿದುಕೊಂಡಿದ್ದ ತಿಪ್ಪೇಸ್ವಾಮಿಯನ್ನು ಭೇಟಿ ಮಾಡಲು ಸಾಕಷ್ಟು ಜನರು ಬರುತ್ತಿದ್ದರು ಹಾಗೆ ಬಂದವರಿಗೆ ಊಟೋಪಚಾರಕ್ಕಾಗಿ ಫಣಿಯಪ್ಪನ ಮನೆಯಲ್ಲಿನ ವಡೇವಿಗೆ ಅಕ್ಷಯಶಕ್ತಿಯನ್ನು ನೀಡಿದ್ದನೆಂದು ತಿಪ್ಪೇಸ್ವಾಮಿ ಕಾವ್ಯ ಹೇಳುತ್ತದೆ.

ಫಣಿಯಪ್ಪನ ಹೇಣುತಿ ಮಾಳಮ್ಮ ನೀನು ಕೇಳೆ
ತುಂಬೀದ ವಡೇವ್ಷೆ ಧಾನ್ಯಾವ ಹೊಯ್ದೀನೆ
ಮೆತ್ತೂ ಹಾರ್ಯೇಸೆ ಧಾನ್ಯಾಕೆ-ಮಾಳಮ್ಮ
ಮೆತ್ತೂ ಎಂದೀಗೆ ಒಡಿಬ್ಯಾಡ-ನೀನೀಗ
ಸೋದಿಸಿಕೊಂಡು ಉಣ್ಣಮ್ಮ
ಎಷ್ಟೂ ಉಂಡಾರು ಮುಗಿವಲ್ಲೊ ಈ ಧಾನ್ಯಾವು
ಇದ್ದಂಗೆ ಧಾನ್ಯವು ಐದಾವೆ.

(ಅನುಬಂಧ-೨, ತಿಪ್ಪೇಸ್ವಾಮಿ ಕಾವ್ಯ)

ತಿಪ್ಪೇಸ್ವಾಮಿಯಲ್ಲಿ ಇದೆ ಎಂದು ಹೇಳಲಾಗುವ ಈ ಅಕ್ಷಯ ಶಕ್ತಿ ನೀಡುವ ಪವಾಡ ಸಾಮಾನ್ಯವಾಗಿ ಎಲ್ಲ ಧಾರ್ಮಿಕ ಸಂತರಲ್ಲೂ ಕಂಡುಬರುತ್ತದೆ. ಫಣಿಯಪ್ಪನ ಮನೆಯಲ್ಲಿ ಉಳಿದುಕೊಂಡಿದ್ದ ತಿಪ್ಪೇಸ್ವಾಮಿ ಅವರ ಮನೆಯಲ್ಲಿ ಎಲ್ಲರೊಂದಿಗೆ ಕೆಲಸ ಮಾಡುತ್ತಿದ್ದ ಚಿತ್ರಣವೂ ಕಾವ್ಯದಲ್ಲಿದೆ. ಇದನ್ನು ನೋಡಿದರೆ ತನ್ನ ಕೆಲಸದ ಮೂಲಕ ಅವರು ಆರ್ಥಿಕವಾಗಿ ಪ್ರಬಲರಾಗಲು ಈತ ಕಾರಣನಾಗಿರಬೇಕು. ಏಕೆಂದರೆ ತಿಪ್ಪೇಸ್ವಾಮಿ ಬಿಟ್ಟು ಹೋದ ನಂತರದಲ್ಲಿ ಫಣಿಯಪ್ಪನ ಕುಟುಂಬಕ್ಕೆ ಬಡತನ ಮರಳಿದ ಬಗ್ಗೆ ಕಾವ್ಯ ಉಲ್ಲೇಖಿಸುತ್ತದೆ.

ಮಡುದೀ ನಮ್ಮಲ್ಲಿದ್ದಂತ ಆ ಸಿವುನ
ಧಿಕ್ಕಾರ ಮಾಡಿ ಕಳಿವೀದೆ-ನಮ್ಮೀಗೆ
ವಕ್ಕುರುಸಿ ಬಂತು ಬಡತಾನ

(ಅನುಬಂಧ-೨, ತಿಪ್ಪೇಸ್ವಾಮಿ ಕಾವ್ಯ)

ತಿಪ್ಪೇಸ್ವಾಮಿಯನ್ನು ಇವರು ಧಿಕ್ಕರಿಸಿದಕ್ಕೆ ಕಾರಣ ಆತ ಹರಳಯ್ಯನ ಮನೆಯಲ್ಲಿ ಪೂಜೆ ಮಾಡುತ್ತಿದ್ದನೆಂಬುದಾಗಿದೆ. ಒಮ್ಮೆ ಫಣಿಯಪ್ಪನೊಂದಿಗೆ ಹೊಲದಲ್ಲಿ ಕೆಲಸ ಮಾಡುತ್ತಿರುವಾಗ ಬಾನಿ ಹರಿಯುತ್ತದೆ. ಆಗ ತಿಪ್ಪೇಸ್ವಾಮಿಯನ್ನು ಮನೆಗೆ ಕಳುಹಿಸಿದ ಫಣಿಯಪ್ಪ ಅದನ್ನು ಹೊಲಿಸಿಕೊಂಡು ಬರಲು ಮಾದಿಗರ ಮನೆಗೆ ಹೋಗುತ್ತಾನೆ. ಅಲ್ಲಿ ಮಾದಿಗರ ಮನೆಯಲ್ಲಿ ತಿಪ್ಪೇಸ್ವಾಮಿ ಪೂಜೆಗೆ ಕೂತಿರುತ್ತಾನೆ.

ಫಣಿಯಪ್ಪ ತಿಪ್ಪಯ್ಯ ಇಬ್ಬರು ಅವರೀಗ
ಇಬ್ಬಾರು ಕಪ್ಲೆ ಹೊಡದಾರು- ಅವರೀಗ
ಬಾನಿ ಹರಿದೀತು ಗಳಿಗೇಲಿ
ತಿಪ್ಪಯ್ಯ ನೀನು ಊಟಕೆ ನಡಿಯಪ್ಪ
ಬಾನೀಯ ಹಾಕಿ ಬರುತೀನಿ
ಬಾನೀಯ ಈಗ ಒಲಿಯಾಕೆ ನಂಜಾನ ಮನಿಗೆ
ಬೇಗಾರಂ ಹಟ್ಟಿಗೆ ಹೋಗಿ ಬರುತೀನಿ
ಬಾನಿ ಹೊತ್ತುಕೊಂಡು ಫಣಿಯಪ್ಪ ಹೋದಾನ
ನಂಜಾನ ಮನಿಯಾಗೆ ಸಾಮಿ(ಇರುವೋನೆ) ಹೋಗ್ಯಾವ್ನೆ
ಸಿವಪೂಜೆಗಲ್ಲಿ ಕುಂತವ್ನೆ

(ಅನುಬಂಧ-೨, ತಿಪ್ಪೇಸ್ವಾಮಿ ಕಾವ್ಯ)

ಹೀಗೆ ನಂಜಾನ ಮನೆಯಲ್ಲಿ ಪೂಜೆಗೆ ಕೂತಿರುವ ತಿಪ್ಪೇಸ್ವಾಮಿಯ ವಿಷಯ ತಿಳಿದು ಮನೆಗೆ ಹೋಗಿ ಹೆಂಡತಿಗೆ ಕೋಪದಿಂದ ಹೇಳುತ್ತಾನೆ.

ಮಾದೀರ ಮನಿಯಾಗೆ ಸಿವುಪೂಜೆ ಮಾಡ್ತಿದ್ದ
ಸಿವು ಪೂಜೀಗೆ ನೀನು ಕರಿಬ್ಯಾಡ-ನಮ್ಮೀಗೆ
ತಕ್ಕಾದ ಸಿವುನಲ್ಲ ಅವನೀಗ

(ಅನುಬಂಧ-೨, ತಿಪ್ಪೇಸ್ವಾಮಿ ಕಾವ್ಯ)

ತಿಪ್ಪೇಸ್ವಾಮಿಯನ್ನು ಮಾದಿಗರ ಮನೆಯಲ್ಲಿ ಪೂಜೆಗೆ ಕೂತಿದ್ದನ್ನು ಅಕ್ಷೇಪಿಸಿದ ಫಣಿಯಪ್ಪನನ್ನು ಕಂಡು ಆತನ ಹೆಂಡತಿ ಮಾಳಮ್ಮ

ಅಯ್ಯೊ ನನು ಸಾಮಿ ಎಂತಾ ಮಾತಾಡುತ್ತೀಯ
ಒಳಗೆ ಸಿವುಪೂಜೆಗೆ(ಐದಾರೆ)-ಕುಂತವ್ರೆ ಏ ಸಿವನೆ
ಎಂತಾನೆ ನುಡಿಯ ನುಡಿತೀಯೋ

(ಅನುಬಂಧ-೨, ತಿಪ್ಪೇಸ್ವಾಮಿ ಕಾವ್ಯ)

ಎಂದು ತಮ್ಮ ಮನೆಯಲ್ಲಿಯೇ ತಿಪ್ಪೇಸ್ವಾಮಿ ಶಿವಪೂಜೆಗೆ ಕೂತಿರುವುದನ್ನು ಹೇಳುತ್ತಾಳೆ. ತಿಪ್ಪೇಸ್ವಾಮಿಯ ಈ ಪವಾಡ ಶಕ್ತಿಯನ್ನು ಅರಿಯದ ಫಣಿಯಪ್ಪ ಅಚ್ಚರಿ ವ್ಯಕ್ತಪಡಿಸುತ್ತಾನೆ. ಅಷ್ಟೊತ್ತಿಗಾಗಲೇ ಅವರ ಕೊಟ್ಟಿಗೆಯಲ್ಲಿದ್ದ ಎಮ್ಮೆ ಸತ್ತು ಹೋಗುತ್ತದೆ. ಇದರಿಂದ ತನ್ನ ತಪ್ಪಿನ ಅರಿವಾಗಿ ಫಣಿಯಪ್ಪ ತಿಪ್ಪೇಸ್ವಾಮಿಯಲ್ಲಿ ಕ್ಷಮೆ ಬೇಡುತ್ತಾನೆ ಆಗ

ಫಣೆಯಪ್ಪ ಎಂತಾ ಮಾತು ನೀ ಆಡಿದ್ಯೋ
ಎಲ್ಲರಿಗೆ ನಾನು ಮೆಲ್ಲಾಕೆ ಬಗುತ-ಫಣೆಯಪ್ಪ
ನಿನ್ನ ಮನಿಯಲ್ಲಿ ಇರುಲಾರೆ
ರುದ್ರಾನೆ ತಿಪ್ಪಯ್ಯ ಈವಾಗ ಅವನಲ್ಲಿ
ಸತ್ತೆಮ್ಮೆ ಹಾಲು ಕರೆದು-ಪಾಯಸ ಮಾಡಿ
ಸುತ್ತೇಳ ಮಠಕೆ ಎಡಿಮಾಡಿ

(ಅನುಬಂಧ-೨, ತಿಪ್ಪೇಸ್ವಾಮಿ ಕಾವ್ಯ)

ತಿಪ್ಪೇಸ್ವಾಮಿ ಸತ್ತೆಮ್ಮೆಯ ಹಾಲನ್ನು ಕರೆದು ಎಡೆಮಾಡಿದ ಏಳು ಮಠಗಳೆಂದರೆ 'ಹಿರೇಮಠ, ಗೌರಿಮಠ, ಬಿಟ್ಟಬಂಡೀಮಠ, ಕಲ್ಲಪ್ಪದೇವರಮಠ, ಬಾಳೆಹಳ್ಳಿಮಠ, ನಂದಿಕೋಲುಮಠ, ಭಿಕ್ಷಾವರ್ತಿಮಠ' (ಚಂದ್ರಶೇಖರ್ ವಿ. ದಾವಣಗೆರೆ, ೨೦೦೧, ಪು.೫೫).

ನಾಥಸಿದ್ಧರಲ್ಲಿ ಕಂಡುಬರುವ ಮುಖ್ಯವಾದ ಲಕ್ಷಣವೆಂದರೆ ಅವರಲ್ಲಿರುವ ಯೌಗಿಕ ಶಕ್ತಿ ಮತ್ತು ವೈದ್ಯಶಕ್ತಿ. ಯೌಗಿಕ ಶಕ್ತಿಯಿಂದ ಸಿದ್ಧರು ನೂರಾರು ವರ್ಷ ಬದುಕುತ್ತಿದ್ದರು. ವೈದ್ಯಶಕ್ತಿಯ ಮೂಲಕ ರೋಗಗಳನ್ನು ವಾಸಿ ಮಾಡುವ, ಸತ್ತವರನ್ನು ಬದುಕಿಸುವ, ಸಂತಾನಫಲ ಕೊಡುವ ಮಿತ್‌ಗಳು ಪ್ರಚಲಿತದಲ್ಲಿವೆ. ವೈಚಾರಿಕವಾಗಿ ಆಲೋಚಿಸಿದರೆ ತಿಪ್ಪೇಸ್ವಾಮಿಯು ವಡೇವಿಗೆ ಅಕ್ಷಯ ಶಕ್ತಿ ಕೊಡುವುದಾಗಲಿ, ಅಕ್ಷಯಬುತ್ತಿ ಪವಾಡವಾಗಲಿ, ಸತ್ತೆಮ್ಮೆ ಹಾಲು ಕರೆಯುವುದಾಗಲಿ ಕಟ್ಟುಕತೆಗಳೆಂದು ಹೇಳಬಹುದು. ಪ್ರಶ್ನೆ ಇರುವುದು ಈ ರೀತಿಯ ಕತೆಗಳನ್ನು ಸಮುದಾಯಗಳು ಯಾಕೆ ಸೃಷ್ಟಿಸಿದರು? ಎನ್ನುವ ಬಗ್ಗೆ ನಾಯಕನಟ್ಟಿ ಭಾಗದಲ್ಲಿನ ಆರ್ಥಿಕ-ಸಾಮಾಜಿಕ ಸ್ಥಿತಿಗತಿಗಳು ಇದಕ್ಕೆ ಕಾರಣ. ಮಳೆ-ಬೆಳೆಯಿಲ್ಲದ ಬಯಲು ಸೀಮೆಯಲ್ಲಿರುವ ನಾಯಕನಟ್ಟಿಯ ಜನ ಬಡತನ ಅನುಭವಿಸುವವರು. ಸಾಮಾಜಿಕವಾಗಿ ಜಾತಿ-ಪದ್ಧತಿ ವ್ಯವಸ್ಥೆ ಮಧ್ಯೆ ಬದುಕಿರುವವರು. ತಿಪ್ಪೇಸ್ವಾಮಿಯ ವಡೇವಿಗೆ ಅಕ್ಷಯ ಶಕ್ತಿ ನೀಡುವುದು, ಅಕ್ಷಯ ಬುತ್ತಿ ಪವಾಡ ಹರಳಯ್ಯನ ಮನೆಯಲ್ಲಿ ಶಿವಪೂಜೆ ಇವುಗಳನ್ನು ಈ ಹಿನ್ನಲೆಯಲ್ಲಿಯೇ ಗಮನಿಸಬೇಕು. ಸ್ವಂತ ಶಕ್ತಿಯಿಂದ ಸಾಧಿಸಲಾಗದ ಅದೆಷ್ಟೋ ಆಸೆಗಳನ್ನು ಸಮುದಾಯಗಳು ಸಂತರ ಸುತ್ತ ಕಟ್ಟುವ ಕತೆಗಳ ಮೂಲಕ ಈಡೇರಿಸಿಕೊಳ್ಳುತ್ತಿರುತ್ತವೆ. ವಾಸ್ತವದಲ್ಲಿ ತಿಪ್ಪೇಸ್ವಾಮಿ ಮಾಡಿರುವ ಕೆಲಸ ಕಾರ್ಯಗಳು ಅವರಿಗೆ ಪ್ರೇರಕವಾಗಿರುತ್ತವೆ. ವಾಸ್ತವ ಘಟನೆಗಳಿಗೆ

ಸೃಜನಶೀಲತೆಯ ಮೂಲಕ ಮೆರುಗನ್ನು ನೀಡಿ ಸಮುದಾಯಗಳು ಹಾಡುಗಳನ್ನು, ಕತೆಗಳನ್ನು ಆಚರಣೆಗಳನ್ನು, ಕಲೆಗಳನ್ನು ಸೃಷ್ಟಿಸಿಕೊಳ್ಳುತ್ತವೆ. ಆ ಮೂಲಕ ಸಂತನನ್ನು, ಆತನ ಕಾರ್ಯಗಳನ್ನು ನೆನಪಿಟ್ಟುಕೊಂಡು ಪ್ರಸ್ತುತ ಬದುಕಿನಲ್ಲಿ ಬದುಕುವ ಚೈತನ್ಯವನ್ನು ಪಡೆಯುತ್ತಿರುತ್ತವೆ. ಶೈವ-ನಾಥಸಿದ್ಧನಾದ ತಿಪ್ಪೇಸ್ವಾಮಿಯ ಜೀವನ ನಾಯಕನಟ್ಟಿ ಸುತ್ತಮುತ್ತಲಿನ ಬದುಕನ್ನು ಹೇಗೆ ಸ್ಥಿತ್ಯಂತರಗೊಳಿಸಿದನು ಎನ್ನುವ ಕುರಿತು ಈ ಭಾಗದ ಸಮುದಾಯದ ಆರಾಧ್ಯದೈವವಾಗಿ ಈತ ಇಷ್ಟೊಂದು ಪ್ರಬಲನಾಗಲು ಕಾರಣಗಳೇನು? ಎನ್ನುವ ಕುರಿತು ಮುಂದೆ ವಿವರಿಸಲಾಗಿದೆ.

### ೫.೧.೩. ಬೇಡ(ನಾಯಕ) ಜನಾಂಗದ ಸ್ಥಿತ್ಯಂತರ

ತಿಪ್ಪೇಸ್ವಾಮಿ ಬದುಕಿದ್ದ ೧೬-೧೭ನೇ ಶತಮಾನ, ಪಾಳೇಗಾರ ಆಡಳಿತ ವ್ಯವಸ್ಥೆ ಇದ್ದಂತಹ ಕಾಲ. ಮೇಲಿಂದ ಮೇಲೆ ನಡೆಯುತ್ತಿದ್ದ ಯುದ್ಧಗಳು ಜನಸಮುದಾಯದಲ್ಲಿ ರಾಜಕೀಯ ಅಸ್ಥಿರತೆಯನ್ನುಂಟು ಮಾಡಿದ್ದವು. ಅದೆಲ್ಲಕ್ಕಿಂತ ಮುಖ್ಯವಾಗಿ ಕೃಷಿ ವ್ಯವಸ್ಥೆ ಸಾಮಾಜಿಕವಾಗಿ ಸದೃಢಗೊಳ್ಳುತ್ತಿದ್ದ ಕಾಲ ಘಟ್ಟವಿದು. ಇದರಿಂದಾಗಿ ಉಂಟಾಗಿದ್ದ ಎಡಗೈ-ಬಲಗೈ ಶ್ರೇಣೀಕರಣವು ಸಂಘರ್ಷಕ್ಕಿಳಿದಿದ್ದವು. 'ಬಲಗೈ ಎಂಬ ಶ್ರೇಣೀಕರಣವು ವಾಣಿಜ್ಯದಲ್ಲಿ ತೊಡಗಿದ್ದ ಹಲವಾರು ವರ್ತಕ ಜಾತಿಗಳನ್ನು ಹಾಗು ಅವುಗಳಲ್ಲಿ ಸೇವೆಯಲ್ಲಿ ನಿರತವಾಗಿದ್ದ ಇತರೆ ಕೆಲವು ಜಾತಿಗಳನ್ನು ಒಳಗೊಂಡಿದ್ದರೆ, ಸರಕು ಉತ್ಪಾದಕರ ಸಮುದಾಯವು ತನ್ನನ್ನು ತಾನು ಮತ್ತೊಂದು ಶ್ರೇಣಿಯಾಗಿ, ಉತ್ಪಾದಕ ಚಟುವಟಿಕೆಯ ಸೌಹಾರ್ದತೆ ಆಧಾರವಲ್ಲಿ, ಜಾತಿ ಎಲ್ಲೆಗಳಾಚೆ ರೂಪಿಸಿಕೊಂಡಿತು. ಇದು ಎಡಗೈ ಶ್ರೇಣಿಯಾಯಿತು'(ಬಂಜಗೆರೆ ಜಯಪ್ರಕಾಶ್, ೨೦೦೦, ಪು.೧೪೯) ಈ ಭಿನ್ನತೆಯು ವಿವಿಧ ಜಾತಿಗಳು ಉತ್ಪಾದನ ಸಂಬಂಧಾದರಿತ. ವರ್ಗ ಸಮೂಹಗಳಾಗುವುದರ ಕಡೆಗೆ ಏರ್ಪಡತೊಡಗಿದ್ದ ಬದಲಾವಣೆಗಳನ್ನು ಸೂಚಿಸುತ್ತದೆ.

ವಿಜಯನಗರ ಕಾಲಕ್ಕಾಗಲೆ ಕೃಷಿ ವ್ಯವಸ್ಥೆ ಪ್ರಬಲವಾಗಿ ಬೆಳೆದಿತ್ತು. ನೀರಾವರಿಯಿಂದ ಹೊಲಗಳು ಗದ್ದೆಗಳಾಗಿ ಪರಿವರ್ತಿತವಾಗುತ್ತಿದ್ದರೆ ಬಂಜರು ಭೂಮಿಯನ್ನು ಸಾಗುವಳಿಗೊಳಪಡಿಸುವ ಮೂಲಕ ಕೃಷಿ ಪ್ರದೇಶವನ್ನು ವಿಸ್ತರಿಸಲಾಗುತ್ತಿತ್ತು. ವಿಜಯನಗರಕ್ಕೆ ಆಗಮಿಸಿದ್ದ ವಿದೇಶಿ ಪ್ರವಾಸಿಗರಾದ ಪೇಸ್, ನ್ಯೂನಿಜ್ , ಮುಂತಾದವರು ತಮ್ಮ ಬರಹಗಳಲ್ಲಿ ಈ ಸಂದರ್ಭದಲ್ಲಾಗುತ್ತಿದ್ದ, ಕೃಷಿ ಮತ್ತು ನೀರಾವರಿ ವ್ಯವಸ್ಥೆಯಲ್ಲಾಗುತ್ತಿದ್ದ ಬದಲಾವಣೆಗಳನ್ನು ವಿವರಿಸಿದ್ದಾರೆ. 'ಸಾಗುವಳಿ ಮಾಡಬಹುದಾದ ನೆಲವು ಅಗ್ಗವಾಗಿ ದೊರಕುತ್ತಿದ್ದುದರಿಂದಲೂ ಅದಕ್ಕೆ ಸುಲಭವಾಗಿ ರಿಯಾಯಿತಿಗಳು ದೊರಕುತ್ತಿದ್ದುದರಿಂದಲೂ ಜನರು ಸರಕಾರಕ್ಕೆ ಅಂತಹ ನೆಲವನ್ನು ಮಂಜೂರು ಮಾಡಬೇಕೆಂದು ಅರ್ಜಿ ಹಾಕಿಕೊಳ್ಳುತ್ತಿದ್ದರು. ಅಂತಹ ಪರಿಸ್ಥಿತಿಯಲ್ಲಿ ಬಂಜರು ನೆಲವನ್ನು ಮತ್ತು ಬೇಸಾಯ ಮಾಡಿದವರು ತಮ್ಮ ವೆಚ್ಚಗಳನ್ನು ಕಳೆದು ಲಾಭವನ್ನು ಪಡೆಯುವಂತಾಗುವವರೆಗೂ ಸರಕಾರವು ತನ್ನ ಪಾಲನ್ನು ಕೇಳುತ್ತಿರಲಿಲ್ಲ'(ಅದೇ, ಪು.೧೪೪). ಹೀಗಾಗಿ ಹಲವಾರು ವರ್ಗಗಳು ಕೃಷಿಯಲ್ಲಿ ತೊಡಗಿಕೊಂಡವು. ಇದರಿಂದಾಗಿ ನೂತನ

ಸಾಮಾಜಿಕ ವಿನ್ಯಾಸ ಈ ಸಂದರ್ಭದಲ್ಲಿ ರೂಪುಗೊಂಡಿತು. ಎಷ್ಟೋ ಅಲೆಮಾರಿ ಬುಡಕಟ್ಟು ಜನಾಂಗಗಳು ಮೊಟ್ಟ ಮೊದಲ ಬಾರಿಗೆ ಒಂದೆಡೆ ನೆಲೆನಿಂತು ಕೃಷಿಯಲ್ಲಿ ತೊಡಗಿಕೊಳ್ಳಲು ಆಸಕ್ತಿಯನ್ನು ವಹಿಸಿದವು. ಈ ಸಂದರ್ಭದಲ್ಲಿ ಬುಡಕಟ್ಟು ಮೂಲದಿಂದ ಬಂದ ಸಾಂಸ್ಕೃತಿಕ ನಾಯಕರೆಲ್ಲ ಆಯಾ ಜನಾಂಗಗಳ ಸ್ಥಿತ್ಯಂತರಕ್ಕೆ ಸಾಕ್ಷಿಯಾಗಿದ್ದಾರೆ. ಮಂಟೇಸ್ವಾಮಿ, ಗೋಣಿಬಸವ, ತಿಪ್ಪೇಸ್ವಾಮಿ ಜೀವನದಲ್ಲಿನ ಅದೆಷ್ಟೋ ಪವಾಡಗಳು ಇಂತಹ ಸ್ಥಿತ್ಯಂತರಗಳೊಂದಿಗೆ ಮುಖಾಮುಖಿಯಾದವುಗಳಾಗಿವೆ.

ತಿಪ್ಪೇಸ್ವಾಮಿಯ ಜೀವನದಲ್ಲಿನ ಪವಾಡಗಳು ಮಧ್ಯಕಾಲದಲ್ಲಿ ನಾಯಕ ಜನಾಂಗದಲ್ಲುಂಟಾದ ಸ್ಥಿತ್ಯಂತರಗಳಿಗೆ ಸಾಕ್ಷಿಯಾಗಿದೆ. ಬೇಟೆಸಂಸ್ಕೃತಿಯಿಂದ ಪರಿವರ್ತನೆ ಹೊಂದಿ ಕೃಷಿಸಂಸ್ಕೃತಿಯತ್ತ ತಿರುಗುತ್ತಿರುವ ನಾಯಕ ಜನಾಂಗದ ಚಿತ್ರಣ ಈತನ ಜೀವನದಲ್ಲಿ ಕಂಡುಬರುತ್ತದೆ. ಸ್ವತಃ ತಿಪ್ಪೇಸ್ವಾಮಿಯೇ ಈ ತರಹದ ಸ್ಥಿತ್ಯಂತರಕ್ಕೆ ಪ್ರೇರಣೆಯನ್ನು ನೀಡುತ್ತಾನೆ. ವಿಜಯನಗರ ಕಾಲದಲ್ಲಿ ಸಾಮಾಜಿಕ ಜೀವನದಲ್ಲಿ ಉಂಟಾದ ಬದಲಾವಣೆಯನ್ನು ಅರಿತಿರಬಹುದಾದ ತಿಪ್ಪೇಸ್ವಾಮಿ ಬದಲಾದ ಕಾಲಮಾನಕ್ಕೆ ತಕ್ಕಂತೆ ನಾಯಕ ಜನಾಂಗದ ಅರಿವನ್ನು ವಿಸ್ತರಿಸುವ, ಆ ಜನಾಂಗದ ಸಂವೇದನೆಗಳನ್ನು ಬದಲಾದ ಸ್ಥಿತಿಗನುಗುಣವಾಗಿ ಹೊಂದಿಸುವ ಪ್ರಯತ್ನವನ್ನು ಮಾಡುತ್ತಾನೆ.

ಗೋಣಿಬಸವ ಕಾವ್ಯದ ಪ್ರಕಾರ ಕುಪ್ಪಿನಕೇರಿ ಹನುಮಂತನಿಗೆ ಲಿಂಗದೀಕ್ಷೆ ನೀಡಿದ ಪಂಚಗಣಾಧೀಶ್ವರರು ಬಾಗಳಿಗೆ ಬಂದು ಅಲ್ಲಿಂದ ಬೇರ್ಪಡುತ್ತಾರೆ. ನಂತರದಲ್ಲಿ ಪಂಚಗಣಾಧೀಶ್ವರರು ಏನಾದರು ಎನ್ನುವ ಬಗ್ಗೆ ಮೌನವಹಿಸಿ ಗೋಣಿಬಸವನ ಜೀವನವನ್ನೇ ಪ್ರಧಾನವಾಗಿ ಬಾಲಬಸವರು ವಿವರಿಸುತ್ತಾ ಹೋಗುತ್ತಾರೆ. ನಾಯಕನಟ್ಟಿ ಸುತ್ತಮುತ್ತಲಿನಲ್ಲಿ ಪ್ರಚಲಿತವಿರುವ ನಂಬಿಕೆಗಳ ಪ್ರಕಾರ ತಿಪ್ಪೇಸ್ವಾಮಿ ಬಾಗಳಿಯಿಂದ ನಿಡುಗಲ್ಲಿಗೆ ಬರುತ್ತಾನೆ. ನಿಡುಗಲ್ಲು ದೊರೆಗಳು ರಂಗಸಮುದ್ರದ ಹತ್ತಿರ ಕೃಷಿ ಭೂಮಿಗಾಗಿ ನೀರು ಹಾಯಿಸಲು ಕಾಲುವೆಗಳನ್ನು ತೆಗೆಸುತ್ತಿದ್ದರು. ರಂಗಸಮುದ್ರದ ದಳವಾಯಿ ಅದರ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದ ಕಾಲುವೆ ಕೆಲಸವನ್ನು ನೋಡಿದ ತಿಪ್ಪೇಸ್ವಾಮಿ ತಾನೂ ಕೆಲಸವನ್ನು ಮಾಡಲು ಮುಂದಾಗುತ್ತಾನೆ. ಪವಾಡ ಶಕ್ತಿಯಿಂದ ಬೇಗನೆ ಕೆಲಸವನ್ನು ಮಾಡುತ್ತಾನೆ. ಇದನ್ನು ನೋಡಿದ ದಳವಾಯಿ ಎಲ್ಲ ಕೆಲಸವನ್ನು ನಿನ್ನ ಪವಾಡ ಶಕ್ತಿಯಿಂದ ಬೇಗ ಮುಗಿಸಿಕೊಡು ಎಂದು ಕೇಳುತ್ತಾನೆ. ಇದನ್ನು ನಿರಾಕರಿಸಿದ ತಿಪ್ಪೇಸ್ವಾಮಿಗೆ ಕೂಲಿ ಕೆಲಸಗಾರರು ಹಿಂಸೆಯನ್ನು ಕೊಡುತ್ತಾರೆ. ಆಗ ಕೋಪದಿಂದ 'ನಿಮ್ಮ ಹೆಂಡ್ರು ರಂಡೇರಾಗ್ಲಿ ನಿಮ್ಮೂರ ಗಂಗೆ ಪಾತಾಳ ಸೇರ್ಲಿ' ಎಂದು ತಿಪ್ಪೇಸ್ವಾಮಿ ಅವರಿಗೆ ಶಾಪಕೊಡುತ್ತಾನೆ. ಇದರಿಂದ ಇನ್ನೂ ಕುಪಿತಗೊಂಡ ದಳವಾಯಿ ಮತ್ತು ಆತನ ಕೆಲಸಗಾರರು ಆತನ ಬಾಯಿಯಲ್ಲಿ ಕಳ್ಳಿ ಹಾಲನ್ನು ಕುಡಿಸುತ್ತಾರೆ. ತಾವೇ ತೋಡಿದ ಕಾಲುವೆಯಲ್ಲಿ ಆತನನ್ನು ಮುಚ್ಚಿ ಹೋಗುತ್ತಾರೆ. ಆದರೆ ಇವರೆಲ್ಲ ಊರು ಸೇರುವ ಹೊತ್ತಿಗೆ ತಿಪ್ಪೇಸ್ವಾಮಿ ಊರಲ್ಲಿ ಕಾಣಿಸಿಕೊಳ್ಳುತ್ತಾನೆ. ಈತನ ಪವಾಡ ಶಕ್ತಿಯನ್ನು ಕಂಡು ದಳವಾಯಿಯನ್ನೊಳಗೊಂಡು ಎಲ್ಲ ಕೆಲಸಗಾರರು ಕ್ಷಮೆ ಕೇಳುತ್ತಾರೆ.

ಬಂಜರು ಭೂಮಿಯನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸಲು ನೀರಾವರಿ ವ್ಯವಸ್ಥೆಯನ್ನು ಬಲಗೊಳಿಸಬೇಕು ಎನ್ನುವ ಅರಿವಿದ್ದ ತಿಪ್ಪೇಸ್ವಾಮಿ ರಂಗಸಮುದ್ರದ ಹತ್ತಿರ ನಡೆಯುತ್ತಿದ್ದ ಕಾಲುವೆ ಕೆಲಸಕ್ಕೆ ಸ್ವತಃ ತಾನೇ ಹೋಗಿ ಸೇರಿಕೊಳ್ಳುವುದನ್ನು ಮೇಲಿನ ಘಟನೆ ಸೂಚಿಸುತ್ತದೆ. ಅದೇ ಹೊತ್ತಲ್ಲಿ ಕಾಯಕದ ಮಹತ್ವ ಅರಿತಿದ್ದ ಈತನು ಎಲ್ಲ ಕೆಲಸವನ್ನು ತಾನೇ ಮಾಡಲು ನಿರಾಕರಿಸಿ ಎಲ್ಲರನ್ನೂ ಕಾಯಕ ಮಾಡಲು ಒತ್ತಾಯಿಸುತ್ತಿದ್ದಾನೆ.

ರಂಗಸಮುದ್ರದಿಂದ ನಿಡುಗಲ್ಲಿಗೆ ಹೋದ ತಿಪ್ಪೇಸ್ವಾಮಿ ಅಲ್ಲಿ ಪುತ್ರ ಸಂತಾನವಿಲ್ಲದ ರಾಣಿಗೆ(ದಾನಸಾಲಮ್ಮ) ಏಳು ಜನ ಪುತ್ರರನ್ನು ಕರುಣಿಸುತ್ತಾನೆ. ಆ ಮೂಲಕ ನಿಡುಗಲ್ಲು ದೊರೆಯನ್ನು ತನ್ನ ಒಕ್ಕಲಾಗಿಸಿಕೊಳ್ಳುತ್ತಾನೆ. ನಿಡುಗಲ್ಲು ದೊರೆ ತಿಪ್ಪೇಸ್ವಾಮಿಯ ಗದ್ದುಗೆಯನ್ನು ಪ್ರತಿಷ್ಠಾಪಿಸುತ್ತಾನೆ. ನಿಡುಗಲ್ಲು ದೊರೆಯನ್ನು ಒಕ್ಕಲಾಗಿಸುವ ಮೂಲಕ ತನ್ನ ಕಾರ್ಯಕ್ಕೆ ಪ್ರಭುತ್ವದ ಬೆಂಬಲವನ್ನು ಪಡೆಯುತ್ತಾನೆ. ನೀರನ್ನು ಸದುಪಯೋಗ ಪಡಿಸಿಕೊಳ್ಳುವ ಮೂಲಕ ಕೃಷಿ ವ್ಯವಸ್ಥೆಯನ್ನು ಅಭಿವೃದ್ಧಿ ಪಡಿಸುವುದು ಅದಕ್ಕಾಗಿ ರಾಜಬೆಂಬಲವನ್ನು ಪಡೆಯುವುದನ್ನು ಮುಂದುವರಿಸಿದ ತಿಪ್ಪೇಸ್ವಾಮಿ ಆ ಮೂಲಕ ಅಲ್ಲಿನ ನಾಯಕ ಜನಾಂಗದ ಜೀವನ ಪರಿವರ್ತನೆಗೆ ಕಾರಣನಾಗುತ್ತಾನೆ.

ನಿಡುಗಲ್ಲಿನಿಂದ ರಾಯದುರ್ಗಕ್ಕೆ ಹೋದ ತಿಪ್ಪೇಸ್ವಾಮಿ ಅಲ್ಲಿ ಕೆಂಪಯ್ಯನ ಆಡಂಬರದ ಮೆರವಣಿಗೆಯನ್ನು ಹಾಸ್ಯ ಮಾಡುತ್ತಾನೆ. ಅಲ್ಲಿಯೇ ಘಣಿಯಪ್ಪನೆಂಬ ಭಕ್ತನನ್ನು ಪಡೆದುಕೊಂಡು ಅವನೊಟ್ಟಿಗೆ ನಾಯಕನಟ್ಟಿಗೆ ಬರುತ್ತಾನೆ. ಹಾಗೆ ಬರುವಾಗ ದಾರಿಯಲ್ಲಿ ತಿಪ್ಪೇಸ್ವಾಮಿ ಮಾಡುವ ಮತ್ತೊಂದು ಪವಾಡವೆಂದರೆ 'ಬಿಳಿನೀರ ಚಿಲುಮೆ'ಯನ್ನು ಉಕ್ಕಿಸಿದ್ದು, ರಾಯದುರ್ಗದಿಂದ ನಾಯಕನಟ್ಟಿಗೆ ಬರುವ ದಾರಿಯ ಮಧ್ಯದಲ್ಲಿ ತಿಪ್ಪೇಸ್ವಾಮಿಗೆ ಸಂಧ್ಯಾಕಾಲದ ಪೂಜೆಯನ್ನು ಮಾಡಿಕೊಳ್ಳಬೇಕೆನಿಸುತ್ತದೆ. ಆದರೆ ಅಲ್ಲೆಲ್ಲಿಯೂ ನೀರು ಕಂಡುಬರುವುದಿಲ್ಲ. ಜೊತೆಯಲ್ಲಿದ್ದ ಘಣಿಯಪ್ಪನು ಸುತ್ತೆಲ್ಲ ನೋಡಿದರೂ ಪೂಜೆಗೊಂದಿಷ್ಟು ನೀರು ಕಂಡುಬರುವುದಿಲ್ಲ. ಆಗ ತಿಪ್ಪೇಸ್ವಾಮಿ ತಾನು ನಿಂತ ಕಾಲಡಿಯಲ್ಲಿಯೇ ಪಾತಾಳಗಂಗೆ ಇರುವುದಾಗಿ ಹೇಳಿ ಆ ಸ್ಥಳದಲ್ಲಿಯೇ ನೀರಿನ ಚಿಲುಮೆಯನ್ನು ಉಕ್ಕಿಸುತ್ತಾನೆ. ನೀರು ಹರಿವ ಈ ಸ್ಥಳವನ್ನು 'ಬಿಳಿನೀರಿನ ಚಿಲುಮೆ' ಎಂದು ಕರೆಯಲಾಗುತ್ತಿದ್ದು, ಇದು ಮೊಳಕಾಲ್ಮೂರು ತಾಲೂಕು ಕೊಂಡ್ಲಹಳ್ಳಿ ಗ್ರಾಮದಿಂದ ಪೂರ್ವದಿಕ್ಕಿಗೆ ಒಂದು ಕಿ.ಮೀ.ದೂರದಲ್ಲಿದೆ. ಈಗಲೂ ಇಲ್ಲಿ ನೀರು ಹರಿಯುತ್ತದೆ. ಇಲ್ಲೊಂದು ತಿಪ್ಪೇಸ್ವಾಮಿ ದೇವಸ್ಥಾನವಿದೆ. ಕೊಂಡ್ಲಹಳ್ಳಿಯಲ್ಲಿ 'ಬಿಳಿನೀರಿನ ಚಿಲುಮೆ' ಉಕ್ಕಿಸಿದ ತಿಪ್ಪೇಸ್ವಾಮಿ ನಾಯಕನಟ್ಟಿಗೆ ಬರುತ್ತಾನೆ. ಅಲ್ಲಿ ಊರದೇವತೆ ಮಾರಮ್ಮನ ಜಾತ್ರೆ ನಡೆಯುತ್ತಿರುತ್ತದೆ. ಆ ರಾತ್ರಿ ತಿಪ್ಪೇಸ್ವಾಮಿ ಮಲಗಲು ಮಾರಮ್ಮನ ಗುಡಿಗೆ ಬರುತ್ತಾನೆ. ಆಕೆ 'ಇದು ದೇವಿಯ ಮಂದಿರ ಇಲ್ಲಿ ಪುರುಷರಿಗೆ ಮಲಗಲು ಅವಕಾಶವಿಲ್ಲ. ಬೇಕಾದರೆ ಹೊರಗಿನ ಜಗುಲಿಯ ಮೇಲೆ ಮಲಗಬಹುದು' ಎನ್ನುತ್ತಾಳೆ. ತಿಪ್ಪೇಸ್ವಾಮಿ 'ಇದು ನನಗೆ ಪರಸ್ಥಳ ನಾನು ಬೇಕಾದರೆ ಹೊರಗಿನ

ಜಗುಲಿಯ ಮೇಲೆ ಮಲಗುತ್ತೇನೆ. ಈ ಜೋಳಿಗೆ ಬೆತ್ತಗಳನ್ನು ಇಡಲಿಕ್ಕಾದರು ಅವಕಾಶ ಮಾಡಿಕೊಡು' ಎಂದು ವಿನಂತಿಸಿಕೊಳ್ಳುತ್ತಾನೆ(ಚಂದ್ರಶೇಖರ್ .ವಿ. ದಾವಣಗೆರೆ, ೨೦೦೧, ಪು.೨೧). ಅದಕ್ಕೆ ಮಾರಮ್ಮಳು ಒಪ್ಪಿ ಗುಡಿಯಲ್ಲಿಡಲು ಅವಕಾಶ ಮಾಡಿಕೊಡುತ್ತಾಳೆ. ಬೆಳಗಾಗುವುದರೊಳಗೆ ಮಾರಮ್ಮನಿಗೆ ಕಾಲು ಇಡಲೂ ಜಾಗವಿಲ್ಲದೆ ಗುಡಿಯ ತುಂಬೆಲ್ಲ ಜೋಳಿಗೆ ಬೆತ್ತಗಳು ತುಂಬಿಕೊಂಡಿರುತ್ತವೆ. ತಿಪ್ಪೇಸ್ವಾಮಿ ಪವಾಡ ಶಕ್ತಿಗೆ ಕೈಮುಗಿದು ಇದು ಇನ್ನು ನಿನ್ನ ಮಂದಿರ, ನನಗೆ ಈ ಮಂದಿರದ ಋಣ ತೀರಿತು. ಈ ಊರಿನ ಋಣವೂ ತೀರಿತು. ತಾಪಸಿಗಳಿದ್ದಲ್ಲಿ ತಾಮಸಿಗೇನು ಕೆಲಸವಿದೆ? ನಾನಿನ್ನು ವಡ್ನಳ್ಳಿಗೆ ಹೋಗಿ ನೆಲೆಸುವೆ. ೧೨ ವರ್ಷಗಳಿಗೊಮ್ಮೆ ನಾನು ೧೨ ಜನ ಅನುಯಾಯಿ ದೇವತೆಗಳೊಂದಿಗೆ ಬಂದು ತಮ್ಮ ದರ್ಶನ ಪಡೆದು ರಕ್ತದ ಓಕುಳಿಯಾಡಿ ಸಿಡಿಯಾಡಿ ಹೋಗುವೆ ಎಂದು ಹೇಳಿ ಹೋದಳು.'(ಅದೇ, ಪು.೨೨) ಇದನ್ನು ತಿಪ್ಪೇಸ್ವಾಮಿಯ ಜೋಳಿಗೆ ಬೆತ್ತಗಳ ಪವಾಡ ಎಂದು ಜನ ಕರೆಯುತ್ತಾರೆ. ಮೊದಲಿನ ಮಾರಮ್ಮನ ಗುಡಿಯೇ ಈಗ 'ತಿಪ್ಪೇಸ್ವಾಮಿ ಒಳಮಠ' ಎಂದು ಕರೆಯಲ್ಪಡುತ್ತದೆ. ಅಂದಿನಿಂದ ೧೨ ವರ್ಷಗಳಿಗೊಮ್ಮೆ ಒಳಮಠದ ಹತ್ತಿರ ಮಾರಮ್ಮನ ಜಾತ್ರೆ ನಡೆಯುತ್ತಿದೆ. ಆದರೆ ಈಗ ಅದು ೩೨ ವರ್ಷಗಳಿಗೊಮ್ಮೆ ಬದಲಾಗಿದೆ. ಜಾತ್ರೆಯ ಸಂದರ್ಭದಲ್ಲಿ ಮ್ಯಾಸನಾಯಕರ ೧೨ ಪೆಟ್ಟಿಗೆ ದೇವರುಗಳು ಬಂದು ಸೇರುತ್ತಾರೆ.

ಜೋಳಿಗೆ ಬೆತ್ತಗಳ ಈ ಪವಾಡ ಒಬ್ಬ ಸಂತನು ಪರಸ್ಥಳಕ್ಕೆ ಬರುತ್ತಿದ್ದ ಹಾಗೆ ಅಲ್ಲಿನ ಮೂಲ ದೈವದೊಂದಿಗೆ ಅಥವಾ ಅದರ ಹಿಂಬಾಲಕರೊಂದಿಗೆ ನಡೆಸುವ ಮುಖಾಮುಖಿಯನ್ನು ಸೂಚಿಸುತ್ತದೆ. ಈ ತಿಕ್ಕಾಟದ ನೆನಪುಗಳು ತಿಪ್ಪೇಸ್ವಾಮಿ ಜಾತ್ರೆಯ ಸಂದರ್ಭದಲ್ಲಿ ಕಂಡುಬರುತ್ತದೆ. ಜಾತ್ರೆಯ ಸಂದರ್ಭದಲ್ಲಿ ಕೆಲವು ಭಕ್ತಾದಿಗಳು ತಿಪ್ಪೇಸ್ವಾಮಿ ಮತ್ತು ವಡ್ನಳ್ಳಿ ಮಾರಮ್ಮನ ಹೆಸರಿನಲ್ಲಿ 'ಬಾಯಿಬೀಗದ ಹರಕೆ'ಯನ್ನು ಕಟ್ಟುತ್ತಾರೆ. ತಿಪ್ಪೇಸ್ವಾಮಿ ರಥೋತ್ಸವದ ದಿನ ಭಕ್ತರು ತಮ್ಮ ಊರಿನಿಂದ ಬರುವಾಗ ಮುಖದ ಎರಡೂ ದವಡೆಗಳ ಮೂಲಕ ಬಾಯಿ ಒಳಗಡೆ ತಾಮ್ರದ ಒಂದು ತಂತಿಯನ್ನು ಸೇರಿಸಿ ಕೊಂಡಿಯನ್ನು ಹಾಕುತ್ತಾರೆ. ಇದನ್ನು 'ಬಾಯಿ ಬೀಗ' ಎನ್ನಲಾಗುತ್ತದೆ. ಈ ಹರಕೆ ಕಟ್ಟಿಸಿಕೊಂಡವರು ತಮ್ಮ ಊರಿನಿಂದ ತಿಪ್ಪೇಸ್ವಾಮಿ ಹೊರ ಮಠದವರೆಗೆ ಕಾಲ್ನಡಿಗೆಯಲ್ಲಿ ಬಂದು ತೀರ್ಥ ಹಾಕಿಸಿಕೊಂಡು ಬಾಯಿಯಲ್ಲಿನ ತಾಮ್ರದ ತಂತಿಯನ್ನು ತೆಗೆಯುತ್ತಾರೆ. ಈ ರೀತಿ 'ಬಾಯಿಬೀಗದ ಹರಕೆ'ಯು ಮಾರಮ್ಮ-ಊರಮ್ಮ-ದುರ್ಗಮ್ಮನಂತಹ ಗ್ರಾಮದೇವತೆಗಳ ಜಾತ್ರೆಯಲ್ಲಿ ಕಂಡುಬರುವಂತ ಹುದಾಗಿದೆ. 'ಬಾಯಿ ಬೀಗ' ಹಾಕುವ ಆಚರಣೆಯು ಸಾಂಕೇತಿಕವಾದುದು. ಇದು ಸತ್ಯವನ್ನು ಮುಚ್ಚಿಡುವ, ಮಾತಾಡುವ, ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವುದನ್ನು ಈ ಆಚರಣೆ ಸಂಕೇತಿಸುತ್ತದೆ. ಕೆಲವು ಸಂದರ್ಭಗಳಲ್ಲಿ ಸಂಬಂಧಪಟ್ಟ ಮಾರಮ್ಮ ಸ್ವತಃ ಇಂತಹ ಸ್ಥಿತಿಗೆ ಒಳಗಾಗಿದ್ದರೆ ಅದನ್ನು ಅಭಿನಯಿಸಿ, ಆಚರಣೆ ಮೂಲಕ ಪ್ರತಿಭಟಿಸುವುದರ ಸಂಕೇತವಾಗಿಯೂ ಈ ಆಚರಣೆ ಇರುವುದನ್ನು ನಾವು ಗುರುತಿಸಬೇಕಾಗುತ್ತದೆ'(ಮಹದೇವ ಶಂಕನಪುರ, ೨೦೦೧, ಪು.೧೩೫-೧೩೬).

ವಡ್ನಳ್ಳಿಗೆ ಮಾರಮ್ಮನನ್ನು ಓಡಿಸಿ ತಿಪ್ಪೇಸ್ವಾಮಿ ನಾಯಕನಟ್ಟಿಯಲ್ಲಿ ನೆಲೆಯಾಗುತ್ತಾನೆ. ನೀರಾವರಿ ವ್ಯವಸ್ಥೆಯ ಮೂಲಕ ಕೃಷಿ ಉತ್ಪಾದನಾ ವಿಧಾನದಲ್ಲಿ ಉಂಟಾಗಿದ್ದ ಬದಲಾವಣೆಯನ್ನು ನಾಯಕ ಜನಾಂಗವು ಅಳವಡಿಸಿಕೊಳ್ಳಲು ಪ್ರೇರಣೆಯನ್ನು ನೀಡುತ್ತಾನೆ. ಅದಕ್ಕಾಗಿ ನಾಯಕನಟ್ಟಿಯನ್ನು ತನ್ನ ಕಾರ್ಯಕ್ಷೇತ್ರವನ್ನಾಗಿಸಿಕೊಳ್ಳುತ್ತಾನೆ.

ಒಮ್ಮೆ ನಾಯಕನಟ್ಟಿ ದೊರೆ ಬೋಡಿಮಲ್ಲಪ್ಪನಾಯಕ(೧೬೬೧-೧೬೭೧) ಚೌಡಮ್ಮನಹಳ್ಳಿ, ದಾಸರಹಳ್ಳಿ, ತುರುವನೂರು ಕಡೆಯಿಂದ ಹರಿದು ಬರುವ ಹಳ್ಳಗಳಿಗೆ ಅಡ್ಡಲಾಗಿ ಹಿರೇಕೆರೆ ಕಟ್ಟಲು ಆರಂಭಿಸಿದನು. ಆದರೆ ಕೆರೆಕಟ್ಟಲು ದುಡ್ಡಿರಲಿಲ್ಲ. ತಿಪ್ಪೇಸ್ವಾಮಿಯ ಪವಾಡಗಳನ್ನು ಅರಿತಿದ್ದ ದೊರೆ, ಸಹಾಯಕ್ಕಾಗಿ ಬೇಡಿಕೊಂಡನು. ಕೃಷಿ ವ್ಯವಸ್ಥೆಯನ್ನು ವಿಸ್ತರಿಸುವ ಮೂಲಕ ಬೇಟೆ ಸಂಸ್ಕೃತಿಯ ನಾಯಕ ಜನಾಂಗವನ್ನು ಬದಲಾಯಿಸುವ ಅಭಿಲಾಷೆ ಹೊಂದಿದ್ದ ತಿಪ್ಪೇಸ್ವಾಮಿ ದೊರೆಗೆ ಸಹಾಯ ಮಾಡಲು ಒಪ್ಪಿಕೊಂಡನು.

ದನವೂನ ಕಾಯರನು ಕುರಿಯಲ್ಲಿ ಕಾಯರನು
ಆಡಾ ಮಕ್ಕಳನು ಹಿಡಕಂಡು-ತಿಪ್ಪಯ್ಯ
ಕೆರಿಯಾ ಕಟ್ಟಾಕೆ ನೆಡುದಾನೆ
ಹೊಸ ಗುಡ್ಡಾದ ಬಸವಣ್ಣಾನಲ್ಲಿ ಕಡಿಸೀದ
ಆಡಾನೆ ಮಕ್ಕಳಿಗೆ ಏನಂಬೂತ ಹೇಳೀದ
ಕೆರಿಯಾ ಕಟ್ಟಾನಿ ಬರಿರಪ್ಪ

(ಅನುಬಂಧ-೨, ತಿಪ್ಪೇಸ್ವಾಮಿ ಕಾವ್ಯ)

ಹೀಗೆ ಆ ಭಾಗದಲ್ಲಿನ ಎಲ್ಲ ಜನರನ್ನು ಸಂಘಟಿಸಿ ಕೆರೆಯನ್ನು ಕಟ್ಟುವ ಕೆಲಸಕ್ಕೆ ತೊಡಗಿಕೊಳ್ಳುತ್ತಾನೆ. ಕೆಲಸಕ್ಕೆ ಬರುವ ಎಲ್ಲ ಕೂಲಿಕಾರರಿಗೂ ತಾನೇ ಹಣವನ್ನು ಕೊಡಲು ಸಿದ್ಧನಾಗುತ್ತಾನೆ. ಅದಕ್ಕಾಗಿ ಕೂಲಿಕಾರರಿಗೆ ಮಣ್ಣನ್ನು ರಾಶಿಮಾಡಿಕೊಳ್ಳಲು ಹೇಳುತ್ತಾನೆ.

ಮಣ್ಣೂನೆ ಗುಡ್ಡಿಗಳು ಇನ್ನಾ ಮಾಡಿರಯ್ಯ
ನಿಮ್ಮೀಗೆ ಬೇಡೀದ ಭಾಗ್ಯವೆ ಕೊಡುತೀನಿ

ಆಸೇನೆ ಹುಟ್ಯಾತು ರಾಸಿ ಅವ್ರು ಮಾಡ್ಯಾತು
ಬೆತ್ತ ಹಿಡಕೊಂಡು ಹಟ್ಟೀನೆ-ತಿಪ್ಪಯ್ಯ
ಸುತ್ತಾನೆ ಗೆರಿಯ ಕೊಯ್ದಾನು

ಗೆರಿಯಾನೆ ಕೊಯ್ದಾನೆ ಸಿವ ಸೀವ ಅಂದಾನು
ಮಾಡಿದವರಿಗೆ ನೀಡಿ ಬಿಕ್ಷಾ ಆಗಲಿ

ಕಷ್ಟ ಮಾಡಿದಾರೀಗೆ ಎಷ್ಟು ಭಾಗ್ಯಾವೈತೆ
ಕಷ್ಟ ಮಾಡ್ದಂತ ಮಯ್ಯಾಗಳ್ಳರಿಗೆ- ಏ ಸಿವನೆ
ಗುಡ್ಡ ಕೆದರಿದರೆ ಬರಿಗೈಯೆ

(ಅನುಬಂಧ-೨ ತಿಪ್ಪೇಸ್ವಾಮಿ ಕಾವ್ಯ)

ಕೂಲಿಕಾರರು ತಮ್ಮ ಮುಂದಿನ ಮರಳು ಕುಪ್ಪೆಗಳನ್ನು ಕೆದರಿದಾಗ ಅವರ ಶ್ರಮಕ್ಕೆ ತಕ್ಕಂತೆ ಪ್ರತಿಫಲ ಇರುತ್ತದೆ. ಒಬ್ಬನಿಗೆ ತನ್ನ ಮಣ್ಣಿನ ಗುಂಪಿನಲ್ಲಿ ಆ ದಿನದ ಕೂಲಿ ಇದ್ದರೆ ಕೆಲಸ ಮಾಡದ ಸೋಮಾರಿಗಳಿಗೆ ಮಣ್ಣನ್ನು ಕೆದರಿದಾಗ ಏನೂ ಇಲ್ಲದಂತಾಗುತ್ತದೆ. ಒಬ್ಬ ಹೆಂಗಸು ತನ್ನ ಮುಂದಿರುವ ಮಣ್ಣಿನ ಗುಂಪನ್ನು ಕೆದರಿದಾಗ ಅದರಲ್ಲಿ ಶ್ರಮಕ್ಕಿಂತ ಒಂದು ಪಟ್ಟು ಕೂಲಿ ಜಾಸ್ತಿ ಇರುತ್ತದೆ. ಅದಕ್ಕೆ ಕಾರಣ, ಅವಳು ಬಸುರಿ ಹೆಂಗಸಾಗಿದ್ದು, ಆಕೆಯ ಶ್ರಮದೊಂದಿಗೆ ಹೊಟ್ಟೆಯಲ್ಲಿರುವ ಮಗುವೂ ಶ್ರಮಪಟ್ಟಿರುವುದರಿಂದ ಅದರ ಶ್ರಮಕ್ಕೂ ತಿಪ್ಪೇಸ್ವಾಮಿ ಕೂಲಿಯನ್ನು ಒದಗಿಸಿರುತ್ತಾನೆ. ಈ ಪವಾಡವನ್ನು ತಿಪ್ಪೇಸ್ವಾಮಿಯ 'ಮಾಡಿದವರಿಗೆ ನೀಡು ಭಿಕ್ಷಾ ಪವಾಡ' ಎಂತಲೇ ಜನರು ಕರೆಯುತ್ತಾರೆ. ಈಗಲೂ ಕೂಡ ನಾಯಕನಟ್ಟಿ ಸುತ್ತಮುತ್ತ ಕೂಲಿ ಮಾಡುವ ಬಸಿರು ಹೆಂಗಸರಿಗೆ ಒಂದು ಪಟ್ಟು ಹೆಚ್ಚು ಕೂಲಿ ಕೊಡುವ 'ಬಸಿರುಪಟ್ಟು' ಪದ್ಧತಿ ಜಾರಿಯಲ್ಲಿದೆ.

ನಾಯಕನಟ್ಟಿಯ ಬೋಡಿಮಲ್ಲಪ್ಪನಾಯಕ ಕಟ್ಟಿಸುವ ಕೆರೆಗೆ ತಿಪ್ಪೇಸ್ವಾಮಿ ಸಹಾಯ ಮಾಡುವುದರ ಹಿಂದೆ ಅತ ಆ ಭಾಗದಲ್ಲಿ ಹೊಸತಾಗಿ ಬಂದಿದ್ದ ಬೇಡ ಜನಾಂಗವನ್ನು ನೆಲೆಗೊಳ್ಳುವಂತೆ ಮಾಡುವ ಉದ್ದೇಶ ಹೊಂದಿದ್ದನೆಂಬುದು ಸ್ಪಷ್ಟ. ಅಲ್ಲದೆ ಬಯಲು ಸೀಮೆಯಾಗಿರುವ ಚಿತ್ರದುರ್ಗದ ಪರಿಸರದಲ್ಲಿ ಮಳೆಯ ಪ್ರಮಾಣವೂ ಕಡಿಮೆಯಾಗಿತ್ತು. ಕೆರೆಗಳನ್ನು ಕಟ್ಟಿಸುವುದರ ಮೂಲಕ ಮಳೆ ನೀರನ್ನು ಸಂಗ್ರಹಿಸಲಾಗುತ್ತಿತ್ತು. 'ಹಂಪಿಯ ಪರಿಸರದಲ್ಲಿ ಮಳೆಯ ಪ್ರಮಾಣ ಕಡಿಮೆಯಿತ್ತು. ಇತ್ತೀಚೆಗೆ ನಡೆಸಿದ ಕೆಲವು ವೈಜ್ಞಾನಿಕ ಸಂಶೋಧನೆಗಳಿಂದ ಇಂದಿನ ಹವಮಾನವು ಮತ್ತು ೧೫ನೇ ಶತಮಾನದ ಹವಮಾನವು ಒಂದೇ ಆಗಿತ್ತೆಂದು ದೃಢಪಟ್ಟಿದೆ'(ಸಿ.ಎಸ್.ವಾಸುದೇವನ್, ೨೦೦೧, ಪು.೧೯). ಈಗ ಇದ್ದ ಬರಗಾಲ ಪರಿಸ್ಥಿತಿಯೂ ಅಂದಿನ ಸಂದರ್ಭದಲ್ಲಿಯೂ ಇತ್ತು ಎನ್ನುವುದಾದರೆ ಆಗಿನ ಸಂದರ್ಭದಲ್ಲಿ ತಿಪ್ಪೇಸ್ವಾಮಿಯು ಕೆರೆಕಟ್ಟುವ ಕಾರ್ಯದ ಮಹತ್ವ ಅರಿವಾಗುತ್ತದೆ. ಹಾಗಾಗಿ ತಿಪ್ಪೇಸ್ವಾಮಿ ತುರುನೂರು ಹಳ್ಳವನ್ನು ನಾಯಕನಟ್ಟಿಯಲ್ಲಿ ತಾನು ಕಟ್ಟಿಸಿದ ಕೆರೆಯ ಭಾಗಕ್ಕೆ ಹರಿಯುವಂತೆ ಮಾಡಿದ್ದಾನೆ.

ಹಂಗಂಬೂತ ಕೆರಿಯಾ ಸಾದೂಸಿ ನೆಡಸೀದ
ಕೆರಿಯಾನೆ ಕಟ್ಯಾನೆ ತೂಬು ಇಕ್ಕಿಸಿದಾನೆ
ತುರುನೂರೀಗವನು ಹೋದಾನೊ-ತಿಪ್ಪಯ್ಯ
ತುರುನೂರು ಹಳ್ಳ ತಿರಿವಿದನೊ ನಾಯಕನಹಟ್ಟಿ
ಕೆರಿಯಾನೆ ಕೋಡಿ ಹರಿಯಾಲೆ

(ಅನುಬಂಧ-೨, ತಿಪ್ಪೇಸ್ವಾಮಿ ಕಾವ್ಯ)

ತುರುನೂರು ಹಳ್ಳವನ್ನು ನಾಯಕನಟ್ಟಿಗೆ ಹರಿಯವಂತೆ ಮಾಡಿದ ತಿಪ್ಪೇಸ್ವಾಮಿ ಬಂಜರು ಭೂಮಿಗೆ ನೀರು ಹರಿದು ವ್ಯವಸಾಯ ಕೈಗೊಳ್ಳಲು ಅನುಕೂಲ ಮಾಡಿದ್ದಾನೆ. ಈ ಕೆರೆ ವ್ಯವಸಾಯ ಕಾರ್ಯಗಳಿಗೆ ನೀರನ್ನು ಪೂರೈಸುತ್ತಿದ್ದು ಈ ಭಾಗದಲ್ಲಿ ನೆಲೆಯೂರಿದ ಅದೆಷ್ಟೋ ಜನರಿಗೆ ಈಗಲೂ ಕೃಷಿಕಾರ್ಯಗಳಿಗೆ ಅನುವು ಮಾಡಿಕೊಟ್ಟಿದೆ.

ತಿಪ್ಪೇಸ್ವಾಮಿ ಹಿರೇಕೆರೆಯನ್ನು ಕಟ್ಟಿದ ನಂತರ ಬೋಡಿಮಲ್ಲಪ್ಪನ ಕಾಲದಲ್ಲಿಯೆ ಚಿಕ್ಕಕೆರೆ, ರಾಯನಕೆರೆ, ಭೀಮನಕೆರೆ, ಹೊಸಕೆರೆ, ನೇರಿಕೆರೆ, ವರದಿನಕೆರೆಗಳನ್ನು ಕಟ್ಟಲು ಸಹಾಯ ಮಾಡಿದ್ದಾನೆ. ಅಲ್ಲದೆ ಇದೇ ಸಂದರ್ಭದಲ್ಲಿ ಗೌರಿಪುರ, ಕುಂದಾಪುರ, ಮಹದೇವಪುರ, ಕಾಶೀಪುರ, ಗಿಡ್ಡಾಪುರ, ಗಂಗ್ಲಾಪುರ, ಬಸಾಪುರಗಳೆಂಬ ಏಳುಪುರಗಳು ಕಟ್ಟಲ್ಪಟ್ಟಿವೆ.(ಅನುಬಂಧ ೧, ನಾಯಕನಟ್ಟಿ ಬಖೈರು) ಈಗಲೂ ಸಮುದಾಯವು ತಿಪ್ಪೇಸ್ವಾಮಿಯ ಬಹಳ ಮುಖ್ಯವಾದ ಪವಾಡಗಳಲ್ಲಿ ಈ ಏಳು ಕೆರೆ ಮತ್ತು ಏಳು ಪುರಗಳನ್ನು ಕಟ್ಟಿಸಿದ್ದೆಂದು ತಿಳಿದಿದೆ.

ತಿಪ್ಪೇಸ್ವಾಮಿಯ ಕೆಲಸ ಕಾರ್ಯಗಳನ್ನು ಕಂಡು ಹಟ್ಟಿದೊರೆ ಬೋಡಿಮಲ್ಲಪ್ಪ ನಾಯಕನು ತನ್ನ ೭೭ ಬಿರುದಾವಳಿಗಳೊಂದಿಗೆ ಬಂದು ತನ್ನ ಸರ್ವಸ್ವವನ್ನು ಅರ್ಪಿಸುತ್ತಾನೆ. ಆ ೭೭ ಬಿರುದಾವಳಿಗಳಾವುವೆಂದರೆ 'ಬೃಹನ ತಲೆ, ಅರಿಸಿನತೋಳು, ಬಲಮುರಿಶಂಕು, ಎಡಮುರಿಶಂಕು, ನಾಗಮುರಿಬೆತ್ತ, ಮುತ್ತಿನತುರಾಯಿ, ಮುತ್ತಿನಕಾಲಪಂಡೆ ಯತ್ತಿನಸಾರಾಯಿ, ಗುಗ್ಗರಿಬೆತ್ತ, ರಣಜಾಗಟೆ, ಧರ್ಮಸಿರಿಗದ್ದುಗೆ, ಕಂಚಿನಭೇರಿ, ಬಸವನಹಚ್ಚೆ, ನಗಾರಿ, ಚಂದ್ರಾಯುಧ, ಚಪ್ಪಕೊಡಲಿ, ರುದ್ರಾಕ್ಷ, ಗೊಡಗು, ಭೂಚಕ, ಮುತ್ತಿನಸ್ವಾಮಿ, ದೀಪಗಳು, ಪಂಚದೀವಟಿಗೆಗಳು, ಪಂಜುಗಳು ಚಂದ್ರಗೊಡಗು, ಸೂರ್ಯಗೊಡಗು, ಕೊರಿನಿಶಾನಿ ಭಾವುಟ, ಬಲಮುರಿಕೋಲು, ಎಡಮುರಿಕೋಲು, ಧ್ವಜಭಾವುಟ, ಅಷ್ಟಮೂರ್ತಿ ಪಲ್ಲಕ್ಕಿ, ರೇಷ್ಮೇಗೌಸು, ಕಾಳೆಗಳು, ತಮ್ಮಟೆಗಳು, ಕೈ ಅಲುಗುಗಳು, ಅಸಲು ದೀವಟಿಗೆಗಳು, ಪಂಜುಗಳು, ನಕ್ಷತ್ರಗೊಡಗು, ಮರಿಪೋತು, ಕರಿಬೊಮ್ಮ, ಅರ್ದಾತ ಉರಿಮೆ, ರಣಕಾಳೆ, ತತ್ತೋರಿಗಳು, ಆನೆಗಳು, ಘಂಟೆಗಳು, ಕುದುರೆಗಳು, ಚಾಮರಗಳು, ಮುತ್ತಿನ ಬೀಸಣಿಕೆಗಳು, ರಾಜಕಿರೀಟಗಳು, ಗಾಡಿಗಳು, ಗಿಳಿವಾಹನಗಳು, ಸಿಂಹವಾಹನಗಳು, ಮುಖತೋರಣಗಳು, ಬೆಳ್ಳಿಯ ಬೆತ್ತಗಳು, ಚಿನ್ನದ ಕತ್ತೆಗಳು, ಖಡ್ಗಗಳು, ಕಟಾರಿಗಳು, ಸರ್ಪವಾಹನ, ಗರುಡವಾಹನ, ಪಂಚಮುಖಧ್ವಜ, ಬಸವವಾಹನ, ಟಗರುವಾಹನ, ಹಸುವಾಹನ, ಕುರಿವಾಹನ, ನೀಲಿಗೊಡಗು, ಬಂಡ್ರೆಕೋಲುಗಳು, ಬಂದೂಕುಗಳು, ಉಕ್ಕಿನ ಬಾಕುಗಳು, ಚೂರಿಗಳು, ಸಕ್ಕೆ ಛತ್ರಿಗಳು, ಹಂಸವಾಹನ, ಕಲ್ಲಿಗಳು' (ಚಂದ್ರಶೇಖರ್. ವಿ. ದಾವಣಗೆರೆ, ೨೦೦೨, ಪು.೬೦-೬೧) ಈ ಎಲ್ಲ ಬಿರುದಾವಳಿಗಳನ್ನು ಸಂತನಿಗೆ ಅರ್ಪಿಸುವ ಮೂಲಕ ಪ್ರಭುತ್ವವು ಈತನ ಅಡಿಯಾಳಾಗುತ್ತದೆ. ಇದಕ್ಕೆ ಮುಖ್ಯ ಕಾರಣ ಸಮುದಾಯದಲ್ಲಿ ತಿಪ್ಪೇಸ್ವಾಮಿಯು ಸಾಕಷ್ಟು ಪ್ರಭಾವವನ್ನು ಹೊಂದಿದ್ದನು ಎನಿಸುತ್ತದೆ.

ತಿಪ್ಪೇಸ್ವಾಮಿ ಕಾವ್ಯವು ಸ್ವತಃ ಈತನೆ ಕೃಷಿ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದನು ಎನ್ನುವ ವಿವರಣೆಯನ್ನು ನೀಡುತ್ತದೆ.

'ಫಣೆಯಪ್ಪ ತಿಪ್ಪಯ್ಯ ಇಬ್ಬಾರು ಅವರೀಗ
ಇಬ್ಬಾರು ಕಪ್ಲೆ ಹೊಡುದಾರು-ಅವರೀಗ
ಬಾನಿ ಹರಿದೀತು ಗಳಿಗೇಲಿ'

(ಅನುಬಂಧ-೨, ತಿಪ್ಪೇಸ್ವಾಮಿ ಕಾವ್ಯ)

ಫಣೆಯಪ್ಪನ ಜೊತೆಗೂಡಿ ಎತ್ತುಗಳ ಸಹಾಯದಿಂದ ಬಾವಿಯ ನೀರನ್ನು ಎತ್ತಿ ಹಾಕುತ್ತಿರುವ (ಇಬ್ಬಾರು ಕಪ್ಲೆ ಹೊಡುದಾರು' - ಕಪ್ಲೆ=ಎತ್ತುಗಳ ಸಹಾಯದಿಂದ ಬಾವಿ ನೀರು ಎತ್ತಿ ಹಾಕುವುದು) ಚಿತ್ರಣವಿದೆ.

ಹೀಗೆ ತಿಪ್ಪೇಸ್ವಾಮಿ ಸ್ವತಃ ಕೃಷಿಕಾರ್ಯಗಳಲ್ಲಿ ತೊಡಗಿಕೊಂಡಿರುವುದು ಜನಾಂಗವನ್ನು ನೆಲೆಗೊಳಿಸುವ ಪ್ರಯತ್ನದ್ದಾಗಿದೆ. ಕೂಲಹಳ್ಳಿ ಗೋಣಿಬಸವನೂ ಸ್ವತಃ ಕೃಷಿ ಕಾರ್ಯದಲ್ಲಿ ತೊಡಗಿಕೊಂಡಿರುವ ಚಿತ್ರಣವಿದೆ. ಅಲ್ಲದೆ ಕೆರೆ ಮತ್ತು ಊರುಗಳನ್ನು ನಿರ್ಮಾಣ ಮಾಡುವುದು ಒಂದು ಜನಾಂಗದ ನೆಲೆಗೊಳ್ಳುವಿಕೆಯ ಸಂಕೇತ.

ಈ ರೀತಿ ನೆಲೆಗೊಳ್ಳುವಿಕೆಗೆ ತಿಪ್ಪೇಸ್ವಾಮಿಯಂತ ಧಾರ್ಮಿಕ ನಾಯಕರ ಪಾತ್ರ ಪ್ರಮುಖವಾದುದು. ಇದಕ್ಕೆ ಬೆಂಬಲವಾಗಿ ಬೋಡಿಮಲ್ಲಪ್ಪನಾಯಕನೂ ಇದ್ದಾನೆ. ಧಾರ್ಮಿಕ ಪ್ರಭುತ್ವ ಮತ್ತು ರಾಜಪ್ರಭುತ್ವಗಳು ಒಂದು ಸಮುದಾಯದ ಒಟ್ಟು ಜೀವನ ಪದ್ಧತಿಯನ್ನೇ ನಿರ್ದೇಶಿಸುತ್ತಿರುತ್ತವೆ. ತಿಪ್ಪೇಸ್ವಾಮಿಯು ಸಮುದಾಯವು ನೆಲೆಗೊಳ್ಳುವುದಕ್ಕಾಗಿ ಬೋಡಿಮಲ್ಲಪ್ಪನಾಯಕನ ಸಹಾಯವನ್ನು ಪಡೆಯುತ್ತಾನೆ. ಈ ರೀತಿ ಕೆರೆಗಳ ನಿರ್ಮಾಣದಿಂದ ಕೃಷಿಯಲ್ಲಿ ಲೌಕಿಕ ಆಸೆಯಿಂದಲೂ ಪ್ರಭುತ್ವ ಬೆಂಬಲ ನೀಡಿರಬಹುದು. ಅಲ್ಲದೆ 'ಯಾವುದೇ ನೀರಾವರಿ ಕ್ರಮದ ನಿರ್ಮಾಣ ಕಾರ್ಯವನ್ನು ಪುಣ್ಯಕಾರ್ಯವೆಂದೇ ಭಾವಿಸಲಾಗುತ್ತಿತ್ತು. ಏಕೆಂದರೆ ಅದು ಮಾನವ ಜೀವನದ ಅಭ್ಯುದಯಕ್ಕೆ ಮಾತ್ರ ಸೀಮಿತವಾಗಿರದೆ, ಎಲ್ಲಾ ಪ್ರಾಣಿಗಳ ಹಾಗೂ ಕ್ರಿಮಿಕೀಟಗಳ, ಗಿಡಮರಗಳ ಜೀವನಗಳಿಗೂ ಸಹಕಾರಿಯಾಗಿತ್ತು.'(ಸಿ.ಟಿ.ಎಂ.ಕೊಟ್ರಯ್ಯ, ೨೦೦೧, ಪು.೩೮) ಈ ರೀತಿಯ ಲೌಕಿಕ-ಅಲೌಕಿಕ ಆಲೋಚನೆಗಳೇನೇ ಇರಲಿ ತಿಪ್ಪೇಸ್ವಾಮಿಯು ಮಾಡಿದ ಪವಾಡಗಳೆನ್ನಲಾಗುವ ಇವುಗಳು ಈ ಭಾಗಕ್ಕೆ ಬಂದ ಬೇಡ ಜನಾಂಗದ ಮೇಲೆ ಅಪಾರ ಪ್ರಭಾವವನ್ನು ಬೀರಿವೆ. ಬೇಟೆಯಾಡುತ್ತಾ ಇಲ್ಲವೆ ಪಶುಗಳನ್ನು ಸಾಕುತ್ತಾ ಅಲೆಮಾರಿಯಾಗಿ ಜೀವಿಸುತ್ತಿದ್ದ ಈ ಸಮುದಾಯಗಳು ಒಂದೆಡೆ ನೆಲೆನಿಂತು ಕೃಷಿಯನ್ನು ತಮ್ಮ ಜೀವನ ಪದ್ಧತಿಯಲ್ಲಿ ಅಳವಡಿಸಿಕೊಳ್ಳುವುದಕ್ಕೆ ಕಾರಣವಾಗಿದೆ. ಆ ಮೂಲಕ ಸಮುದಾಯದ ಜೀವನದಲ್ಲಿ ಪ್ರಮುಖ ಸ್ಥಿತ್ಯಂತರಕ್ಕೆ ತಿಪ್ಪೇಸ್ವಾಮಿ ಕಾರಣನಾಗಿದ್ದಾನೆ.

## ೫.೧.೪. ಸಮಾಧಿಯಾದ ನಂತರದ ಪವಾಡಗಳು

ತಿಪ್ಪೇಸ್ವಾಮಿ ತನ್ನ ಜೀವನದ ಕೊನೆಯ ಕಾಲವನ್ನು ಏಕಾಂತ ವಾಸದಲ್ಲಿ ಕಳೆಯಲು ನಿರ್ಧರಿಸಿ ಏಕಾಂತಸ್ವಾಮಿ ಮಠಕ್ಕೆ ಹೋಗಿ, ೪೦ ದಿನಗಳವರೆಗೆ ಗವಿಯಲ್ಲಿದ್ದು ಏಕಾಂತವಾಸ ಮಾಡಿದನು. ಈಗಲೂ ನಾಯಕನಟ್ಟಿಯಿಂದ ಚಳ್ಳಕೆರೆಗೆ ಹೋಗುವ ಮಾರ್ಗದಲ್ಲಿ ಏಕಾಂತಸ್ವಾಮಿ ಮಠವಿದೆ. ಇಲ್ಲಿಯೆ ತಿಪ್ಪೇಸ್ವಾಮಿ ಕೊನೆಕಾಲದಲ್ಲಿ ಏಕಾಂತವಾಸವಾಗಿದ್ದರೆಂದು ಹೇಳಲಾಗುತ್ತದೆ.

ಏಕಾಂತವಾಸವನ್ನು ಮುಗಿಸಿದ ತಿಪ್ಪೇಸ್ವಾಮಿ ತಮ್ಮ ಭಕ್ತರನ್ನೆಲ್ಲ ಕರೆದು ಜೀವಂತ ಸಮಾಧಿಯಾಗಲು ಇಚ್ಛಿಸಿದ್ದರು. ಫಣಿಯಪ್ಪನಿಗೆ ತಾವೇ ಪ್ರತಿಷ್ಠಾಪಿಸಿದ ಮಹಂತೇಶ ಲಿಂಗವನ್ನು ಪೂಜಿಸುವುದಕ್ಕೆ ಹೇಳಿ ಚಿಕ್ಕಕೆರೆಯ ಪಕ್ಕದಲ್ಲಿ 'ಪಾಲ್ಗುಣ ಬಹುಳಚಿತ್ತಾ ನಕ್ಷತ್ರದ ಸಂದರ್ಭದಲ್ಲಿ ಜೀವಂತ ಸಮಾಧಿಯನ್ನು ಹೊಂದಿದನು(ಚಂದ್ರಶೇಖರ ವಿ.ದಾವಣಗೆರೆ, ೨೦೦೧, ಪು.೪೧).

ಹಾಗೆ ಸಮಾಧಿಹೊಂದುವಾಗ 'ನಾನು ಸದಾ ನಿಮ್ಮೊಂದಿಗೆ ಇರುತ್ತೇನೆ. ಯಾರು ಈ ಬಗ್ಗೆ ಅನುಮಾನಿಸಬೇಕಿಲ್ಲ' ಎಂದು ಹೇಳಿ ಹೋದನು. ಈಗಲೂ ಒಳಮಠದಲ್ಲಿ ತಿಪ್ಪೇಸ್ವಾಮಿ ಪ್ರತಿಷ್ಠಾಪಿಸಿದ ಮಹಾಂತೇಶ ಲಿಂಗವನ್ನು ಫಣಿಯಪ್ಪನ ವಂಶಸ್ಥರು ಪೂಜಿಸುತ್ತಾರೆ. ತಿಪ್ಪೇಸ್ವಾಮಿ ಜೀವೈಕ್ಯ ಸಮಾಧಿ ಹೊಂದಿದ ನಂತರ ಆ ಸ್ಥಳದಲ್ಲಿ(ಈಗ ಹೊರಮಠ ಇರುವಲ್ಲಿ) ಫಣಿಯಪ್ಪನು ದೀಪಹಚ್ಚಿ ಪೂಜಿಸುತ್ತಿದ್ದನು. ತಿಪ್ಪೇಸ್ವಾಮಿಯ ಅಗಲಿಕೆಯ ನೋವನ್ನು ತಾಳಲಾರದೆ ಒಂದು ದಿನ ಸಮಾಧಿ ಬಾಗಿಲು ತೆಗೆದು ನೋಡಿದನು. ಆಗ ಯೋಗಧ್ಯಾನದಲ್ಲಿ ಮುಳುಗಿದ್ದ ತಿಪ್ಪೇಸ್ವಾಮಿ 'ನಿನ್ನ ಮನೆ ಹಾಳಾಗಿ ಹೋಗಲಿ' ಎಂದು ಶಪಿಸಿದನು. ಇದರಿಂದ ತತ್ತರಿಸಿದ ಫಣಿಯಪ್ಪನನ್ನು ಕಂಡು ಕರುಣೆ ಉಕ್ಕಿ 'ನಿನ್ನ ಮನೆ ಹಾಳಾಗುವುದು ಬೇಡ, ವಂಶಕ್ಕೆ ಒಬ್ಬರಾದರೂ ಉಳಿದು, ನನ್ನ ಸೇವೆ ಮಾಡಿಕೊಂಡು ಹೋಗಲಿ' ಎಂದು ಶಾಪದಲ್ಲಿ ಅನುಕಂಪ ತೋರಿಸಿ ಫಣಿಯಪ್ಪನಿಗೆ ಸಮಾಧಿಯ ಬಂಡೆಯನ್ನು ಭದ್ರಪಡಿಸಿಕೊಂಡು ಹೋಗುವಂತೆ ತಿಳಿಸಿದನು.'(ಚಂದ್ರಶೇಖರ.ವಿ ದಾವಣಗೆರೆ, ೨೦೦೧, ಪು.೩೦) ಮನೆಯಲ್ಲಿ ಫಣಿಯಪ್ಪನ ಹೆಂಡತಿ ಮಾಳಮ್ಮನಿಗೆ ಈ ಹಿಂದೆ ತಿಪ್ಪೇಸ್ವಾಮಿ ನೀಡಿದ್ದ ವಾಡೇವಿಗೆ ಅಕ್ಷಯ ಶಕ್ತಿಯನ್ನು ಪರೀಕ್ಷಿಸಲೆಂದು ಮುಚ್ಚಳವನ್ನು ತೆಗೆದು ನೋಡುತ್ತಾಳೆ. ಕೂಡಲೇ ಅದರಿಂದ ಹೊಗೆ ಬಂದು ಅಕ್ಷಯ ಶಕ್ತಿ ನಾಶಹೊಂದುತ್ತದೆ.

ಎಷ್ಟು ದಿನ ನೋಡಿದರೆ ಅಷ್ಟೇನೆ ಐದಾವೆ
ಎಷ್ಟಂದರು ಇವು(ಮುಗಿಯಾವೆ) ಮುಗಿವಲುದೆಂದು ಮಾಳಮ್ಮ
ಮೆತ್ತು ಒಡುದಾಳೆ(ಅವಾಗ) ವಡೇವದಿಂದ
ಬುಸ್ಸಂಬೂತ ಹೊಲ್ಬೇ ಹೋದಾತು ಫಣಿಯಪ್ಪುಗೆ
ಬಂದಾತು ಬಡತನವೆ ಆಗ

(ಅನುಬಂಧ ೨, ತಿಪ್ಪೇಸ್ವಾಮಿ ಕಾವ್ಯ)

ಈ ವಾಡೇವಿನ ಅಕ್ಷಯ ಶಕ್ತಿಯನ್ನು ನಾಶಮಾಡಿದ ಪವಾಡವು ತಿಪ್ಪೇಸ್ವಾಮಿ ಸಮಾಧಿಯಾದ ನಂತರದ ಪವಾಡ ಎಂದೇ ಸಮುದಾಯವು ನಂಬುತ್ತದೆ. ಈ ಬಗ್ಗೆ ತಿಪ್ಪೇಸ್ವಾಮಿ ಕಾವ್ಯ ಏನನ್ನೂ ಹೇಳಿಲ್ಲ. ಆದರೆ ಅಷ್ಟೊಂದು ದಿನ ಸೇವೆ ಮಾಡಿಕೊಂಡಿದ್ದ ಫಣಿಯಪ್ಪ ದಂಪತಿಗಳಿಗೆ ಬಡತನ ತಂದ ತಿಪ್ಪೇಸ್ವಾಮಿಯ ನಂತರದ ಪವಾಡಗಳು ಉನ್ನತವರ್ಗವನ್ನು ಬಿಟ್ಟು ಆತ ಬೇಡ ಜನಾಂಗದ ಸಮೀಪಕ್ಕೆ ಹೋಗುವುದನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಇನ್ನು ಮುಂದಿನ ತಿಪ್ಪೇಸ್ವಾಮಿಯ ನಿರ್ಧಾರಗಳು ಬೇಡ ಜನಾಂಗದ ದೃಷ್ಟಿಯಿಂದ ಬಹಳಷ್ಟು ಪ್ರಮುಖವಾಗಿದ್ದು, ಈತನನ್ನು ಕರ್ನಾಟಕದಲ್ಲಿಯೇ ವಿಶಿಷ್ಟ ದೈವ ಎನ್ನಿಸಿಕೊಳ್ಳಲು ಕಾರಣವಾಗಿದೆ.

ಪ್ರತಿದಿನವು ತಿಪ್ಪೇಸ್ವಾಮಿಯ ಸಮಾಧಿಗೆ ಎಣ್ಣೆದೀಪ ಹಚ್ಚಿ ಬರುತ್ತಿದ್ದ ಫಣಿಯಪ್ಪ ಒಂದು ದಿನ ಆಯಾಸವಾಗಿ ತನ್ನ ಮನೆಯ ಕೆಲಸಗಾರನಾದ ಬೇಡ ಜನಾಂಗದ ಹುಡುಗನಿಗೆ ಸಮಾಧಿ ಸ್ಥಳದಲ್ಲಿ ದೀಪ ಹಚ್ಚಲಿಕ್ಕೆ ಹೇಳುತ್ತಾನೆ. ಇದರಿಂದಾಗಿ ಪ್ರತಿದಿನವೂ ಬೇಡ ಜನಾಂಗದ ಹುಡುಗನೆ ದೀಪ ಹಚ್ಚಿ ಬರುತ್ತಿದ್ದನು. ಆತನ ಭಕ್ತಿಗೆ ಮೆಚ್ಚಿ ತಿಪ್ಪೇಸ್ವಾಮಿ 'ದಿನಾಲು ನೀನು ನನ್ನ ಸೇವೆ ಮಾಡಿಕೊಂಡು ಹೋಗಬೇಕು. ಈ ಹಕ್ಕು ನಿನ್ನ ಜಾತಿಯವರಿಗೆ ಮೀಸಲು' ಎಂದು ಹೇಳುತ್ತಾನೆ.

'ಬ್ಯಾಡಾರ ಮನಿಯಲ್ಲಿ ಹೆಂಗಿದ್ದೊ ಏಸಿವುನೆ
ಮದ್ದು ಜಂಗಮಕೆ ಅವರಲ್ಲಿ-ನೀನೀಗ
ಮತ್ತೆ ಬ್ಯಾಡರಿಗೆ ಒಲದಲ್ಲೋ'

(ಅನುಬಂಧ-೨, ತಿಪ್ಪೇಸ್ವಾಮಿ ಕಾವ್ಯ)

ಹೀಗೆ ಬೇಡರ ಜನಾಂಗಕ್ಕೆ ಒಲಿಯುವ ತಿಪ್ಪೇಸ್ವಾಮಿ ಅವರಿಂದಲೇ ಪೂಜೆ ಮಾಡಿಸಿಕೊಳ್ಳುವುದು ಏನನ್ನು ಸೂಚಿಸುತ್ತದೆ? ಮತ್ತೆ ಈಗಲೂ ಹೊರಮಠದ ಪೂಜಾರಿಕೆ ಮ್ಯಾಸಬೇಡರು ಮಾಡುತ್ತಿದ್ದು ಬೇಡರು ಈ ಮಠಕ್ಕೆ ಬರುತ್ತಾರೆ. ಹಾಗೆ ಬಂದ ಭಕ್ತಾದಿಗಳು ಮದ್ದು-ಮಾಂಸಗಳನ್ನು ಎಡೆಯಾಗಿ ತಿಪ್ಪೇಸ್ವಾಮಿಗೆ ನೀಡುತ್ತಾರೆ.

ಬ್ಯಾಡಾರ ಸಂಗಾಕೆ ಹೊದಾನೆ ತಿಪ್ಪಯ್ಯ
ಮದ್ದೂ ಮಾಂಸಗಳ ಮಾಡಂದ-ಹೊರಮಠಕೆ
ಎಡಿಯೇ ತಿಪ್ಪಯ್ಯಗೆ ಇರುಲೆಂದ

ಒಳಮಠುಕೆ ಜಂಗಮರು ಹೊರಮಠುಕೆ ಭಕ್ತಾರು
ಕುಲವನ್ನೇಲ್ದೇ ಜಾತಿ ಕಲೆಯಾಲಿ-ಹೊರಮಠದಾಗೆ
ಮದ್ದು ಮಾಂಸುಗಳೇ ಬೇಸಾಲಿ-ಹೊರಮಠುದಲ್ಲಿ
ಅಪ್ಪಯ್ಗೆ ಈ ಎಡಿಯೇ ಏರಾಲಿ

(ಅನುಬಂಧ ೨, ತಿಪ್ಪಸ್ವಾಮಿ ಕಾವ್ಯ)

ಈ ರೀತಿ ಬ್ಯಾಡರ ಮದ್ಯ-ಮಾಂಸಗಳನ್ನು ಸ್ವೀಕರಿಸುವ ಪದ್ಧತಿ ಏನನ್ನು ಸೂಚಿಸುತ್ತಿದೆ? ಒಳಮಠ ಮತ್ತು ಹೊರಮಠದಲ್ಲಿ ಕಂಡುಬರುವ ಈ ಭಿನ್ನತೆಗೆ ಕಾರಣವೇನು?

ಮುಖ್ಯವಾಗಿ ತಿಪ್ಪೇಸ್ವಾಮಿಯ ಜೀವನವನ್ನು ನೋಡಿದರೆ ಆತ ಅಪ್ರತಿಷ್ಠವಾದ ಅಂಶಗಳನ್ನು ಮೌಲೀಕರಿಸುವುದನ್ನು ಕಾಣುತ್ತೇವೆ. ತಿಪ್ಪೆಮೇಲೆ ಪವಾಡ ಮಾಡುವುದು, ಹರಳಯ್ಯನ ಮನೆಯಲ್ಲಿ ಊಟ ಮಾಡುವುದು, ಹಾಗೆಯೇ ಬೇಡರ ಸಂಗಕ್ಕೆ ಹೋಗುವ ತಿಪ್ಪೇಸ್ವಾಮಿ ಕೀಳೆಂದು ಪರಿಗಣಿಸಲ್ಪಟ್ಟ ಅವರನ್ನು ಒಪ್ಪಿಕೊಳ್ಳುತ್ತಾನೆ. ಅವರಿಂದಲೇ ಪೂಜೆಯನ್ನು ಮಾಡಿಸಿಕೊಳ್ಳುತ್ತಾನೆ. ಬೇಡರ ಆಹಾರವನ್ನು ಒಪ್ಪಿಕೊಳ್ಳುವುದಕ್ಕೆ ಮುಖ್ಯವಾಗಿ ೩ ಕಾರಣಗಳಿವೆ. ಒಂದು ತನ್ನ ಜೀವನದ ಮೂಲಕ ಬೇಟೆಯಾಡುತ್ತಿದ್ದ ಇಲ್ಲವೆ ಅಲೆಮಾರಿಗಳಾಗಿ ಬದುಕುತ್ತಿದ್ದ ಜನಾಂಗವನ್ನು ಕೆರೆಗಳನ್ನು ಕಟ್ಟುವ ಮೂಲಕ ನೆಲೆಗೊಳ್ಳುವಂತೆ ಮಾಡಿದ್ದ, ಆ ರೀತಿ ನೆಲೆಗೊಂಡ ಜೀವನ ಪದ್ಧತಿಯನ್ನು ಪವಿತ್ರೀಕರಿಸುವುದು ಅವಶ್ಯಕವಾಗಿತ್ತು. ಅವರ ಆಹಾರವನ್ನು ಸ್ವೀಕರಿಸುವ ಮೂಲಕ ಅವರ ಒಟ್ಟು ಜೀವನ ಪದ್ಧತಿಯನ್ನು ಮಾನ್ಯ ಮಾಡುತ್ತಾನೆ. ಎರಡನೇಯದಾಗಿ ನಾಯಕನಟ್ಟಿ ಪರಿಸರದಲ್ಲಿ ಸಾಮಾಜಿಕ-ರಾಜಕೀಯ-ಆರ್ಥಿಕ ಬದಲಾವಣೆಗಳಿಂದಾಗಿ ಬೇಡ ಜನಾಂಗ ಪ್ರಬಲವಾಗುತ್ತಿತ್ತು. ಸುತ್ತಮುತ್ತಲಿನ ಪಾಳೆಗಾರರೆಲ್ಲ ಬೇಡರಾಗಿದ್ದರು. ಅವರ ಜೀವನ ಪದ್ಧತಿಯನ್ನು ಮಾನ್ಯ ಮಾಡುವುದು ಈತನಿಗೆ ಅನಿವಾರ್ಯವಾಗಿರಬಹುದು. ಮೂರನೇಯದಾಗಿ ಮಾಂಸಹಾರವನ್ನು ತಿನ್ನುವುದು ಕೆಳವರ್ಗವಾದ ಬೇಡಜನಾಂಗದಲ್ಲಿ ಅಂತರ್ಗತವಾಗಿದೆ. ಬೇಟೆಯಾಡಿಯೇ ಬದುಕುತ್ತಿದ್ದ ಇವರಿಗೆ ಮಾಂಸಹಾರ ಅನಿವಾರ್ಯವೂ ಹೌದು. ಬೇಡರು ಮತಾಂತರ ಅಥವಾ ಧಾರ್ಮಿಕ ಪ್ರಭಾವಕ್ಕೆ ಒಳಗಾಗಿ ಶೈವ-ನಾಥಸಿದ್ಧ ತಿಪ್ಪೇಸ್ವಾಮಿಯನ್ನು ಅನುಸರಿಸಿದರೂ ಕೂಡ ಹಳೆ ನಂಬಿಕೆ, ಆಹಾರ ಪದ್ಧತಿಯನ್ನು ಹೊಸ ಜೀವನ ಪದ್ಧತಿಯೊಂದಿಗೆ ಬೆರೆಸಿ ಬದುಕುತ್ತಿದ್ದಾರೆ. ಒಟ್ಟಾರೆ. ಈ ಪದ್ಧತಿ ಒಂದು ಜನಾಂಗದ ಬದುಕು ಸ್ಥಿತ್ಯಂತರಗೊಂಡಾಗ ಉಂಟಾಗುವ ತಲ್ಲಣಗಳಿಗೆ ಸಾಕ್ಷಿಯಾಗಿದೆ.

ಜನಸಮುದಾಯಗಳಲ್ಲಿರುವ ನಂಬಿಕೆ ಪ್ರಕಾರ ತಿಪ್ಪೇಸ್ವಾಮಿ ಸಮಾಧಿಯಾದ ನಂತರ ಮಾಡಿದ ಇನ್ನೊಂದು ಪವಾಡವೆಂದರೆ ಒಮ್ಮೆ ಈತನ ಸಮಾಧಿ ಇರುವ ಕೆರೆಯ ಏರಿಯ ಮೇಲೆ ಮೈಸೂರು ಸಂಸ್ಥಾನದ ನವಾಬನಾಗಿದ್ದ ಹೈದರಾಲಿಯ ಕುದುರೆ ಮುಗ್ಗರಿಸಿ ಬೀಳುತ್ತದೆ. ಅದಕ್ಕೆ ಹೈದರನು ಇತರರಿಂದ ತಿಪ್ಪೇಸ್ವಾಮಿಯ ಇತಿಹಾಸವನ್ನು ತಿಳಿದು 'ನನಗೆ ಗಂಡು ಮುಗುವಾದರೆ ನಿನ್ನ ಹೆಸರಿಡುತ್ತೀನೆ' ಎಂದು ಹರಕೆ ಕಟ್ಟುತ್ತಾನೆ. ಮುಂದೆ ಈತನಿಗೆ ಗಂಡು ಮಗುವಾಗುತ್ತದೆ. ಹರಕೆಯಂತೆಯೇ ಮಗುವಿಗೆ 'ತಿಪ್ಪೆ(ಟಿಪ್ಪು) ಸುಲ್ತಾನ್ ಎಂದು ಹೆಸರಿಡುತ್ತಾನೆ. ಆತನೇ ಮುಂದೆ ಟಿಪ್ಪು ಸುಲ್ತಾನ್ ಎಂದಾಗಿದೆ.

ಸಮಾಧಿಯು ವ್ಯಕ್ತಿಯ ಶಕ್ತಿಯೊಂದಿಗೆ ಸಮೀಕರಣಗೊಳ್ಳುವ ಮೂಲಕ ಪ್ರಭುತ್ವವು ಸಮುದಾಯದ ಬೆಂಬಲಗಳಿಸುತ್ತಿದೆ. ಏಕೆಂದರೆ ನಾಯಕನಟ್ಟಿ ಪಾಳೇಗಾರರ ಹತ್ತಿರವೇ ಇದ್ದ ಚಿತ್ರದುರ್ಗದ ಪಾಳೇಗಾರರು ಮತ್ತು ಹೈದರಾಲಿ, ಟಿಪ್ಪೂ ವೈರಿಗಳಾಗಿದ್ದರು. ಹೈದರಾಲಿ ಕ್ರಿ.ಶ.೧೭೭೨ರಲ್ಲಿ ಚಿತ್ರದುರ್ಗದ ಮದಕರಿನಾಯಕ

ನೊಂದಿಗೆ ಯುದ್ಧವನ್ನು ಮಾಡಿದ್ದನು. ಚಿತ್ರದುರ್ಗದ ಪಾಳೇಗಾರರ ವಿರುದ್ಧವಾಗಿ ಸುತ್ತಮುತ್ತಲ ಪಾಳೇಗಾರರ ಬೆಂಬಲಗಳಿಸಲು ಟಿಪ್ಪೂ ಹುಟ್ಟಿಗೆ ಸಂಬಂಧಿಸಿದ ಈ ಮಿತ್ ಹುಟ್ಟಿರಬಹುದು. ಟಿಪ್ಪೂ ನಾಯಕನಟ್ಟಿ ತಿಪ್ಪೇಸ್ವಾಮಿ ದಯೆಯಿಂದಾಗಿ ಹುಟ್ಟಿದ ಎನ್ನುವ ಮೂಲಕ ನಾಯಕನಟ್ಟಿ ಬೆಂಬಲ ಪಡೆಯಲು ಪ್ರಯತ್ನಿಸಲಾಗಿದೆ. ಈ ರೀತಿಯಲ್ಲಿ ಟಿಪ್ಪೂವಿನ ಹುಟ್ಟಿಗೆ ಸಂಬಂಧಿಸಿದಂತೆ ಟಿಪ್ಪೂ ಔಲಿಯಾ ಎಂಬ ಸೂಫಿ ಸಂತನಿಗೂ ಕೂಡ ಇದೇ ರೀತಿ ಕಥೆ ಕಟ್ಟಲಾಗಿದೆ.

## ೫.೨. ಕೊಟ್ಟೂರ ಗುರುಬಸವ

### ೫.೨.೧. ಚಾರಿತ್ರಿಕ ವಿವರಗಳು

ವೀರಶೈವ ಪರಂಪರೆಯಲ್ಲಿನ ನೂತನ ಗಣಂಗಳ ಪಟ್ಟಿಯಲ್ಲಿ ಕಂಡುಬರುವ ಪ್ರಮುಖ ಹೆಸರೆಂದರೆ ಕೊಟ್ಟೂರ ಗುರುಬಸವನದು. ಈತನ ಕುರಿತು ಸಿದ್ಧನಂಜೇಶ(ಗುರುರಾಜ ಚಾರಿತ್ರ್ಯ), ಬಸವಲಿಂಗಕವಿ (ಕೊಟ್ಟೂರು ಬಸವೇಶ್ವರ ಚಾರಿತ್ರ್ಯ) ತಮ್ಮ ಕೃತಿಗಳಲ್ಲಿ ವಿವರಿಸಿದ್ದಾರೆ. ಈತನಿಗೆ ಗುರುಬಸವಲಿಂಗ, ಬಸವ ಪ್ರಭು ನಂದಿಲಿಂಗ ಕೊಟ್ಟೂರೇಶ್ವರ ಎಂದು ಹಲವಾರು ಹೆಸರುಗಳು ಪ್ರಚಲಿತದಲ್ಲಿವೆ. ಈಗ ಕೊಟ್ಟೂರೇಶ್ವರ ಎನ್ನುವ ಹೆಸರೇ ಹೆಚ್ಚಾಗಿ ಪ್ರಚಲಿತದಲ್ಲಿರುವುದು.

**ಸ್ಥಳನಾಮ :** ಬಸವಲಿಂಗ ಕವಿ ಬರೆದ 'ಕೊಟ್ಟೂರು ಬಸವೇಶ್ವರ ಚಾರಿತ್ರ್ಯ'(೧೬೭೮) ಕೃತಿಯು ಕೊಟ್ಟೂರನ್ನು ಶಿಖಾಪುರ ಎಂದು ಉಲ್ಲೇಖಿಸಿದೆ. 'ಕೊಟ್ಟೂರು' ರಾಮನಾಮವನ್ನು ಉಲ್ಲೇಖಿಸಿದ ಮೊದಲ ಶಾಸನವೆಂದರೆ ಹರಪನಹಳ್ಳಿ ತಾಲೂಕು ತೆಲಗಿ ಗ್ರಾಮದ ಹರಿಹರ ಸ್ವಾಮಿ ಗುಡಿಹತ್ತಿರ ಇರುವ ಶಾಸನ. ಇದು ಶಕವರ್ಷ ೯೫೨ ಪ್ರೇಮಧೂತ ಸಂವತ್ಸರದ ಉತ್ತರಾಯಣ ಸಂಕ್ರಾಂತಿ ಅಂದರೆ ಕ್ರಿ.ಶ. ೧೦೩೦ರ ನೊಳಂಬವಾಡಿಯ ಎರಡನೆಯ ಜಗದೇಕಮಲ್ಲ ಜಯಸಿಂಹದೇವನ ಕಾಲಕ್ಕೆ ಸೇರಿದ್ದಾಗಿದೆ. ಇದಾದ ನಂತರ ಕೊಟ್ಟೂರಿನ ಗದ್ದೆಕಲ್ಲೇಶ್ವರ ದೇವಸ್ಥಾನದ ಬಳಿಯಿದ್ದ ಕ್ರಿ.ಶ. ೧೧೧೨ಕ್ಕೆ ಸೇರಿದ ಶಿಲಾಶಾಸನದಲ್ಲಿಯೂ ಕೊಟ್ಟೂರಿನ ಉಲ್ಲೇಖವಿದೆ. ತರುವಾಯ ಅಂಬಳಿ, ಕೋಗಳಿ, ಬಾಗಳಿ, ಮೈದೂರು, ಬೆಣ್ಣೆಹಳ್ಳಿ, ಗುಡಿಹಳ್ಳಿ, ನಂದಿಹಳ್ಳಿ ಮುಂತಾದ ಶಾಸನಗಳಲ್ಲಿ ಕೊಟ್ಟೂರು, ಕೊಟ್ಟೂರು ಸೀಮೆ, ಕೊಟೂರು ಸೀಮೆ, ಕೊಟ್ಟೂರು ಪನ್ನೆರೆಡು ಎಂಬ ಉಲ್ಲೇಖಗಳು ಸಿಗುತ್ತವೆ.

ಬಸವಲಿಂಗಕವಿ ಹೇಳುವ 'ಶಿಖಾಪುರ' ಎಂಬ ಗ್ರಾಮನಾಮ ಉಲ್ಲೇಖ ಯಾವ ಶಾಸನಗಳಲ್ಲಿಯೂ ಇಲ್ಲ. ಸುತ್ತಮುತ್ತಲ ಗ್ರಾಮಗಳಲ್ಲಿ ಕೊಟ್ಟೂರು ಪ್ರಮುಖ ಊರಾಗಿದ್ದು ಗುರುಬಸವರಾಜ ಬಂದು ನೆಲೆಸಿದ ನಂತರ ಅದರ ಪ್ರಾಮುಖ್ಯತೆ ಇನ್ನೂ ಹೆಚ್ಚಾಗಿದೆ. ಆದ್ದರಿಂದ ಬಸವಲಿಂಗಕವಿ ತನ್ನ ಕೃತಿಯಲ್ಲಿ ಕೊಟ್ಟೂರನ್ನು ಶಿಖಾಪುರ(ಶಿಖಾ=ಶ್ರೇಷ್ಟ, ಉನ್ನತ) ಎಂದು ಕರೆದಿರಬೇಕು. ಬಸವಲಿಂಗಕವಿಯ ತರುವಾಯ ಅದರ ಪ್ರಭಾವಕ್ಕೆ ಒಳಗಾಗಿ ಕೊಟ್ಟೂರಿಗೆ ಶಿಖಾಪುರ ಎಂತಲೂ ಕರೆಯಲಾರಂಭಿಸಿದ್ದಾರೆ.

ಮೂಲತಃ ಕೊಟ್ಟೂರು ನೊಳಂಬವಾಡಿಯ ಮಧ್ಯದಲ್ಲಿರುವ ಪಟ್ಟಣ ಈಗಿನ ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ, ಹರಿಹರ ಮತ್ತು ಅನಂತಪುರ ಭಾಗಗಳನ್ನು ಸೇರಿಸಿ ನೊಳಂಬವಾಡಿ ಎಂದು ಕರೆಯಲಾಗುತ್ತಿತ್ತು. ಇದರ ರಾಜಧಾನಿ ಉಚ್ಚಂಗಿ ದುರ್ಗ. ಈಗ ಇದು ಹರಪನಹಳ್ಳಿ ತಾಲೂಕಿನಲ್ಲಿದೆ. ಈ ಭಾಗದಲ್ಲಿನ ಕೋಗಳಿ(ಹಗರಿಬೊಮ್ಮನ ಹಳ್ಳಿ), ಹಡಗಲಿ, ಮಸಲವಾಡ(ಹರಪನಳ್ಳಿ ತಾ), ಉಜ್ಜಿನಿ(ಕೂಡ್ಲಿಗಿ.ತಾ) ಕೊಟ್ಟೂರು(ಕೂಡ್ಲಿಗಿ ತಾ) ಜೈನಧರ್ಮದ ಪ್ರಮುಖ ಪಟ್ಟಣಗಳಾಗಿದ್ದವು. ಬಹುತೇಕ ಗ್ರಾಮಗಳಲ್ಲಿ ಜೈನ ಯಕ್ಷಿಣಿಯರನ್ನು ಗ್ರಾಮ ದೇವತೆಗಳನ್ನಾಗಿ ಆರಾಧಿಸುತ್ತಿದ್ದರು. ಶಾತವಾಹನರ ಕಾಲದಲ್ಲಿನದು ಎಂದು ಹೇಳಲಾಗುವ ಕೊಟ್ರಮ್ಮನ ಗುಡಿ ಕೊಟ್ಟೂರಿನ ಊರ ಹೊರಗೆ ಇದೆ. ಇದು ಮೂಲತಃ ಜೈನ ಯಕ್ಷಿಣಿ 'ಕೊಟ್ಟವ್ವೆ' ಎನ್ನುವ ಸ್ತ್ರೀ ದೇವತೆಯದು ಎಂದು ಎಸ್.ಎಂ.ನಾಗಭೂಷಣ್ ಎಂಬುವವರು ಹೇಳುತ್ತಾರೆ. (ಕನ್ನಡಪ್ರಭ-ಜನವರಿ ೫, ೧೯೯೪) ಹಿಂದಿನ ಕಾಲದಲ್ಲಿ ಸಿಡಿಬಂಡೆ ಉತ್ಸವ ನಡೆಯುತ್ತಿತ್ತು. ಬ್ರಿಟೀಷ್ ಸರಕಾರ ಬಂದ ನಂತರ ಇದನ್ನು ನಿಲ್ಲಿಸಿರುವುದಾಗಿ ಹೇಳುತ್ತಾರೆ.(ಅದೇ, ಕನ್ನಡ ಪ್ರಭ) ಈಗಲೂ ಈ ದೇವಾಲಯದ ಸುತ್ತಲೂ ಜೈನ ಅವಶೇಷಗಳು ಕಂಡುಬರುತ್ತವೆ. ಈ ದೇವಾಲಯದ ಸುತ್ತಲೂ ಜನ-ಜೀವನ ವಾಸಿಸುತ್ತಿತ್ತು ಎನ್ನಲು ಗಡಿಗೆ-ಇಟ್ಟಿಗೆ ಚೂರುಗಳು ಇಲ್ಲಿ ದೊರೆಯುತ್ತವೆ. ಕೊಟ್ಟವ್ವೆ ಎನ್ನುವ ಯಕ್ಷಿಣಿಯಿಂದಲೇ ಕೊಟ್ಟೂರು ಎಂದು ಈ ಗ್ರಾಮಕ್ಕೆ ಹೆಸರಾಗಿರಬೇಕು. ಯಾವುದೋ ಮಾರಕರೋಗಕ್ಕೆ ಅಥವಾ ಒತ್ತಡಕ್ಕೆ ತುತ್ತಾಗಿ ಕೊಟ್ಟವ್ವೆ ದೇವಾಲಯದ ಹತ್ತಿರ ವಾಸಿಸುತ್ತಿದ್ದ ಜನವೆಲ್ಲ ಈಗಿರುವ ಸ್ಥಳಕ್ಕೆ ಬಂದಿರಬೇಕು. ಕೊಟ್ಟೂರಿನಲ್ಲಿ ಈಗಲೂ ಕೂಡ ಸಾಕಷ್ಟು ಜೈನ ಅವಶೇಷಗಳು ಸಿಗುತ್ತವೆ. ಗುರುಬಸವನು ಉಳಿದುಕೊಂಡಿದ್ದನೆನ್ನಲಾಗುವ ಮೂರ್ಕಲ್ಲ ಮೂಲತಃ ಉಡುಕೇಶ್ವರ ಎನ್ನುವ ಜೈನ ಮಂದಿರವಾಗಿದೆ. ಈ ಮಂದಿರದ ಆವರಣದಲ್ಲಿರುವ ಶಾಸನವೊಂದು ಆ ಜೈನ ಮಂದಿರಕ್ಕೆ ದಾನ ನೀಡಿರುವ ಕುರಿತು ವಿವರಗಳನ್ನು ಒದಗಿಸುತ್ತದೆ.

ಒಂದು ಕಾಲದಲ್ಲಿ ಜೈನರ ಕೇಂದ್ರ ಸ್ಥಳವಾದ ಕೊಟ್ಟೂರು ನಂತರ ಶೈವಪಂಥದ ಕೇಂದ್ರವಾಗಿ ಕೊಟ್ಟೂರು ಗುರುಬಸವನ ಸಾಧನಾ ಕ್ಷೇತ್ರವಾಗಿ, 'ಶಿಖಾಪುರ' ಎಂದು ಬಸವಲಿಂಗ ಕವಿಯಿಂದ ಕರೆಸಿಕೊಂಡು ಇಂದು ಬಹುದೊಡ್ಡ ಧಾರ್ಮಿಕ ಕ್ಷೇತ್ರವಾಗಿ ಮಾರ್ಪಟ್ಟಿದೆ.

**ಗುರುಬಸವನ ಕಾಲ :** ಕ್ರಿ.ಶ.೧೬೭೪ರಲ್ಲಿ ಬರೆದಿರುವ ಬಸವಲಿಂಗ ಕವಿಯ 'ಕೊಟ್ಟೂರು ಬಸವೇಶ್ವರ ಚಾರಿತ್ರ್ಯ'ದಲ್ಲಿ ತನಗಿಂತ ಪೂರ್ವದಲ್ಲಿ ಗುರುಸಿದ್ದನಂಜೇಶ, ಗುರುಣಿಯ ಮಹೇಶ, ವಿಭುಬಸವರಾಜರು ಕೊಟ್ಟೂರ ಗುರುಬಸವನ ಬಗ್ಗೆ ಬರೆದಿದ್ದಾರೆಂದು (ಸಂಧಿ-೧, ಪದ್ಯ-೨೯) ಹೇಳಿದ್ದಾನೆ. ಕ್ರಿ.ಶ. ೧೬೦೦ರಲ್ಲಿದ್ದ ಗುರುಸಿದ್ದ ನಂಜೇಶನ 'ಗುರುರಾಜ ಚಾರಿತ್ರ್ಯ'ದಲ್ಲಿ ಸ್ವಲ್ಪ ಮಟ್ಟಿಗೆ ಗುರುಬಸವನ ಚರಿತ್ರೆ ಕಂಡುಬರುತ್ತದೆ. ಉಳಿದಂತೆ ಯಾರ ಕೃತಿಗಳೂ ನಮಗೆ ಲಭ್ಯವಾಗಿಲ್ಲ.

'ಕೊಟ್ಟೂರ ಬಸವೇಶ್ವರ ಚಾರಿತ್ರ್ಯದಲ್ಲಿ ದೆಹಲಿಯ ಅಕಬರ್‌ನ ಪ್ರಸಂಗ ನಮಗೆ ಕಂಡುಬರುತ್ತದೆ.

'ಪರಿತೋಷದಿಂ ಕಳುಪಿ ಗುರುರಾಯನೊಲಿದಿರ್ಪ
ಪರಮ ಪುಣ್ಯಕ್ಷೇತ್ರಮಂ ನೋಡಿ ಪಾದಪಂ
ಕರುಹಂಗಳಂ ವಿಲಿಸಿತೋತ್ತಮಾಂಗದೊಳಲಂಕರಿಸಿ ಬದುಕುವನೆನುತ್ತೆ'

(ಸಂಧಿ-೧೫, ಪದ್ಯ-೨೩)

ಗುರುಬಸವನನ್ನು ಕಾಣಲು ಬರುವ ಈ ಚಿತ್ರಣ ಇವರಿಬ್ಬರೂ ಸಮಕಾಲೀನರು ಎನ್ನುವುದನ್ನು ಸೂಚಿಸುತ್ತದೆ. ಅಕ್ಬರ್ ಕ್ರಿ.ಶ.೧೫೪೨ರಲ್ಲಿ ಹುಟ್ಟಿ ಕ್ರಿ.ಶ.೧೫೫೬ರಲ್ಲಿ ಪಟ್ಟಕ್ಕೆ ಬಂದು ಕ್ರಿ.ಶ.೧೬೦೫ರಲ್ಲಿ ಮಡಿದನೆಂದು ಇತಿಹಾಸ ಹೇಳುತ್ತದೆ. 'ಇಲ್ಲಿ ಪ್ರಬುದ್ಧನಾದ ಅಕ್ಬರ್‌ನ ಚಿತ್ರಣ ಇರಬೇಕು. ಅಂದರೆ ಕ್ರಿ.ಶ.೧೫೬೦-೧೫೬೫ರ ನಡುವೆ ಅಕ್ಬರ್‌ನು ದಕ್ಷಿಣಕ್ಕೆ ಬಂದನೆಂದು ಅರ್ಥವಾಗುತ್ತದೆ. ಇತಿಹಾಸವು ಈ ಮಾತಿಗೆ ಪುಷ್ಟಿಕೊಡುವಂತಿದೆ. ಆದುದರಿಂದ ಕೊಟ್ಟೂರ ಗುರುಬಸವನ ಕಾಲ ಕ್ರಿ.ಶ.೧೫೬೦ ಎಂದು ಇಟ್ಟುಕೊಳ್ಳಬೇಕಾಗುತ್ತದೆ.'(ಆರ್.ಸಿ.ಹಿರೇಮಠ, ೨೦೦೧, ಪು.xxvii)

ಭೈರವೇಂದ್ರರಾಜನು ತನ್ನ ಮಗನನ್ನು ಕೊಟ್ಟೂರ ಗುರುಬಸವನ ಸಂದರ್ಶನಕ್ಕೆ ಕಳುಹಿಸಿದ ಸಂಗತಿ ಬಸವಲಿಂಗ ಕವಿ ವಿವರಿಸುತ್ತಾನೆ.(ಸಂಧಿ-೧೯, ಪದ್ಯ.೩-೬) ಸಾಸಲ ಭೈರವನು ೧೬ನೇ ಶತಮಾನದ ಮಧ್ಯಭಾಗದಲ್ಲಿ ಪ್ರಸಿದ್ಧನಾಗಿದ್ದನು. ಅದೇ ರೀತಿ ಗುರುಬಸವನನ್ನು ಕುರುಡನೊಬ್ಬನು ಕಣ್ಣುಕೇಳಲು ಬಂದಾಗ

ಕಂಗಳಂ ನಿನಗೀವೊಡಿ ನಾಡನಾಳ್ವರಾ
ಜಾಂಗವೆಮಗುಂಟೆ ಕೊಡುವಂ ದಾದಿನಾಯಕಂ
ಪಿಂಗು ಪೆರತೊಲಗೆಂದ ಗುರುನಿರೂಪಂಬಿಡಿದು ಕೋಲಶಾಂತೇಶನೆಂದಂ

(ಸಂಧಿ-೯, ಪದ್ಯ-೩೩)

ಎಂದು ಹರಪನಳ್ಳಿಯ ದಾದಿನಾಯಕನ ಬಳಿ ಕಳುಹಿಸುತ್ತಾನೆ. 'ಈ ದಾದಿನಾಯಕನು ಕ್ರಿ.ಶ.೧೫೬೦ರ ಸುಮಾರಿಗೆ ಬದುಕಿದ್ದನು.'(ಕುಂ: ಬಾ.ಸದಾಶಿವಪ್ಪ, ೧೯೯೬, ಪು.೧೪) ಈ ಎಲ್ಲದರ ಆಧಾರದ ಮೇಲೆ ಕೊಟ್ಟೂರ ಗುರುಬಸವನು ೧೬ನೇ ಶತಮಾನದ ಪೂರ್ವಾರ್ಧದಲ್ಲಿ ಜೀವಿಸಿದ್ದನೆಂದು ಹೇಳಬಹುದು.

**ಇನ್ನಷ್ಟು ಚಾರಿತ್ರಿಕ ವಿವರಗಳು :** ವೀರಶೈವ ಪುರಾಣಗಳ ಸಂಪ್ರದಾಯದಂತೆ ಬಸವಲಿಂಗಕವಿಯು ತನ್ನ ಕೃತಿಯಲ್ಲಿ ಕೊಟ್ಟೂರ ಗುರುಬಸವೇಶ್ವರನು ಅಯೋನಿಜರು, ಅಲೌಕಿಕರು ಎಂದು ಹೇಳುತ್ತಾನೆ. ಶಿವನ ಆದೇಶದಂತೆ ಧರ್ಮೋದ್ಧಾರಕ್ಕೆ ನಂದೀಶನು ಎರಡನೇ ಶಂಭುವಾಗಿ ಸರಸೀಪುರದಲ್ಲಿ ಅವತರಿಸುತ್ತಾನೆ. ಹೀಗೆ ಶಿವರೂಪಿಯಾಗಿ ಅವತರಿಸಿದ ನಂದೀಶನಿಗೆ ಗುರುಬಸವರಾಜದೇಶಿಕ ಎಂಬ ಗುರುಗಳಿಂದ

ದೀಕ್ಷೆಯಾಗುತ್ತದೆ. ಅವರು 'ಬಸವರಾಜ' ಎಂಬ ಹೆಸರನ್ನು ಈತನಿಗೆ ಇಡುತ್ತಾರೆ.(ಸಂಧಿ-೧, ಪದ್ಯ-೬೯-೭೨) ಈ ಕೃತಿಯಲ್ಲಿ ಗುರುಬಸವರಾಜನ ಬಾಲ್ಯವನ್ನು ಎಲ್ಲಿಯೂ ವಿವರಿಸಿಲ್ಲ. ಈತನ ತಂದೆ-ತಾಯಿಗಳ ಬಗ್ಗೆಯೂ ಉಲ್ಲೇಖವಿಲ್ಲ. ಗುರುದೀಕ್ಷೆಯ ನಂತರದಿಂದಲೇ ಈತನ ಜೀವನ ವಿವರ ಪ್ರಾರಂಭವಾಗುತ್ತದೆ. ಮುಂದೆ ಸರಸೀಪುರ ಮಠದ ಗದ್ದುಗೆಗೆ ಪೀಠಾಧ್ಯಕ್ಷನಾಗುತ್ತಾನೆ.(ಸಂಧಿ-೨, ಪದ್ಯ-೯.೩೦) ಅಲ್ಲಿ ಪರಸಮಯಿಗಳ ಗರ್ವವನ್ನು ಮುರಿಯುತ್ತ ಶಿವಸಮಯವನ್ನು ಉದ್ಧಾರ ಮಾಡುತ್ತ ಭಕ್ತಜನರಿಗೆ ಶಿವಕಥೆಗಳನ್ನು ಹೇಳುತ್ತಾ ಕಾಲಕಳೆಯುತ್ತಾನೆ. ಒಂದು ದಿನ ತನ್ನ ಕರಜಾತ ಶಿಷ್ಯರನ್ನೆಲ್ಲಾ ಕರೆದು 'ಸುಜ್ಞಾನಿ ದೇವ' ಎಂಬ ಶಿಷ್ಯನಿಗೆ ಮಠದ ಪಟ್ಟಕಟ್ಟಿ ಲೋಕಸಂಚಾರಕ್ಕೆ ಹೊರಡುತ್ತಾನೆ. ಹಾಗೆ ಲೋಕಸಂಚಾರ ಮಾಡುತ್ತಾ ಕೊಟ್ಟೂರಿಗೆ ಬರುತ್ತಾರೆ.

> 'ಜ್ಞಾನನಿಧಿ ಸುಜ್ಞಾನಿದೇವಂಗೆ ಪಟ್ಟಮಂ
> ತಾನೆಸಗಿ ಸಕಲ ದೇಶಂಗಳಂ ನೋಡಿ ನಿ
> ತ್ಯಾನಂದ ಲೀಲೆಯಂ ಕೊಟ್ಟೂರ ಪಟ್ಟಣದೊಳೊಪ್ಪಿದಂ ದೇಶಿಕೇಂದ್ರಂ'

(ಸಂಧಿ-೭ ಪದ್ಯ-೧)

ಹೀಗೆ ಪಟ್ಟಕಟ್ಟಿಸಿಕೊಂಡ ಸುಜ್ಞಾನಿ ದೇವ ಯಾರು? ಮಠವಿರುವ ಸರಸೀಪುರ ಎಲ್ಲಿದೆ? ಎನ್ನುವುದನ್ನು ಅಧ್ಯಯನ ಮಾಡಿದಾಗ ಈ ಸುಜ್ಞಾನಿದೇವ ಅಥಾವಾ ಸುಜ್ಞಾನ ಮೂರ್ತಿಯು ಸುಗಮಾರು ವೀರಶೈವ ದೊರೆಗಳಿಗೆ ವಂಶಗುರು ಆಗಿದ್ದನೆಂದು ಸಜ್ಜೆಯ ಸಿದ್ದಲಿಂಗ ಕವಿಯ 'ಮಳೆಯರಾಜ ಚಾರಿತ್ರ್ಯ'ದಿಂದಲೂ, ಮುಮ್ಮಡಿ ತಿಮ್ಮನ 'ಶಂಕರ ಸಂಹಿತೆ'ಯಿಂದಲೂ, ಸುಗಟೂರು ದೊರೆಗಳ ಶಾಸನಗಳಿಂದಲೂ ತಿಳಿದುಬರುತ್ತದೆ.

ಈ ಬಗ್ಗೆ ಹೆಚ್ಚಿನ ಸಂಶೋಧನೆ ಮಾಡಿರುವ ಪಿ.ವಿ. ಕೃಷ್ಣಮೂರ್ತಿಯವರು 'ಸಜ್ಜೆಯ ಸಿದ್ದಲಿಂಗಾರ್ಯನ 'ಮಳೆಯರಾಜ ಚಾರಿತ್ರ್ಯ' - ಸುಗಟೂರು ದೊರೆಗಳ ಶಾಸನಗಳು' ಎಂಬ ತಮ್ಮ ಲೇಖನದಲ್ಲಿ ನಿಖರ ಮಾಹಿತಿಗಳನ್ನು ನೀಡಿದ್ದಾರೆ. ಕೊಲ್ಲಪಾಕಿಯ ಸೋಮನೊಡಲಿಂದ ಚರಲಿಂಗವಾಗಿ ಹೊರಟ ರೇವಣಸಿದ್ದನ ಸಂತತಿಯವನಾದ ಮಳೆಯಮಲ್ಲೇಶನ ಶಿಷ್ಯ, ಸಿದ್ದನಂಜೇಶನ ಕರಜಾತನಾದ ಸಿದ್ದಲಿಂಗಾರ್ಯನು ವಿರತಿಯಿಂದ ಲೋಕಸಂಚಾರ ಮಾಡುತ್ತಾ ಕೊಟ್ಟೂರಿಗೆ ಬಂದು ಬಸವಲಿಂಗೇಶ್ವರನ(ಗುರುಬಸವ) ಪಾದದಡಿಯಲ್ಲಿ ಇರುತ್ತಾ ಸಿದ್ದರಾಮಾರ್ಯನೆಂಬ ವಿದ್ಯಾಗುರುವಿನಿಂದ ಬಹುಶಾಸ್ತ್ರಗಳನ್ನು ಕಲಿತನು. ಇಷ್ಟಲಿಂಗಕ್ಕೆ ಸೆಜ್ಜೆಗಳನ್ನು ಕಲ್ಪಿಸುತ್ತಿದ್ದುದರಿಂದ ಈತನು ಸೆಜ್ಜೆಯ ಸಿದ್ದಲಿಂಗಾರ್ಯನೆಂಬ ಹೆಸರನ್ನು ಪಡೆದನು. ಈ ರೀತಿ ಕೊಟ್ಟೂರ ಬಸವೇಶ್ವರನ ಬಳಿ ಒಂಬತ್ತು ವರ್ಷ ಶಿಷ್ಯಭಾವದಲ್ಲಿದ್ದು ಅಲ್ಲಿಂದ ಆತನ ಅಪ್ಪಣೆಯನ್ನು ಪಡೆದು ಹೊರಟಾಗ ಗುರುಗಳಾದ ಬಸವೇಶ್ವರರು 'ವಿರತಿ ನಿನಗೆ ಇಲ್ಲ, ನೀನು ಅಷ್ಟಭೋಗದಲ್ಲಿ ವ್ಯವಹರಿಸುವೆ' ಎಂದು ಆಶೀರ್ವಾದಿಸಿ ಕಳುಹಿಸಿದರು. ಅಲ್ಲಿಂದ ಹೊರಟು

ಸುಗಟೂರು ವಂಶದ ದೊರೆಯಾದ ಇಮ್ಮಡಿ ತಮ್ಮನ ವಂಶಗುರು ಸುಜ್ಞಾನ ಮೂರ್ತೀಶನಿರುವ ಸೌಂದರ್ಯಪುರಿಗೆ ಹೋಗಿ ಆ ಗುರುವಿನ ಮಗ ಬಸವಾರ್ಯನಿಗೆ ಸಕಲ ಶಾಸ್ತ್ರಗಳನ್ನು ಹೇಳಿದನು. ಬಸವಾರ್ಯನು ಕವಿ ಸಿದ್ದಲಿಂಗಾರ್ಯನಿಗೆ ಮದುವೆಯಾಗುವಂತೆ ಒತ್ತಾಯ ಮಾಡಿ ಹೆಣ್ಣನ್ನು ತಂದು ಮದುವೆ ಮಾಡಿದನು. ಮುಂದೆ ಈತನು ತನ್ನ ಮೊಮ್ಮಕ್ಕಳಿಗೆ ಈ 'ಮಳೆಯ ರಾಜ ಚಾರಿತ್ರ್ಯ'ವನ್ನು ಕವಿ ಹೇಳಿದನು.'('ಸತ್ಯಶುದ್ಧಕಾಯಕ' ಸಂಪುಟ-೨, ಸಂಚಿಕೆ-೫-೬, ೧೯೯೨)

ಇದರ ಆಧಾರದ ಮೇಲೆ ಸಜ್ಜೆಯ ಸಿದ್ದಲಿಂಗ ಕವಿ ಕೊಟ್ಟೂರಿಗೆ ಹೋಗಿ ಅಲ್ಲಿ ೯ ವರ್ಷಕಾಲ ಇದ್ದು ·ಗುರುಬಸವನ ಸಲಹೆಯ ಮೇರೆಗೆ ಸುಗಟೂರು ವಂಶಗುರು ಸುಜ್ಞಾನಮೂರ್ತೀಶನಿರುವ ಸೌಂದರ್ಯಪುರಿಗೆ ಹೋಗಿರುವ ವಿವರ ತಿಳಿದುಬರುತ್ತದೆ. ಇದರಿಂದ ಸುಜ್ಞಾನಿದೇವ ಮತ್ತು ಸುಜ್ಞಾನ ಮೂರ್ತೀಶ ಒಬ್ಬನೇ ಎಂದು ಮತ್ತು ಸರಸೀಪುರವೇ ಸೌಂದರ್ಯಪುರಿಯೆಂದು ಕರೆಯಲ್ಪಟ್ಟಿದೆ ಎಂದೂ ತಿಳಿದುಬರುತ್ತದೆ.

'ಸುಗಟೂರು ವಂಶದ ದೊರೆಗಳು ಸುಜ್ಞಾನಮೂರ್ತಿದೇಶಿಕನ ಕರಜಾತರು ಎಂಬ ಅಂಶವನ್ನು ತಿಳಿಸುವ ತಾಮ್ರಶಾಸನವೊಂದು ಹೊಸಕೋಟೆ ತಾಲೂಕು ಖಾಜಿ ಹೊಸಳ್ಳಿ ಎಂಬ ಗ್ರಾಮದಲ್ಲಿ ದೊರೆತಿದ್ದು ಅದು ಕ್ರಿ.ಶ.೧೫೫೪ಕ್ಕೆ ಸೇರಿದೆ. ಈ ಶಾಸನದಲ್ಲಿ ಖಾಜಿ ಹೊಸಳ್ಳಿ ಗ್ರಾಮವನ್ನು ಹೊಸೂರು ಸುಜ್ಞಾನಮೂರ್ತಿ ಸ್ವಾಮಿಗಳಿಗೆ ಅರ್ಪಿಸಿದ ವಿವರವಿದೆ.'(ಎಂ.ಶರಣಪ್ಪ, ೧೯೯೭, ಪು.೧೪) ಈ ಹೊಸೂರು ತಮಿಳುನಾಡಿನ ಭಾಗವಾಗಿರುವ ಧರ್ಮಪುರಿ ಜಿಲ್ಲೆಗೆ ಸೇರಿದೆ. 'ಇಲ್ಲಿ ಸುಜ್ಞಾನ ಮೂರ್ತಿಗಳ ಶಿವಾಚಾರದ ಮಠವೊಂದು ಇಂದಿಗೂ ಇರುವುದು ಕಂಡುಬರುತ್ತದೆ. ಇದರ ಆಧಾರದ ಮೇಲೆ ಶಾಸನೋಕ್ತವಾಗಿರುವ ಹೊಸೂರು ಮತ್ತು ಸೌಂದರ್ಯಪುರಿ ಎರಡೂ ಒಂದೇ ಎಂದು ಖಚಿತವಾಗಿ ಹೇಳಬಹುದು.' (ಸತ್ಯಶುದ್ಧಕಾಯಕ, ಸಂಪುಟ ೨, ಸಂಚಿಕೆ ೫-೬, ೧೯೯೨)

ಈ ಎಲ್ಲ ವಿವರಗಳಿಂದ ಹಿಂದೆ ಗುರುಬಸವೇಶ್ವರರು ಸರಸೀಪುರದಲ್ಲಿ ಪಟ್ಟಕಟ್ಟಿದ ಪರಮಶಿಷ್ಯ ಸುಜ್ಞಾನಿದೇವನೇ ಸುಜ್ಞಾನ ಮೂರ್ತಿ ಎಂಬುದು ಖಚಿತವಾಗುತ್ತದೆ. ಜೊತೆಗೆ ಈಗ ಸುಜ್ಞಾನಿದೇವನ ಶೈವಾಚಾರ್ಯರ ಮಠವಿರುವ ಧರ್ಮಪುರಿ ಜಿಲ್ಲೆಯ ಹೊಸೂರು ಪಟ್ಟಣವೇ ಹಿಂದಿನ ಸರಸೀಪುರ ಅಥವಾ ಸೌಂದರ್ಯಪುರಿ ಎಂಬುದು ಖಚಿತವಾಗುತ್ತದೆ.

ಸರಸೀಪುರದಿಂದ ಗುರುಬಸವನು ಕೋಲಾರ ಜಿಲ್ಲೆಯ ಕೋಟೂರು ಬಸಾಪುರ ಎನ್ನುವ ಸ್ಥಳಕ್ಕೆ ಬಂದಿದ್ದಾರೆ. ಏಕೆಂದರೆ ಇಲ್ಲಿ 'ಕೊಟ್ಟೂರ ಬಸವಣ್ಣ' ಎಂದು ಕರೆಯಲ್ಪಡುವ ಬಸವಲಿಂಗೇಶ್ವರ ಗುಡಿ ಇದೆ. ಕ್ರಿ.ಶ.೧೬೦೮ಕ್ಕೆ ಸೇರಿದ ಶಾಸನವೊಂದು ಈ ಊರಿನಲ್ಲಿದ್ದು ಅದು ಬಸವಲಿಂಗೇಶ್ವರ ಗುಡಿಗೆ ದಾನಬಿಟ್ಟ ವಿಷಯವನ್ನು ಸೂಚಿಸುತ್ತದೆ. ಕೊಟ್ಟೂರು ಬಸಾಪುರದ ಮೂಲಕ ತುಮಕೂರು ಜಿಲ್ಲೆಯ

ಎಡೆಯೂರಿಗೆ ಬಂದಿದ್ದಾನೆ. ತೋಂಟದ ಸಿದ್ಧಲಿಂಗಯತಿಗಳಲ್ಲಿ ಕೆಲಕಾಲ ಶಿಷ್ಯತ್ವವನ್ನು ಪಡೆದುಕೊಂಡು ಇದ್ದನು. ಈ ಬಗ್ಗೆ 'ಗುರುಲಿಂಗ ಜಂಗಮಚಾರಿತ್ರ್ಯ'(ಮರುಳಸಿದ್ದೇಶ, ೧೬೫೦) ಕೃತಿಯು ಸ್ಪಷ್ಟವಾಗಿ ಉಲ್ಲೇಖಿಸುತ್ತದೆ. ತಿಪ್ಪೆಯಸ್ವಾಮಿ, ಜಿಗುನಿ ಮರುಳದೇವ, ಕೋರಾಣ್ಯದ ಸ್ವಾಮಿ, ಉಪ್ಪಿನಳ್ಳಿ ದೇವ, ಕಪ್ಪುಗೊರಲ ಬೋಳ ಬಸವ, ಚಿನ್ನದ ಕಂತೆಯ ಸ್ವಾಮಿ ಮುಂತಾದವರೊಂದಿಗೆ ಕೊಟ್ಟೂರ ಗುರುಬಸವ ಇದ್ದನೆಂದು ಈ ಕೃತಿಯು(ಸಂ.೫, ಪ.೧೬೭-೧೭೮) ವಿವರಿಸುತ್ತದೆ.

ಗುರುಬಸವ ಎಡೆಯೂರಿನಿಂದ ಹೊರಟು ಹಾಸನ ಜಿಲ್ಲೆಯ ಚೆನ್ನರಾಯಪಟ್ಟಣ ತಾಲೂಕಿಗೆ ಸೇರಿದ ನುಗ್ಗೆಹಳ್ಳಿಗೆ ಬಂದಿದ್ದಾನೆ. ಏಕೆಂದರೆ ಈಗ ಕೊಟ್ಟೂರಿನ ಗುರುಬಸವೇಶ್ವರ ಮಠದಲ್ಲಿರುವ ಧರ್ಮಕರ್ತರು ಮೂಲತಃ ನುಗ್ಗೆಹಳ್ಳಿ ಮಠದವರೆಂದೂ ನುಗ್ಗೆಹಳ್ಳಿಯ ಕಲ್ಲಿಗೇಶ್ವರನ ವಂಶದವರೆಂದೂ ಹೇಳಿಕೊಳ್ಳುತ್ತಾರೆ. ಇದಕ್ಕೆ ಸಾಕ್ಷಿ ಎನ್ನುವಂತೆ 'ಕ್ರಿ.ಶ.೧೯೨೮ರಲ್ಲಿ ಧರ್ಮಕರ್ತರಾದ ನುಗ್ಗೆಹಳ್ಳಿ ಮಠದವರು ಮುಜರಾಯಿ ವಿರುದ್ಧ ನ್ಯಾಯಾಲಯಕ್ಕೆ ಹೋಗಿ ತಮ್ಮ ವಂಶಕ್ಕೆ ಕೊಟ್ಟೂರೇಶ್ವರ ಮಠವು ಸಂಬಂಧಪಟ್ಟದ್ದು ಎಂಬುದನ್ನು ಕೋರ್ಟಿನಲ್ಲಿ ಸಾಬೀತುಪಡಿಸಿ ತಮ್ಮ ಸ್ವಾಧೀನದಲ್ಲಿ ಮಠದ ಅರ್ಚನೆಯ ಕೆಲಸವನ್ನು ಇಟ್ಟುಕೊಂಡಿದ್ದಾರೆ.(ಎಂ.ಶರಣಪ್ಪ, ೧೯೯೭, ಪು.೧೯)

ಈ ವಿಷಯಕ್ಕೆ ಸಂಬಂಧಿಸಿದಂತೆ ಮಠದ ಅರ್ಚಕರು ಈ ಬಗ್ಗೆ ಗುರುಬಸವೇಶ್ವರರು ನುಗ್ಗೆಹಳ್ಳಿಗೆ ಬಂದು ಊರಿನ ವೀರಶೈವ ಮಠಾಧಿಪತಿಯಾದ ಕಲ್ಲಿಗೇಶ್ವರರ ಮಠದಲ್ಲಿ ಅನುಷ್ಠಾನ ಮಾಡಿಕೊಳ್ಳಲು ಕೇಳಿದರಂತೆ ಅಲ್ಲದೆ ಅನುಷ್ಠಾನ ಮಾಡಿಕೊಳ್ಳುವಾಗ ನನ್ನನ್ನು ಯಾರು ನೋಡಬಾರದೆಂದು ಕಟ್ಟಳೆ ಹಾಕಿದರಂತೆ ಇದಕ್ಕೆಲ್ಲ ಒಪ್ಪಿ ಕಲ್ಲಿಗೇಶ್ವರರು ಅನುಷ್ಠಾನಕ್ಕೆ ಅವಕಾಶ ಮಾಡಿಕೊಟ್ಟರು. ಬಾಗಿಲು ಮುಚ್ಚಿಕೊಂಡು ಅನುಷ್ಠಾನ ಮಾಡಿಕೊಳ್ಳುವಾಗ ಮಠದ ಗದ್ದುಗೆಗೆ ನೈವೇದ್ಯ ತಂದು ಭಕ್ತರು ಕಲ್ಲಿಗೇಶ್ವರರಲ್ಲಿ ಅವಸರ ಮಾಡಿದಾಗ ಭಕ್ತರ ಒತ್ತಾಯಕ್ಕೆ ಬಾಗಿಲು ತೆರೆದು ನೋಡಿದರೆಂದೂ, ಆಗ ಪೂಜೆಯಲ್ಲಿ ಮಗ್ನರಾಗಿದ್ದ ಗುರುಬಸವರು ಸಿಟ್ಟಿನಿಂದ 'ನೀನು ಇನ್ನು ಮೇಲೆ ನನ್ನ ಸೇವೆ ಮಾಡಿಕೊಂಡಿರು' ಎಂದು ಹೇಳಿ ತಮ್ಮೊಂದಿಗೆ ಇವರನ್ನು ಕರೆತಂದರು' ಎಂದು ಹೇಳುತ್ತಾರೆ. ಆಗಿನಿಂದ ಗುರುಬಸವನ ಸೇವೆ ಮಾಡಲು ಕೊಟ್ಟೂರಿನ ಹತ್ತಿರವಿರುವ ಅಯ್ಯನ ಹಳ್ಳಿ ಗ್ರಾಮದಲ್ಲಿ ಬಂದು ಉಳಿದುಕೊಂಡಿದ್ದಾರೆ.

ಈ ಮೇಲಿನ ಪಯಣದ ಬಗ್ಗೆ ಬಸವಲಿಂಗ ಕವಿ(ಕೊಟ್ಟೂರ ಬಸವೇಶ್ವರ ಚಾರಿತ್ರ್ಯ) ಏನನ್ನೂ ಹೇಳುವುದಿಲ್ಲ. ಈತನ ಪ್ರಕಾರ ಸುಜ್ಞಾನಿದೇವನಿಗೆ ಪಟ್ಟಕಟ್ಟಿದ ಗುರುಬಸವ ಕಾಶ್ಮೀರ, ಸೌರಾಷ್ಟ್ರ, ಕೇದಾರ, ಕಾಳಹಸ್ತಿ ಕ್ಷೇತ್ರಗಳನ್ನು, ಚೋಳ, ಪಾಂಡ್ಯ ಕೇರಳದ ಶರಣರನ್ನು ಭೇಟಿ ಮಾಡುತ್ತಾನೆ.(ಕೊಟ್ಟೂರ ಬಸವೇಶ್ವರ ಚಾರಿತ್ರ್ಯ, ಸಂ.೭, ಪ.೯-೨೦) ಅಲ್ಲಿಂದ ಹಂಪಿಗೆ ಬಂದು 'ಮನಮೊಲ್ದು ಹೇಮಕೋಟಕ್ಕೆ ದಕ್ಷಿಮದಿಶಾವನಿಯಲ್ಲಿ ಪೆಂಪುವಡೆದಿರ್ಪ ಕೊಟ್ಟೂರ ಪಾವನತರಕ್ಷೇತ್ರ'ಕ್ಕೆ ಬರುತ್ತಾನೆ. ಇಲ್ಲಿಂದ ಕೊಟ್ಟೂರಿನಲ್ಲಿ ಆತ ಮಾಡಿದ ಜೀವನವನ್ನು, ಪವಾಡಗಳನ್ನು ಬಸವಲಿಂಗಕವಿ ವಿವರಿಸುತ್ತಾ ಹೋಗುತ್ತಾನೆ.

### ೫.೨.೨. ಶೈವ ನಾಥಸಿದ್ಧನಾಗಿ ಗುರುಬಸವ

ಕೊಟ್ಟೂರ ಗುರುಬಸವನು ಮಾಡಿದ ಪವಾಡಗಳು ಗಮನಿಸಿದರೆ ಈತ ಸಿದ್ಧಪರಂಪರೆಯವನು ಎನ್ನುವುದು ಖಚಿತವಾಗುತ್ತದೆ. ಇವತ್ತಿಗೂ ಉಳಿದುಬಂದಿರುವ ಅದೆಷ್ಟೋ ಆಚರಣೆಗಳು ಈತನು ಸಿದ್ಧಪಂಥದವನು ಎನ್ನುವುದಕ್ಕೆ ಸಾಕ್ಷಿಯಾಗಿವೆ. ನಾಯಕನಟ್ಟಿ ಜಾತ್ರೆಯಲ್ಲಿ ಸೇರಿದಂತೆ ಜೋಗಿಗಳಾಗಲಿ, ಭಂಗಿ-ಹೆಂಡ ಸೇವನೆ ಮಾಡುವವರಾಗಲಿ ಕುರುಬ-ಬೇಡ ಜನಾಂಗಗಳು(ಈ ಎರಡು ಜನಾಂಗಗಳು ಮೊದಲಿನಿಂದಲೂ ಸಿದ್ಧಪಂಥಗಳೊಂದಿಗೆ ಗುರುತಿಸಿಕೊಂಡಿವೆ) ಹೆಚ್ಚಾಗಿ ಆರಾಧಿಸುವುದಾಗಲಿ ಇರದೆ ಇದ್ದರೂ ಜ್ಯೋತಿ ಆರಾಧನೆ, ಕಂಡಾಯ(ಖಡ್ಗ) ಪೂಜೆಯಂತಹ ಆಚರಣೆಗಳು, ಗುರುಬಸವ ಹುಚ್ಚನಂತೆ-ವರ್ತಿಸುತ್ತಾ ಮಾಡಿದ ಪವಾಡಗಳು ಈತನು ಶೈವ-ನಾಥಸಿದ್ಧನಾಗಿದ್ದನು ಎನ್ನುವುದನ್ನು ಖಾತ್ರಿಗೊಳಿಸುತ್ತವೆ. ಶೈವ-ನಾಥಸಿದ್ಧನಾಗಿ ಈತನು ಮಾಡಿದ ಪವಾಡಗಳನ್ನು ಗುರುರಾಜ ಚಾರಿತ್ರ್ಯ(ಸಿದ್ಧನಂಜೇಶ), ಕೊಟ್ಟೂರ ಬಸವೇಶ್ವರ ಚಾರಿತ್ರ್ಯ(ಬಸವಲಿಂಗಕವಿ) ವಿವರವಾಗಿ ತಿಳಿಸುತ್ತವೆ.

ಕೊಟ್ಟೂರಿಗೆ ಬರುವ ಗುರುಬಸವನು ಮರುಳನಂತೆ ಬರುತ್ತಾನೆ. ಆತನ ಬರುವಿಕೆಯನ್ನು ಬಸವಲಿಂಗ ಕವಿ(೧೬೭೮) ಈ ರೀತಿ ವರ್ಣಿಸುತ್ತಾನೆ.

> ಓರೋರ್ಮೆ ಪುಚ್ಚನಂತಚ್ಚರಿಯೊಳಾಡುವನ
> ದೋರೊರ್ಮೆ ಮತ್ತನಂತೊತ್ತರಿಸಿ ಮೇಲ್ಪರಿವ
> ನೋರೋರ್ಮೆ ಪೈಶಾಚಿಕಾಕೃತಿಯೊಳತಿ ಭಯಂಕೃತಿಯನೊದವಿಸುವನಿರದೆ
> ಓರೋರ್ಮೆ ಪಾಡುವಂ ಗಾಡಿಯಿಂ ಗಮಕಿಯಂ
> ತೋರೊರ್ಮೆ ಕುಣಿವ ಮಣಿವಂ ನಿಜಾನಂದದಿಂ
> ದಾ ರಾಜಬೀದಿಯೊಳಗಟ್ಟಹಾಸದೆ ಬಟ್ಟ ಬಯಲ ತೊಟ್ಟನೆ ನಿಚ್ಚಪಂ

(ಕೊಟ್ಟೂರ ಬಸವೇಶ್ವರಚಾರಿತ್ರ್ಯ, ಸಂಧಿ ೭, ಪದ್ಯ-೩೬)

ಈ ರೀತಿ ಹುಚ್ಚನಂತೆ ಬರುವ ಕೊಟ್ಟೂರ ಗುರುಬಸವ ಮೂರ್ಕಲ್ ಮಠದಲ್ಲಿ ಉಳಿದುಕೊಳ್ಳುವನು. ಮರುಳನಂತೆ ವರ್ತಿಸುವ ಚಿತ್ರಣವು ತಿಪ್ಪೇಸ್ವಾಮಿ ಜೀವನದಲ್ಲೂ ಕಂಡುಬರುತ್ತದೆ. ಈ ರೀತಿ ಹುಚ್ಚರ ಹಾಗೆ ನೂರೊಂದು ವಿರಕ್ತರೂ ವರ್ತಿಸುತ್ತಿದ್ದರು. ಇವರಿಗೆ ಅವಧೂತರು ಎನ್ನಲಾಗುತ್ತಿತ್ತು. ಕೊಟ್ಟೂರು ಗುರುಬಸವನನ್ನು ಅವಧೂತನೆಂದೇ ಕರೆಯಲಾಗುತ್ತದೆ. ನಾಥಪಂಥದ ಸಿದ್ಧರನ್ನು ಅವಧೂತರೆಂದೇ ಕರೆಯಲಾಗುತ್ತದೆ. ನೂರೊಂದು ವಿರಕ್ತರನ್ನು ಅವಧೂತರೆಂದು ಇವರು ನಾಥಪಂಥದ ಸಿದ್ಧರಿರಬೇಕೆಂದು ಡಾ.ಎಂ.ಎಂ.ಕಲ್ಬುರ್ಗಿಯವರು ವಿವರಿಸಿದ್ದಾರೆ. (ಮಾರ್ಗ-III ೧೯೯೮, ಪು.೨೨೯-೨೩೧) ನಾಥರಲ್ಲಿ ಪಾಗಲ್ ಪಂಥಿಗಳು ಹುಚ್ಚುತನದಿಂದಲೇ ಗುರುತಿಸಿಕೊಂಡವರು.

ಯಾಕೆ ತಿಪ್ಪೇಸ್ವಾಮಿಯಾಗಲಿ, ಗುರುಬಸವನಂತಹ ಸಂತರು ಹುಚ್ಚರಂತೆ ವರ್ತಿಸುತ್ತಾರೆ? ಬರೀ ಜನರನ್ನು ಆಕರ್ಷಿಸುವ ಮಾದ್ಯಮವಾಗಿ ಮಾತ್ರ ಈ ಹುಚ್ಚುತನ ಕಂಡುಬರಲಾರದು. 'ದೈವಿಕವಾದ ಈ ಹುಟ್ಟಿನ ಸ್ಥಿತಿಯಲ್ಲಿ ಅವರು ಧಾರ್ಮಿಕ-ಸಾಮಾಜಿಕ ಶಿಷ್ಟಾಚಾರಗಳನ್ನು ಮೀರಿ, ನಿರಂಕುಶ ಮತಿಗಳಾಗಿ, ದಾರ್ಶನಿಕ ಸ್ಥಿತಿ ಪಡೆಯುತ್ತಿದ್ದರು. ಸೂಫಿಗಳಲ್ಲಿ ದರವೇಶಿ, ಮಜ್ಜೂಬ್ , ಮಲಾಮತಿಗಳು, ನಾಥರಲ್ಲಿ ಪಾಗಲ್ ಪಂಥಿಗಳು ತಮ್ಮ ಹುಚ್ಚುವರ್ತನೆಗಳಿಗೆ ಹೆಸರಾದವರು. 'ಹುಚ್ಚಪ್ಪಯ್ಯ' ಎಂಬ ಹೆಸರಿನ ಅನೇಕ ಸಂತರು ಅನುಭಾವಿ ಪರಂಪರೆಗಳಲ್ಲಿ ಆಗಿ ಹೋಗಿದ್ದಾರೆ'(ರಹಮತ್ ತರೀಕೆರೆ, ಗುರುಬಸವನನ್ನು ಈಗಲೂ 'ಹುಚ್ಚಕೊಟ್ರಯ್ಯ' ಎಂತಲೇ ಜನ ಸಂಬೋಧಿಸುತ್ತಾರೆ. ಈತ ತನ್ನಷ್ಟಕ್ಕೆ ತಾನು ಹಾಡುತ್ತಾ, ಉನ್ಮತ್ತಸ್ಥಿತಿಗೆ ಹೋಗುವುದು ಮಾಡುತ್ತಿದ್ದನು. ಈತನ ಹುಚ್ಚುತನದಿಂದಾಗಿ ಕೆಲವು ಜನರು ಕಲ್ಲುಗಳನ್ನು ಹೊಡೆಯುತ್ತಿದ್ದರು. ಆ ಕಲ್ಲುಗಳು ಮೈಗೆ ತಾಕದೇ ಹೋಗುತ್ತಿದ್ದವು. ಎಷ್ಟೋ ಸಲ ಕಲ್ಲು ಒಡೆದರೂ ಈತನಿಗೆ ಪೆಟ್ಟಾಗುತ್ತಿರಲಿಲ್ಲ. ಇದು ಸಿದ್ಧರಲ್ಲಿ ಬರುವ ವಜ್ರೋಳಿ, ಅಮ್ರೋಳಿ ಎನ್ನುವ ಸಿದ್ಧಿಯನ್ನು ಸೂಚಿಸುತ್ತದೆ. ವಜ್ರೋಳಿ ಎಂದರೆ ದೇಹವನ್ನು ವಜ್ರದಂತೆ ಕಠಿಣವಾಗಿಸುವುದು, ಅಮ್ರೋಳಿ ಎಂದರೆ ಏನಾದರೂ ತಾಗಿದರೆ ಗಾಳಿಯಲ್ಲಿ ತಾಗಿದಂತೆ, ಇದನ್ನು ಅಲ್ಲಮಪ್ರಭು ಮತ್ತು ಗೋರಖಾನಾಥನ ಮಧ್ಯದಲ್ಲಿ ನಡೆದ ಸಂಘರ್ಷದ ಸಂದರ್ಭದಲ್ಲಿ ಅಲ್ಲಮಪ್ರಭುವಿಗೆ ಈ ರೀತಿಯ ಸಿದ್ಧಿಗಳು ಸಿದ್ಧಿಸಿದ್ದ ಬಗ್ಗೆ ಹರಿಹರ(ಪ್ರಭುದೇವರ ರಗಳೆ) , ಚಾಮರಸ(ಪ್ರಭುಲಿಂಗ ಲೀಲೆ) ತಮ್ಮ ಕೃತಿಗಳಲ್ಲಿ ವಿವರಿಸಿದ್ದಾರೆ.

ಈತನ ಹುಚ್ಚುತನವನ್ನು ನೋಡಿದ ನಿಂಬಿಯಕ್ಕ ಎನ್ನುವ ಸ್ತ್ರೀ ಗುರುಬಸವನಿಗೆ ಆಶ್ರಯವನ್ನು ಕೊಡುತ್ತಾಳೆ. ಅವಳ ಮನೆಯಲ್ಲಿ ದಿನಾಲು ದನಕಾಯುತ್ತಾ ಬದುಕಿದ್ದ ಗುರುಬಸವ ಒಂದು ದಿನ ಕೆರೆಯ ಹತ್ತಿರ ದನಕಾಯಲು ಹೋದಾಗ ಸ್ನೇಹಿತರನ್ನೆಲ್ಲಾ ಮನೆಗೆ ಕಳುಹಿಸಿ ಅಲ್ಲಿಯೇ ಲಿಂಗಧ್ಯಾನದಲ್ಲಿ ಮುಳುಗಿದ. ಆಗ ಮಳೆ ಬಂದು ಪ್ರವಾಹ ಬಂದರೂ ಎದ್ದು ಬರದೆ ೭ ದಿನಗಳವರೆಗೆ ಮೈಮರೆತು ಲಿಂಗಧ್ಯಾನ ಮಾಡಿದನು.(ಕೊಟ್ಟೂರ ಬಸವೇಶ್ವರ ಚಾರಿತ್ರ್ಯ, ಸಂ.೮, ಪದ್ಯ-೧೫-೧೬) ಈ ರೀತಿ ಸಮಾಧಿ ಸ್ಥಿತಿಗೆ ಹೋಗುವುದು ಅನುಭಾವಿ ಪಂಥಗಳಲ್ಲಿ ಸಹಜವಾದದ್ದು. ಎಲ್ಲವನ್ನು ಮರೆತು 'ಪರಾ'(Trans) ಸ್ಥಿತಿಗೆ ಹೋಗುವ ಶಕ್ತಿ ಯೌಗಿಕ ವಿದ್ಯೆಯಿಂದ ಬಂದಿರಬಹುದು. ಈ ರೀತಿ ಉನ್ಮತ್ತ ಸ್ಥಿತಿಯು ಗುರುಬಸವನ ಜೀವನದಲ್ಲಿ ಮತ್ತೆ-ಮತ್ತೆ ಬರುತ್ತವೆ.

ಮತ್ತೊಂದು ಸಲ ಮೂರ್ಕಲ್ಲಿ ಮಠದಲ್ಲಿ ಧ್ಯಾನದಲ್ಲಿ ಕುಳಿತಾಗ ಮೈಮೇಲೆಲ್ಲಾ ಹಾವು ಹರಿದಾಡುವುದು, ಗುರುಬಸವನ ಧ್ಯಾನಕ್ಕೆ ಕೂತ ದೇವಾಲಯಕ್ಕೆ ಬೆಂಕಿ ಹತ್ತುವುದು, ಆದರೂ ಈತನಿಗೆ ಎಚ್ಚರವೆ ಆಗದೆ ಇದ್ದನು. ಬೆಂಕಿ ಉರಿದರೂ ಕೂಡ ಈತನ ಮೈಗೆ ಏನೊಂದೂ ಆಗದಂತೆ ಉಳಿದುಕೊಳ್ಳುವನು.

ಸಿದ್ಧಪರಂಪರೆಯಲ್ಲಿನ ಸಂತರ ಜೀವನದಲ್ಲಿ ಕಂಡುಬರುವ ಮುಖ್ಯವಾದ ಪವಾಡಗಳೆಂದರೆ ರೋಗ ವಾಸಿ ಮಾಡುವ, ಸತ್ತವರನ್ನು ಬದುಕಿಸುವ ಇಲ್ಲವೆ, ಮಣ್ಣನ್ನು ಚಿನ್ನವಾಗಿಸುವ ಘಟನೆಗಳು, ಸಾಮಾನ್ಯವಾಗಿ ಯಾವುದೇ ಸಿದ್ಧರಲ್ಲಿ ಈ ತರಹದ ಪವಾಡಗಳು ಕಂಡುಬರುತ್ತದೆ. ಎಷ್ಟೋ ಸಲ ಸಮುದಾಯಗಳು ಜನಪ್ರೀಯವಾದ ಈ ತರಹದ ಪವಾಡ ಕತೆಗಳನ್ನು ಸಿದ್ಧಪರಂಪರೆಯಲ್ಲದವನಿಗೂ ಸೇರಿಸಿರುವ ಸಾಧ್ಯತೆಗಳಿವೆ.

ಕೊಟ್ಟೂರ ಗುರುಬಸವನಿಗೆ ಸಂಬಂಧಿಸಿದಂತೆ ವೈದ್ಯಶಕ್ತಿಯನ್ನು ಹೊಂದಿರುವ ನೂರಾರು ಪವಾಡಗಳನ್ನು ಬಸವಲಿಂಗಕವಿ ತನ್ನ ಕೃತಿಯುದ್ದಕ್ಕೂ ವಿವರಿಸುತ್ತಾ ಹೋಗುತ್ತಾನೆ. ಅವುಗಳೆಂದರೆ, ಹುಟ್ಟು ಕುರುಡನಿಗೆ ಕಣ್ಣುಗಳು ಬರುವಂತೆ ಮಾಡಿದ್ದು, ಗುರುಬಸವನನ್ನು ಭೇಟಿ ಮಾಡಲು ಬರುತ್ತಿದ್ದ ಭಕ್ತಾದಿಗಳನ್ನು ಸುಲಿಯಲು ಬಂದ ಬೇಡರು ಕಣ್ಣು, ಕಿವಿ, ಕೈಕಾಲುಗಳನ್ನು ಕಳೆದುಕೊಂಡರು. ಕ್ಷಮೆಯನ್ನು ಬೇಡಿದ ನಂತರ ಗುರುಬಸವ ಮರಳಿ ಅವುಗಳನ್ನು ಬರುವಂತೆ ಮಾಡಿದ್ದು,(ಸಂಧಿ-೯, ಪದ್ಯ ೭೦-೭೬) ಒಬ್ಬ ಭಕ್ತೆಯ ಸೊಸೆ ತೀರಿಹೋದಾಗ ಅವಳನ್ನು ಮರಳಿ ಬದುಕಿಸಿದನು. ಸತ್ತೆಮ್ಮೆಯನ್ನು ಬದುಕಿಸಿದನು. ಸಾಸಲೂರು ಬೇಡಜಾತಿಯ ದೊರೆಯ ಸತ್ತ ಕುದುರೆಯನ್ನು ಬದುಕಿಸಿದನು. ಕೊಟ್ಟೂರಿನ ಭಕ್ತನ ಮನೆಯಲ್ಲಿನ ಸತ್ತ ಆಕಳುಗಳೆರಡನ್ನು ಬದುಕಿಸಿದನು. ಕೊಂಡೂರಿನ ಪರವಿನಾಯಕನ ಹೆಂಡತಿಯನ್ನು ಬದುಕಿಸಿದನು. ಸತ್ತ ಹುಂಜ, ದೇವರಿಗೆ ಬಿಟ್ಟ ಗೂಳಿ, ಹಾಳು ಬಾವಿಯಲ್ಲಿ ಬಿದ್ದ ಭಕ್ತೆಯನ್ನು ಬದುಕಿಸಿದನು.(ಸಂಧಿ-೧೦, ಪ.೧-೨೩)

ಮತಿಘಟ್ಟ ಎಂಬ ಊರಿನ ವಡ್ಡ ಸಮಾಜದಲ್ಲಿನ ಭಕ್ತರಿಗೆ ಬಂದಿದ್ದ ಉಗ್ರಜ್ವರವನ್ನು ಹೋಗಲಾಡಿಸಿದನು. ಕಂಚಿಗೆರೆಯ ತಿಮ್ಮಣ್ಣನಿಗೆ ಬಂದಿದ್ದ ಜ್ವರವನ್ನು ನಿರ್ಮೂಲನೆ ಮಾಡಿದನು. ಕುಷ್ಠರೋಗಿಯೊಬ್ಬನಿಗೆ ರೋಗವಾಸಿ ಮಾಡಿದನು. ಇಕ್ಕೇರಿಯ ಧರಣಿಸೆಟ್ಟಿಗೆ ಬಂದಿದ್ದ ಗುಲ್ಮದ ಭಾದೆಯನ್ನು ನಿವಾರಿಸಿದನು. ಶೀಲವಂತ ಲಿಂಗಣ್ಣನಿಗೆ ಬಂದಿದ್ದ ಸೂಲಿರೋಗವನ್ನು ನಿವಾರಿಸಿದನು. ಸದಾಶಿವನೆಂಬ ಕುಷ್ಠರೋಗಿಯ ರೋಗ ವಾಸಿ ಮಾಡಿದನು. ಬೆಲಗೂರಲ್ಲಿ ಲಿಂಗಣ್ಣನೆಂಬ ಭಕ್ತನಿಗೆ ಹಾವು ಕಡಿದಾಗ ತನ್ನ ಭಸ್ಮದಿಂದ ವಿಷ ಏರಿ ಸಾಯದಂತೆ ಕಾಪಾಡಿದನು. ಅಣವಗೆರೆಯ ಚೆನ್ನಮಲ್ಲಯ್ಯನ ಹೆಂಡತಿಗೆ ಬಂದಿದ್ದ ಗಂಡಮಾಲೆಯ ರೋಗವನ್ನು ಭಸ್ಮದಿಂದ ಹೋಗಲಾಡಿಸಿದನು. ಮಲ್ಲಸೆಟ್ಟಿಯೆಂಬ ಭಕ್ತನನ್ನು ೧೨ ವರ್ಷಗಳಿಂದ ಕಾಡುತ್ತಿದ್ದ ತಲೆನೋವನ್ನು ಇಲ್ಲದಂತೆ ಮಾಡಿದನು. ಒಬ್ಬ ಹರಿದಾಸನಿಗಿದ್ದ ಹಲವು ವಿಚಿತ್ರ ಬೇನೆಗಳನ್ನು ಇಲ್ಲದಂತೆ ಮಾಡಿದನು. ರಟ್ಟಿಹಳ್ಳಿಯ ಭದ್ರಶೆಟ್ಟಿಯನ್ನು ಸೆರಮನೆಯಿಂದ ಬಿಡಿಸಿದನು. ಬಸವನಾಮದ ಮಹತ್ವವನ್ನು ಹೊಗಳುತ್ತ ಬಂದು ನಮಸ್ಕರಿಸಿದ ಒಬ್ಬನ ಕಿರುನಾಲಿಗೆಯನ್ನು ಸರಿಮಾಡಿದನು. ಅವಮಾನವನ್ನು ತಪ್ಪಿಸಿ ರಕ್ಷಿಸುವ ದೇವನೆ ಸಲಹು ಎಂದು ಬೇಡಿದ ಯದುಲಖಾನನ್ನು ರಕ್ಷಿಸಿದನು. ಹೊಳಲಕೇರಿಯ ಒಬ್ಬ ಜಂಗಮನ ಮೇಲೆ ಮದ್ದಾನೆಯನ್ನು ತುಳಿಸಲು ಪ್ರಯತ್ನಿಸಿದಾಗ

ರಕ್ಷಿಸಿದನು. ವ್ಯಾಪಾರಕ್ಕೆ ದ್ವಾರಕೆಗೆ ಹೋದ ಭಕ್ತನ ಎತ್ತುಗಳಿಗೆ ಬಂದಿದ್ದ ರೋಗ ವಾಸಿ ಮಾಡಿದನು.(ಅದೇ, ಸಂ-೧೧, ಪ.೩-೪೦)

ಹಿರಿಯಕಲ್ಲು ಎಂಬ ಗ್ರಾಮದ ಶಂಕರ ಸೆಟ್ಟಿಯೆಂಬ ಶಿವಭಕ್ತನಿಗೆ ಮಗುವನ್ನು ಕರುಣಿಸಿದನು. ಉತ್ತರದೇಸದ ಗ್ರಾಮವೊಂದರಲ್ಲಿನ ಶಿವಭಕ್ತ ದಂಪತಿಗೆ ಸತ್ತ ಮಗುವನ್ನು ಯಮನಿಂದ ಮರಳಿ ತಂದುಕೊಟ್ಟನು. ಗೋವಿಂದವಡಿಯ ಗೋವಿಂದನೆಂಬ ಬ್ರಾಹ್ಮಣನಿಗೆ ಮಗುವನ್ನು ಕರುಣಿಸಿದನು. ಆತನು ಹರಕೆಯನ್ನು ತೀರಿಸದಿದ್ದುದಕ್ಕಾಗಿ ಮಗುವನ್ನು ಸಾಯಿಸಿ ಹರಕೆ ತೀರಿಸಿದ ನಂತರ ಮತ್ತೆ ಬದುಕಿಸಿದನು. ಪಾಲ್ಕುರಿಕೆಯಲ್ಲಿ ಚೆನ್ನಮಲ್ಲಣ್ಣನೆಂಬ ಭಕ್ತನಿಗೆ ಮಗುವನ್ನು ಕರುಣಿಸಿದನು. ತರುವೂರ ಬಸವರಾಜ, ಸೊಂಡೂರ ಪರವಿನಾಯಕರ ಹೆಂಡತಿಯರ ಬಂಜೆತನವನ್ನು ಹೋಗಲಾಡಿಸಿ ಮಕ್ಕಳನ್ನು ಕರುಣಿಸಿದನು. ಹರಪುರಿಯ(ಹರಪನಳ್ಳಿ) ರಾಜ ದಾದಿನಾಯಕನ ಮಗ ರಂಗರಾಜನಿಗೆ ಮಗುವನ್ನು ಕರುಣಿಸಿದನು. ಹುಟ್ಟಿದ ಆ ಮಗುವಿಗೆ ಬಸವರಾಜ ಎಂದು ನಾಮಕರಣ ಮಾಡಲಾಯಿತು. ಒಮ್ಮೆ ಗೌರವಾಂಕ ಕವಿಯು ತಾನು ಬರೆದ ಕಾವ್ಯವನ್ನು ಹಾಡುಗಾರನೊಬ್ಬನ ಕೈಯಿಂದ ಕೊಟ್ಟು ಕಳುಹಿಸಲು, ಗುರುಬಸವನು ಗೌರವಾಂಕನನ್ನೇ ಕರೆಯಿಸಿ ಆತನಿಗೆ ಆಶೀರ್ವಾದಿಸಿ ಮಗುವನ್ನು ಕರುಣಿಸಿದನು. ಗೌರವಾಂಕನು ತನಗೆ ಹುಟ್ಟಿದ ಮಗುವಿಗೆ ಬಸವನೆಂದು ಹೆಸರಿಟ್ಟನು.(ಅದೇ, ಸಂ.೧೨, ಪದ್ಯ- ೩-೬೯)ಶಿವನೊಬ್ಬನ ತಪಸ್ಸನ್ನು ಮೆಚ್ಚಿ ಆತನ ಮನೆಯಲ್ಲಿ ಹೊನ್ನಿನ ಮಳೆಯನ್ನು ಗುರುಬಸವ ಸುರಿಸಿದನು. ಗುಡ್ಡಬ್ಬೆ ಹೊಳೆ ಎಂಬ ಊರಲ್ಲಿ ವಾಸಿಸುತ್ತಿದ್ದ ಪಗಡೆಯ ಚೆನ್ನೊಡೆಯ ಎಂಬ ಭಕ್ತನಿಗೆ ಗುರುಬಸವ ಕೊಟ್ಟ ವಿಭೂತಿಯಿಂದ ಸಕಲ ಐಶ್ವರ್ಯವೂ ಲಭ್ಯವಾಯಿತು.(ಅದೇ, ಸಂ.೧೩, ಪ.೩-೩೯) ಕೊಟ್ಟೂರಿನಲ್ಲಿ ದಾಸೋಹಿಲಿಂಗಮ್ಮ ಎಂಬ ಸ್ತ್ರೀ ವಿಭೂತಿ ಉಂಡೆಯನ್ನು ಬಂದ ಭಕ್ತರಿಗೆ ದಾನ ಮಾಡುತ್ತಿದ್ದು ಒಂದು ದಿನ ಒಂದೇ ವಿಭೂತಿ ಉಳಿಯಲು ಅವಳು ಗುರುಬಸವನ ಜಪ ಮಾಡಿದಳು. ಅದಕ್ಕೆ ಸ್ಪಂದಿಸಿದ ಗುರುಬಸವ ಅವಳ ಕೈಯಲ್ಲಿ ವಿಭೂತಿ ಉಂಡೆಗಳು ಖಾಲಿಯಾಗದಂತೆ ಮಾಡಿದನು. ಊರಿನಲ್ಲಿ ಮಳೆಯಿಲ್ಲದೆ ಪೈರುಗಳು ಒಣಗಲು ದಾಸೋಹಿಲಿಂಗಮ್ಮನ ನಿರ್ದೇಶನದಂತೆ ಗುರುಬಸವನ ಜಪ ಮಾಡಲು ಮಳೆಯನ್ನು ತರಿಸಿದನು.(ಅದೇ, ಸಂ.೧೪, ಪ.೩-೨೫) ದಿಲ್ಲಿಯ ಅಕ್ಬರನ ಅಂತಃಪುರದಲ್ಲಿ ರಾಣಿಮಂಚದ ಮೇಲೆ ಪ್ರತ್ಯಕ್ಷನಾಗಿ ಅಕ್ಬರನಿಗೆ ಮಹಿಮೆ ತೋರಲು ಇಚ್ಛಿಸಿದನು. ಈತನನ್ನು ಕೊಲ್ಲಲು ಬಂದ ಅಕ್ಬರ್ ಗತಿಸ್ತಂಭವಾಗಿ ನಿಂತುಬಿಟ್ಟನು. ಸಂಗಸೆಟ್ಟಿಯ ಮಗ ಲಿಂಗಸೆಟ್ಟಿಯನ್ನು ಕೆರೆಯಲ್ಲಿ ಎಳೆದೊಯ್ದು ೭ ದಿನಗಳ ನಂತರ ಮರಳಿ ಕರೆದುಕೊಂಡು ಬಂದನು. ಹಾವು, ನರಿ, ಕರಡಿಗಳನ್ನು ತನ್ನ ಮಾತುಗಳನ್ನು ಕೇಳುವಂತೆ ಮಾಡಿದನು.(ಅದೇ, ಸಂ.೧೫, ಪ.೨೭-೭೯)

ಹೀಗೆ ಶೈವ-ನಾಥಸಿದ್ಧನಾಗಿ ಗುರುಬಸವ ಮಾಡಿದ ನೂರಾರು ಪವಾಡಗಳನ್ನು ಬಸವಲಿಂಗಕವಿ 'ಕೊಟ್ಟೂರ ಬಸವೇಶ್ವರ ಚಾರಿತ್ರ್ಯ' ಕೃತಿಯಲ್ಲಿ ವಿವರಿಸಿದೆ. ಈ ಪವಾಡಗಳನ್ನಲ್ಲದೆ, ಬೇಡರ ಚಿಕ್ಕಣ್ಣ

ಎಂಬುವನ ಕನಸಿನಲ್ಲಿ ಬಂದು ಗುಮ್ಮಳಾಪುರದ ರುದ್ರಮುನಿಸ್ವಾಮಿಯಿಂದ ಲಿಂಗದೀಕ್ಷೆ ಹೊಂದಲು ಗುರುಬಸವನು ಹೇಳಿದನು. ಈತನ ಅಣತಿಯಂತೆ ಚಿಗರೆಗಳನ್ನು ಬೇಟೆಯಾಡಿ ಹೊಟ್ಟೆಯಲ್ಲಿರುವ ಲಿಂಗಗಳನ್ನು ತೆಗೆದುಕೊಂಡು ಹೋಗಿ ಗುಮ್ಮಳಾಪುರದ ರುದ್ರಮುನಿಸ್ವಾಮಿಯಿಂದ ಬೇಡರ ಚಿಕ್ಕಣ್ಣ ಲಿಂಗದೀಕ್ಷೆ ಹೊಂದಿದನು. ನಂತರದಲ್ಲಿ ಮೋಳಿಗೆ(ಕಟ್ಟಿಗೆ ಆರಿಸುವ) ಕಾಯಕವನ್ನು ಮಾಡುತ್ತಾ ಬದುಕಿದನು. ಒಂದು ದಿನ ಕಟ್ಟಿಗೆ ಸಿಗದೆ ಇರಲು ಗುರುಬಸವನನ್ನು ಸ್ಮರಿಸಿದನು. ಕೂಡಲೇ ಅವನಿಗೆ ಕಟ್ಟಿಗೆಗಳು ದೊರೆತವು.'(ಅದೇ, ಸಂ.೧೬, ಪ.೯-೧೦೪) ಈತನೆ ಒಮ್ಮೆ ಮನೆಗೆ ಬಂದ ಗುರುಬಸವನನ್ನು ಪೂಜಿಸುತ್ತಿರಲು ಆಗ ಬಂದ ನೂರಾರು ಶರಣರಿಗೆ ಪ್ರಸಾದ ನೀಡಬೇಕಾಯಿತು. ಇದ್ದ ಅಲ್ಪ ಆಹಾರಕ್ಕೆ ಗುರುಬಸವ ತನ್ನ ಕೈಮುಟ್ಟಲು ಎಲ್ಲರಿಗೂ ಸಾಕಾಗುವಷ್ಟು ಪ್ರಸಾದ ಸಿದ್ದವಾಯಿತು. ಒಂದು ದಿನ ಕನಸಿನಲ್ಲಿ ಗುರುಬಸವ ಬಂದು 'ನೀನು ಕೈಲಾಸಕ್ಕೆ ಬರಬೇಕು ಎಂದು ಹೇಳಿದನು. ಗುರುಬಸವನ ಕರುಣೆಯಿಂದ ಮೋಳಿಗಯ್ಯನು ಕೈಲಾಸ ಸೇರಿದನು.(ಅದೇ, ಸಂ.೧೭, ಪ.೧೨-೪೫)

ಹುಚ್ಚಸಿದ್ದರಾಮ ಶಿವಯೋಗಿಯೆಂಬ ಶರಣನು ಗುರುಬಸವನನ್ನು ಭೇಟಿ ಮಾಡಲು ಬಂದಾಗ ಆತನಿಗೆ ಆಶೀರ್ವಾದಿಸಿ ಬಾಸೂರಿಗೆ ಹೋಗಿ ಪವಾಡಗಳನ್ನು ತೋರಿಸೆಂದು ಆಶೀರ್ವಾದಿಸಿದನು. ಸಾಲೇಂದ್ರ ಭೈರವನೆಂಬ ಅರಸನ ಮಗನಾದ ಅಯ್ಯಣಾರ್ಯನು ಗುರುಬಸವನನ್ನು ಭೇಟಿ ಮಾಡಲು ಬಂದಾಗ ಆತನಿಗೆ ಆಶೀರ್ವಾದಿಸಿ ಹಿತೋಪದೇಶ ನೀಡಿದನು. ಸಾಲೇಂದ್ರ ಭೈರವನ ಅಪ್ಪಣೆಯಂತೆ ಬಂದ ಬಿಂಗಸೋಮಯ್ಯನಿಗೂ ಆಶೀರ್ವಾದ ನೀಡಿದನು.(ಅದೇ, ಸಂ.೧೮, ಪ.೪-೩೯) ಕೊನೆಗೆ ಮಂತ್ರಗೋಪ್ಯದ ಅರ್ಥವನ್ನು ಹೇಳುತ್ತಿದ್ದ ಚೆನ್ನಂಜೇಶ್ವರನಿಗೆ, ಯಾವಾಗಲೂ ಜೊತೆಯಲ್ಲಿರುತ್ತಿದ್ದ ಕೋಲಶಾಂತನಿಗೆ, ನೆರೆದಿದ್ದ ನೂರಾರು ಶಿವಶರಣರಿಗೆ ಬೋಧನೆ ಮಾಡಿ ಕೈಲಾಸವನ್ನು ಸೇರಿದನು.(ಅದೇ, ಸಂ.೧೯, ಪ.೩-೪೮)

ಗುರುಬಸವನು ನೂರಾರು ಜನರಿಗೆ ರೋಗವಾಸಿ ಮಾಡುವುದು, ಕಣ್ಣುಗಳನ್ನು ಕೊಡುವುದು, ಕೈಕಾಲುಗಳನ್ನು ಸರಿಮಾಡುವುದು, ಇವೆಲ್ಲವೂ ಈತನು ಸಿದ್ದಪರಂಪರೆಯ ಭಾಗವಾದ ರಸಸಿದ್ಧಿಯನ್ನು ಹೊಂದಿದವನೆಂಬುದನ್ನು ಸಾಬೀತುಪಡಿಸುತ್ತವೆ. ಆರಂಭದಲ್ಲಿ ಕೊಟ್ಟೂರಿಗೆ ಬಂದಾಗ ಈತನನ್ನು ಹುಚ್ಚನೆಂದು ತಿಳಿದು ಕಲ್ಲು ಹೊಡೆದರೂ ಈತನಿಗೆ ಏನೊಂದೂ ಆಗದೆ ಇರುವುದನ್ನು ನೋಡಿದರೆ ಈತನು ಕಾಯ(ದೇಹ)ದ ಅಮರತ್ವ ಸಾಧಕನಾಗಿದ್ದನೆಂದು, ಹಠಯೋಗ ಬಲ್ಲವನೆಂದು ತಿಳಿಯುವುದು. 'ಹಿಂದಿನ ಕಾಲದಲ್ಲಿ ಗಿಡಮೂಲಿಕೆಗಳಿಂದ 'ರಸಾಯನ'ವನ್ನು ಸಿದ್ಧಿಸಿಕೊಂಡು ಅದರಿಂದ ಶರೀರದ ನಿರ್ಬಲತೆ, ರೋಗ, ಮೃತ್ಯುಗಳನ್ನು ಗೆಲ್ಲುತ್ತಿದ್ದರಾಗಿ ತಿಳಿದುಬರುತ್ತದೆ. ಬ್ರಹ್ಮಶಿವ ತನ್ನ 'ಸಮಯ ಪರೀಕ್ಷೆ'ಯಲ್ಲಿ ಕುಷ್ಠರೋಗ ನಿವಾರಿಸುವ, ಆಯುಷ್ಯ ಹೆಚ್ಚಿಸುವ, ಕಲ್ಲನ್ನು ಕನಕವಾಗಿಸುವ, ಬಂಜೆಗೆ ಮಕ್ಕಳನ್ನು ಕೊಡುವ, 'ಮದ್ದು' ಅರ್ಥಾತ್ 'ರಸಭಸ್ಮ'ವನ್ನು ಬಲ್ಲ ತಾಂತ್ರಿಕರನ್ನು ಉಲ್ಲೇಖಿಸಿದ್ದಾನೆ'

(ಬಸವಲಿಂಗ ಸೊಪ್ಪಿಮಠ, ೧೯೯೫, ಪು.೨೯೧) ರಸಸಿದ್ದರು ಮತ್ತು ನಾಥಸಿದ್ಧರ ಮಧ್ಯೆ ವಿಶೇಷ ಭೇದವೇನೂ ಇರಲಿಲ್ಲ. ರಸಸಿದ್ದರು ಗಿಡಮೂಲಿಕೆಗಳಿಗೆ ಪ್ರಾಮುಖ್ಯತೆಯನ್ನು ನೀಡಿ ದೇಹದ ಆರೋಗ್ಯ ಕಾಪಾಡಿಕೊಳ್ಳುತ್ತಿದ್ದರೆ, ನಾಥಸಿದ್ಧರು ಗಿಡಮೂಲಿಕೆಗಳ ಉಪಯೋಗದ ಜೊತೆಗೆ ಯೌಗಿಕ ವಿದ್ಯೆಗೆ ಹೆಚ್ಚಿನ ಮಹತ್ವವನ್ನು ನೀಡಿದ್ದರು. ಹೊನ್ನಿನ ಮಳೆಯನ್ನು ಗುರುಬಸವ ಸುರಿಸಿದ ಎನ್ನುವ ಪವಾಡ ಈತ ನಾಥಸಿದ್ಧರಲ್ಲಿನ ಅಷ್ಟಮಹಾಸಿದ್ಧಿಗಳಲ್ಲಿ ಒಂದಾದ 'ಲಕ್ಷಿಮಾ' ಸಿದ್ಧಿಯನ್ನು ಸೂಚಿಸುತ್ತದೆ. ಕಲ್ಲುಗಳು ಬಡಿದರೂ ಏನೂ ಆಗದೆ ಇರುವುದು ಸಿದ್ಧರ ವಜ್ರೋಳಿಯನ್ನು ಸೂಚಿಸುತ್ತದೆ. ಈ ಎಲ್ಲವನ್ನು ಗಮನಿಸಿದರೆ ಕೊಟ್ಟೂರ ಗುರುಬಸವನು ಶೈವ-ನಾಥಸಿದ್ಧನಾಗಿದ್ದನೆಂದೂ ಆ ಮೂಲಕ ಜನರ ಕಷ್ಟ-ಸುಖಗಳಲ್ಲಿ ಪಾಲುದಾರನಾಗಿದ್ದು, ತಿಳಿದುಬರುತ್ತದೆ. ಆ ಮೂಲಕ ಈ ಭಾಗದ ಸಮುದಾಯದ ಜನರ ಆರಾಧ್ಯದೈವವಾಗಿದ್ದಾನೆ.

### ೫.೨.೩. ಕೊಟ್ಟೂರ ಗುರುಬಸವ ಮತ್ತು ಪ್ರಭುತ್ವದೊಟ್ಟಿಗಿನ ಸಂಬಂಧ

ಕೊಟ್ಟೂರ ಗುರುಬಸವನ ಜೀವನವನ್ನು ನೋಡಿದರೆ ನಮಗೆ ಮುಖ್ಯವಾಗಿ ಕಂಡುಬರುವುದು ಈತನೊಟ್ಟಿಗೆ ಇದ್ದ ಪ್ರಭುತ್ವದ ಸಂಬಂಧ. ಗುರುಬಸವನ ಜೀವನದ ಬಹಳ ಮುಖ್ಯವಾದ ಪವಾಡಗಳಂತೆ 'ಕೊಟ್ಟೂರ ಬಸವೇಶ್ವರ ಚಾರಿತ್ರ್ಯ'ದಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿರುವುಗಳೆಲ್ಲವೂ ಪ್ರಭುತ್ವದೊಟ್ಟಿಗಿನ ಈತನ ಸಂಬಂಧಗಳನ್ನು ಕುರಿತೇ ಹೇಳುತ್ತವೆ. ಕ್ರಿ.ಶ.೧೬೦೦ರಲ್ಲಿ ಬರೆಯಲ್ಪಟ್ಟಿರುವ ಸಿದ್ದನಂಜೇಶನ ಕೃತಿ 'ಗುರುರಾಜ ಚಾರಿತ್ರ್ಯ'ದಲ್ಲಿ ಸ್ವಲ್ಪ ಮಟ್ಟಿಗೆ ಮಾತ್ರ ವಿವರಿಸಲ್ಪಟ್ಟಿರುವ ಈತನ ಕಥೆಯಲ್ಲಿಯೂ ದಾದಿನಾಯಕ ಮತ್ತು ಕುತ್‌ಮಶಾಹ ನಿಜಾಮುಲಕನೊಂದಿಗಿನ ಈತನ ಪವಾಡಗಳನ್ನೇ ವಿವರಿಸುತ್ತದೆ. ಗುರುಬಸವನ ಬಗೆಗಿರುವ ಮತ್ತೊಂದು ಪುಟ್ಟ ಕೃತಿ 'ಮುತ್ತಿಗೆಪದ' ಎನ್ನುವುದು ಕೂಡ ಈತನು ಹರಪನಹಳ್ಳಿ ಸೋಮಶೇಖರನ ಪರವಾಗಿ ಮದಕರಿನಾಯಕ, ಸಿದ್ದೋಜಿ ಮತ್ತು ಮುರಾರಿಯೊಂದಿಗೆ ಯುದ್ಧ ಮಾಡುವುದನ್ನೇ ವಿವರಿಸುತ್ತದೆ.

ಯಾಕಾಗಿ ಗುರುಬಸವ ರಾಜಕೀಯ ಅಧಿಕಾರದ ಕೇಂದ್ರ ಶಕ್ತಿಯೊಂದಿಗೆ ಇಷ್ಟೊಂದು ಮುಖಾಮುಖಿಯಾಗುತ್ತಾನೆ? ಅಕ್ಬರ್ ಕೊಟ್ಟಿದ್ದೆಂದು ಜನಸಮುದಾಯ ತೋರಿಸುವ ಕೊಟ್ಟೂರಿನ ಹಿರೇಮಠದಲ್ಲಿರುವ ಖಡ್ಗ ಯಾವುದರ ಸಂಕೇತ? ಸೊಂಡೂರಿನ ಪರವಿ ನಾಯಕ, ಸಾಸಲಭೈರವೇಂದ್ರ, ಬಿದರಿ, ಭಾಗನಗರ, ವಿಜಯನಗರ, ಕರ್ನಾಟಕ ಮಲೆಯಾದಿ ಸಕಲದೇಶದ ರಾಜರು ಈತನನ್ನು ಯಾಕಾಗಿ ಹುಡುಕಿಕೊಂಡು ಬಂದರು. ಇದನ್ನು ಬರೀ ಅರಸರು ಭಕ್ತಿಯನ್ನು ವ್ಯಕ್ತಪಡಿಸಲಿಕ್ಕೆ ಮಾತ್ರ ಕೊಟ್ಟೂರಿಗೆ ಬಂದಿದ್ದರೆಂದು ತಿಳಿಯಬೇಕೆ? ಅಥವಾ ಗುರುಬಸವನ ಪವಾಡಗಳೆಲ್ಲವೂ ಬರೀ ಬೇಡಿಬಂದ ಭಕ್ತರನ್ನು(ಅಥವಾ ಅರಸರನ್ನು) ಉದ್ಧರಿಸುವಷ್ಟಕ್ಕೆ ಮಾತ್ರ ಸೀಮಿತವೆ?

ಈ ತರಹದ ಪ್ರಭುತ್ವದೊಟ್ಟಿಗಿನ ಪವಾಡಗಳು ಬರೀ ಗುರುಬಸವನಿಗಷ್ಟೇ ಸೀಮಿತವಾಗಿಲ್ಲ. ತಿಪ್ಪೇಸ್ವಾಮಿ, ಗೋಣಿಬಸವ ಮತ್ತು ಮದ್ದಾನಸ್ವಾಮಿಯನ್ನೊಳಗೊಂಡ ಎಲ್ಲ ಧಾರ್ಮಿಕ ಸಂತರ ಜೀವನದಲ್ಲಿಯೂ ಕಂಡುಬರುತ್ತದೆ. ಗುರುಬಸವನಂತವರು ಅದೆಷ್ಟೇ ವೈರಾಗ್ಯಶೀಲರಾಗಿರಲಿ ಒಂದು ಪ್ರಭುತ್ವದ ಆಡಳಿತ ವ್ಯವಸ್ಥೆಯಲ್ಲಿ ಬದುಕಿದ್ದರು. ಇದರಿಂದಾಗಿ ಅದಕ್ಕೆ ಪ್ರತಿಕ್ರಿಯಿಸಲೇ ಬೇಕಾಗಿತ್ತು. ಹಾಗಾಗಿ ಪಂಚಗಣಾಧೀಶ್ವರರ ಜೀವನವು ಅಂದಿನ ರಾಜಕೀಯ ಅಧಿಕಾರ ಶಕ್ತಿಕೇಂದ್ರದೊಂದಿಗೆ ಬಿಡಿಸಲಾರದ ನಂಟನ್ನು ಹೊಂದಿದೆ.

ಗುರುಬಸವನು ಮಾಡುವ ಪವಾಡಗಳಲ್ಲಿ ಮುಖ್ಯವಾದುದು ಹರಪನಳ್ಳಿ ಪಾಳೆಗಾರ ದಾದಿನಾಯಕನ ಮೂಲಕ ಕುರುಡನಿಗೆ ಕಣ್ಣುಬರುವಂತೆ ಮಾಡಿದ್ದು, ಈ ಬಗ್ಗೆ ಸಿದ್ದನಂಜೇಶ(ಗುರುರಾಜ ಚಾರಿತ್ರ್ಯ) ಬಸವಲಿಂಗಕವಿ(ಕೊಟ್ಟೂರ ಬಸವೇಶ್ವರ ಚಾರಿತ್ರ್ಯ) ಇಬ್ಬರೂ ವಿವರಿಸಿದ್ದಾರೆ.

ಒಮ್ಮೆ ಎರಡು ಕಣ್ಣುಗಳು ಕಾಣದ ಕುರುಡನೊಬ್ಬ ಗುರುಬಸವನ ಬಳಿ ಬಂದು ಕಣ್ಣುಗಳನ್ನು ಕೊಡು ಎಂದು ಬೇಡಿಕೊಳ್ಳುತ್ತಾನೆ.

> 'ಕರುಣಿಗಳ ದೇವ ಕಂಡೆಲವೊ ಈವೂರಾಳ್ವ
> ದೊರೆ ದಾದಿನಾಯ್ಕ ನೆಡೆಗೆಯ್ಯೆ ಕಣ್ಗಳನೀವ
> ದೊರೆಗಳೇ ನಾವು ಕೊಡುವೊಡೆ ಹೋಗು ಹೋಗೆಂಬ ಬೆಡಗಿನ ನುಡಿಗೆ ಬಂದು.
>
> ಕಣ್ಣನಿತ್ತಪ್ಪ ದಾದಿನಾಯ್ಕ ಹೋಗೆಂದು ಬಸ
> ವಣ್ಣ ನಿನ್ನೆಡೆಗೆ ಕಳುಹಿಸನೆಂದು ನಮಿಸೆ ಮು
> ಕ್ಕಣ್ಣ ಬಸವಯ್ಯನೇ ಬಲ್ಲನಾ ಕಣ್ಗಳಾ ಕೊಡುವವನೆ ತನಮಹಿಮೆಯ
> ಹಣ್ಣಿದುದಕೇನಾಯ್ತು ಕರ್ತ ತಾನೆಂದಂತೆ
> ಕಣ್ಣು ಬಂದಪವೆನಲು ಬಂದವಾ ಮಲ್ಲೇಶ
> ಕಣ್ಣ ಕೊಡಿಸಿದ ತೆರದಿ ಪಾಪಸಾನಿಯ ಕೈಯ್ಯ ಚಕ್ರಪಾಣೀರಂಗಗೆ

(ಗುರುರಾಜಚಾರಿತ್ರ, ಸಂ.೧ಳ, ಪು.೩೭-೩೮)

ಕಣ್ಣುಗಳನ್ನು ಬೇಡಿದ ಕುರುಡನಿಗೆ ತಾನೇ ಕಣ್ಣುಗಳನ್ನು ನೀಡುವ ಬದಲು ಗುರುಬಸವ ದಾದಿನಾಯಕನ ಬಳಿಗೆ ಕಳುಹಿಸಿ ಆತನ ಮೂಲಕ ಕಣ್ಣುಗಳು ಕಾಣುವಂತೆ ಮಾಡುತ್ತಾನೆ.

ಯಾಕಾಗಿ ಗುರುಬಸವ ತಾನೇ ನೇರವಾಗಿ ಕಣ್ಣುಗಳನ್ನು ನೀಡದೆ ದಾದಿನಾಯಕನ ಮೂಲಕ ನೀಡಿದ? ಯಾವಾಗಲೂ ಧರ್ಮ ಎನ್ನುವುದು ಪ್ರಭುತ್ವದಿಂದ ಪ್ರತ್ಯೇಕವಲ್ಲ. ಧಾರ್ಮಿಕ ಸಂತರು ಪ್ರಭುತ್ವಕ್ಕೆ ಮಾನ್ಯತೆಯನ್ನು ಸೃಷ್ಟಿಸುವ ಕೆಲಸವನ್ನು ತಮ್ಮ ಪವಾಡಗಳ ಮೂಲಕ ಮಾಡುತ್ತಿರುತ್ತಾರೆ. ಧರ್ಮವು

ರಾಜನಿಗೆ ಅಲೌಕಿಕ ಶಕ್ತಿಯಿದೆ ಎನ್ನುವ ಮೂಲಕ ರಾಜಾಡಳಿತಕ್ಕೆ ಅನುಕೂಲಕರವಾದ ದೃಷ್ಟಿಕೋನವನ್ನು ರೂಪಿಸುತ್ತದೆ. ಅದೇ ಹೊತ್ತಲ್ಲಿ ರಾಜಪ್ರಭುತ್ವವವು ಧಾರ್ಮಿಕ ಸಂತರ ಅಲೌಕಿಕ ಶಕ್ತಿಯನ್ನು ಮನ್ನಿಸಿ ಅವರಿಗೆ ದಾನ-ದತ್ತಿಗಳನ್ನು ನೀಡುತ್ತದೆ.

ವಿಜಯನಗರ ಪತನವಾದ ಸಂದರ್ಭದಲ್ಲಿದ್ದ ಹರಪನಳ್ಳಿ ಪಾಳೇಗಾರನಾದ ದಾದಿನಾಯಕನಿಗೆ(೧೫೬೦) ತನ್ನ ಅಧೀನದ ಪ್ರದೇಶದಲ್ಲಿನ ಅರಾಜಕತೆಯನ್ನು ಹೋಗಲಾಡಿಸಿ ಸುವ್ಯವಸ್ಥಿತ ಆಡಳಿತವನ್ನು ರೂಪಿಸಬೇಕಿತ್ತು. ಗುರುಬಸವನು ದಾದಿನಾಯಕನಿಗೆ ಅಲೌಕಿಕ ಶಕ್ತಿಯಿದೆ ಎನ್ನುವ ಮೂಲಕ ರಾಜ್ಯಾಡಳಿತಕ್ಕೆ ಬೇಕಾದ ದೃಷ್ಟಿಕೋನವನ್ನು ರೂಪಿಸಿದರೆ ಗುರುಬಸವನಿಗೆ 'ನಾನು ತಮ್ಮ ಬಾಗಿಲ ಕಾಯುವ ಸೇವಕನು ನನ್ನ ವಂಶಪಾರಂಪರ್ಯ ತಾವೇ ನಮ್ಮ ಕುಲದೈವವಾಗಿ ಸಂರಕ್ಷಿಸಬೇಕು'(ನಿಮ್ಮ ರಾಜಮಂದಿರವ ಕಾದಿರ್ಪ ಕಿಂಕರನೆನ್ನ ವಂಶಪಾರಂಪರ್ಯದೊಳು ತ್ರೈಜಗನ್ನುತ ನೀನೆ ವಿಭುವಾಗಿ ಪಾಲಿಸುವುದು) ಎಂದು ದಾದಿನಾಯಕ ಬೇಡಿಕೊಂಡು ಸಕಲ ಅಷ್ಟೈಶ್ವರ್ಯವನ್ನೂ ಆತನಿಗೆ ಒಪ್ಪಿಸುತ್ತಾನೆ. ಈ ರೀತಿ ಗುರುಬಸವನಿಗೆ ಭಕ್ತಿಯನ್ನು ತೋರುವುದು ಬರೀ ದಾದಿಯನಾಯಕನಿಗೆ ಮಾತ್ರ ಸೀಮಿತವಾಗಿಲ್ಲ. ಡಿಲ್ಲಿಯ ಅಕಬರ್ ಕೂಡ ಕೊಟ್ಟೂರಿಗೆ ಬಂದು ಏಳುದಿನಗಳವರೆಗೆ ಕಾದು ಎಂಟನೇ ದಿನ ಗುರುಬಸವನನ್ನು ಕಂಡು ಧನ-ಕನಕಾದಿಗಳನ್ನು ಅರ್ಪಿಸಿ ಆಶೀರ್ವಾದವನ್ನು ಪಡೆಯುತ್ತಾನೆ. ಅಕ್ಬರ್ ಕೊಟ್ಟೂರಿಗೆ ಬಂದು ಹೋದ ನಂತರ 'ಧರಣಿಗತಿಶಯಮಾದ ಬಿದರಿ, ಭಾಗಾನಗರ ವರ ವಿಜಯನಗರಂಗಳಂ ಪಾಲಿಸುವ ನರೇಶ್ವರರತುಳಿ ಕರ್ನಾಟದೇಶ ಮಲದೇಶ ರಸದ ಜನಪದವಾದಿಯಾದ ಧರೆಯನಾಳ್ ವರಸರ್' ಬಂದು ಗುರುಬಸವ ಆಶೀರ್ವಾದವನ್ನು ಪಡೆಯುತ್ತಾರೆ. ಸಾಲೇಂದ್ರ ಭೈರವ ತನ್ನ ಮಗ ಅಯ್ಯಣಾರ್ಯನನ್ನು ಈತನ ಕೃಪೆಗಾಗಿ ಕಳುಹಿಸಿಕೊಡುತ್ತಾನೆ.

ರಾಜಪ್ರಭುತ್ವವವು ತಾನಾಗಿಯೇ ಹುಡುಕಿಕೊಂಡು ಬಂದು ಆಶೀರ್ವಾದ ಪಡೆಯಲು ಮುಖ್ಯ ಗುರುಬಸವ ಆ ಹೊತ್ತಿನ ಪ್ರಬಲ ಧಾರ್ಮಿಕ ಪುರುಷನಾಗಿರುವುದು ಒಂದು ಕಾರಣವಾದರೆ, ಈತನಿಗೆ ತಮ್ಮ ಲಾಂಛನ, ಛತ್ರಿ, ಬಿರುದಾವಳಿಗಳನ್ನೆಲ್ಲಾ ಅರ್ಪಿಸಿ ಪರಮ ಭಕ್ತನಾಗುವ ಮೂಲಕ ಈತನನ್ನು ಅನುಸರಿಸುವ ಆಯಾ ಜಾತಿ ಇಲ್ಲವೇ ಒಟ್ಟು ಸಮುದಾಯವನ್ನು ತಮ್ಮ ಪರವಾಗಿಸಿಕೊಳ್ಳುವ ಪ್ರಯತ್ನವನ್ನು ರಾಜರು ಮಾಡುತ್ತಾರೆ.

ಸಂತರನ್ನು ಜನಸಮುದಾಯ ಅನುಸರಿಸಲು ಇರುವ ಮುಖ್ಯ ಕಾರಣವೆಂದರೆ ಇವರಲ್ಲಿರುವ ರೋಗ ನಿವಾರಕ ಶಕ್ತಿ. ಗುರುಬಸವನ ಜೀವನವನ್ನು ಗಮನಿಸಿದರೆ ಈತ ರಸಸಿದ್ಧಿಯನ್ನು ಹೊಂದಿದ ಶೈವಸಿದ್ಧ ಪರಂಪರೆಯವನೆಂಬುದು ತಿಳಿದುಬರುತ್ತದೆ. ಮತಿಘಟ್ಟ ಎಂಬ ಊರಲ್ಲಿ ವಡ್ಡ ಸಮಾಜದ ಭಕ್ತನ ಉಗ್ರ ಜ್ವರವನ್ನು ಹೋಗಲಾಡಿಸಿದ್ದು, ಕಂಚಿಗೆರೆಯ ತಿಮ್ಮಣ್ಣಿಗೆ ಬಂದಿದ್ದ ಜ್ವರ ನಿರ್ಮೂಲನೆ ಮಾಡಿದ್ದು, ಕುಷ್ಠರೋಗಿಯೊಬ್ಬನಿಗೆ ರೋಗ ವಾಸಿಮಾಡಿದ್ದುದು, ಲಿಂಗಣ್ಣ ಎಂಬ ವ್ಯಕ್ತಿಗೆ ಹಾವು ಕಡಿದಾಗ

ಬದುಕಿಸಿದ್ದು, ಚೆನ್ನಮಲ್ಲಯ್ಯನ ಹೆಂಡತಿಗೆ ಬಂದಿದ್ದ ಗಂಡಮಾಲೆ ರೋಗವನ್ನು ವಾಸಿಮಾಡಿದುದು. ಮಲ್ಲಸೆಟ್ಟಿಯೆಂಬ ಭಕ್ತನಿಗೆ ೧೨ ವರ್ಷಗಳಿಂದ ಕಾಡುತ್ತಿದ್ದ ತಲೆ ನೋವನ್ನು ಇಲ್ಲದಂತೆ ಮಾಡಿದುದು. ಮಕ್ಕಳಿಲ್ಲದವರಿಗೆ ಮಕ್ಕಳನ್ನು ಕರುಣಿಸುವುದು, ಶಿವಭಕ್ತನ ಮನೆಯಲ್ಲಿ ಹೊನ್ನಿನ ಮಳೆ ಸುರಿಸುವುದು, ಸತ್ತ ಪ್ರಾಣಿಗಳನ್ನು ಬದುಕಿಸುವುದು ಇವೆಲ್ಲವೂ ಗುರುಬಸವನು ರಸಸಿದ್ಧನಾಗಿದ್ದನೆಂದೂ ಇದರ ಮೂಲಕ ಜನರ ರೋಗಗಳನ್ನು ನಿವಾರಿಸುತ್ತಿದ್ದನೆಂಬುದು ಸ್ಪಷ್ಟವಾಗುತ್ತದೆ.

ಜನಸಮುದಾಯದಿಂದ ಅಲೌಕಿಕ ಎನ್ನಿಸಿಕೊಳ್ಳುವ ಈ ಶಕ್ತಿಯು ಗುರುಬಸವನಿಗೆ ಅಪಾರವಾದ ಜನಬೆಂಬಲವನ್ನು ಅನುಯಾಯಿಗಳಾಗುವಂತೆ ಮಾಡಿತ್ತು. ಸೊಂಡೂರಿನ ಅರಸ ಪರವಿನಾಯಕ ಮತ್ತು ಹರಪನಹಳ್ಳಿಯ ದಾದಿನಾಯಕನ ಮಗ ರಂಗರಾಜನಿಗೆ ಕೂಡ ಗುರುಬಸವ ಮಕ್ಕಳನ್ನು ಕರುಣಿಸಿದ್ದನು. ಅದಕ್ಕಾಗಿ ಈ ಅರಸರು ಕಪ್ಪಕಾಣಿಕೆಗಳನ್ನು ಗುರುಬಸವನಿಗೆ ಸಲ್ಲಿಸಿದ್ದರು. ಒಂದು ಕಡೆಯಿಂದ ಅಪಾರವಾಗಿ ಹರಿದು ಬರುತ್ತಿದ್ದ ಕಪ್ಪಕಾಣಿಕೆ, ಬಿರುದಾವಳಿ, ಲಾಂಛನ-ಛತ್ರಿಗಳ ಮೂಲಕ ಖಾಸಗೀ ಆಸ್ತಿಯನ್ನು ಸಂಗ್ರಹಿಸುತ್ತಿದ್ದರೆ ಇನ್ನೊಂದು ಕಡೆಯಿಂದ ಜನಸಮುದಾಯಗಳನ್ನು ಪವಾಡಗಳ ಮೂಲಕ ತಮ್ಮ ಅನುಯಾಯಿಗಳನ್ನಾಗಿ ಸಂಘಟಿಸುವ ಮೂಲಕ ಗುರುಬಸವನಂತಹ ಧಾರ್ಮಿಕ ಪುರುಷರು ರಾಜಪ್ರಭುತ್ವಕ್ಕೆ ಸಮಾನವಾದ ಪರ್ಯಾಯ ಅಧಿಕಾರ ಶಕ್ತಿಯನ್ನು ಹೊಂದಿದ್ದರು. ಎಷ್ಟೋ ಸಲ ಸಮುದಾಯಗಳ ಸಾಮಾಜಿಕ ಜೀವನವನ್ನು ನಿರ್ದೇಶಿಸುವ, ತಪ್ಪಿದಲ್ಲಿ ಶಿಕ್ಷಿಸುವ ಕಾರ್ಯವನ್ನು ರಾಜ್ಯಾಡಳಿತಕ್ಕಿಂತ ಧಾರ್ಮಿಕ ಸಂತರು ಇಲ್ಲವೇ ಮಠಗಳೇ ಮಾಡುತ್ತಿದ್ದವು.

ಸಂತರು ಬದುಕಿರುವಾಗಷ್ಟೇ ಪ್ರಭುತ್ವದೊಂದಿಗೆ ಸಂಬಂಧ ಹೊಂದಿರುವುದಿಲ್ಲ ಸತ್ತ ಮೇಲೂ ಅವರ ಅದೆಷ್ಟೋ ಪವಾಡಗಳು ಪ್ರಭುತ್ವದೊಂದಿಗೆ ತಳಕು ಹಾಕಿಕೊಂಡಿರುತ್ತವೆ. ತಿಪ್ಪೇಸ್ವಾಮಿ ಸಮಾಧಿಗೆ ಕೈಮುಗಿವ ಹೈದರಾಲಿ 'ಗಂಡು ಮಗು ಜನಿಸಿದರೆ ನಿನ್ನ ಹೆಸರಿಡುವೆ' ಎಂದು ಬೇಡಿಕೊಳ್ಳುವುದು ಸತ್ತ ಸಂತನೊಂದಿಗೆ ಪ್ರಭುತ್ವದ ಸಂವಾದವನ್ನು ಸೂಚಿಸುತ್ತದೆ. ಹಾಗೆ ನೋಡಿದರೆ ಸಮುದಾಯಗಳ ಪ್ರಕಾರ ಧಾರ್ಮಿಕ ಸಂತರಿಗೆ ಸಾವೇ ಇಲ್ಲ. ಸಮಾಧಿಯಾದ ನಂತರವೂ ಬೇಡಿದವರಿಗೆ ಪ್ರತ್ಯಕ್ಷನಾಗಿ ಸಹಾಯ ಮಾಡುವುದು ಸಾಮಾನ್ಯವಾಗಿ ಎಲ್ಲ ಸಂತರ ಚರಿತ್ರೆಗಳಲ್ಲೂ ಕಂಡುಬರುತ್ತದೆ.

ಕೊಟ್ಟೂರ ಗುರುಬಸವನು ಜೀವಂತ ಸಮಾಧಿಯಾದ ನಂತರದಲ್ಲಿ ಹರಪನಹಳ್ಳಿಯ ಸೋಮಶೇಖರನಾಯಕನ ಮೇಲೆ ಚಿತ್ರದುರ್ಗದ ಮದಕರಿನಾಯಕ ಮತ್ತು ಗುತ್ತಿಯ ಸಿದ್ದೋಜಿ ಮುರಾರಿಯವರು ಯುದ್ಧಕ್ಕೆ ಬರುತ್ತಾರೆ. ಆಗ ಸೋಮಶೇಖರ ನಾಯಕ ಗೆಲುವಿಗಾಗಿ ಗುರುಬಸವನಲ್ಲಿ ಬೇಡಿಕೊಳ್ಳುತ್ತಾನೆ. 'ಕರಿಗೊರಲ ತ್ರಿಶೂಲ ಉರಿಗಣ್ಣು ತಲೆಬೋಳು ಕಾವಿ ಕಷಾಂಬರವನುಟ್ಟು ಗುರುಬಸವ ಲಿಂಗ ತಾ ಹುಲಿಯ ವಾಹನವೇರಿ ಕರದಲ್ಲಿ ಮಿಡಿಯ ನಾಗರಬೆತ್ತ ಪಿಡಿಕೊಂಡು'

(ಎ.ಎಂ.ಮಂಜುನಾಥ ಶಾಸ್ತ್ರಿ(ಸಂ), ೧೯೮೫, ಪು.೮) ಖುದ್ದು ತಾನೇ ಯುದ್ಧಕ್ಕೆ ಬಂದು ಸೋಮಶೇಖರನ ಶತೃಗಳನ್ನೆಲ್ಲಾ ಸೋಲಿಸುತ್ತಾನೆ. ಈ ಪವಾಡವನ್ನು ಗಮನಿಸಿದರೆ ಗುರುಬಸವ ಹರಪನಳ್ಳಿ ಪಾಳೇಗಾರರಿಗೆ ಶ್ರೀರಕ್ಷೆಯಾಗಿದ್ದನೆಂದು ಮತ್ತು ಆ ರಾಜರು ಕಷ್ಟ ಬಂದಾಗಲೆಲ್ಲ ಗುರುಬಸವನಿಗೆ ಮೊರೆ ಹೋಗುತ್ತಿದ್ದರೆಂಬುದು ಸ್ಪಷ್ಟ. 'ಜನ ಸತ್ತವನನ್ನು ಮತ್ತೆ ಬದುಕಿಸಿ ತಮ್ಮೊಳಗೆ ಚೈತನ್ಯವನ್ನು ಬೆಳೆಸಿ ಕೊಳ್ಳುತ್ತಾರೆ. ಹುತಾತ್ಮರ ಚೈತನ್ಯಕ್ಕೆ ಬದುಕಿರುವವರಲ್ಲಿ ಸುಪ್ತಶಕ್ತಿಯಾಗಿ ಮುಂದುವರಿಯುವ ಪಠಮಾರಿ ಗುಣವಿದೆ.'(ರಹಮತ್ ತರೀಕೆರೆ, ೨೦೦೧, ಪು.೧೪೨)

ಗುರುಬಸವನ ಜೀವನ ಆ ಹೊತ್ತಿನ ಪ್ರಭುತ್ವದೊಂದಿಗೆ ಸಂಕೀರ್ಣ ಸಂಬಂಧವನ್ನು ಹೊಂದಿದೆ. ತಿಪ್ಪೇಸ್ವಾಮಿ ಜೀವನವೂ ಪ್ರಭುತ್ವದೊಂದಿಗೆ ನಂಟನ್ನು ಹೊಂದಿದೆ. ಆದರೆ ಅದು ತನ್ನ ಅನುಯಾಯಿಗಳಾದ ನಾಯಕ ಜನಾಂಗದ ಬೇಟೆಸಂಸ್ಕೃತಿಯನ್ನು ಕೃಷಿಸಂಸ್ಕೃತಿಯನ್ನಾಗಿ ಪರಿವರ್ತಿಸುವ, ಅಲೆಮಾರಿ ಜನಾಂಗವನ್ನು ಒಂದೆಡೆ ನೆಲೆನಿಲ್ಲಿಸುವ ಪ್ರಯತ್ನಕ್ಕೆ ಪೂರಕವಾಗಿದೆ. ಕೊಟ್ಟೂರ ಗುರುಬಸವನಿಗೆ ಹೆಚ್ಚಾಗಿ ನಡೆದುಕೊಳ್ಳುವವರು ಸಾಮಾಜಿಕವಾಗಿ ಉನ್ನತವರ್ಗ ಎನಿಸಿಕೊಂಡ ಲಿಂಗಾಯತ ಸಮುದಾಯದವರು. ಈಗಾಗಲೇ ಇವರು ಕೃಷಿಸಂಸ್ಕೃತಿಯನ್ನು ಅನುಸರಿಸುತ್ತಾ ಒಂದೆಡೆ ನೆಲೆನಿಂತವರಾಗಿದ್ದಾರೆ. ಹಾಗಾಗಿ ಇಂತಹ ಸಮುದಾಯದ ಮಧ್ಯ ಬದುಕಿದ್ದ ಗುರುಬಸವನ ಜೀವನವು ರಾಜ್ಯಾಡಳಿತಕ್ಕೆ ಬೇಕಾದ ದೃಷ್ಟಿಕೋನವನ್ನು ರೂಪಿಸುವ ಪ್ರಯತ್ನವನ್ನು ಮಾಡುತ್ತಾ ಸಾಗಿದೆ. ಅದೇ ಹೊತ್ತಲ್ಲಿ ತನ್ನ ಪಂಥ ಅಥವಾ ಪ್ರಭಾವ ಸಮಾಜದಲ್ಲಿ ಅಧಿಕೃತವಾಗಿ ಪ್ರಬಲವಾಗಿ ರೂಪು ತಳೆಯಲು ಪ್ರಭುತ್ವ ಹೇಗೆ ಸಹಾಯಕವಾಗಬಲ್ಲದು ಎನ್ನುವ ಹುಡುಕಾಟದಲ್ಲಿ ರೂಪುಗೊಂಡುದುದಾಗಿದೆ.

## ೫.೩. ಕೂಲಹಳ್ಳಿ ಮದ್ದಾನಸ್ವಾಮಿ

ಪಂಚಗಣಾಧೀಶ್ವರರಲ್ಲಿಯೇ ಅತ್ಯಂತ ವೈಶಿಷ್ಟ್ಯ ಪೂರ್ಣನಾಗಿರುವವನೆಂದರೆ ಕೂಲಹಳ್ಳಿ ಮದ್ದಾನಸ್ವಾಮಿ. ಐವರು ಸಂತರಲ್ಲಿ ಮದುವೆಯಾಗಿ ಗೋಣಿಬಸವನೆಂಬ ಮಗನನ್ನು ಪಡೆಯುವ ಮೂಲಕ ವಿಶೇಷ ಎನಿಸಿಕೊಂಡಿದ್ದಾನೆ. ಈಗಲೂ ಇರುವ ಕೂಲಹಳ್ಳಿಯ ಮದ್ದಾನಸ್ವಾಮಿ ಮಠ ಕೋಟೆಯಾಕಾರದಲ್ಲಿದ್ದು ಒಳಗಡೆ ಕೆಳಭಾಗದಲ್ಲಿ ಸುರಂಗಮಾರ್ಗಗಳು ಇವೆ. ಇದೆಲ್ಲ ಮದ್ದಾನಸ್ವಾಮಿ ಜೀವನದ ಬಗೆಗೆ ಕುತೂಹಲವನ್ನುಂಟು ಮಾಡುತ್ತವೆ. ಸಿದ್ದನಂಜೇಶನ 'ಗುರುರಾಜಚಾರಿತ್ರ' ಕೃತಿಯು ಮದ್ದಾನಸ್ವಾಮಿ ಕೊಟ್ಟೂರ ಗುರುಬಸವನೊಂದಿಗೆ ಇದ್ದನೆಂದು ಹೇಳುತ್ತದೆ.

> 'ಬಸವಯ್ಯ ಸುಸಮಾಧಿಯಲ್ಲಡಗೆ ನೆರೆದಿದ್ದ
> ವಸಮ ಜಂಗಮವೃಂದ ಮಂದೈಸಿ ಪರ್ವಮುಮ
> ನೆಸಗೆ ಮದ್ದಾನೆಯಾ ಸಿದ್ದಲಿಂಗಯ್ಯನೆಂದೆಂಬ ಘನಮಹಿಮ ಬಂದು

ಒಸೆದು ಶಿವಮೂರ್ತಿಗಳ ತರ್ಕೈಸಿಕೊಂಡು ತಾಂ
ರಸೆಯಲ್ಲಿ ತಾಯಿಲ್ಲದರ್ಭಕ್ತರ ತೆರನಾಯ್ತು
ವುಸಿಕನೇತಕ್ಕೆ ನಾವಿಲ್ಲಿರ್ಪೆ ಪೋಪ ನಡೆಯೆಂದವರ ಕರೆದುಕೊಂಡು'

(ಗುರುರಾಜಚಾರಿತ್ರ, ಸಂ.೧೪, ಪ.೫೫)

ಈ ಮೇಲಿನಂತೆ ಹೇಳುವುದನ್ನು ನೋಡಿದರೆ ಗುರುಬಸವನ ಜೊತೆಯಲ್ಲಿದ್ದು ಅವನು ಸಮಾಧಿಯಾದನಂತರ ಹಲವಾರು ಶರಣರೊಡಗೂಡಿ ಕೊಟ್ಟೂರಿನಿಂದ ಹೊರಟು ಹೋಗಿದ್ದಾನೆಂದು ತಿಳಿಯಬಹುದು. ಬಸವಲಿಂಗಕವಿಯ 'ಕೊಟ್ಟೂರಬಸವೇಶ್ವರಚಾರಿತ್ರ್ಯ' ಕೂಡ ಗುರುಬಸವನನ್ನು ಹುಡುಕಿಕೊಂಡು ಬಂದ ಹಲವಾರು ಶರಣರಲ್ಲಿ ಮದ್ದಾನೆಯಸಿದ್ದಪತಿ ಎಂಬ ವ್ಯಕ್ತಿಯನ್ನು ಹೇಳುತ್ತದೆ.(ಸಂ.೯, ಪ.೨೯) ಇಲ್ಲಿ ಸೂಚಿಸಿರುವ ಮದ್ದಾನೆಯಸಿದ್ದಪತಿಯೇ, ಮದ್ದಾನೆಯ ಸಿದ್ದಲಿಂಗಯ್ಯ ಅಥವಾ ಮದ್ದಾನಸ್ವಾಮಿ ಎಂದು ಊಹಿಸಬಹುದಾಗಿದೆ. ಕೊಟ್ಟೂರಿನಿಂದ ಮದ್ದಾನಸ್ವಾಮಿ ಎಲ್ಲಿಗೆ ಹೋದ? ಈ ಬಗ್ಗೆ ಗೊಂದಲಗಳಿವೆ. ಸಿದ್ದನಂಜೇಶನ ಪ್ರಕಾರ

ಪೊಲದೊಳೆಲ್ಲರು ಸಹಜ ದಾರಿಯೊಳು ಪೋಗುತಿರೆ
ಹೊಲಬುದಪ್ಪಿದಿರಿ ಯಿದು ದಾರಿಯಲ್ಲಂ ಬನ್ನಿ
ಸುಲುಭವಹ ಪಥವಿದುಂ ನೋಡಿಯೆಂದೊಂದು ಪೆರ್ ಗುಂಡಡರಿ ಬಯಲಾಗಲು
ಉಲಿದುದಾಕಾಶದೊಳು ದೇವಗಣ ಜಯ ಎಂದು
ನಲಿದು ಮಾಡುವ ತೀರ್ಥ ಮಾಹೇಶ್ವರ ಪ್ರತತಿ
ಭಲರೆ ಮದ್ದಾನೆಯಸಿದ್ದಲಿಂಗಯ್ಯ ಶಶಿಜೂಟ ಹೃತ್‌ಶಯ್ಯ

(ಗುರುರಾಜಚಾರಿತ್ರ, ಸಂ.೧೪, ಪ.೫೬)

ಎಂದು ಹೇಳಿರುವುದನ್ನು ನೋಡಿದರೆ ಮದ್ದಾನಸ್ವಾಮಿ ದೊಡ್ಡಗುಂಡು ಇರುವ ಸ್ಥಳದಲ್ಲಿ ಐಕ್ಯವಾದನೆಂದು ತಿಳಿಯಬಹುದು. ಈಗ ಕೂಲಹಳ್ಳಿಯಲ್ಲಿ ತೋರಿಸುವ ಮದ್ದಾನಸ್ವಾಮಿಯು ಸಮಾಧಿಯಾದ ಗದ್ದುಗೆಯನ್ನು ನೋಡಿದರೆ ಅದು ಆಧುನಿಕವಾಗಿ ಕಟ್ಟಿದಂತಿದೆ. ಗೋಣಿಬಸವ ಕಾವ್ಯ ಇದನ್ನೇ ಮದ್ದಾನಸ್ವಾಮಿ ಸಮಾಧಿಸ್ಥಳ ಎನ್ನುತ್ತದೆ. ದೊಡ್ಡ ಗುಂಡು(ಪೆರ್ ಗುಂಡಡರಿ) ಇರುವ ಸ್ಥಳ ಹತ್ತಿರದಲ್ಲಿಯೇ ಇರುವ ಬೆಟ್ಟವಾಗಿರಬಹುದೆ?

ಇನ್ನು ರಾಯದುರ್ಗದ ಸಮೀಪದಲ್ಲಿರುವ ಹುಡೆಗೋಳ್ ಎನ್ನುವ ಊರಿನಲ್ಲಿ 'ಮದ್ದಾನಸ್ವಾಮಿ ಜೀವಂತ ಸಮಾಧಿಸ್ಥಳ' ಎಂದು ಬೋರ್ಡ್ ಹಾಕಿರುವ ದೊಡ್ಡದೊಂದು ಮಠವಿದೆ. ಪ್ರತಿವರ್ಷ ಶಿವರಾತ್ರಿಯಂದು ಇಲ್ಲಿ ಜಾತ್ರೆ ನಡೆಯುತ್ತದೆ. ಈ ಮಠವು ಕೂಲಹಳ್ಳಿ ಮಠದಂತೆಯೇ ಇದೆ. ಮಠದ ಆವರಣದಲ್ಲಿ ಶಿವಲಿಂಗವಿದೆ. 'ಮದ್ದಾನಸ್ವಾಮಿ ಪಂಚಗಣಾಧೀಶ್ವರಲ್ಲಿ ಒಬ್ಬನಾಗಿದ್ದು, ಇಲ್ಲಿ ಬಂದು

ಐಕ್ಯನಾದನೆಂದು ಹೇಳಲಾಗುತ್ತದೆ.'(ಜಯಸುಮನ್, ೧೯೮೭, ಪು.೬೫) ಈ ಎರಡು ಮಠಗಳಲ್ಲದೆ, ಕುಷ್ಟಗಿ(ಕೊಪ್ಪಳ,ಜಿ) ಎಂಬ ಊರಿನಲ್ಲಿರುವ ಕರಿಬಸವಾರ್ಯನ ಮಠದ ಆವರಣದಲ್ಲಿ ಮದ್ದಾನಸ್ವಾಮಿ ಜೀವಂತ ಸಮಾಧಿಯಾದ ಸ್ಥಳವೆಂದು ಹೇಳಲಾಗುವ ಮಠವೊಂದಿದೆ. ಕುಷ್ಟಗಿಯ ಕರಿಬಸವನೇ ಮದ್ದಾನಸ್ವಾಮಿ ಎಂದು ಅಲ್ಲಿನ ಜನ ಹೇಳುತ್ತಾರೆ. ಆದರೆ ಬಾಲಬಸವರ ಗೋಣಿಬಸವನ ಕಾವ್ಯವನ್ನಾಗಲಿ, ಇವತ್ತು ಮದ್ದಾನಸ್ವಾಮಿಯ ಸುತ್ತ ಇರುವ ಆಚರಣೆಗಳನ್ನಾಗಲಿ ಗಮನಿಸಿದರೆ ಕೂಲಹಳ್ಳಿಯ ಮಠವೇ ಮದ್ದಾನಸ್ವಾಮಿ ಜೀವಂತ ಸಮಾಧಿಯಾದ ಸ್ಥಳವಿರಬೇಕು ಎಂದು ಹೇಳಬಹುದು. ಎಲ್ಲರೂ ತಮ್ಮದೇ ಜೀವಂತ ಸಮಾಧಿಯಾದ ಸ್ಥಳ ಎಂದು ಹೇಳಿಕೊಳ್ಳಲು ಕಾರಣ ಆ ಸಂತನ ಹೆಸರಿನಲ್ಲಿ ಹೆಚ್ಚು ಭಕ್ತಾದಿ ಗಳನ್ನು ಆಕರ್ಷಿಸುವ ಹಾಗು ದಾನ-ದತ್ತಿಗಳನ್ನು ಪಡೆಯುವ ಲೌಕಿಕ ಆಸೆಯು ಕಾರಣವಾಗಿರಬೇಕು.

ಗೋಣಿಬಸವನ ಕಾವ್ಯದ ಪ್ರಕಾರ ಮದ್ದಾನಸ್ವಾಮಿ ಐವರು ಶರಣರೊಡಗೂಡಿ ಕುಪ್ಪಿನಕೇರಿ ಹನುಮಂತನಿಗೆ ಲಿಂಗದೀಕ್ಷೆ ನೀಡಿ ಕೊಟ್ಟೂರಿನ ಮೂಲಕ ಬಾಗಳಿಗೆ ಬರುತ್ತಾನೆ. ಬಾಗಳಿಯಲ್ಲಿ ಒಂದು ದಿನ ಪೂಜೆಗೆಂದು ಹೂವು ತರಲು ಶೃಂಗಾರ ತೋಟಕ್ಕೆ ಹೋದಾಗ ಅಲ್ಲಿ ಕನಕವ್ವನನ್ನು ಬೇಟಿಯಾಗುತ್ತಾನೆ. ಈತನ ನೇತ್ರದೃಷ್ಟಿಯಿಂದ ಕನಕವ್ವನಲ್ಲಿ ಗೋಣಿಬಸವನೆಂಬ ಮಗುವಿನ ಹುಟ್ಟಿಗೆ ಕಾರಣನಾಗುತ್ತಾನೆ. ಇದರಿಂದಾಗಿ ಅಲ್ಲಿದ್ದ ಉಳಿದ ನಾಲ್ವರು ಶರಣರು ಚದುರಿ ಈಗಿರುವ ಸ್ಥಳಗಳಿಗೆ ಹೋಗುತ್ತಾರೆ. ಸ್ವಲ್ಪ ದಿನಗಳಲ್ಲಿಯೇ ಗೋಣಿಬಸವನು ಕನಕವ್ವನ ಗರ್ಭದಲ್ಲಿ ಹುಟ್ಟುತ್ತಾನೆ. ಗೋಣಿಬಸವನು ಒಂದು ವರ್ಷದ ಮಗುವಾಗಿದ್ದಾಗ ಮದ್ದಾನಸ್ವಾಮಿ ಜೀವಸಮಾಧಿಯಾದನು.

ಜೀವ ಸಮಾಧಿಯಾಗುವ ಸಂದರ್ಭದಲ್ಲಿ 'ತನ್ನ ಧರ್ಮಪತ್ನಿಯ ಕೈಯಲಿದ್ದ ಮಗುವನ್ನು ಎತ್ತಿಕೊಂಡು ಮುದ್ದಾಡಿ ತನ್ನ ಕೈಯಲಿದ್ದ ಉಳುವಿನ ಬೆತ್ತವನ್ನು ಮಗುವಿನ ಕೈಯಲ್ಲಿಟ್ಟು, ಕಂದಾ ನೀನು ಮುಂದೆ ಯಾವ ಊರಿನಲ್ಲಿಯೇ ಆಗಲಿ ಈ ಉಳುವಿನ ಬೆತ್ತದ ಮಹಿಮೆಯಿಂದ ನಿನ್ನ ಕಾರ್ಯಗಳು ಸುಗಮವಾಗಿ ನೆರವೇರುತ್ತವೆ ಎಂದು ತನ್ನ ಹಸ್ತದಿಂದ ಮಗುವಿನ ಮೈಮೇಲೆ ಕೈಯಾಡಿಸಿ ಆಶೀರ್ವಾದಿಸಿ ಕೋಟೆಯಂತಿರುವ ದೇವಾಲಯದಲ್ಲಿ ಐಕ್ಯನಾದನು.'(ಈಡಿಗರ ಚಂದ್ರಪ್ಪ, ೧೯೯೦, ಪು.೨೮) ಕೊಟ್ಟೂರ ಗುರುಬಸವನ ಕಾಲದವನಾದ ಈತನು ೧೬ನೇ ಶತಮಾನದಲ್ಲಿ ಬದುಕಿದ್ದನೆಂದು ಊಹಿಸಬಹುದಾಗಿದೆ.

ಮದ್ದಾನಸ್ವಾಮಿಯ ಮಗನಾದ ಗೋಣಿಬಸವನು ಜನಪದರ ಆರಾಧ್ಯ ದೈವವಾಗಿದ್ದು ಬಾಲಬಸವರು ಈತನನ್ನು ಕುರಿತು ಕಾವ್ಯ ಹಾಡುವುದನ್ನೇ ತಮ್ಮ ಕಾಯಕವಾಗಿಸಿಕೊಂಡಿದ್ದಾರೆ. ಗೋಣಿಬಸವನ ಕುರಿತು ಶಿಷ್ಟ ಕಾವ್ಯಗಳಲ್ಲಿ ನಮಗೆ ಹೆಚ್ಚಿನ ಆಧಾರಗಳು ದೊರೆಯುವುದಿಲ್ಲ. ಚೀಲಾಳಸ್ವಾಮಿಯ ಜೀವನವನ್ನು ವಿವರಿಸುವ ಷಟ್ಸ್ಥಲ ಶಿವಾಯಣ(ಕ್ರಿ.ಶ.೧೭೦೦) ಕೃತಿಯು ಗೋಣಿಬಸವ ಮತ್ತು ಬಾಲಬಸವರ ಕುರಿತು ವಿವರಿಸುತ್ತದೆ.

'ಬಾಲಸಂಗನ ಬಾಲಬಸವನ

ಬೋಳಬಸವನ ಗೋಣಿಬಸವನ

ಮೇಳಪುರ ವೃಷಮಲೆಯಮಾದನ ಮಂಟೆದಯ್ಯಗಳ|

ಮೂಲ ಕೊಡೆಯನಕಲ್ಲ ರಾಚನ

ಲೀಲೆ ಹೇಳುವರೆಲ್ಲ ಷಟ್ಸ್ಥಲ

ಚೀಲಾಳೇಶ್ವರ ಬಸವಪ್ರಭುವಿನ ಬಾಲಕರು ಬಸವ ||

(ಷಟ್ಸ್ಥಲ ಶಿವಾಯಣ, ಸಂ.೧೯, ಪ.೪೦)

ಮಲೆಯಮಾದ, ಮಂಟೇದಯ್ಯ, ಕೊಡೇಕಲ್ಲರಾಚನ ಹಾಗೆ ಗೋಣಿಬಸವ ಮತ್ತು ಬಾಲಬಸವರು ಬದುಕಿದ್ದರು ಎನ್ನುವ ಬಗ್ಗೆ ಈ ಕೃತಿ ಹೇಳುತ್ತದೆ. ಇದೊಂದನ್ನು ಬಿಟ್ಟರೆ ಇನ್ನಾವುದೇ ಶಿಷ್ಟ ಉಲ್ಲೇಖವೂ ದೊರೆಯುವುದಿಲ್ಲ. ಗೋಣಿಬಸವನೊಂದಿಗೆ ಸಂಘರ್ಷಕ್ಕಿಳಿದಿದ್ದನೆಂದು ಹೇಳಲಾಗುವ ಚಿಗಟೇರಿಯ ಶಿವಪ್ಪ ನಾಯಕನು ೧೭ನೇ ಶತಮಾನದಲ್ಲಿ ಬದುಕಿದ್ದವನು. ಇದರ ಆಧಾರದ ಮೇಲೆ ಗೋಣಿಬಸವ ೧೭ನೇ ಶತಮಾನದಲ್ಲಿ ಬದುಕಿದ್ದನೆಂದು ತಿಳಿಯಬಹುದು.

### ೫.೩.೧. ಮದ್ದಾನಸ್ವಾಮಿ ಮತ್ತು ಗೋಣಿಬಸವನ : ವೈವಾಹಿಕ ಸಂಬಂಧಗಳು

ಮದ್ದಾನಸ್ವಾಮಿ ಮದುವೆಯಾಗುವುದರ ಮೂಲಕ ಪಂಚಗಣಾಧೀಶ್ವರರಲ್ಲಿಯೇ ಅತ್ಯಂತ ವಿಶಿಷ್ಟವಾಗಿ ನಿಲ್ಲುತ್ತಾನೆ. ಮದ್ದಾನಸ್ವಾಮಿ ಬೇಡರ ಕನಕವ್ವನನ್ನು(ಇವಳು ಶಿವಪ್ಪನಾಯಕನ ತಂಗಿ ಎಂದು ಗೋಣಿಬಸವ ಕಾವ್ಯ ಹೇಳಿದರೆ ಗೋಣಿಬಸವ ಚರಿತ್ರ ಸೋಮಶೇಖರ ರಾಜನ ಮಗಳು ಎನ್ನುತ್ತದೆ) ಮದುವೆಯಾಗಲು ಕಾರಣಗಳೇನು? ಹಾಗೆಯೇ ಈತನ ಮಗ ಗೋಣಿ ಬಸವ ಕುರುಬರ ವಡ್ಡೆಟ್ಟವ್ವನನ್ನು ಮದುವೆಯಾಗಲು ಕಾರಣವೇನು? ಮದ್ದಾನಸ್ವಾಮಿ ಮಠ ಕೋಟೆಯತರ ಇರುವುದಕ್ಕೂ, ಗೋಣಿಬಸವ ಚಿಗಟೇರಿಯ ಶಿವಪ್ಪನಾಯಕನೊಂದಿಗೆ ಜೀವನ ಪೂರ್ತಿ ಕದನಕ್ಕಿಳಿಯುವುದಕ್ಕೂ ಏನಾದರೂ ಸಂಬಂಧವಿದೆಯೇ? ಎಂದು ಯೋಚಿಸಿದರೆ ಈ ಇಬ್ಬರು ಸಂತರ ವೈವಾಹಿಕ ಸಂಬಂಧಕ್ಕೂ ಆ ವರ್ತಮಾನದ ರಾಜಕೀಯಕ್ಕೂ ನಿಕಟವಾದ ಸಂಬಂಧವಿದೆ ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಜನಪದರ ನಂಬಿಕೆಯಂತೆ ಪಂಚಗಣಾಧೀಶ್ವರರ ಚದುರಿಕೆಗೆ ಕಾರಣವಾದ ಮದ್ದಾನಸ್ವಾಮಿ ಮತ್ತು ಕನಕವ್ವನ ವೈವಾಹಿಕ ಸಂಬಂಧಕ್ಕೆ ಮತ್ತು ಈತನ ಮಗ ಗೋಣಿಬಸವ ವಡ್ಡೆವ್ವಳ ವೈವಾಹಿಕ ಸಂಬಂಧಕ್ಕೆ ಈ ಭಾಗದ ಸಮುದಾಯ ವಿಶಿಷ್ಟವಾಗಿ ಪ್ರತಿಕ್ರಿಯಿಸಿದೆ. ಈ ವೈವಾಹಿಕ ಸಂಬಂಧಗಳೇ ಇವರು ಹೆಚ್ಚು ಜನಪದೀಕರಣಗೊಳ್ಳಲು ಕಾರಣವಾಗಿದೆ.

ಗೋಣಿಬಸವ ಕಾವ್ಯದ ಪ್ರಕಾರ ಮದ್ದಾನಸ್ವಾಮಿ ಮತ್ತು ಉಳಿದ ಗಣಾಧೀಶ್ವರರು ಕೈಲಾಸದಿಂದ ಬರುವಾಗ ಗೋಣಿಬಸವನು ಕೈಲಾಸದಲ್ಲಿ ಸಕ್ಕರೆ ಚೀಲದಲ್ಲಿ ಹುಟ್ಟಿ ಇವರೊಂದಿಗೆ ಬರುತ್ತಾನೆ. ಹಾಗೆ

ಬಂದ ಶರಣರೆಲ್ಲರೂ ಬಾಗಳಿಯಲ್ಲಿ ಉಳಿದುಕೊಳ್ಳುತ್ತಾರೆ. ಒಂದು ದಿನ ಮದ್ದಾನಸ್ವಾಮಿ ಹೂವನ್ನು ತರಲು ಶೃಂಗಾರ ತೋಟಕ್ಕೆ ಹೋದಾಗ ಅಲ್ಲಿಗೆ ಬಂದ ಕನಕವ್ವನು ಒಬ್ಬರನೊಬ್ಬರು ನೋಡುತ್ತಾರೆ.

'ಮದ್ದಾನಸ್ವಾಮಿ ಮೇಲೆ ಆಯಮ್ಮನ ದೃಷ್ಟಿ ಬಿತ್ತು, ಆತನ ದೃಷ್ಟಿ ಆಯಮ್ಮನ ಮೇಲೆ ಬಿತ್ತು ಬರೆ ದೃಷ್ಟಿ ಬಿದ್ದುದ್ದಕ ಮದ್ದಾನ ಸ್ವಾಮಿಗೆ

ಇಂದ್ರತಾವ ಸುರುದಾವಯ್ಯೋ ಆ ಸೂಜೀರಾಮೂವ್ವ ಸಾದಿಗೆ
ಇಂದ್ರತಾವ ಸುರುದಾವಯ್ಯೋ ಆ ಸೂಜೀರಾಮೂವ್ವ ಸಾದಿಗೆ
ಮದ್ದಾನಸ್ವಾಮಿ ಕೆಟ್ಟಾನಯ್ಯೋ ಆ ಸೂಜೀರಮೂವ್ವ ಸಾದಿಗೆ
ಮದ್ದಾನಸ್ವಾಮಿ ಕೆಟ್ಟಾನಯ್ಯೋ ಆ ಸೂಜೀರಮೂವ್ವ ಸಾದಿಗೆ
ಮದ್ದಾನಸ್ವಾಮಿಗೆ ಇಂದ್ರತಾವ ಸುರಿದಾವಂತೆ,
ನಾಕುಮಂದಿ ಮುಂದಿದ್ರಲ್ರಿ ಗೋಣಿಬಸವೇಶ್ವರ
ಮಾಯಾವಾಗಿ ಹೋದನಯ್ಯೋ ಆ ಸೂಜೀರ ಮೂವ್ವ ಸಾದಿಗೆ
ಮಾಯವಾಗಿ ಹೋದನಯ್ಯೋ ಆ ಸೂಜೀರ ಮೂವ್ವ ಸಾದಿಗೆ
ಕನಕಮ್ಮನ ಹೊಟ್ಯಾಗ ಸೇರ್ಯಾನಯ್ಯೋ ಆ ಸೂಜೀರ ಮೂವ್ವಸಾದಿಗೆ
ಕನಕಮ್ಮನ ಹೊಟ್ಯಾಗ ಸೇರ್ಯಾನಯ್ಯೋ ಆ ಸೂಜೀರ ಮೂವ್ವ ಸಾದಿಗೆ

ಮಾಯವಾದ ಗೋಣಿಬಸವ ಕನಕಮ್ಮನ ಹೊಟ್ಯಾಗ ಸೇರ್ಕೊಂಡ ಬಿಟ್ಟ. ಆ ನಾಕು ಮಂದಿ ಶರಣ್ರಿಗೆ ಅರಿವಿಗೆ ಬಂತು. ಮದ್ದಾನಸ್ವಾಮಿ ಇಲ್ಲಿಂದ ಸರಿದಿದ್ದು, ಕೂಸು ಮಾಯಾವಾದ್ದು. ಆಗ ಕೊಟ್ರೇಶ 'ಮದ್ದಾನಸ್ವಾಮಿ ಕೆಟ್ಟ, ಕೆಟ್ಟ, ಫಕ, ಫಕ ನಗುತಾನು, ಬಿದ್ದು-ಬಿದ್ದು ನಗುತಾನು ಮದ್ದಾನಸ್ವಾಮಿ ಮೈಲಿಗೆಯಾದ, ಅವ್ರತಕ ಬರಂಗಿಲ್ಲ, ಒಳಕೋಗಂಗಿಲ್ಲ, ಅಲ್ಲೆ ನಿಂತ್ಕೊಂಡ ಬಿಟ್ಟಾನು. ಆ ಸಮಯದೊಳಗೆ ಕನಕಮ್ಮ ಗುಡಿ ಮುಂದೆ ಬಂದಾಳು. ದೂರನಿತ್ಕಂಡು ಹೂವು ಒಗುದಾಳು, ಕಾಯಿ ಒಡ್ದು ನಾಕು ಮಂದಿ ಶರಣ್ರಿಗೆ ಬೇಡ್ಕಂತಾಳು ಗುರುಗಳೆ ನನಗೆ ಬಡತಾನ ಇರ್ಲಿ ಇಲ್ಲಿಗೆ ಅರ್ಧವಯಸ್ಸು ಹಿಂದೆ ಮಾಡ್ದೆ ನನಗೆ ಮಕ್ಳಿಲ್ಲ.

ಮಕ್ಕಳ ಫಲವಾ ಕೊಡಬೇಕಯ್ಯಾ ಆ ಶಿವರಾಣಿಯಾನೆ ದೇವಾರೇ
ಮಕ್ಕಳ ಫಲವಾ ಕೊಡಬೇಕಯ್ಯಾ ಆ ಶಿವಾರಾಣಿಯಾನೆ ದೇವಾರೇ
ಫಲವಕೊಟ್ಟು ಉದ್ದಾರ ಮಾಡೋ ಆ ಶಿವರಾಣಿಯಾನೇ ದೇವಾರೇ
ಫಲವಕೊಟ್ಟು ಉದ್ದಾರ ಮಾಡೋ ಆ ಶಿವಾರಾಣಿಯಾನೇ ದೇವಾರೇ
ಬಂಜೆಂಬ ಶಬುದ ತಪ್ಪಲಯ್ಯೋ ಆ ಶಿವರಾಣಿಯಾನೇ ದೇವಾರೇ
ಬಂಜೆಂಬ ಶಬುದ ತಪ್ಪಲಯ್ಯೋ ಆ ಶಿವರಾಣಿಯಾನೇ ದೇವಾರೇ
ನನಗೆ ಫಲವ ಕೊಡಬೇಕಯ್ಯೋ ಆ ಶಿವರಾಣಿಯಾನೇ ದೇವಾರೇ

ನನಗೆ ಫಲವ ಕೊಡಬೇಕಯ್ಯೋ ಆ ಶಿವರಾಣಿಯಾನೇ ದೇವಾರೇ

ಮಕ್ಕಳಿಲ್ಲ ನನ್ನ ದೈವೇ ಆ ಶಿವರಾಣಿಯಾನೇ ದೇವಾರೇ

ಮಕ್ಕಳಿಲ್ಲ ನನ್ನ ದೈವೇ ಆ ಶಿವರಾಣಿಯಾನೇ ದೇವಾರೇ

ಮಕ್ಕಳ ಫಲಕೇಳ್ತಾಳು. ಶರಣ್ರಿಗೆ ಗೊತ್ತಾಗಿತ್ತಲ್ರಿ ಫಕ ಫಕ ನಗುತಾರು 'ಆಯ್ತಮ್ಮ ಫಲವ ಕೊಡ್ತೀವಿ, 'ನಿನ್ನ ಹೊಟ್ಟೆವಳಗ ದೊಡ್ಡ ಮಾತ್ಮುನ ಇಟ್ಟಕೊಂಡು ಫಲ ಕೇಳ್ತಿಯಲ್ಲಮ್ಮ, ನಿನ್ನ ಹೊಟ್ಟೆವಳಗ ಗಂಡು ಮಗು ಹುಟ್ತಾನು 'ಗೋಣಿಬಸವೇಶ್ವರ' ಅಂತ ಕರಿಯಮ್ಮ ಹೆಸರು ಮರಿಬ್ಯಾಡ' ಅಗ್ಲಿ ಗುರುಗಳೇ ಅಗ ಆಶೀರ್ವಾದ ತಗೊಂಡು ಫಲ ತಕ್ಕೊಂಡ ಕನಕಮ್ಮ ಹೊಂಟಾಳೆ. 'ಹಾಂ ಕನಕಮ್ಮನವರೆ ಸ್ವಲ್ಪ ತಡಿಯಮ್ಮ, ಮದ್ದಾನಸ್ವಾಮಿಗಳೆ ಮೈಲಿಗಾಗಿ ಕೆಟ್ಟು ಹೋದೆ ಆಯಮ್ಮ ಹೆಂಡ್ತಿ ನೀನು ಗಂಡ, ಹೋಗ್ಬಿಡಪ್ಪ ಕೂಲಳ್ಳಿಗೆ, ಮೈಲಿಗಾದೆ ನಮದ್ರಾಗ ಬರಂಗಿಲ್ಲ, ನೀ ಮುಟ್ಟಂಗಿಲ್ಲ ನಮ್ಮುನ್ನ' ಅಂದ್ರು ಆಗ 'ಅವ್ರಾದ್ರೆ ಬ್ಯಾಡ್ರು ನಾವ್ ಜಂಗಮರು ನಮ್ಮುನ ಗಂಡ ಹೆಂಡ್ತಿ ಮಾಡಿ ಅರೆ ಹಿಂದೆ ಹೋಗು ಅಂತಿರಯ್ಯ' ಅಂದ ಮತ್ತ 'ಆಗ್ಲೆಪ ನಾನೇನ ಹೊಗ್ತಿನಿ ನಿನ್ನ ಮಾತು ಮೀರದಿಲ್ಲ, ನೀನು ಹೊರಗ ಹೊಂಟಾಗ ಹರಿಜನ್ನಕಿ ಆರ್ತಿ ಬೆಳಗ್ಲಪ' ಅಂತ ಹೇಳಿದ ಮದ್ದಾನಸ್ವಾಮಿ ಹಿಂದ ಕನಕಮ್ಮ ಕಂಕಣಫಲ ಪಡಕೊಂಡು

ಕೂಲಹಳ್ಳಿಗೆ ಬರ್ತಾಳಯ್ಯೋ ಆ ಸೂಜೀರ ಮೂವ್ವ ಸಾದಿಗೆ

ಕೂಲಹಳ್ಳಿಗೆ ಬರ್ತಾಳಯ್ಯೋ ಆ ಸೂಜೀರ ಮೂವ್ವ ಸಾದಿಗೆ

ದಯಾಮಾಡೋ ನನ್ನ ಗುರುವೇ ಆ ಸೂಜೀರ ಮೂವ್ವ ಸಾದಿಗೆ

ದಯಾಮಾಡೋ ನನ್ನ ಗುರುವೇ ಆ ಸೂಜೀರ ಮೂವ್ವ ಸಾದಿಗೆ

ಇಲ್ಲಿಗೆ ಧನ್ಯಳಾದೆನಯ್ಯೋ ಆ ಸೂಜೀರ ಮೂವ್ವ ಸಾದಿಗೆ

ಇಲ್ಲಿಗೆ ಧನ್ಯಳಾದೆನಯ್ಯೋ ಆ ಸೂಜೀರ ಮೂವ್ವ ಸಾದಿಗೆ

(ಅನುಬಂಧ ೬, ಗೋಣಿಬಸವಕಾವ್ಯದ ಆಯ್ದುಭಾಗ)

ಗೋಣಿಬಸವನ ಕಾವ್ಯವು ಚಿಗಟೇರಿ ಶಿವನಯ್ಯನ(ಶಿವಪ್ಪನಾಯಕ) ತಂಗಿಯಾದ ಕನಕವ್ವನನ್ನು ಮದುವೆಯಾಗಿದ್ದರಿಂದ(ಇವಳು ಮೊದಲು ದೇವದಾಸಿ ಆಗಿದ್ದಳು) ಮದ್ದಾನಸ್ವಾಮಿಯನ್ನು ವಿರೋಧಿಸುತ್ತಾನೆ.

ಈಡಿಗರ ಚಂದ್ರಪ್ಪ ಬರೆದ ಗೋಣಿಬಸವ ಚರಿತ್ರೆ ಪ್ರಕಾರ ಕನಕವ್ವ ಸೋಮಶೇಖರ ರಾಜನ ಮಗಳಾಗಿದ್ದು ಮದ್ದಾನಸ್ವಾಮಿಯೊಂದಿಗೆ ಮದುವೆಯಾದ್ದರಿಂದ ಮೊದಲು ವಿರೋಧಿಸಿದರೂ ನಂತರ ಶರಣರ ಪವಾಡಶಕ್ತಿ ಅರಿವಾಗಿ ೩೫೧ ಎಕರೆ ಜಮೀನು ಹಾಗು ಈಗಿರುವ ಮದ್ದಾನಸ್ವಾಮಿ ಮಠ(ಇದು ಕೋಟೆ ಆಕಾರದಲ್ಲಿದೆ) ಕಟ್ಟಿಸಿಕೊಟ್ಟನೆಂದು' ಹೇಳುತ್ತದೆ.(ಈಡಿಗರ ಚಂದ್ರಪ್ಪ, ೧೯೯೦, ೨೦-೨೧)

ಮದ್ದಾನಸ್ವಾಮಿಗೆ ಸಂದಾಯವಾದ ಈ ಆಸ್ತಿ ಮತ್ತು ಕೋಟೆಯಂತಿರುವ ಮಠ, ಸಂತನ ರಾಜಕೀಯ ಇಚ್ಛಾ ಶಕ್ತಿಯ ಸಂಕೇತವಾಗಿರಬಹುದೇ? ಏಕೆಂದರೆ ಮದ್ಯಕಾಲೀನ ಕರ್ನಾಟಕದಲ್ಲಿ ರಾಜಕೀಯವಾಗಿ ಧಾರ್ಮಿಕ ಸಂತರು ನಿರ್ಣಾಯಕ ಪಾತ್ರವನ್ನು ವಹಿಸಿರುವುದನ್ನು ನೋಡಬಹುದು. ಈ ಕಾಲಘಟ್ಟಕ್ಕಿಂತ ಸ್ವಲ್ಪ ಮುಂಚಿತವಾಗಿದ್ದ ಕೊಡೇಕಲ್‌ಬಸವಣ್ಣ ರಾಜಕೀಯವಾಗಿ ಮುಸ್ಲಿಂರೊಂದಿಗೆ ಯುದ್ಧವನ್ನೇ ಮಾಡಿದ್ದ, ಕೊಡೇಕಲ್ ಬಸವಣ್ಣನ ಅನುಯಾಯಿಗಳಾದ ಮಂಟೇಸ್ವಾಮಿ, ಸಿದ್ದಪ್ಪಾಜಿ, ರಾಚಪ್ಪಾಜಿಯವರು ಯುದ್ಧಗಳನ್ನು ಮಾಡಿದ್ದಾರೆ. 'ರಾಚಪ್ಪಯ್ಯ ಮೈಸೂರು ದೊರೆಯನ್ನು ಬೆಂಬಲಿಸಿ ಕಾರುಗಹಳ್ಳಿ ಹಂಪಣ್ಣನಾಯಕನ ಜೊತೆಗೆ ಯುದ್ಧಕ್ಕೆ ತೊಡಗಿದಾಗ ಮಂಟೇಸ್ವಾಮಿ ಆನೆಯೇರಿ ಸಿದ್ದಪ್ಪಾಜಿಯೊಂದಿಗೆ ಬಂದು ಯುದ್ಧನಿರತರಾಗುವ ಸನ್ನಿವೇಶ ಅವರೆಲ್ಲ ಕೊಡೇಕಲ್‌ಬಸವನ ಆನುಜ್ಞೆಯಂತೆ 'ಸೈನ್ಯ' ಚಲಿಸುತ್ತಿದ್ದುದರ ಸೂಚಕವಾಗಿದೆ'(ಡಾ.ಬಸವಲಿಂಗ ಸೊಪ್ಪಮಠ, ೧೯೯೫, ಪು.೩೪೨) ಸುಖರಾಯಪಟ್ಟಣದ ಅರಸರು, ಹಲಗೂರು ಪಾಂಚಾಳರು, ಮೈಸೂರು ಅರಸರುಗಳ ಮೂಲಕ ದಕ್ಷಿಣಕರ್ನಾಟಕದಲ್ಲಿ ಈ ಸಂತರು ರಾಜಕೀಯವಾಗಿ ನಿರ್ಣಾಯಕ ಪಾತ್ರವನ್ನು ವಹಿಸುತ್ತಿದ್ದರು. ಪಂಚಗಣಾಧೀಶ್ವರರಲ್ಲಿ ಒಬ್ಬನಾದ ಕೊಟ್ಟೂರ ಗುರುಬಸವ ಮದಕರಿನಾಯಕ, ಸಿದ್ದೋಜಿಯೊಂದಿಗೆ ಯುದ್ಧವನ್ನು ಮಾಡಿರುವ ಬಗ್ಗೆ ಮುತ್ತಿಗೆಪದ ಕೃತಿ ವಿವರಿಸುತ್ತದೆ.

ಮದ್ದಾನಸ್ವಾಮಿ ಬೇಡರ ಕನಕವ್ವನನ್ನು ಮದುವೆಯಾಗಲು ಮುಖ್ಯವಾದ ಕಾರಣ ಅವಳು ಪ್ರಭುತ್ವದೊಂದಿಗೆ ಹೊಂದಿದ್ದ ನಿಕಟ ಸಂಬಂಧವೇ ಕಾರಣವಾಗಿದೆ.(ಅವಳು ಶಿವಪ್ಪನಾಯಕನ ತಂಗಿಯಾಗಿರಲಿ ಇಲ್ಲವೆ ಸೋಮಶೇಖರ ನಾಯಕನ ಮಗಳಾಗಲಿ ಇವರಿಬ್ಬರು ಅಧಿಕಾರ ಶಕ್ತಿಕೇಂದ್ರಗಳಾಗಿದ್ದರು), ಅಲ್ಲದೆ ಬೇಡ ಜನಾಂಗ ಯುದ್ಧ ನೈಪುಣ್ಯತೆ ಹೊಂದಿದ ಸಮುದಾಯವಾಗಿದ್ದು ಮಧ್ಯಕರ್ನಾಟಕದಲ್ಲಿ ಬಹುಸಂಖ್ಯಾತರಾಗಿದ್ದಾರೆ. ಮದ್ದಾನಸ್ವಾಮಿ ಮಠವೇ ಕೋಟೆಯ ಆಕಾರದಲ್ಲಿದ್ದು(ಅನುಬಂಧ ೭, ಛಾಯಾಚಿತ್ರಗಳು, ಚಿತ್ರ.ಸಂ.೧೧-೧೨) ಒಳಗಡೆ ಸುರಂಗ ಮಾರ್ಗಗಳಿವೆ. ಕೂಲಹಳ್ಳಿಯಲ್ಲಿರುವ ಈ ಮಠಕ್ಕೆ 'ಶ್ರೀ ಮದ್ದಾನಸ್ವಾಮಿ ಸಂಸ್ಥಾನ ಮಠ' ಎಂದು ಬೋರ್ಡ್ ಇದೆ. 'ಸಂಸ್ಥಾನ' ಎನ್ನುವ ಪದವೇ ಅಧಿಕಾರ ಬಲದ ಅಥವಾ ರಾಜಕೀಯ ಪ್ರಭುತ್ವದ ಸಂಕೇತವಾಗಿದ್ದು. ಈ ಸಂತನ ವೈವಾಹಿಕ ಸಂಬಂಧದ ಹಿಂದೆ ಲೌಕಿಕವಾದ ರಾಜಕೀಯ ಇಚ್ಛಾಶಕ್ತಿಯು ಕಾರ್ಯನಿರ್ವಹಿಸಿದೆ ಎಂದು ತಿಳಿಯಬೇಕಾಗುತ್ತದೆ. ಇದರ ಮುಂದುವರಿದ ಭಾಗವಾಗಿಯೇ ಗೋಣಿಬಸವನ ವೈವಾಹಿಕ ಸಂಬಂಧವನ್ನು ಆತನ ಜೀವನವನ್ನು ಗ್ರಹಿಸಬೇಕಾಗುತ್ತದೆ.

ಗೋಣಿಬಸವನು ಅಡವಿ ಸೋಮಲಾಪುರದ ಹಾಲು ಮತದ ವಡ್ಡೆಟ್ಟವ್ವನನ್ನು ಮದುವೆಯಾದ ಬಗ್ಗೆ ಗೋಣಿಬಸವ ಚರಿತ್ರೆ ವಿವರಿಸುತ್ತದೆ. 'ಒಮ್ಮೆ ಅಡವಿ ಸೋಮಲಾಪುರಕ್ಕೆ(ಮುಂಡರಗಿ ತಾ, ಗದಗ ಜಿ.) ಭಿಕ್ಷೆ ಬೇಡಲು ಹೋದಾಗ ಯಾರು ಭಿಕ್ಷೆ ನೀಡುವುದಿಲ್ಲ. ಹಸಿದ ಈ ಯೋಗಿಯನ್ನು ನೋಡಿ ವಡ್ಡೆಟ್ಟೆವ್ವ

ಎನ್ನುವ ಹಾಲುಮತದ ಹುಡುಗಿ ಭಿಕ್ಷೆ ನೀಡುತ್ತಾಳೆ. ಅದನ್ನು ನೋಡಿದ ಕೆಲವರು 'ನಿಮ್ಮ ಸಹೋದರಿಯು ಇಂದು ಬೆಳಗಿನಿಂದ ಬೂದಿ ಬಡುಕನ ಜೊತೆಯಲ್ಲಿ ಸರಸ ಸಲ್ಲಾಪಗಳಿಂದ ಕಾಲ ಕಳೆದಿದ್ದಾಳೆ' ಎಂದು ಆಕೆಯ ಅಣ್ಣಂದಿರಿಗೆ ಹೇಳುತ್ತಾರೆ. ಇವರ ಮಾತು ಕೇಳಿ ಅವರು ವಡ್ಡೆಟ್ಟವ್ವನನ್ನು ಹಿಂಸಿಸುತ್ತಾರೆ. ಆಗ ಗೋಣಿಬಸವನು ಬಿಳಿಕುದುರೆಯನ್ನು ಏರಿ ಅವಳನ್ನು ಅಲ್ಲಿಂದ ಅಪಹರಿಸಿಕೊಂಡು ಕೂಲಹಳ್ಳಿಗೆ ಬರುತ್ತಾನೆ. ಕೂಲಹಳ್ಳಿಯಲ್ಲಿ ತನ್ನ ತಾಯಿ ಮತ್ತು ಸಮಾಧಿಯಾದ ತಂದೆ ಮದ್ದಾನಸ್ವಾಮಿಯ ಒಪ್ಪಿಗೆಯನ್ನು ಪಡೆದು ಅವಳನ್ನು ಮದುವೆಯಾಗುತ್ತಾನೆ. ಇವರನ್ನು ಹಿಂಬಾಲಿಸಿ ಬಂದ ವಡ್ಡೆಟ್ಟವ್ವನ ಸಹೋದರರು ಗೋಣಿಬಸವನ ಪವಾಡಶಕ್ತಿಯನ್ನು ಅರಿತು ತಮ್ಮ ತಂಗಿಯನ್ನು ಮದುವೆಯಾಗಲು ಒಪ್ಪುತ್ತಾರೆ ಮತ್ತು ಅಡವಿ ಸೋಮಲಾಪುರದಲ್ಲೊಂದು ಗೋಣಿಬಸವನ ಮಠವನ್ನು ಕಟ್ಟಿಸುತ್ತಾರೆ.(ಈಡಿಗರ ಚಂದ್ರಪ್ಪ, ೧೯೯೦, ಪು.೫೭-೬೪) ಬಾಲಬಸವರ ಗೋಣಿಬಸವನ ಕಾವ್ಯವೂ ಕೂಡ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತದೆ. ಆದರೆ ವಡ್ಡೆಟ್ಟವ್ವ ಹರಪನಹಳ್ಳಿ ಆ ಕಡೆ ಭಾಗದ ಕುರುಬರು ಎಂದಷ್ಟೇ ಹೇಳುತ್ತದೆ. ಸಾಮಾನ್ಯವಾಗಿ ಅದು ಹೊಳೆ(ತುಂಗಭದ್ರ) ಆಚೆ ದಡದಲ್ಲಿರುವ ಅಡವಿ ಸೋಮಲಾಪುರವನ್ನೇ ಸೂಚಿಸುತ್ತಿದೆ.

ಗೋಣಿಬಸವ ಕುರುಬರ ವಡ್ಡೆಟ್ಟವ್ವಳನ್ನು ಮದುವೆಯಾಗಲು ಪ್ರಮುಖವಾಗಿ ಚಿಗಟೇರಿಯ ಶಿವನಯ್ಯನೊಂದಿಗೆ ಸಂಘರ್ಷಕ್ಕಿಳಿದಿದ್ದೇ ಕಾರಣವಾಗಿದೆ. ಗೋಣಿಬಸವನನ್ನು ಕಟ್ಟಿ ಕೆರೆಯಲ್ಲಿ ಮುಳುಗಿಸುತ್ತಾನೆ. ಮತ್ತೊಮ್ಮೆ ಮಂತ್ರವಾದಿಗಳಿಂದ ಮಾಯದ ಅಂಗಿಯನ್ನು ಹಾಕಿಸಿ ಕೊಲ್ಲುವ ಪ್ರಯತ್ನ ಮಾಡುತ್ತಾನೆ. ಗೋಣಿಬಸವ ಹೆದರಿ ಹೊಳೆದಾಟಿ ಗುಮ್ಮಗೋಳಕ್ಕೆ ಹೋದರೂ ಬಿಡದೆ ಆತನನ್ನು ಹಿಂಬಾಲಿಸುತ್ತಾನೆ. ಇವೆಲ್ಲ ಚಿಗಟೇರಿಯ ಶಿವನಯ್ಯನಿಗೂ ಕೂಲಹಳ್ಳಿ ಗೋಣಿಬಸವನಿಗೂ ಇದ್ದ ವೈರತ್ವವನ್ನು ಸೂಚಿಸುತ್ತದೆ. ಈ ವೈರತ್ವ ಗೋಣಿಬಸವನು ಹುಟ್ಟುವುದಕ್ಕೆ ಮುಂಚಿತವಾಗಿಯೇ ಕನಕವ್ವನೊಂದಿಗೆ ಇದ್ದ ಬಗ್ಗೆ ಬಾಲಬಸವರು ಹೇಳುವ ಕಾವ್ಯದಲ್ಲಿ ತಿಳಿಸಲಾಗಿದೆ.(ಗೋಣಿಬಸವನ ಕಾವ್ಯ ದೀರ್ಘವಾಗಿರುವುದರಿಂದ ಪೂರ್ತಿಯಾಗಿ ಅನುಬಂಧದಲ್ಲಿ ಕೊಡಲಾಗಿಲ್ಲ)

ಕುರುಬ ಜನಾಂಗವು ಕಬ್ಬಿಣದ ಉತ್ಪಾದನೆಯಲ್ಲಿ ಮತ್ತು ಯುದ್ಧೋಪಕರಣಗಳನ್ನು ತಯಾರಿಸುವ ವಿಷಯದಲ್ಲಿ ಮಧ್ಯಕಾಲೀನ ಕರ್ನಾಟಕದಲ್ಲಿ ಅತ್ಯಂತ ಪ್ರಸಿದ್ಧರಾಗಿದ್ದರು. ಕುರುಬರು ವಡ್ಡೆಟ್ಟವ್ವಳನ್ನು ಮದುವೆಯಾಗುವುದರ ಹಿಂದೆ ಯುದ್ಧೋಪಕರಣಗಳನ್ನು ತಯಾರಿಸುವ ಜನಾಂಗದ ಕೌಶಲ್ಯವನ್ನು ಶಿವನಯ್ಯನೊಂದಿಗಿನ ಸಂಘರ್ಷದಲ್ಲಿ ಬಳಸಿಕೊಳ್ಳಬೇಕೆನ್ನುವ ಉದ್ದೇಶವನ್ನು ಗೋಣಿಬಸವ ಹೊಂದಿದ್ದಾನೆ. ಗುಮ್ಮಗೋಳದಲ್ಲಿನ ಗೋಣಿಬಸವನ ಮಠದ ಪೂಜಾರಿಗಳು ಹೇಳುವಂತೆ '೪೦-೫೦ ವರ್ಷಗಳ ಹಿಂದೆ ಇಲ್ಲಿನ ಜಾತ್ರೆಯಲ್ಲಿ ಕಬ್ಬಿಣದ ಸಾಮಾನುಗಳನ್ನು ಮಾಡುವಲ್ಲಿ ಹೆಚ್ಚು ಪ್ರಸಿದ್ಧಿಯನ್ನು ಹೊಂದಿತ್ತು. ಹಾಗು ಈಗಲೂ ಇಲ್ಲಿ ನೆಲವನ್ನು ಅಗೆದರೆ ಕಬ್ಬಿಣದ ಚೂರುಗಳು ಸಾಕಷ್ಟು ಪ್ರಮಾಣದಲ್ಲಿ ಸಿಗುತ್ತವೆ'

ಎನ್ನುತ್ತಾರೆ. ಮುಂಡರಗಿ ತಾಲೂಕಿನ ಈ ಗುಮ್ಮಗೋಳದಲ್ಲಿ ಹಮ್ಮಿಗಿ ದೇಸಾಯಿಯೊಂದಿಗೆ ಕೂಡಿ ಶಿವಯ್ಯನ ವಿರುದ್ಧ ಯುದ್ಧವನ್ನು ಗೋಣಿಬಸವ ಮಾಡಿದ್ದಾನೆ. ವಡ್ಡೆಟ್ಟವ್ವನನ್ನು ಮದುವೆಯಾದ ಅಡವಿ ಸೋಮಲಾಪುರ ಇದೇ ತಾಲೂಕಿನಲ್ಲಿದೆ. ಈ ತಾಲೂಕು ಬಹುಸಂಖ್ಯಾತ ಕುರುಬರನ್ನು ಹೊಂದಿದೆ.

ವಿಜಯನಗರ ಪತನಾನಂತರ ರಾಜಕೀಯವಾಗಿ ಕರ್ನಾಟಕದಲ್ಲಿ ಅಸ್ಥಿರತೆ ಉಂಟಾಯಿತು. ಹಲವಾರು ಪಾಳೇಗಾರರು ಒಬ್ಬರನ್ನು ಒಬ್ಬರು ಸೋಲಿಸಲು ನಿರಂತರವಾಗಿ ಕದನಗಳಲ್ಲಿ ತೊಡಗಿಕೊಂಡರು. ಇದರಿಂದಾಗಿ ಸೈನ್ಯಶಕ್ತಿಯ ಪ್ರಾಮುಖ್ಯತೆ ಹೆಚ್ಚಾಯಿತು. ಸಾಮಾಜಿಕವಾಗಿ ಸಮರಶೀಲ ಜಾತಿಗಳು ಮುನ್ನೆಲೆಗೆ ಬಂದವು. ಅವುಗಳಲ್ಲಿ ಬೇಡ ಜನಾಂಗ ಮತ್ತು ಕುರುಬ ಜನಾಂಗ ಮುಖ್ಯವಾದವುಗಳು. ಮದ್ದಾನಸ್ವಾಮಿ ಬೇಡರ ಕನಕವ್ವನನ್ನು ಮತ್ತು ಗೋಣಿಬಸವ ಕುರುಬರ ವಡ್ಡೆಟ್ಟೆವ್ವನನ್ನು ಮದುವೆಯಾಗುವ ಮೂಲಕ ಈ ಎರಡು ಜನಾಂಗಗಳನ್ನು ಓಲೈಸಿಕೊಂಡರು. ಇವರ ರಾಜಕೀಯ ಇಚ್ಛಾಶಕ್ತಿಗೆ ಅನುಗುಣವಾಗಿಯೇ ಮದ್ದಾನಸ್ವಾಮಿ ಮಠವು ಕೋಟೆಯಾಕಾರದಲ್ಲಿದೆ. ಇದರಲ್ಲಿರುವ ಸುರಂಗ ಮಾರ್ಗವು ಇವರ ರಕ್ಷಣೆಗೆ ಸಹಾಯಕವಾಗಲು ನಿರ್ಮಿಸಿಕೊಂಡಂತಿದೆ. ಈಗಲೂ ಕೂಲಹಳ್ಳಿಯಲ್ಲಿರುವ ಈ ಸಂತರ ಎರಡೂ ಮಠಗಳನ್ನು ಕ್ರಮವಾಗಿ 'ಶ್ರೀಮದ್ದಾನೇಶ್ವರ ಸಂಸ್ಥಾನ ಮಠ', ಶ್ರೀ ಗೋಣಿಬಸವೇಶ್ವರ ಸಂಸ್ಥಾನ ಮಠ' ಎಂದು ಕರೆಯುವಲ್ಲಿ 'ಸಂಸ್ಥಾನ'(ಅಧಿಕಾರ ಕೇಂದ್ರಶಕ್ತಿ, ರಾಜ್ಯದ ಆಡಳಿತ ಒಂದು ಭಾಗ) ಎನ್ನುವ ಪದ ಅದರ ನೆನಪನ್ನು ಸೂಚಿಸುತ್ತದೆ.

### ೫.೩.೨. ಪಶುಪಾಲನಸಂಸ್ಕೃತಿ, ಬೇಟೆಸಂಸ್ಕೃತಿಯು ಕೃಷಿಸಂಸ್ಕೃತಿಯಾಗಿ ಪರಿವರ್ತನೆ

ವಿಜಯನಗರ ಸಾಮ್ರಾಜ್ಯದಲ್ಲಾದ ಮಹತ್ತರ ಪ್ರಗತಿಯೆಂದರೆ ಗಣನೀಯವಾಗಿ ಹೆಚ್ಚಿದ ಕೃಷಿಭೂಮಿ. ಅದುವರೆಗೂ ಬಂಜರಾಗಿದ್ದ ಭೂಮಿಯನ್ನು ಈ ಸಂದರ್ಭದಲ್ಲಿ ಕೆರೆಗಳನ್ನು ಬಾವಿಗಳನ್ನು ನಿರ್ಮಿಸುವುದರ ಮೂಲಕ ಕೃಷಿಭೂಮಿಯನ್ನಾಗಿ ಪರಿವರ್ತಿಸಲಾಯಿತು. ಈ ಪರಿವರ್ತನೆ ಹಲವಾರು ಅಲೆಮಾರಿ ಜನಾಂಗಗಳನ್ನು ಒಂದೆಡೆ ನೆಲೆನಿಲ್ಲುವಂತೆ ಪ್ರೇರೇಪಿಸಿತು. ಇದೇ ಸಂದರ್ಭದಲ್ಲುಂಟಾದ ಮತ್ತೊಂದು ಪ್ರಕ್ರಿಯೆಯೆಂದರೆ ಸೈನಿಕ ವ್ಯವಸ್ಥೆಯಲ್ಲಿ ಬೇಡಜನಾಂಗದ ಪ್ರಾಬಲ್ಯ, ಯುದ್ಧ ನಿಪುಣರಾಗಿದ್ದ ಬೇಡ ಜನಾಂಗವನ್ನು ಪ್ರೋತ್ಸಾಹಿಸಿದ ವಿಜಯನಗರದ ಅರಸರು ಅವರನ್ನು ಸೈನ್ಯಾಧಿಕಾರಿಗಳನ್ನಾಗಿ, ದಂಡಾಧಿಕಾರಿಗಳನ್ನಾಗಿ, ಹಲವಾರು ಪ್ರಾಂತ್ಯಗಳ ಉಸ್ತುವಾರಿ ನೋಡಿಕೊಳ್ಳಲು ವಹಿಸಿದರು. ಇದರಿಂದಾಗಿ ವಿಜಯನಗರ ಸಾಮ್ರಾಜ್ಯದ ಸಂದರ್ಭದಲ್ಲಿ ಬೇಡ ಸಂಸ್ಕೃತಿಯಿಂದ ನಾಡಸಂಸ್ಕೃತಿಯಾಗಿ ಬೇಡಜನಾಂಗವು ಪರಿವರ್ತನೆಯನ್ನು ಹೊಂದಿತು. ಇದರಿಂದಾಗಿ ಸಾಮಾಜಿಕವಾಗಿ ಹಿನ್ನೆಲೆಗೆ ಸರಿದಿದ್ದ ಬೇಡಜನಾಂಗ ಮುನ್ನೆಲೆಗೆ ಬರುವಂತಾಯಿತು.

ಕೃಷಿ ವ್ಯವಸ್ಥೆಯಲ್ಲುಂಟಾದ ಪ್ರಗತಿಯಿಂದಾಗಿ ಉತ್ಪಾದನೆಯಲ್ಲಿ ಹೆಚ್ಚಳವಾಯಿತು. ಕೃಷಿಯಾಧಾರಿತ ಉಪಕರಣಗಳನ್ನು ತಯಾರಿಸುವ ಹಾಗು ಯುದ್ಧೋಪಕರಣಗಳನ್ನು ತಯಾರಿಸುವ ಲೋಹಕಾರರು

ಅಂದು ಪ್ರಬಲಶಕ್ತಿಯಾಗಿ ಬೆಳೆದರು. 'ವಿಜಯನಗರವು ಸಾಕಷ್ಟು ವಾಣಿಜ್ಯವನ್ನು ನಡೆಸುತ್ತಿದ್ದಿತು. ಹೇರುಗಟ್ಟಲೆ ಕಬ್ಬಿಣವನ್ನು ರಫ್ತು ಮಾಡಲಾಗುತ್ತಿತ್ತು. ಆಭರಣಗಳು ಯುದ್ಧದ ಆಯುಧಗಳು ಮತ್ತು ಮನೆಬಳಕೆಯ ವಸ್ತುಗಳ ತಯಾರಿಕೆಯಲ್ಲಿ ಅಂದಿನ ಲೋಹಕಾರರು ತೊಡಗಿರುತ್ತಿದ್ದರು.(ಡಾ.ಬಂಜಗೆರೆ ಜಯಪ್ರಕಾಶ್ , ೨೦೦೦, ಪು.೧೪೯-೧೫೦) ಮಧ್ಯ ಕರ್ನಾಟಕ ಭಾಗದಲ್ಲಿ ಕಬ್ಬಿಣದ ಉತ್ಪಾದನೆ ಮತ್ತು ಉಪಕರಣಗಳ ತಯಾರಿಕೆಯಲ್ಲಿ ಕುರುಬರು ಮತ್ತು ಪಾಂಚಾಳರು ಪ್ರಮುಖರಾಗಿದ್ದಾರೆ. ಪಶುಪಾಲಕರಾಗಿದ್ದ ಕುರುಬರು ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ನಗರಸಂಸ್ಕೃತಿಗೆ ಹೊಂದಿಕೊಳ್ಳಲು ಪ್ರಯತ್ನಿಸಿದರು. ವಿಜಯನಗರದ ಪತನದ ನಂತರದ ಕಾಲದಲ್ಲಿ ಉಂಟಾದ ಅಸ್ಥಿರತೆಯ ಸಂದರ್ಭದಲ್ಲಿ ಬೇಡ ಮತ್ತು ಕುರುಬ ಜನಾಂಗಗಳು ಧಾರ್ಮಿಕ ಸಂತರ ಅಡಿಯಲ್ಲಿ ಸ್ಥಿರತೆಯನ್ನು ಬಯಸಿದವು. 'ರೇವಣಸಿದ್ಧ, ಕೊಡೇಕಲ್‌ಬಸವಣ್ಣ, ಮಂಟೇಸ್ವಾಮಿ, ಮೋನಪ್ಪ ಮುಂತಾದ ಮಧ್ಯಕಾಲೀನ ಸಂತರು ಕಟ್ಟಿದ ಪರಂಪರೆಗಳೆಲ್ಲ ಬೇಡ ಮತ್ತು ಕುರುಬ ಜನಾಂಗಗಳ ನೆಲೆವೀಡಾಗಿ ಕೆಳವರ್ಗದ ಜನರು ಈ ಪರಂಪರೆಗಳಿಗೆ ನಡೆದುಕೊಂಡಿದ್ದಾರೆ.'(ರಾ.ವೆಂಕಟೇಶ ಇಂದ್ವಾಡಿ, ೧೯೯೯, ಪು.೨೦) ಇದಕ್ಕೆ ಮುಖ್ಯವಾಗಿ ಈ ಸಂತರು ತಮ್ಮ ಪವಾಡಗಳ ಮೂಲಕ ಬೇಡ-ಕುರುಬ ಜನಾಂಗಗಳನ್ನು ತಮ್ಮ ಒಕ್ಕಲಾಗಿಸಿಕೊಳ್ಳುವ ಮೂಲಕ ಒಂದೆಡೆ ಸ್ಥಿರವಾಗಿ ನೆಲೆನಿಲ್ಲುವಂತೆ ಮಾಡಿದ್ದಾರೆ. ಮಂಟೇಸ್ವಾಮಿಯ 'ತಳಭಿಕ್ಷೆ' ಪವಾಡ ಬರೀ ಆತನ ನೆಲೆಗೊಳ್ಳುವಿಕೆ ಮಾತ್ರವಲ್ಲ. ಆತನೊಟ್ಟಿಗೆ ಇದ್ದ ಎಲ್ಲ ಒಕ್ಕಲುಗಳೂ ನೆಲೆಗೊಳ್ಳಲು ಅವಕಾಶ ಮಾಡಿಕೊಡುವುದಾಗಿದೆ. ಹಾಗಾಗಿ ಮಂಟೇಸ್ವಾಮಿಗಳು ಸಂಚರಿಸಿದ ಎಲ್ಲ ಕ್ಷೇತ್ರಗಳು ಕುರುಬರ ನೆಲೆಗಳಾಗಿವೆ.

ಈ ಎಲ್ಲ ಹಿನ್ನಲೆಯಲ್ಲಿ ಮದ್ದಾನಸ್ವಾಮಿ ಮತ್ತು ಗೋಣಿಬಸವನ ಜೀವನವನ್ನು ಗ್ರಹಿಸಬೇಕಾಗುತ್ತದೆ. ಈ ಇಬ್ಬರು ಸಂತರು ಬೇಡ ಮತ್ತು ಕುರುಬ ಜನಾಂಗವನ್ನು ತಮ್ಮ ಒಕ್ಕಲಾಗಿಸಿಕೊಳ್ಳುವ ಮುಖ್ಯ ಉದ್ದೇಶ ಇವರನ್ನು ಒಂದೆಡೆಯಲ್ಲಿ ನೆಲೆ ನಿಲ್ಲುವಂತೆ ಮಾಡುವುದಾಗಿದೆ. ಅದಕ್ಕಾಗಿ ಈ ಜನಾಂಗಗಳನ್ನು ಕೃಷಿ ವ್ಯವಸ್ಥೆಗೆ ಹೊಂದಿಕೊಳ್ಳಲು ಪ್ರೇರೇಪಿಸುತ್ತಾರೆ. ನಾಯಕನಟ್ಟಿ ತಿಪ್ಪೇಸ್ವಾಮಿ ೭ ಕೆರೆ ೭ ಪುರಗಳನ್ನು ಕಟ್ಟಿಸುವುದರ ಮೂಲಕ ಚಿತ್ರದುರ್ಗ ಭಾಗದ ಬೇಡರನ್ನು ಕೃಷಿ ಸಂಸ್ಕೃತಿಗೆ ಅಳವಡಿಸಿದರೆ, ಗೋಣಿಬಸವೇಶ್ವರ ಸ್ವತಃ ಹೊಲವನ್ನು ಊಳುತ್ತಾನೆ. ಗೋಣಿಬಸವ ಚರಿತ್ರೆಯ ಪ್ರಕಾರ 'ಚಿಕ್ಕಹಳ್ಳಿಗೆ ವ್ಯವಸಾಯ ಮಾಡಲು ಬಣಕಾರನ ಮನೆಯಲ್ಲಿ ಕೆಲಸಕ್ಕೆ ಸೇರಿಕೊಳ್ಳುತ್ತಾನೆ. ಅಲ್ಲಿ ಮೂರುವರ್ಷಗಳು ಚಿಕ್ಕಹಳ್ಳಿ ಬಣಕಾರ ಹೇಳಿದ ಬೇರೆ-ಬೇರೆ ಕೆಲಸಗಳನ್ನು ಮಾಡಿ ನಂತರ ಎರಡು ವರ್ಷಗಳು ವ್ಯವಸಾಯವನ್ನು ಮಾಡಿದನು. ಈತನ ವ್ಯವಸಾಯ ಕಾರ್ಯಕ್ಕೆ ಸಹಾಯವಾಗಲೆಂದು ಬಣಕಾರ ದೊಡ್ಡದೊಂದು ಕುಡುಗೋಲನ್ನು ಮಾಡಿಸಿಕೊಟ್ಟನು.(ಇದನ್ನು ಈಗಲೂ ಮದ್ದಾನಸ್ವಾಮಿ ಮಠದಲ್ಲಿ ನೋಡಬಹುದು) ಆ ಊರಿನಲ್ಲಿ ಸೋಮವಾರ ದನಗಳನ್ನು ವ್ಯವಸಾಯಕ್ಕೆ ಕಳಿಸುವಂತಿಲ್ಲ ಎಂದು ತೀರ್ಮಾನವನ್ನು ಜನರು ಕೈಗೊಳ್ಳುತ್ತಾರೆ. ಇದರಿಂದ ಸೋಮವಾರ ಕಾಯಕ ಮಾಡದೆ ಊಟ ಹೇಗೆ ಮಾಡಬೇಕೆಂದು ಯೋಚಿಸಿದ ಗೋಣಿಬಸವ

ಬೆಟ್ಟದ ಮಲ್ಲೇಶನನ್ನು ನೆನೆಯುತ್ತಾನೆ. ಆಗ ಬೆಟ್ಟದ ದಿಕ್ಕಿನಿಂದ ಎರಡು ಹುಲಿಗಳು ಬಂದು ನಿಲ್ಲುತ್ತವೆ. ಬಂದಂಥ ಹುಲಿಗಳನ್ನು ನಿಲ್ಲಿಸಿ ಹುಲಿ ಶಿರದ ಮೇಲೆ ನೊಗವನ್ನಿಟ್ಟು ನೇಗಿಲನ್ನು ಕಟ್ಟಿ ಅಲ್ಲಿಯೇ ಇದ್ದ ಹಾವನ್ನು ಬಾರಿಕೋಲನ್ನಾಗಿಸಿಕೊಂಡು ವ್ಯವಸಾಯ ಮಾಡುತ್ತಾನೆ.(ಈಡಿಗರ ಚಂದ್ರಪ್ಪ, ೧೯೯೦, ಪು.೨೯-೩೩)

ಈಗಲೂ ಕೂಲಹಳ್ಳಿ ೨ ಕಿಲೋಮೀಟರ್ ಅಂತರದಲ್ಲಿ ಗೋಣಿಬಸವನು ವ್ಯವಸಾಯ ಮಾಡಿರುವ ಭೂಮಿಯನ್ನು ಜನರು ತೋರಿಸುತ್ತಾರೆ. ಬಣಕಾರನು ಮಾಡಿಸಿಕೊಟ್ಟ ಕುಡುಗೋಲು ಮದ್ದಾನಸ್ವಾಮಿ ಮಠದಲ್ಲಿದೆ. ಗೋಣಿಬಸವ ಹುಲಿಯೇರಿ ಕೈಯಲ್ಲಿ ಹಾವನ್ನು ಚಾಟಿ ಮಾಡಿಕೊಂಡು ಕೃಷಿ ಮಾಡುತ್ತಿರುವ ಚಿತ್ರ ಗುಮ್ಮಗೋಳ ಮಠದಲ್ಲಿ(ಅನುಬಂಧ-2, ಛಾಯಚಿತ್ರಗಳು, ಚಿತ್ರ, ಸಂ.೨೨) ಈಗಲೂ ನೋಡಬಹುದು.

ಸಂತನ ಈ ಪವಾಡ ತನ್ನನ್ನು ನಂಬಿದ ಅಲೆಮಾರಿ ಜನಾಂಗಗಳನ್ನು, ಪಶುಪಾಲಕ ವರ್ಗಗಳನ್ನು ಒಂದೆಡೆ ಸ್ಥಿರವಾಗಿ ನೆಲೆಗೊಳ್ಳುವಿಕೆಗೆ ಒಡ್ಡಿಕೊಳ್ಳುವಂತೆ ಮಾಡುವುದಾಗಿದೆ. ಕೃಷಿಯು ಈ ರೀತಿ ನೆಲೆಗೊಳ್ಳುವಿಕೆಯ ಸಂಕೇತವಾಗಿ ಪರಿವರ್ತನೆ ಹೊಂದಲು ಪ್ರೇರೇಪಿಸುತ್ತದೆ.

ಚಿಕ್ಕಹಳ್ಳಿಯಲ್ಲಿ ಈತನು ಸೋಮವಾರ ಕೃಷಿಗೆ ತೊಡಗಿದ್ದನ್ನು ವಿರೋಧಿಸಿದ ಜನರು ಊರಿನ ಬಣಕಾರನಿಗೆ ದೂರನ್ನು ನೀಡುತ್ತಾರೆ. ಈತನನ್ನು ಶಿಕ್ಷಿಸಲು ಬಂದ ಬಣಕಾರ, ಹುಲಿಯಿಂದ ವ್ಯವಸಾಯ ಮಾಡುವುದನ್ನು ಕಂಡು ಗೋಣಿಬಸವನಿಗೆ ಶರಣಾಗುತ್ತಾನೆ. ಆಗ ಗೋಣಿಬಸವ 'ಮುಂದೆ ಕೂಲಹಳ್ಳಿ ಕ್ಷೇತ್ರದಲ್ಲಿ ನನ್ನ ವಡ್ಡೋಲಗವು ನಡೆಯುತ್ತದೆ. ಆಗ ನನ್ನ ಪಲ್ಲಕ್ಕಿಯ ಸೇವೆಯನ್ನು ಮಾಡಬೇಕೆಂದು' ಹೇಳುತ್ತಾನೆ.(ಈಡಿಗರ ಚಂದ್ರಪ್ಪ, ೧೯೯೦, ಪು.೩೪) ಇದು ಅಲೆಮಾರಿ ಜನಾಂಗಗಳು ಕೃಷಿ ಸಂಸ್ಕೃತಿಗೆ ಪರಿವರ್ತನೆಯಾಗಲು ಪ್ರಯತ್ನಿಸುತ್ತಿದ್ದಂತೆ ಉಂಟಾದ ಪ್ರತಿರೋಧವನ್ನು ಸೂಚಿಸುತ್ತದೆ. ಈಗಾಗಲೇ ಕೃಷಿಯನ್ನು ತಮ್ಮ ಜೀವನಾಧಾರವಾಗಿಸಿಕೊಂಡ ಜನಾಂಗಗಳ ಪ್ರತಿರೋಧವನ್ನು ತನ್ನ ಒಕ್ಕಲಾಗಿಸಿಕೊಳ್ಳುವ ಮೂಲಕ ಗೋಣಿಬಸವ ಹತ್ತಿಕ್ಕುತ್ತಿದ್ದಾನೆ. ಒಕ್ಕಲು ಎನ್ನುವ ಪದವೇ ಬೇಸಾಯ ಪ್ರಧಾನ ಚಟುವಟಿಕೆಯಿರುವ ಸಮಾಜವನ್ನು ಪ್ರತಿನಿಧಿಸುತ್ತಿದ್ದು, ಮದ್ದಾನಸ್ವಾಮಿ ಮತ್ತು ಗೋಣಿಬಸವ ಬೇಡ-ಕುರುಬ ಜನಾಂಗಗಳನ್ನು ತಮ್ಮ ಒಕ್ಕಲಾಗಿಸಿಕೊಳ್ಳುವ ಮೂಲಕ ಬೇಟೆಸಂಸ್ಕೃತಿ, ಪಶುಪಾಲನ ಸಂಸ್ಕೃತಿಯನ್ನು ಒಕ್ಕಲು ಸಂಸ್ಕೃತಿ(ಕೃಷಿಸಂಸ್ಕೃತಿ)ಯಾಗಿ ಪರಿವರ್ತಿಸಲು ಪ್ರಯತ್ನಿಸಿದ್ದಾರೆ. ಇದಕ್ಕೆ ಮುಖ್ಯವಾಗಿ ಸಾಕಷ್ಟು ಪ್ರಮಾಣದಲ್ಲಿದ್ದ ಬಂಜರು ಭೂಮಿ ಹಾಗು ಇದೇ ಸಂದರ್ಭದಲ್ಲಿ ಕೆರೆ ಬಾವಿಗಳ ನಿರ್ಮಾಣದ ಮೂಲಕ ಹೆಚ್ಚಿದ ನೀರಿನ ಸಂಗ್ರಹಣೆ ಕೂಡ ಕಾರಣವಾಗಿದೆ.

ವಿವಿಧ ಅಲೆಮಾರಿ ಜನಾಂಗಗಳನ್ನು ಕೃಷಿಸಂಸ್ಕೃತಿಯಾಗಿ ಪರಿವರ್ತಿಸಲು ಸಂತರಷ್ಟೇ ಆಸಕ್ತಿಯನ್ನು ರಾಜಪ್ರಭುತ್ವವೂ ಹೊಂದಿತ್ತು. ಬಂಜರು ಭೂಮಿಯನ್ನು ಕೃಷಿಭೂಮಿಯಾಗಿ ಪರಿವರ್ತನೆ ಮಾಡುವುದರಿಂದ

ರಾಜಾದಾಯವೂ ಹೆಚ್ಚುತ್ತಿತ್ತು. ಧಾರ್ಮಿಕ ಸಂತರಿಗೆ, ಮಠಗಳಿಗೆ ದಾನದತ್ತಿಯಾಗಿ ಭೂಮಿಯನ್ನು ಕೊಡಲು ಇದೇ ಕಾರಣವಾಗಿದೆ. ಧಾರ್ಮಿಕ ಸಂತರು ಕೃಷಿಯೇತರ ವರ್ಗಗಳನ್ನು ತಮ್ಮ ಪ್ರಭಾವದ ಮೂಲಕ ಕೃಷಿ ಸಂಸ್ಕೃತಿಗೆ ಪರಿವರ್ತಿಸುತ್ತಿದ್ದರು. ಗೋಣಿಬಸವ ಚರಿತ್ರೆಯಲ್ಲಿ 'ಸೋಮಶೇಖರ ರಾಜನು ೩೫೧ ಎಕರೆ ಜಮೀನನ್ನು ಮದ್ದಾನಸ್ವಾಮಿಗೆ ದಾನವಾಗಿ ಕೊಡುತ್ತಾನೆ' (ಈಡಿಗರ ಚಂದ್ರಪ್ಪ, ೧೯೯೦, ಪು.೨೦) ಇದು ಸಂತನಿಗೆ ಭಕ್ತಿಯನ್ನು ತೋರಿಸುವ ಅಲೌಕಿಕ ಕ್ರಿಯೆಯಲ್ಲಿಯೇ ಲೌಕಿಕವಾಗಿ ರಾಜಾದಾಯವನ್ನು ಹೆಚ್ಚಿಸುವ ಆಸೆಯಿಂದ ಕೂಡಿದುದಾಗಿದೆ. ಇದಕ್ಕೆ ಮುಖ್ಯವಾಗಿ ಈಗಾಗಲೇ ಹೇಳಿದಂತೆ ಅಧಿಕ ಕೆರೆ-ಬಾವಿಗಳ ನಿರ್ಮಾಣದಿಂದುಂಟಾದ ನೀರಿನ ಸಂಗ್ರಹಕ್ಕೆ ಕಾರಣವಾಗಿದೆ. ಹರಪನಳ್ಳಿ ಪಾಳೇಗಾರರು ಮ್ಯಾರಿಕೆರೆ, ನಾರಾಯಣದೇವರಕೆರೆಯ ಹೂಳನ್ನು ತೆಗೆಸಿದರು. ಅಲ್ಲದೆ ಅಯ್ಯಪ್ಪನ ಕೆರೆ, ನಾಯಕನಕೆರೆ, ಕುಂಚೂರಿನಕೆರೆ ನಿರ್ಮಿಸಿದರು. ಪ್ರತಿ ಅರಸು ಮಠಗಳ ಹತ್ತಿರ ಬಾವಿಗಳನ್ನು ತೊಡಿಸಿದರು. ದಾರಿಯುದ್ದಕ್ಕೂ ಬಾವಿಗಳನ್ನು ತೋಡಿಸಿದರು'(ಕುಂ.ಬಾ.ಸದಾಶಿವಪ್ಪ, ೧೯೯೬, ಪು.೭೦-೭೧) ಅಲ್ಲದೆ 'ಚಿಗಟೇರಿ ಶಿವಪ್ಪನಾಯಕನು 'ಚಿಗಟೇರಿಯ ಗುಡ್ಡದ ಪಕ್ಕದಲ್ಲಿ ಒಂದು ಕೆರೆಯನ್ನು, ಊರಲ್ಲಿ ಒಂದು ಬಾವಿಯನ್ನು ನಿರ್ಮಿಸಿದನು. ಹರಪನಳ್ಳಿ ಪಶ್ಚಿಮ ಭಾಗದ ಕುಂಚೂರು ಹಲವಾಗಲು ಬಳಿ ತುಂಗಭದ್ರಾ ನದಿಗೆ ಆಣೆಕಟ್ಟು ರಚಿಸಿ ನೀರು ಒದಗಿಸಲು ಪ್ರಯತ್ನಿಸಿದನು.(ಅದೇ, ಪು.೪೯) ಇದರಿಂದಾಗಿ ನೀರಿನ ಸಂಗ್ರಹಣೆ ಹೆಚ್ಚಾಗಿ ಅದನ್ನು ಉಪಯುಕ್ತವಾಗಿ ಕೃಷಿಗೆ ಬಳಸಿಕೊಳ್ಳಲು ಬಂಜರು ಭೂಮಿಯೂ ಇದ್ದುದರಿಂದ ವಿವಿಧ ಅಲೆಮಾರಿ ಜನಾಂಗಗಳನ್ನು, ಕೃಷಿಸಂಸ್ಕೃತಿಯನ್ನಾಗಿ ಪರಿವರ್ತಿಸಲು ಮದ್ದಾನಸ್ವಾಮಿ-ಗೋಣಿಬಸವನಂತ ಸಂತರೂ ರಾಜಪ್ರಭುತ್ವವೂ ಈ ಸಂದರ್ಭದಲ್ಲಿ ಪ್ರಯತ್ನಿಸಿದರು.

### ೫.೩.೩. ಜನಪದರ ಆರಾಧ್ಯದೈವವಾಗಿ ಶೈವ-ನಾಥಸಿದ್ಧ ಗೋಣಿಬಸವ

ಮದ್ದಾನಸ್ವಾಮಿಯ ಮಗನಾದ ಗೋಣಿಬಸವ ತಂದೆಗಿಂತ ಹೆಚ್ಚು ಪ್ರಸಿದ್ಧಿಯನ್ನು ಹೊಂದಿದವನು. ಬಾಲಬಸವರ ಕಾವ್ಯವಾಗಲಿ, ಗೋಣಿಬಸವ ಚರಿತ್ರೆಯಾಗಲಿ ಮದ್ದಾನಸ್ವಾಮಿಗಿಂತ ಗೋಣಿಬಸವನನ್ನೇ ಮುಖ್ಯವಾಗಿಸಿಕೊಂಡು ರಚನೆಯಾಗಿವೆ. ಈಗಲೂ ಬೇಡ-ಕುರುಬ ಜನಾಂಗವು ಗೋಣಿಬಸವನಿಗೆ ಹೆಚ್ಚಾಗಿ ನಡೆದುಕೊಳ್ಳುತ್ತಿವೆ. ಹೀಗೆ ಜನಪದರ ಆರಾಧ್ಯದೈವವಾದ ಗೋಣಿಬಸವನು ಜೀವನದಲ್ಲಿ ಮಾಡಿರುವ ಕಾರ್ಯಗಳನ್ನು ನೋಡಿದರೆ ಈತ ಶೈವ-ನಾಥಸಿದ್ಧ ಪರಂಪರೆಯವನು ಎಂಬುದು ತಿಳಿದುಬರುತ್ತದೆ. ಮದ್ದಾನಸ್ವಾಮಿಯು ನಾಥಪಂಥದವನಿರಬೇಕೆಂದು ಗೋಣಿಬಸವ ಚರಿತ್ರೆಯಿಂದ ತಿಳಿದುಬರುತ್ತದೆ.

ಗೋಣಿಬಸವ ಬೆಳೆದು ದೊಡ್ಡವನಾದ ಮೇಲೆ ಈತನ ತಾಯಿ ಕನಕವ್ವ ಹೇಳುವ ಮಾತುಗಳು ಮದ್ದಾನಸ್ವಾಮಿಯು ನಾಥಪಂಥದವನೆಂದು ದೃಢಪಡಿಸುತ್ತವೆ. ಆಕೆ ಮಗನನ್ನು ಉದ್ದೇಶಿಸಿ 'ನಿನ್ನ ತಂದೆಯು ನಿನಗಾಗಿಯೇ ಸದರಿನ ಮೇಲೆ ಇರಿಸಿರುವ ವಸ್ತ್ರಾಭರಣಗಳು ಹಾಗೆ ಜೋಪಾನವಾಗಿವೆ. ನೀನು ಚಿಕ್ಕವನಿದ್ದಾಗ ನಿನ್ನ ತಂದೆಯು ನಿನಗೆ ಇವುಗಳನ್ನೆಲ್ಲಾ ಧಾರೆ ಎರೆದಿರುವನು. ಅವುಗಳನ್ನೆಲ್ಲಾ ನೀನು

ಧರಿಸಿಕೊಂಡರೆ ಯಾವ ಕ್ಷೇತ್ರದಲ್ಲಿಯಾದರೂ ಭಿಕ್ಷಾಟನೆಯನ್ನು ಮಾಡಿದರೂ ಸಹ ನಿನ್ನನ್ನು ತಡೆಗಟ್ಟುವವರು ಯಾರೂ ಮುಂದೆ ಬರಲಾರರೆಂದು ತಿಳಿಸಿದನು.'(ಈಡಿಗರ ಚಂದ್ರಪ್ಪ, ೧೯೯೦, ಪು.೩೫) ಇಲ್ಲಿ ಬರುವ ವಸ್ತ್ರಾಭರಣಗಳು ಗೋಣಿಬಸವ ಹಾಕುತ್ತಿದ್ದರೆನ್ನಲಾದ ಕರ್ಣಕುಂಡಲಗಳು. ಪವಿತ್ರ ಉಂಗುರ ಕಾವಿಬಟ್ಟೆ ಇರಬೇಕು. 'ನಾಥದಲ್ಲಿ ಕರ್ಣಕುಂಡಲಗಳನ್ನು ಧರಿಸುತ್ತಿದ್ದ 'ಕನಫುಟಾ'(ಕಿವಿಹರುಕರು), ಮತ್ತು 'ದರ್ಶನ' ಎಂದರೆ ಪವಿತ್ರದುಂಗುರವನ್ನು ಧರಿಸುವುದರಿಂದ 'ದರ್ಶನಿ ಸಾಧು' ಎಂದೂ ಕರೆಯಲ್ಪಡುವವರು ಇದ್ದರು'(ಮ.ಸು.ಕೃಷ್ಣಮೂರ್ತಿ, ೧೯೮೨, ಪು.೧೫೦) ಇದನ್ನು ನೋಡಿದರೆ ಮದ್ದಾನಸ್ವಾಮಿ ನಾಥಸಿದ್ಧನಾಗಿದ್ದು, ತನ್ನ ವಸ್ತ್ರಾಭರಣಗಳನ್ನು ಮಗನಿಗೆ ಧಾರೆ ಎರೆದುಕೊಟ್ಟಿದ್ದಾನೆ ಎಂದು ಖಚಿತವಾಗುತ್ತದೆ.

ಬಾಲಬಸವರ ಕಾವ್ಯದಲ್ಲಿ ಗೋಣಿಬಸವನಿಗೆ ಸಿದ್ಧಪಂಥದ ಯೋಗಿಗಳೊಂದಿಗೆ ಒಡನಾಟವಿದ್ದು ಅವರಿಂದ ಸಿದ್ಧಿಯ ವಿದ್ಯೆಗಳನ್ನೆಲ್ಲ ಕಲಿತಿದ್ದನೆಂದು ತಿಳಿದುಬರುತ್ತದೆ.

> ಗೋಣಿಬಸವಣ್ಣ ಬಂದ ಶಿವಶಿವ ಎಂಬ ಶಬ್ದವ ತಂದ
> ಕನಕವ್ವನ ಹೊಟ್ಟ್ಯಾಗ ಹುಟ್ಟಿ ಬಂದಾ ಕಾಲಿ ಡಬ್ಬ ಬರೆಸಿಕೊಂಡ
> ಮದ್ದಾನಸ್ವಾಮಿ ಮಠದ ಮುಂದೆ ಉಪ್ಪರಿಗೆ ಬಲು ಚೆಂದ
> ಮಾಯಕಾರ ಗೋಣಿಬಸವ ಮೋಡಿಕಾರ ಗೋಣಿಬಸವ
> ಸಿದ್ಧರ ಕೂಟಾಡಿ ಸಿದ್ಧವಿದ್ಯಾ ಕಲಿತಾನಲ್ಲ
> ಸೋಮವಾರ ಗೋಣಿಬಸವ ಉರಿಯ ನೇಗಿಲ ಹೊಡೆಯುತ ನಿಂತ
> ನೂಲಿನ ಹಾವು ಮಿಣಿಯ ಮಾಡಿ ನಾಗರಹಾವು ಬಾರಿಕೋಲ ಮಾಡಿ
> ಚಿಗಟೇರಿ ಶಿವನಯ್ಯ ನಿನ್ನ ಪರಿಪರಿ ಕಾಡಿದನಲ್ಲ
> ಕಲ್ಲುಗಾಣಕೆ ಹಾಕಿದನಲ್ಲ. ಮುಳ್ಳು ಗಾಣಕೆ ಹಾಕಿದನಲ್ಲ
> ವರುವಿನ ಪಿಂಡಾಂಡ ಎದ್ದು ಎದ್ದು ಬಂದು ಶರಣ
>
> (ಅನುಬಂಧ ೬, ಗೋಣಿಬಸವನ ಕಾವ್ಯದ ಆಯ್ದಭಾಗ)

ಮಾಯಕಾರ ಗೋಣಿಬಸವ ಸಿದ್ಧರ ವಿದ್ಯೆಯನ್ನೆಲ್ಲ ಕಲಿತಿದ್ದನ್ನು ಚಿಗಟೇರಿಯ ಶಿವನಯ್ಯ ಕೊಡುವ ಕಷ್ಟಗಳನ್ನೆಲ್ಲ ಗೆದ್ದು ಬರುವುದು ಹುಲಿಯನ್ನು ಎತ್ತುಗಳಂತೆ, ಹಾವನ್ನು ಬಾರಿಕೋಲಿನಂತೆ ಮಾಡಿಕೊಂಡು, ನೇಗಿಲು ಹೊಡೆಯುವುದು ಇವೆಲ್ಲ ಈತ ಸಿದ್ಧಪಂಥದವನೆಂಬುದನ್ನು ದೃಢಪಡಿಸುತ್ತವೆ.

ಅಡವಿಯಳ್ಳಿಯಲ್ಲಿ ಕುಂಬಾರನಿಗೆ ತನ್ನ ವಿಭೂತಿಯಿಂದ ಗೋಣಿಬಸವ ಗಡಿಗೆಗಳೆಲ್ಲ ಸುಟ್ಟು ಗಟ್ಟಿಯಾಗದಂತೆ ಮಾಡುತ್ತಾನೆ. ಕೊಳಚೆ ಎನ್ನುವ ಗ್ರಾಮದಲ್ಲಿ ಕಚ್ಚಾ ಅರಿವೇರ ಮನೆತನದವರ ತೋಟದಲ್ಲಿ ತೆಂಗಿನ ಕಾಯಿಗಳನ್ನೆಲ್ಲಾ ತನ್ನ ದೃಷ್ಟಿ ಮಾತ್ರದಿಂದಲೇ ಬೀಳಿಸುತ್ತಾನೆ. ಬಾಗಳಿ ವೀರಭದ್ರೇಶ್ವರ ದೇವಸ್ಥಾನದಲ್ಲಿ ಭಿಕ್ಷೆ ಬೇಡಲು ಹೋದಾಗ ಬೇಡರ ಜಾತಿಯವನಾಗಿ ಭಿಕ್ಷೆ

ಬೇಡುತ್ತಿದ್ದುದನ್ನು ಅಲ್ಲಿನ ಜಂಗಮರು ವಿರೋಧಿಸಿದರು. ಆಗ ಗೋಣಿಬಸವನು ವೀರಭದ್ರೇಶ್ವರ ಗುಡಿಯಲ್ಲಿನ ಬಾಗಿಲ ಮೂಲಕ ಹುಲಿ ಮೇಲೆ ಸವಾರಿ ಮಾಡಿಕೊಂಡು ಬಂದು ದರ್ಶನ ಕೊಟ್ಟನು. ಬಂಡ್ರಿಯಲ್ಲಿನ ಕೊರವರ ದುರಗಜ್ಜನ ಮಗುವಿಗೆ ಹಾವು ಕಡಿದು ಸತ್ತಿದ್ದನ್ನು ಕಂಡು ವಿಭೂತಿಯನ್ನು ಕೊಟ್ಟು ನೀರಿನಲ್ಲಿ ಹಾಕಿ ಕುಡಿಸಿರಿ ಎಂದು ಹೇಳಿ ಗೋಣಿಬಸವನು ಮಗುವಿಗೆ ಪ್ರಾಣವನ್ನು ನೀಡಿದನು. ಕೊಂಡೇನಹಳ್ಳಿ(ಹಡಗಲಿ ತಾ.)ಯಲ್ಲಿ ತನ್ನ ವಿಭೂತಿ ಮಹಿಮೆಯಿಂದ ಊರಿಗೆ ತಗುಲಿದ್ದ ರೋಗವನ್ನು ವಾಸಿಮಾಡಿದನು. ಹೀಲದಳ್ಳಿಯಲ್ಲಿ ಬಂಜೆ ಆಕಳಿಗೆ ವಿಭೂತಿ ಲೇಪಿಸಿ ಕರುವನ್ನು ಹಾಕುವಂತೆ ಮಾಡಿದನು. ಅಲ್ಲಿಯೇ ಬಾಲಬಸವರಿಗೆ ಲಿಂಗದೀಕ್ಷೆ ನೀಡಿ ತನ್ನ ಒಕ್ಕಲಾಗಿಸಿಕೊಂಡನು, ಹೊಳಲು ಗ್ರಾಮದಲ್ಲಿ ಸೊಪ್ಪಿನ ತೆನೆಯನ್ನು ತಿಂದನು. ಹಾವನೂರು ಗ್ರಾಮದಲ್ಲಿ ಹರಿಜನಕೇರಿಯಲ್ಲಿ ಹಾವಾಗಿ ಹಾಲನ್ನು ಸ್ವೀಕರಿಸಿದನು. ಹೂವಿನ ಹಡಗಲಿಯಲ್ಲಿ ಬೈಲುಬಸಪ್ಪ ಎಂಬುವ ಶಿವಯೋಗಿಗೆ ಕಾಣಿಸಿಕೊಂಡನು, ಅಡವಿ ಸೋಮಲಾಪುರ ಎನ್ನುವಲ್ಲಿ ವಡ್ಡೆಟ್ಟವ್ವ ಎನ್ನುವ ಕುರುಬರ ಹುಡುಗಿಯನ್ನು ಬಿಳಿಕುದುರೆ ಏರಿ ಅವಳ ಅಣ್ಣಂದಿರು ಕೊಡುತ್ತಿದ್ದ ಕಿರುಕುಳದಿಂದ ತಪ್ಪಿಸಿ ಅಪಹರಿಸಿಕೊಂಡು ಬಂದನು. ಕುರುವಿನ ಕೋಟೆಯಲ್ಲಿ ಸತ್ತ ಎಮ್ಮೆಯನ್ನು ಬದುಕಿಸಿದನು, ಮಲೆನಾಡಿನ ಗಂಜಿ ಎಂಬ ರಾಕ್ಷಸಿಯನ್ನು ದಿಗಂಬರಳಾಗಿಸಿ ಕುರುವಿನ ಕೋಟೆಯ ಮಠದಲ್ಲಿ ಶಿಲ್ಪಿಯಾಗಿಸಿದನು, ಗುಂಜಿ ಎಂಬ ಇನ್ನೊಬ್ಬ ರಾಕ್ಷಸಿಯನ್ನು ಹಾವನೂರು ಗ್ರಾಮದ ದ್ಯಾಮವ್ವನೆಂಬ ದೇವತೆಯಾಗಲು ಆಶೀರ್ವಾದಿಸಿದನು. ಎಳವತ್ತಿ ಗ್ರಾಮದಲ್ಲಿ ಬೇಸಿಗೆಯ ಸಂದರ್ಭದಲ್ಲಿ ಮಳೆತರಿಸಿದನು, ನಿಂಬಳಗಿ ಗ್ರಾಮದಲ್ಲಿಯೂ ಮಳೆ ಪವಾಡ ಮಾಡಿದನು. ಸಿಷ್ಪಿ(ಶಿರ್ಸಿ) ಗ್ರಾಮದಲ್ಲಿ ತನ್ನ ಶಿರವನ್ನು ಕಡಿದುಕೊಂಡು ಮರಳಿ ಜೀವ ಪಡೆದನು. ಚಿತ್ರದುರ್ಗದ ಮದಕರಿನಾಯಕನಿಗೆ ವಿಭೂತಿಯಿಂದ ಕಾಲುನೋವು ಬರುವಂತೆ ಮಾಡಿ ಮರಳಿ ಸರಿಮಾಡಿದನು, ಶಿಖಾರಿಪುರದಲ್ಲಿ ಹುಚ್ಚು ನಾಯಿಗೆ ಜೀವ ಬರಿಸಿದನು. ಕಂದಗಲ್ಲು ಗ್ರಾಮದಲ್ಲಿ ಮಗುವಿನ ಭಕ್ತಿಗೆ ಮೆಚ್ಚಿ ಆಶೀರ್ವಾದಿಸಿದನು. ಕೂಲಹಳ್ಳಿಯ ಹರಿಜನಕೇರಿಯಲ್ಲಿ ಕೊಟ್ಟೂರ ಗುರುಬಸವನ ದೇವಾಲಯ ನಿರ್ಮಾಣ ಮಾಡಲು ನಿರಾಕರಿಸಿದ ಹರಿಜನರಿಗೆ ವಾಂತಿ ಬೇಧಿಯಾಗುವಂತೆ ಮಾಡಿ ಅವರು ಕ್ಷಮೆ ಕೇಳಿದ ನಂತರ ವಾಸಿ ಮಾಡಿದನು. ಹರಪನಳ್ಳಿಯ ಮಂತ್ರವಾದಿಯಾದ ಕಾಳಿಕೊಂಡನು ಆರುಗೊಂಬೆಗಳನ್ನು ಮಾಡಿ ಗೋಣಿಬಸವನನ್ನು ಕೊಲ್ಲಲು ಪ್ರಯತ್ನಿಸಿದನು. ಆಗ ಆತನ ಮಗನನ್ನು ವಿಭೂತಿಯಿಂದ ಗೋಣಿಬಸವ ಕೊಂದು ಮತ್ತೆ ಬದುಕಿಸಿದನು. ಆದರೂ ಬುದ್ಧಿಬರದ ಕಾಳಿಕೊಂಡನು ಮಂತ್ರದಿಂದ ಗೊಂಬೆಗಳನ್ನು ಮಾಡಿ ಕೊಲ್ಲಲು ಪ್ರಯತ್ನಿಸಿದನು. ಗೋಣಿಬಸವ ತನ್ನ ಮಹಿಮೆಯಿಂದ ಅವೆಲ್ಲವುಗಳನ್ನು ಶರಣಾಗುವಂತೆ ಮಾಡಿದನು. ಹರಪನಳ್ಳಿ ಬೇಡರು ಶಿವನಯ್ಯನ ಮಾತುಕೇಳಿ ಕೊಲ್ಲಲು ಬಂದಾಗ ಅವರಿಗೆ ವಿಭೂತಿಯಿಂದ ಹೊಟ್ಟೆ ಉರಿ, ಮೈಕೈನೋವು ಉಂಟಾಗುವಂತೆ ಮಾಡಿದನು. ಅವರು ಕ್ಷಮೆ ಬೇಡಿದ ನಂತರ ಸರಿ ಮಾಡಿದನು. ಚಿಗಟೇರಿಯ ಶಿವನಯ್ಯನ ಆದೇಶದ ಮೇರೆಗೆ ಹರಪನಳ್ಳಿಯ ಉಪ್ಪಾರರು ಗೋಣಿಬಸವನನ್ನು ಕೊಲ್ಲಲು ಊಟದಲ್ಲಿ ಕಾರ್ಕೋಟಕ ವಿಷವನ್ನು

ಹಾಕಿದರು. ಗೋಣಿ ಬಸವನು ಅದೆಲ್ಲವನ್ನು ತಿಂದು ಬದುಕಿದನು. ಸುಣ್ಣದ ಚೀಲದಲ್ಲಿ ಕಟ್ಟಿಹಾಕಿ ನೀರಿನಲ್ಲಿ ಎಸೆದರೆ ಅದರೊಳಗಿಂದ ಮಗುವಾಗಿ ತೇಲಿ ಬಂದನು. ಶಿವನಯ್ಯ ಹರಪನಳ್ಳಿ ಉಪ್ಪಾರರಿಂದ ಗೋಣಿಬಸವನನ್ನು ಬಂಧಿಸಿ ಕಲ್ಲಿನ ಗಾಣದಲ್ಲಿ ಹಾಕಿ ಕೊಲ್ಲಲು ಪ್ರಯತ್ನಿಸಿದರೂ ಸಾಯದೆ ಉಳಿದನು. ಇದರಿಂದ ಇನ್ನೂ ರೊಚ್ಚಿಗೆದ್ದ ಶಿವನಯ್ಯ ಗೋಣಿಬಸವನನ್ನು ಸಾಯಿಸಲು ಆತನು ಮಲಗಿದ್ದ ದನದ ಕೊಟ್ಟಿಗೆಗೆ ಬೆಂಕಿ ಇಟ್ಟನು. ಅಲ್ಲಿಂದಲೂ ಗೋಣಿಬಸವ ಪಾರಾದನು. ಗಾಳಿಪೂಜೆ ಪಟ್ಟಣ(?)ದಲ್ಲಿ ಕಾಡುಸಿದ್ದರಿದ್ದರು. ಇವರ ಹಿಂದೆ ಏಳು ಕೋಟಿ ಸಿದ್ದರಿದ್ದರು. ಇವರು ಮಂತ್ರಶಕ್ತಿಯಿಂದ ಮೊರವಿ ಅಂಗಿಯನ್ನು ಸಿದ್ಧಪಡಿಸಿ ಗೋಣಿಬಸವನಿಗೆ ತೊಡಿಸಲು ಪ್ರಜ್ಞೆ ತಪ್ಪಿಬಿದ್ದನು. ಬಾಲಬಸವ ಈತನ ಮೈಯಲ್ಲಿ ಸೇರಿದ್ದ ವಿಷವನ್ನು ಹಾವಾಗಿ ಬಂದು ಹೀರಿ ತಾನು ಸತ್ತನು. ಪ್ರಜ್ಞೆ ಮರಳಿದ ಗೋಣಿಬಸವ ಸತ್ತ ಹಾವನ್ನು ಬದುಕಿಸಿ ಬಾಲಬಸವನಿಗೆ ಮರುಜನ್ಮ ನೀಡಿದನು. ಅಲ್ಲದೆ ಅವರಿಗೆ ಕರ್ಣಕುಂಡಲಗಳನ್ನು ಕೈಯಲ್ಲಿ ತಂಬೂರಿ, ಉಳುವಿನ ಬೆತ್ತವನ್ನು ನೀಡಿ ಭೂತ, ವರ್ತಮಾನ, ಭವಿಷ್ಯತ್ ಕಾಲಗಳನ್ನು ಅರಿಯುವ ಶಕ್ತಿಯನ್ನು ನೀಡಿದನು. ಶಿವನಯ್ಯನ ಕಾಟದಿಂದ ತಪ್ಪಿಸಿಕೊಳ್ಳಲು ತುಂಗಾಭದ್ರ ನದಿಯಲ್ಲಿ ಕರಿಯ ಕಂಬಳಿಯನ್ನು ಹಾಕಿ ತನ್ನ ಕೈಯಲ್ಲಿನ ಉಳುವಿಬೆತ್ತದಿಂದ ನೀರಿನಲ್ಲಿ ಸಾಗಿದನು. ನದಿ ದಾಟಿ ಹಮ್ಮಿಗಿ ದೇಸಾಯಿಯ ತೋಟದಲ್ಲಿ ಬರಡು ತೆಂಗಿನ ಮರ ಕಾಯಿಗಳನ್ನು ಬಿಡುವಂತೆ ಮಾಡಿದನು. ಮರಗಳೇ ಬಾಗಿ ಈತನಿಗೆ ಕಾಯಿಗಳನ್ನು ಕೊಟ್ಟವು.(ಅನುಬಂಧ-೭, ಛಾಯಾಚಿತ್ರಗಳು, ಚಿತ್ರ ಸಂ.೨೦) ಹಮ್ಮಿಗೆ ದೇಸಾಯಿಯ ಬೆನ್ನು ಬೇತಾಳ ಹುಣ್ಣನ್ನು ತನ್ನ ವೈದ್ಯಕೀಯ ಶಕ್ತಿಯಿಂದ ನಿವಾರಿಸಿದನು. ಅಳವಂಡಿಯ ಸಿದ್ದಲಿಂಗ ಸ್ವಾಮಿಗಳನ್ನು ತನ್ನ ಗುರುಗಳನ್ನಾಗಿ ಮಾಡಿಕೊಳ್ಳಲು ಅವರಿಗೆ ಒಂದು ರಾತ್ರಿಯಲ್ಲಿಯೇ ಗುಡಿಯನ್ನು ಕಟ್ಟಿದನು. ಚಿಗಟೇರಿ ಶಿವನಯ್ಯನು ಗೋಣಿಬಸವನನ್ನು ಹಿಂಬಾಲಿಸಿ ಹಮ್ಮಿಗಿಗೆ ಬಂದು ಯುದ್ಧ ಮಾಡಿದನು. ಈ ಯುದ್ಧದಲ್ಲಿ ಹಮ್ಮಿಗಿ ದೇಸಾಯಿ ಮರಣ ಹೊಂದಿದನು. ಇದರಿಂದ ಕ್ರೋಧನಾದ ಗೋಣಿಬಸವ ತನ್ನ ಉರಿಗಣ್ಣಿನಿಂದ ಶಿವನಯ್ಯನನ್ನು ಕೊಂದನು. ದೇಸಾಯಿಯ ಮೃತದೇಹನ್ನು ಸುಟ್ಟು ಗಾಳಿಪಟ್ಟಣಕ್ಕೆ ಬಂದು ವಿಭೂತಿಯಿಂದ ಅಲ್ಲಿದ್ದ ಸಿದ್ದರನ್ನೆಲ್ಲ ಕಲ್ಲಾಗಿ ಮಾಡಿ ಗುಮ್ಮಗೋಳದ ಮಠದಲ್ಲಿ ನಿಲ್ಲಿಸಿದನು.

ಗೋಣಿಬಸವ ಚರಿತ್ರೆ ಕೃತಿಯು ವಿವರಿಸುವ ಈ ಮೇಲಿನ ಎಲ್ಲ ಪವಾಡಗಳು ಗೋಣಿಬಸವನು ಸಿದ್ಧಪಂಥದವನು ಎನ್ನುವುದನ್ನು ಅನುಮಾನಕ್ಕೆ ಎಡೆ ಇಲ್ಲದಂತೆ ದೃಢಪಡಿಸುತ್ತವೆ. ಈತನ ಪವಾಡದಿಂದಾಗಿ ಒಕ್ಕಲಾದ ವಿವಿಧ ವರ್ಗದ ಜನರು ಗೋಣಿಬಸವನ ಜಾತ್ರೆಯಲ್ಲಿ ಭಾಗವಹಿಸುತ್ತಾರೆ. ಚಿಕ್ಕಳ್ಳಿಯಲ್ಲಿ ಮಾಡಿದ ಪವಾಡದಿಂದಾಗಿ ಚಿಕ್ಕಳ್ಳಿಯ ಬಣಕಾರರು ಪಲ್ಲಕ್ಕಿ ಸೇವೆಯನ್ನು ನಿರ್ವಹಿಸಿದರೆ, ಅಡವಿ ಹಳ್ಳಿಯ ಕುಂಬಾರರು ಜಾತ್ರೆಗಿಂತ ಐದು ದಿವಸ ಮುಂಚಿತವಾಗಿ ಒಂದು ಬಂಡಿ ಗಡಿಗೆಗಳನ್ನು ಕೂಲಹಳ್ಳಿ ಮಠಕ್ಕೆ ಕಳುಹಿಸಿಕೊಡುತ್ತಾರೆ. ಹಾಗೆಯೇ ಕೊಳಚೆ ಗ್ರಾಮದವರು ಒಂದು ಬಂಡಿ ತೆಂಗಿನ ಕಾಯಿ ಮತ್ತು ಗರಿಗಳನ್ನು, ಬಾಗಳಿಯ ಜಂಗಮರು ರಥವನ್ನು ಕಟ್ಟುತ್ತಾರೆ. ಬಂಡ್ರಿಯ ಕೊರವ ಮನೆತನದವರು ೧೦೧

ಕಸಬರಿಕೆಗಳನ್ನು ಕೂಲಹಳ್ಳಿ ಜಾತ್ರೆಗೆ ಕಳುಹಿಸುತ್ತಾರೆ. ಅಡವಿಹಳ್ಳಿಯ ವಡ್ಡೆಟ್ಟವ್ವನ ಸಹೋದರ ಮನೆತನದವರು ೧ ಡಬ್ಬಿ ಎಣ್ಣೆಯನ್ನು ಒಬಳಾಪುರದಿಂದ ರಥಕ್ಕೆ ಹಗ್ಗವನ್ನು ಹರಪನಳ್ಳಿ ಉಪ್ಪಾರರು ಜಾತ್ರೆ ನಡೆಯುವುದಕ್ಕಿಂತ ಮುಂಚಿತವಾಗಿ ಕೂಲಹಳ್ಳಿಗೆ ಬಂದು ಮಠಕ್ಕೆ ಸುಣ್ಣ ಬಳಿದು ಹೋಗುವರು. ಹೀಗೆ ವಿವಿಧ ವರ್ಗಗಳು ಈತನ ರಥೋತ್ಸವದ ಸಂದರ್ಭದಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುವುದು ಗೋಣಿಬಸವನ ಪ್ರಸಿದ್ಧಿಯನ್ನು ಆ ವರ್ಗಗಳ ಆರಾಧ್ಯ ದೈವವಾಗಿ ಈತ ಇರುವುದನ್ನು ಸೂಚಿಸುತ್ತದೆ.

ಗೋಣಿಬಸವ ಗಾಳಿಪೂಜೆಯ ಸಿದ್ದರನ್ನು ಸೋಲಿಸಿ 'ಅವರಲ್ಲಿದ್ದ ಯಂತ್ರ-ಮಂತ್ರ ಮಾಯಮಾಟದ ಪುಸ್ತಕಗಳನ್ನು ಕೂಲಹಳ್ಳಿ ಕ್ಷೇತ್ರಕ್ಕೆ ತರಲಾಯಿತು. ಉಳಿದ ಕೆಲವು ಮಾಟದ ಗ್ರಂಥಗಳನ್ನು ಗುಮ್ಮಗೋಳದ ಮುಸುಕಿನ ಬಾವಿಯಲ್ಲಿ ಹಾಕಲಾಯಿತು.'(ಈಡಿಗರ ಚಂದ್ರಪ್ಪ, ೧೯೯೦, ಪು.೧೮೩) ಈ ಯಂತ್ರ ಮಾಯ ಮಾಟದ ಪುಸ್ತಕಗಳು ನಾಥಯೋಗಿಗಳಲ್ಲಿ ವೈದ್ಯಕೀಯ ಗುಣವನ್ನು ಯೌಗಿಕ ಜ್ಞಾನವನ್ನು ಪಡೆಯಲು ಸಹಾಯಕವಾಗಿದ್ದವು. ಗೋಣಿಬಸವ ನಾಥಯೋಗಿಯಾಗಿದ್ದರಿಂದ ಇವುಗಳನ್ನು ತನ್ನ ಮಠಗಳಲ್ಲಿ ಸಂಗ್ರಹಿಸಿದ್ದಾನೆ. ಈಗಲೂ ಈ ಮಠದಲ್ಲಿ(ಗುಮ್ಮಗೋಳ) ಸಿದ್ದರ ಪ್ರತಿಮೆಗಳಿವೆ. 'ಪ್ರತಿವರ್ಷ ಗೋಣಿ ಬಸವೇಶ್ವರ ರಥೋತ್ಸವವು ನಡೆಯುವ ಒಂದು ದಿವಸ ಮುಂಚಿತವಾಗಿ ಹಮ್ಮಿಗೆಯಿಂದ ಸಿದ್ದರ ಪೂಜಾರಿಯು ದಿಗಂಬರ ರೂಪದಲ್ಲಿ ಬಂದು ಇವುಗಳನ್ನು ಪೂಜಿಸಿಕೊಂಡು ಹೋಗುವ ವಾಡಿಕೆ ಇದೆ.' (ಅದೇ, ಪು.೧೮೩)

ಗೋಣಿಬಸವ ವಿವಿಧ ರೋಗಗಳನ್ನು ವಾಸಿಮಾಡುವ ಪವಾಡಗಳು, ಕಂಬಳಿ ಹಾಸಿ ನದಿದಾಟಿದ ಪವಾಡ, ಆತ ತೊಡುವ ವಸ್ತ್ರಾಭರಣಗಳು, ಜಾತ್ರೆಯಲ್ಲಿ ಕಂಡುಬರುವ ಆಚರಣೆಗಳು, ಈಗಲೂ ಮದ್ದು ಚಿಕಿತ್ಸೆಯನ್ನು ಕೊಡುವ ಪದ್ಧತಿಯನ್ನು ಉಳಿಸಿಕೊಂಡಿರುವ ಕೂಲಹಳ್ಳಿ ಮಠ ಇವೆಲ್ಲವೂ ಗೋಣಿಬಸವ ಶೈವ-ನಾಥಸಿದ್ಧನಾಗಿ ಜನಪದರ ಆರಾಧ್ಯದೈವನಾಗಿದ್ದನು ಎನ್ನುವುದನ್ನು ಸೂಚಿಸುತ್ತದೆ.

### ೫.೩.೪. ಬಾಲಬಸವರು

ಕರ್ನಾಟಕದಲ್ಲಿನ ಸಾಂಸ್ಕೃತಿಕ ನಾಯಕರನ್ನು ಕುರಿತು ಹಾಡುವ ಪ್ರತ್ಯೇಕ ಪಂಥಗಳೇ ಬೆಳೆದುಬಂದಿವೆ. ಈ ಜನರು ತಮ್ಮ ಆರಾಧ್ಯದೈವವನ್ನು ಕುರಿತು ಹಾಡುವುದನ್ನೇ ತಮ್ಮ ಕಾಯಕವಾಗಿಸಿಕೊಂಡಿದ್ದಾರೆ. ಮಂಟೇಸ್ವಾಮಿಯನ್ನು ಕುರಿತು ನೀಲಗಾರರ ಪಂಥ, ಮಲೆಮಾದೇಶ್ವರನ ಕುರಿತು ದೇವರಗುಡ್ಡರ ಪಂಥ ಕತೆಕಟ್ಟಿ ಹಾಡಿನ ರೂಪದಲ್ಲಿ ಹಾಡುತ್ತಾ ಕಾಲಜ್ಞಾನಗಳನ್ನು ಸಾರುತ್ತಾ ಬದುಕಿದ್ದಾರೆ. ಈ ರೀತಿಯೇ ಗೋಣಿಬಸವನ ಜೀವನದ ಕುರಿತು ಕಾವ್ಯ ಹಾಡುತ್ತಾ ಕಾಲಜ್ಞಾನವನ್ನು ಸಾರುತ್ತಾ ಬದುಕಿರುವ ಮತ್ತೊಂದು ವಿಶಿಷ್ಟ ಪಂಥವೆಂದರೆ ಬಾಲಬಸವರ ಪಂಥ. ಮಧ್ಯಕರ್ನಾಟಕ ಭಾಗದಲ್ಲಿ ಹೆಚ್ಚಾಗಿ ಕಂಡುಬರುವ ಬಾಲಬಸವರು ಮಾದಿಗ ಕುಲದವರಾಗಿದ್ದಾರೆ. ಕೂಲಹಳ್ಳಿಯ ಗೋಣಿಬಸವನು ಈ

ಜನಾಂಗಕ್ಕೆ ಲಿಂಗದೀಕ್ಷೆಯನ್ನು ಮಾಡಿದ್ದರಿಂದ ಇವರು ಮಾದಿಗರಲ್ಲಿಯೇ ಗುರುವರ್ಗದವರಾಗಿದ್ದು ಕಾಲಜ್ಞಾನವನ್ನು ಸಾರುವ ಸಂದರ್ಭದಲ್ಲಿ ಕೊರಳಲ್ಲಿ ಲಿಂಗ, ಕಿವಿಯಲ್ಲಿ ಕರ್ಣಕುಂಡಲಗಳನ್ನು, ಕಾವಿಬಟ್ಟೆಯನ್ನು ಹಾಗು ಕೈಯಲ್ಲಿ ಉಳುವಿನ ಬೆತ್ತವನ್ನು ಬೆರಳಲ್ಲಿ ಬಸವ ಮುದ್ರೆಯಿರುವ ಉಂಗುರವನ್ನು ಧರಿಸುತ್ತಾರೆ.

ಬಾಲಬಸವರಿಗೆ ಲಿಂಗದೀಕ್ಷೆಯಾದ ಬಗ್ಗೆ ಕತೆಯೊಂದು ಹೇಳಲಾಗುತ್ತದೆ. 'ಒಮ್ಮೆ ಗೋಣಿಬಸವ ಹೀಲದಹ್ಳಿ ಎನ್ನುವ ಗ್ರಾಮಕ್ಕೆ ಭಿಕ್ಷಾಟನೆಗೆ ಹೋಗಿದ್ದನು. ಅಲ್ಲಿ ಹರಿಜನ ಕೇರಿಯ ಜನರು ಭಿಕ್ಷೆ ನೀಡುವ ಮೊದಲು ಏನಾದರೊಂದು ಪವಾಡ ಮಾಡಿ ನಿನ್ನ ಶಕ್ತಿಯನ್ನು ತೋರಿಸೆಂದು ಸವಾಲು ಎಸೆದರು. ಆಗ ಗೋಣಿಬಸವ ಅಲ್ಲಿಯೇ ಇದ್ದ ಬಂಜೆ ಆಕಳು ಕರುವನ್ನು ಹಾಕುವಂತೆ ತನ್ನ ವಿಭೂತಿಯನ್ನು ಅದರ ಮೈಗೆ ಹಚ್ಚಿದನು. ಕೆಲವೇ ದಿನಗಳಲ್ಲಿ ಬಂಜೆ ಆಕಳು ಕರುವಿಗೆ ಜನ್ಮ ನೀಡಿತು. ಈತನ ಪವಾಡ ಶಕ್ತಿಯನ್ನು ಕಂಡು ಹರಿಜನಕೇರಿಯ ಜನರು ಕ್ಷಮೆ ಕೇಳಲು ಕೂಲಹಳ್ಳಿಗೆ ಬಂದರು. ಆಗ ಗೋಣಿಬಸವ ಹರಿಜನರಿಗೆ ಲಿಂಗದೀಕ್ಷೆಯನ್ನು ನೀಡಿ 'ನಿಮಗೆ ಬಾಲದ ಕರುವನ್ನು ಕೊಟ್ಟಿದ್ದರಿಂದ ನಿಮಗೆ ನಿಮ್ಮ ವಂಶಕ್ಕೆ 'ಬಾಲಬಸವ' ಎಂಬ ಹೆಸರು ಅಚ್ಚಳಿಯದಂತೆ ಉಳಿಯಲಿ ಎಂದು ಹಾರೈಸಿದನು. ಅಲ್ಲದೆ ಈ ಊರಿಗೆ ಮೊದಲು 'ಕಂಬದಮ್ಮನ ಹಳ್ಳಿ' ಎನ್ನುವ ಹೆಸರಿದ್ದು ಬಂಜೆ ಆಕಳು ಕರುವನ್ನು ಈದಿದ್ದರಿಂದ ಹೀಲದಳ್ಳಿ ಎನ್ನುವ ಹೆಸರು ಬಂತೆಂದು ಹೇಳಲಾಗುತ್ತದೆ. ಈ ಊರಿನಲ್ಲಿ ಗೋಣಿಬಸವನ ಮಠವಿದ್ದು ಬಾಲಬಸವರೇ ಪೂಜಿಸುತ್ತಾರೆ.

ಒಮ್ಮೆ ಗೋಣಿಬಸವನನ್ನು ಕೊಲ್ಲಲು ಚಿಗಟೇರಿಯ ಶಿವನಯ್ಯ ಗಾಳಿಪೂಜೆ ಪಟ್ಟಣದಿಂದ ಸಿದ್ದರನ್ನು ಕರೆಸಿದ. ಅವರು 'ಮೂರು ವಿಧದ ಧವಸಧಾನ್ಯಗಳನ್ನು ೯೦೦ ಸೇರು ತರಿಸಿದರು, ೮೦ ಮಣ ಹಸಿರು ಗಿಡಮೂಲಿಕೆಗಳನ್ನು ತರಿಸಿ ಮಂತ್ರ-ತಂತ್ರಗಳಿಗೆ ಬೇಕಾದ ಸಾಮಾಗ್ರಿಗಳನ್ನೆಲ್ಲಾ ಸೇರಿಸಿ ಗೋಣಿಬಸವನನ್ನು ಕೊಲ್ಲಲು ಸಂಚು ಹೂಡಿದರು'(ಈಡಿಗರ ಚಂದ್ರಪ್ಪ, ೧೯೯೦, ಪು.೧೪೩-೧೪೪) ಪೂಜೆಯನ್ನು ಮಾಡಿ ತಂತ್ರ ಶಕ್ತಿಯಿಂದ ಮೊರವಿ ಅಂಗಿಯನ್ನು ತಯಾರಿಸಿ ಗೋಣಿಬಸವನಿಗೆ ಧರಿಸಿಕೊಳ್ಳಲು ಕೊಟ್ಟರು. ಇವರು ಕೊಟ್ಟ ಅಂಗಿಯನ್ನು ಧರಿಸಿಕೊಳ್ಳುತ್ತಿದ್ದಂತೆ ಗೋಣಿಬಸವ ಸತ್ತು ಬಿದ್ದನು. ಆಗ ಬಾಲಬಸವನು ಹಾವಾಗಿ ಬಂದು ಗೋಣಿಬಸವನ ಮೈಯಲ್ಲಿದ್ದ ವಿಷವನ್ನೆಲ್ಲಾ ಹೀರಿ ಬದುಕಿಸಿದನು. ವಿಷ ಹೀರಿದ್ದರಿಂದ ಬಾಲಬಸವನು ಸತ್ತನು. ಬದುಕಿದ್ದ ಗೋಣಿಬಸವ ತನ್ನ ಉಳುವಿನ ಬೆತ್ತದಿಂದ ಬಾಲಬಸವನನ್ನು ಬದುಕಿಸಿ 'ತನ್ನ ಕಿವಿಯಲ್ಲಿ ಧರಿಸಿದ್ದ ಕರ್ಣಕುಂಡಲಗಳನ್ನು ತೆಗೆದು ಬಾಲಬಸವನ ಕಿವಿಯಲ್ಲಿ ಧರಿಸಿ ಬಾಲಬಸವ ನಾನು ಕೊಟ್ಟ ಕರ್ಣಕುಂಡಲಗಳ ಮಹಿಮೆಯಿಂದ ಮುಂದಿನ ಆಗಮನವೂ ನಿನ್ನ ಕಿವಿಯಲ್ಲಿಯೇ ಅರಿವಾಗಲಿ, ನಿನ್ನ ಕೈಯಲ್ಲಿ ತಂಬೂರಿಯನ್ನು ಹಿಡಿದುಕೊಂಡು ಮದ್ಯಾಹ್ನ ಒಂದು ಗಂಟೆಯವರೆಗೆ ಮುಂದಿನ ಆಗಮನವು ಅರಿವಾಗಲಿ, ಆನಂತರ ನಿನಗೆ ತಿಳಿಯದಂತಾಗಲಿ ಎಂದು, ಇದೇ

ನಿನಗೆ ಗೋಣಿಬಸವ ಹೇಳುವ ವಾಕ್ಯವೆಂದರು'(ಅದೇ, ಪು.೧೫೨) ಆಗಿನಿಂದ ಬಾಲಬಸವರು ಮಧ್ಯಾಹ್ನ ಒಂದು ಗಂಟೆಯವರೆಗೆ ಮಾತ್ರ ಕಾಲಜ್ಞಾನವನ್ನು ಸಾರುತ್ತಾ ಬದುಕಿದ್ದಾರೆ.

ಈ ಬಾಲಬಸವರು ಗೋಣಿಬಸವನ ಕಾವ್ಯವನ್ನು ಮಾತ್ರ ಹಾಡದೆ ಮರುಳಸಿದ್ದನಕತೆ, ಸೊಂಡೂರು ಮಹಾರಾಜನಕತೆ, ಬಸವ ಲೋಹಿತಕತೆ, ಇಗ್ನಾವತಿಕತೆ ಲಕ್ಷಾಪತಿರಾಜನಕತೆ, ನೀಲಕಂಠರಾಜನಕತೆ, ಬಾಳ ಭಿಕ್ಷುಕ ರಾಜನಕತೆ, ಶಿವಲೋಚನೆಕತೆ, ಅರಣ್ಯಕುಮಾರಕತೆಗಳನ್ನು ಹಾಡುತ್ತಾರೆ. ಈಗ ಗೊಲ್ಲರಹಳ್ಳಿ (ಕೂಡ್ಲಿಗಿ ತಾ.)ಯಲ್ಲಿರುವ ತುಮನೆಪ್ಪ ಎನ್ನುವ ಬಾಲಬಸವ ೩೨ ಕತೆಗಳನ್ನು ಹೇಳುತ್ತಾನೆ.

ಬಾಲಬಸವರು ಹಾಡುವ ಗೋಣಿಬಸವನಕಾವ್ಯ ಮತ್ತು ಮರುಳಸಿದ್ಧನಕಾವ್ಯದ ಪ್ರಾರಂಭದಲ್ಲಿ ಕಲ್ಯಾಣದ ಪ್ರಸಂಗವನ್ನು ಹೇಳುತ್ತಾರೆ. ಇದರಲ್ಲಿ ಕಲ್ಯಾಣದಲ್ಲಿನ ಜಂಗಮರಲ್ಲಿ ಪೊಳ್ಳು ಜಂಗಮರಾಗಿದ್ದು ಅವರನ್ನು ಪರಮಾತ್ಮ ಪರೀಕ್ಷಿಸಲು ಬರುತ್ತಾನೆ. ಆತ ಸತ್ತ ಕರುವನ್ನು ಹೆಗಲಿಗೆ ಹಾಕಿಕೊಂಡು, ಕರುಳನ್ನು ಕೊರಳಿಗೆ ಹಾಕಿಕೊಂಡು, ಹೇಸಿಗೆಯನ್ನು ಮೈತುಂಬಾ ಬಳಿದುಕೊಂಡು ಕಲ್ಯಾಣದಲ್ಲಿನ ಬಸವಣ್ಣನ ದ್ವಾರ ಬಾಗಿಲಿಗೆ ಬರುತ್ತಾನೆ. ಅಲ್ಲಿ ಆತನನ್ನು ಒಳಗೆ ಬಿಡದೆ ಹೊಡೆದು ಕಳಿಸಲಾಗುತ್ತದೆ. ಆಗ ಪರಮಾತ್ಮ ಒಂದು ಗುಂಡಿಯಲ್ಲಿ ಹೋಗಿ ಕುಳಿತು ಕೊಳ್ಳುತ್ತಾನೆ. ಈತನಿಗೆ ಹೊಡೆದ ಏಟುಗಳೆಲ್ಲ ಬಸವಣ್ಣ, ನೀಲಮ್ಮಗೆ ಬಿದ್ದು ಅವರಿಗೆ ತಮ್ಮ ತಪ್ಪಿನ ಅರಿವಾಗಿ ಪರಮಾತ್ಮನನ್ನು ಹುಡುಕಿಕೊಂಡು ಗುಂಡಿ ಹತ್ತಿರಬಂದು ಕರೆಯುತ್ತಾರೆ. ಆತ ಬರಲು ಒಪ್ಪದಿದ್ದಾಗ ಆತನನ್ನು ಎತ್ತಾಕಿಕೊಂಡು ಹೋಗಲು ಪ್ರಯತ್ನಿಸಿದರೆ ಆ ಗುಂಡಿಯೆಲ್ಲ ರಕ್ತ ಕೀವಾಗಿ ಆವರಿಸಿಕೊಳ್ಳುತ್ತದೆ. ಅದನ್ನೇ ದಾಸೋಹದ ಮನೆಗೆ ಬಸವಣ್ಣ ತರುತ್ತಾನೆ. ಅಲ್ಲಿದ್ದ ಪೊಳ್ಳು ಜಂಗಮರಲ್ಲಿ ಇದನ್ನು ವಿರೋಧಿಸುತ್ತಾರೆ. ಅವರು ಮೈಲಿಗೆಯಾಯಿತೆಂದು ತ್ರಿಪುರಾಂತ ಕೆರೆಗೆ ಸ್ನಾನ ಮಾಡಲು ಹೋದರೆ ಕೆರೆಯಲ್ಲಿ ರಕ್ತಕೀವಾಗಿ ಕಾಣುತ್ತದೆ. ಅವರು ನೀರಿನಲ್ಲಿ ಮುಳುಗಿದಾಗ ಲಿಂಗವೆಲ್ಲ ಮಾಯವಾಗಿ ವಸ್ತ್ರ ಮಾತ್ರ ಉಳಿದುಬರುತ್ತದೆ. ಇವರೇ ಮುಸಲ್ಮಾನರಾದರು ಎಂದು ಬಾಲಬಸವರು ಹೇಳುತ್ತಾರೆ.(ಅನುಬಂಧ-೬, ಗೋಣಿಬಸವನ ಕಾವ್ಯದ ಆಯ್ದಭಾಗ)

ಮೇಲಿನ ಪ್ರಸಂಗವನ್ನು ನೋಡಿದರೆ ಬಾಲಬಸವರು ಕಲ್ಯಾಣಕ್ರಾಂತಿಯ ನಂತರ ಆದ ಬಸವ ಚಳುವಳಿಯ ಸಾಂಸ್ಥಿಕತೆಯನ್ನು ವಿಡಂಬಿಸುತ್ತಿದ್ದಾರೆ ಎನ್ನುವುದು ಸ್ಪಷ್ಟವಾಗುತ್ತದೆ. ಬಸವಣ್ಣನ ಕಾಲದಲ್ಲಿ ಕುಲೇಳು ಹದಿನೆಂಟು ಜಾತಿಗಳು ಒಂದಾಗಿದ್ದವು ನಂತರದ ನೂರೊಂದು ವಿರಕ್ತರ ಮತ್ತು ತೋಂಟದ ಸಿದ್ದಲಿಂಗಯತಿಗಳ ಕಾಲಘಟ್ಟದಲ್ಲಿ ಸಾಂಸ್ಥಿಕ ರೂಪವನ್ನು ಪಡೆದು ಮಠಗಳನ್ನು ಕಟ್ಟಿಸುವ ದಾನದತ್ತಿಗಳನ್ನು ಪಡೆಯುವ ಮೂಲಕ ಕೆಳವರ್ಗದಿಂದ ವೀರಶೈವ ಧರ್ಮ ದೂರವಾಯಿತು. ಈ ರೀತಿ ದೂರವಾದ, ಕಲ್ಯಾಣದ ಆದರ್ಶಗಳು ಮರೆಯಾದ ಬಗ್ಗೆ ಬಾಲಬಸವರು ತಮ್ಮ ಕಾವ್ಯದ ಮೂಲಕ ಪ್ರತಿಕ್ರಿಯೆಯನ್ನು

ನೀಡಿದ್ದಾರೆ. ಇವರು ಹಾಡುವ ಕಾವ್ಯಗಳನ್ನು ಗಮನಿಸಿದರೆ ಮಂಟೇಸ್ವಾಮಿ ಕಾವ್ಯದ ಪ್ರಭಾವ ಇವರಿಗಾಗಿದೆ ಎನ್ನಬಹುದು. ಅಥವಾ ಬಾಲಬಸವರ ಪಂಥವು ಕೊಡೇಕಲ್ ಪರಂಪರೆಯ ಪ್ರಭಾವದಿಂದ ಹುಟ್ಟಿಕೊಂಡಿರಬಹುದು ಎನ್ನಿಸುತ್ತದೆ. ಬಸವಣ್ಣನ ದತ್ತು ಪುತ್ರರು ಎಂದು ಹೇಳಿಕೊಳ್ಳುವ ಬಾಲಬಸವರು ಕೊಡೇಕಲ್‌ಬಸವಣ್ಣನನ್ನು ಸೂಚಿಸುತ್ತಿರಬಹುದು.

ಬಾಲಬಸವರು ಕಾಲಜ್ಞಾನವನ್ನು ಸಾರುವ ಆರಂಭದಲ್ಲಿ ಬಸವಣ್ಣನ ಸ್ತುತಿಯನ್ನು ಮಾಡುತ್ತಾರೆ. 'ಬಸವನೇ ಅಜ್ಜ, ಬಸವನೇ ಅಜ್ಜಿ, ಬಸವನೇ ತಾಯಿ, ಬಸವನೇ ತಂದೆ, ಬಸವನೇ ಬಂಧು, ಬಸವನೇ ಬಳಗ, ಅಣ್ಣ ಬಸವ, ತಮ್ಮನು ಬಸವ, ಬಸವನೇ ಭುಜಬಾಲದಂಡ, ಲಂಕೆಗೆ ಲಾಗವನೆಕೊಂಡ, ಉದ್ದಂಡ, ಬಸವ ತೊಟ್ಲಾಗಳ ಬಾಲಶಿಶು ಕಾಣಯ್ಯ'(ಅನುಬಂಧ-೫, ಬಾಲಬಸವರ ಕಾಲಜ್ಞಾನ ಸಾಹಿತ್ಯ) ಎಂದು ಸ್ತುತಿಸುತ್ತಾರೆ. ಇಲ್ಲಿ ಬರುವ ಬಾಲಶಿಶು ಎನ್ನುವುದು ಬಾಲಬಸವರಾಗಿದೆ. ಬಾಲಬಸವರ ಬಗೆಗೆ ಅಧ್ಯಯನ ಮಾಡಿರುವ ಬಿ.ಆರ್.ಮಂಜುನಾಥರ ಪ್ರಕಾರ 'ಮಂಟೇಸ್ವಾಮಿ ಕಥಾಪ್ರಸಂಗವನ್ನು ಹೇಳುವ ನೀಲಗಾರರಂತೆ ಕೊಡೇಕಲ್ಲಿನ ಕಾಲಜ್ಞಾನವನ್ನು ಹೊತ್ತುಸಾರುವ ಸಾಂಪ್ರದಾಯದವರಾದ ಬಾಲಬಸವರು ಹಳೇ ಮೈಸೂರಿಗೆ ಸೇರಿದ ಚಿತ್ರದುರ್ಗ ಜಿಲ್ಲೆ ಇನ್ನಿತರೆಡೆಗಳಲ್ಲಿ ಕಂಡುಬರುತ್ತಾರೆ. ಬಾಲಬಸವರು ಆ ಕಾಲಜ್ಞಾನದ ಇಡೀ ಸಾಹಿತ್ಯ ಮತ್ತು ಸಂಪ್ರದಾಯವನ್ನು ಉಳಿಸಿಕೊಂಡು ಬಂದಿದ್ದಾರೆ. ಇವರು ನೀಲಗಾರರಂತೆ ಶರಣ ಸಂತತಿಯಲ್ಲಿಯೇ ಬರುವಂತವರಾಗಿದ್ದಾರೆ.'(ಬಿ.ಆರ್.ಮಂಜುನಾಥ, ೨೦೦೧, ಪು.೨೦) ಈ ಅಭಿಪ್ರಾಯವನ್ನು ಗಮನಿಸಿದರೆ ಬಾಲಬಸವರಿಗೂ ಕೊಡೇಕಲ್ಲಿಗೂ ಇರುವ ಸಂಬಂಧ ಅರಿವಾಗುತ್ತದೆ. ಕೊಡೇಕಲ್ ಕಾಲಜ್ಞಾನಗಳಲ್ಲಿರುವಂತೆ ಬಾಲಬಸವರ ಕಾಲಜ್ಞಾನಗಳಲ್ಲಿಯೂ ಮುಸ್ಲಿಂ ಪ್ರಭಾವ ಕಂಡುಬರುತ್ತದೆ. 'ಅಲ್ಲ ಎಂಬುದು ಬಸವಣ್ಣ, ಕುದಾ ಎಂಬುವನು ಸಾಕ್ಷಾತ್ ಶಿವ, ಪಾತ್ಮಬೀಬಿ ಎಂಬುವಳು ಪಾರ್ವತಿ' ಎಂದು ಹೇಳುವ ಬಾಲಬಸವರ ಕಾಲಜ್ಞಾನಕ್ಕೂ' ಮುಲ್ಲನಾದೆ ಬಿಸ್ಮಿಲ್ಲ ಎಂದೆಂಬುತ ಸಲ್ಲಿಲ್ಲಾ ಮಹಮದನಾದೆನಯ್ಯಾ ಜಗಕೆ' ಎನ್ನುವ ಕೊಡೇಕಲ್‌ಬಸವಣ್ಣನಿಗೂ ನಿಕಟ ಸಂಬಂಧ-ಸಂಪರ್ಕವಿದೆ ಎಂದು ದೃಢವಾಗುತ್ತದೆ.

ಬಾಲಬಸವರು ಮೂಲತಃ ಮಾದಿಗ ಕುಲದವರಾಗಿದ್ದು ಲಿಂಗದೀಕ್ಷೆಯಿಂದಾಗಿ ವೀರಶೈವರಾಗಿರುವುದರಿಂದ ಇವರಿಗೆ ಮಾದಿಗ ಕುಲದಲ್ಲಿ ಹೆಣ್ಣನ್ನು ಕೊಡುತ್ತಾರೆ. ಆದರೆ ಹೆಣ್ಣನ್ನು ತೆಗೆದುಕೊಳ್ಳುವುದಿಲ್ಲ. ಬಾಲಬಸವರ ಹೆಂಗಸರು ಹೆಚ್ಚಾಗಿ ಬಸವಿಯರಾಗಿ ಜೀವನ ಸಾಗಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಹೆಗ್ಗಡೇರು, ಎನುಮಲರು, ಬಂಡಾರಿಗಳು, ಸಕ್ರೇರು, ಮಿನುಗಲರು, ಮುಚ್ಚೇರು ಎನ್ನುವ ಗೋತ್ರಗಳಲ್ಲಿ ಹೆಣ್ಣನ್ನು ವಿವಾಹ ಮಾಡಿಕೊಳ್ಳುತ್ತಾರೆ. ಮೂಲತಃ ಬಾಲಬಸವರಲ್ಲಿ ಕುರಿಯರು, ಬಸವಲರು, ಮಂದಲರು ಎನ್ನುವ ಮೂರೆ ಬೆಡಗುಗಳಿದ್ದು ಈ ಸ್ವಗೋತ್ರಗಳಲ್ಲಿ ಅವರು ಮದುವೆಯಾಗುವುದಿಲ್ಲ.

## ೫.೪. ಹರಪನಳ್ಳಿ ಕೆಂಪಯ್ಯ ಮತ್ತು ಅರಸೀಕೆರೆ ಕೋಲಶಾಂತ

ಪಂಚಗಣಾಧೀಶ್ವರರಲ್ಲಿಯೇ ಕಡಿಮೆ ಜನಪ್ರಿಯರೆಂದರೆ ಕೆಂಪಯ್ಯ ಮತ್ತು ಕೋಲಶಾಂತ. ಇವರ ಬಗ್ಗೆ ಸಿಗುವ ಚಾರಿತ್ರಿಕ ವಿವರಗಳೂ ಅತ್ಯಲ್ಪ. ಜನಪದ ಹಾಡುಗಳಾಗಲಿ, ಕತೆಗಳಾಗಲಿ, ಇವರಿಗೆ ನಡೆದುಕೊಳ್ಳುವ ಜನಸಮುದಾಯಗಳಾಗಲಿ ಬಹಳಷ್ಟು ಕಡಿಮೆ. ಯಾಕೆ ಹೀಗೆ? ಮುಖ್ಯವಾಗಿ ಹರಪನಳ್ಳಿ ಮತ್ತು ಅರಸೀಕೆರೆ ಸ್ಥಳಗಳು ಕೊಟ್ಟೂರು ಮತ್ತು ಕೂಲಹಳ್ಳಿ ಪ್ರದೇಶಗಳಿಗೆ ತುಂಬಾ ಹತ್ತಿರದಲ್ಲಿವೆ. ಬೇಡ ಮತ್ತು ಲಿಂಗಾಯತ ಸಮುದಾಯಗಳು ಇಲ್ಲಿ ಹೆಚ್ಚಾಗಿ ವಾಸಿಸುತ್ತಿವೆ. ಬೇಡ ಜನಾಂಗವು ಹರಪನಳ್ಳಿ ಪಾಳೇಗಾರರ ಕಾಲದಿಂದಲೂ ಕೊಟ್ಟೂರ ಗುರುಬಸವನಿಗೆ ನಡೆದುಕೊಳ್ಳುತ್ತಿವೆ. ಮತ್ತು ಕೂಲಹಳ್ಳಿ ಮದ್ದಾನಸ್ವಾಮಿ ಬೇಡರ ಕನಕವ್ವನನ್ನು ಮದುವೆಯಾಗಿದ್ದರಿಂದ, ಈಗಲೂ ಕೂಲಹಳ್ಳಿ ಮಠದ ಸ್ವಾಮಿಗಳು ಬೇಡ ಜನಾಂಗದವರೇ ಆಗಿರುವುದರಿಂದ ಆ ಮಠದೊಂದಿಗೆ ಆತ್ಮೀಯ ಸಂಬಂಧವನ್ನು ಬೇಡ ಜನಾಂಗವು ಹೊಂದಿದೆ. ಇನ್ನು ಲಿಂಗಾಯತ ಸಮುದಾಯವು ಸಾಮಾಜಿಕವಾಗಿ ಉನ್ನತ ವರ್ಗವಾಗಿದ್ದು, ಅದು ಕೊಟ್ಟೂರು ಗುರುಬಸವನೊಂದಿಗೆ ಸಂಬಂಧವನ್ನು ಏರ್ಪಡಿಸಿಕೊಂಡಿದೆ.

ಕೂಲಹಳ್ಳಿ ಮಠವು ದುಡಿವ ವರ್ಗದ ಆರಾಧ್ಯದೈವವಾಗಿದ್ದು ಹೆಚ್ಚು ಜನಪದೀಕರಣಗೊಂಡಿದೆ. ಬಾಲಬಸವರು ಈ ಮಠದ ಕುರಿತು ಕಾವ್ಯವನ್ನೂ ಹಾಡುತ್ತಾರೆ. ಇನ್ನು ಕೊಟ್ಟೂರ ಗುರುಬಸವನಿಗೆ ಹೆಚ್ಚಾಗಿ ಉನ್ನತವರ್ಗಗಳೂ ನಡೆದು ಕೊಳ್ಳುವುದರಿಂದ ಶಿಷ್ಟಕಾವ್ಯ(ಕೊಟ್ಟೂರ ಬಸವೇಶ್ವರ ಚಾರಿತ್ರ್ಯ) ರಚನೆಗೆ ಕಾರಣರಾಗಿದ್ದಾರೆ. ಹರಪನಳ್ಳಿ ಕೆಂಪಯ್ಯನಿಗೆ ಮತ್ತು ಅರಸೀಕೆರೆ ಕೊಲಶಾಂತಯ್ಯನಿಗೆ ಸಂಬಂಧಿಸಿದಂತೆ ಯಾವುದೇ ವರ್ಗವು ವಿಶಿಷ್ಟವಾಗಿ ನಡೆದುಕೊಳ್ಳುವುದಿಲ್ಲವಾದ್ದರಿಂದ ಹೆಚ್ಚು ಜನಪದೀಕರಣವೂ ಆಗದೆ, ಶಿಷ್ಟಕಾವ್ಯಗಳ ರಚನೆಗೂ ಅವಕಾಶವಿಲ್ಲದೆ, ಯಾವುದೇ ದಾನ-ದತ್ತಿಗಳು, ರಾಜಾಶ್ರಯಗಳು ಇಲ್ಲದೆ ಉಳಿದುಕೊಂಡಿವೆ. ಹಾಗಾಗಿ ಈ ಇಬ್ಬರು ಸಂತರ ಕುರಿತು ಚಾರಿತ್ರಿಕ ಆಧಾರಗಳಾಗಲಿ, ಆಚರಣೆಗಳಾಗಲಿ, ಬಹುದೊಡ್ಡ ಜನಸಮುದಾಯವಾಗಲಿ ನಮಗೆ ಕಂಡುಬರುವುದಿಲ್ಲ.

ಸಂಸ್ಕೃತಿ ಅಧ್ಯಯನವನ್ನು ಕೈಗೊಳ್ಳುವಾಗ ಉಂಟಾಗುವ ದೊಡ್ಡ ಸಮಸ್ಯೆ ಎಂದರೆ ಆಕರ ಸಾಮಾಗ್ರಿಗಳ ಕೊರತೆ. ಈ ಸಂತರ ಬಗೆಗೆ ರಾಜಕೀಯ, ಸಾಮಾಜಿಕ-ಆರ್ಥಿಕ ಆಕರಗಳು ಸಿಗದೇ ಹೋದ ತಕ್ಷಣ ಸಂಸ್ಕೃತಿ ಅಧ್ಯಯನದಿಂದ ಕೈಬಿಡಬೇಕಿಲ್ಲ. ಸಿಗುವ ಅತ್ಯಲ್ಪ ಮಾಹಿತಿಯನ್ನು ಆಧರಿಸಿಯೇ ಈ ಸಂತರ ಜೀವನ ಚರಿತ್ರೆಯನ್ನು ಇಲ್ಲಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

### ೫.೪.೧. ಚಾರಿತ್ರಿಕ ವಿವರಗಳು

ಹರಪನಳ್ಳಿ ಕೆಂಪಯ್ಯನಿಗೆ ಸಂಬಂಧಿಸಿದಂತೆ ಶಿಷ್ಟಕಾವ್ಯವಂತೂ ರಚಿತವಾಗಿಲ್ಲ. ಇನ್ನೂ ಜನಪದ ಕಾವ್ಯವಾಗಿ ಬಾಲಬಸವರ ಗೋಣಿಬಸವ ಕಾವ್ಯದಲ್ಲಿ ಪಂಚಗಣಾಧೀಶ್ವರರಲ್ಲಿ ಈತನೂ ಒಬ್ಬನೆಂದು

ತಿಳಿದುಬರುತ್ತದೆ. ಪಾರ್ವತಿ-ಪರಮೇಶ್ವರರ ಮದುವೆಗೆ ಬಂದಿದ್ದ ನೂರಾರು ಶರಣರಲ್ಲಿ ಐದು ಮಂದಿ ಗಣಾಧೀಶ್ವರರು ಇದ್ದರು. ಆ ಐದು ಮಂದಿ ಶರಣರೆಂದರೆ ಕೊಟ್ರೇಶ(ಕೊಟ್ಟೂರ ಗುರುಬಸವ), ಹಟ್ಟಿ ತಿಪ್ಪಣ್ಣ(ನಾಯಕನಟ್ಟಿ ತಿಪ್ಪೇಸ್ವಾಮಿ) ಕೂಲಹಳ್ಳಿ ಮದ್ದಾನಸ್ವಾಮಿ, ಅರಸೀಕೆರೆ ಕೋಲಶಾಂತಯ್ಯ, ಹರಪನಹಳ್ಳಿ ಕೆಂಪಯ್ಯ(ಅನುಬಂಧ-೬ ಗೋಣೀಬಸವನ ಕಾವ್ಯದ ಆಯ್ದ ಭಾಗ)

ಕೆಂಪಯ್ಯನಿಗೆ ಸಂಬಂಧಿಸಿದಂತೆ ಇರುವ ಸ್ಮಾರಕಗಳೆಂದರೆ ಹರಪನಹಳ್ಳಿಯಲ್ಲಿರುವ ಹೊಸಮಠ (ಕೊಟ್ಟೂರ ರಸ್ತೆಯಲ್ಲಿದೆ), ಇದರ ಹಿಂದಿರುವ ಹಾಳಾದ ಮಠದ ಜಾಗ, ಹಾಗು ತೆಗ್ಗಿನ ಮಠದಿಂದ ಅರಸೀಕೆರೆ ರಸ್ತೆಯಲ್ಲಿ ಹೋಗುವ ದಾರಿಯಲ್ಲಿರುವ ಬಾವಿ ಮತ್ತು ಮಂಟಪ. ಇವುಗಳನ್ನು ಬಿಟ್ಟರೆ, ರಾಯದುರ್ಗದಲ್ಲಿನ ಶ್ರೀಚೆನ್ನವೀರಸ್ವಾಮಿ ಗವಿಮಠದ ಹಿಂಭಾಗದಲ್ಲಿ ಶಿಥಿಲವಾಗಿರುವ, ಕೆಂಪಯ್ಯ ಸಮಾಧಿಯಾಗಿದ್ದಾನೆಂದು ಹೇಳಲಾಗುವ ಸ್ಥಳ. ಈ ಸ್ಮಾರಕಗಳನ್ನು ಗಮನಿಸಿದರೂ ಕೂಡ ಕೆಂಪಯ್ಯನಿಗೆ ಸಂಬಂಧಿಸಿದಂತೆ ಯಾವುದೇ ಮಾಹಿತಿಗಳು ದೊರೆಯುವುದಿಲ್ಲ.

ಇನ್ನು ಜನಸಮುದಾಯದಲ್ಲಿ ಕೆಂಪಯ್ಯನ ಬಗೆಗೆ ಇರುವ ಮಾಹಿತಿಗಳನ್ನು ಗಮನಿಸಿದರೆ ಅವು ಕೂಡ ಏನನ್ನೂ ವಿವರವಾಗಿ ಹೇಳುವುದಿಲ್ಲ. ಹನೂರು ಕೃಷ್ಣಮೂರ್ತಿಯವರು ಮ್ಯಾಸಬೇಡರ ಸಂಸ್ಕೃತಿ ಕೃತಿಯಲ್ಲಿ ನಾಯಕನಟ್ಟಿ ತಿಪ್ಪೇಸ್ವಾಮಿ ಕುರಿತು ಪ್ರಕಟಿಸಿರುವ ಜನಪದ ಗೀತೆಯಲ್ಲಿ ಕೆಂಪಯ್ಯನ ಉಲ್ಲೇಖ ಎರಡು ಪದ್ಯಗಳಲ್ಲಿ ಕಂಡುಬರುತ್ತದೆ.

ಅರಗೀದ ವಲದಲ್ಲಿ ಮರುಗವನೆತ್ತುವರಾರೆ
ಅಳದೀಯ ಕೆಂಜೆಡೆಯ ಕೆಂಪಯ್ಯ | ನಿಮಪಾದ
ಆಗಲೇ ಕಂಡೋರಿಗೆ ಕಯಿಲಾಸ ||

ಬಿತ್ತೀದ ವಲದಾಗೆ ಪತುರಾವೆತ್ತುವರಾರೇ
ಮುತ್ತೀನ ಕೆಂಜೆಡೆಯ ಕೆಂಪಯ್ಯ ನಿಮಪಾದ
ನಿಂತ ಕಂಡೋರಿಗೆ ಕಯಿಲಾಸ

(ಕೃಷ್ಣಮೂರ್ತಿ ಹನೂರು, ೧೯೯೩, ಪು.೨೮೦)

ಈ ಪದ್ಯಗಳನ್ನು ಗಮನಿಸಿದರೆ ಕೆಂಪಯ್ಯನ ರೂಪದ ಬಗೆಗೆ ಮಾಹಿತಿ ಸಿಗುವುದೇ ಹೊರತು, ಚಾರಿತ್ರಿಕ ವಿವರಗಳಂತು ಲಭ್ಯವಾಗುವುದಿಲ್ಲ.

ಆದರೆ ತಿಪ್ಪೇಸ್ವಾಮಿಯ ಕುರಿತು ಇರುವ ಜನಪದ ಗೀತೆಗಳಲ್ಲಿ ಈತನ ಉಲ್ಲೇಖವಿರುವುದನ್ನು ನೋಡಿದರೆ ಈತನು ತಿಪ್ಪೇಸ್ವಾಮಿ ಸಮಕಾಲೀನನಾಗಿದ್ದನು ಎನಿಸುತ್ತದೆ. ಇದಕ್ಕೆ ಸಂಬಂಧಿಸಿದಂತೆ ಇರುವ ಪ್ರಮುಖ ಆಧಾರವೆಂದರೆ ತಿಪ್ಪೇಸ್ವಾಮಿಯು ಕೆಂಪಯ್ಯನಿಗೆ ಬುದ್ಧಿಕಲಿಸಿದನೆಂದು ಹೇಳಲಾಗುವ ಕಥೆ. ನಾಯಕನಟ್ಟಿ ತಿಪ್ಪೇಸ್ವಾಮಿ ರಾಯದುರ್ಗದಲ್ಲಿ ಇದ್ದಾಗ ಒಮ್ಮೆ ಕೆಂಪಯ್ಯನು ವೈಭವ ಆಡಂಬರದಿಂದ

ಮೆರವಣಿಗೆಯಲ್ಲಿ ಹೊರಟಿದ್ದನ್ನು ತಿಪ್ಪೆಯ ಮೇಲೆ ಹುಚ್ಚನಂತೆ ನಿಂತು ಹಾಸ್ಯ ಮಾಡಿ ಬುದ್ಧಿಕಲಿಸುತ್ತಾನೆ. ಈ ಕಥೆಯ ಆಧಾರದ ಮೇಲೆ ತಿಪ್ಪೇಸ್ವಾಮಿಯ ಸಮಕಾಲೀನನಾಗಿ ಕೆಂಪಯ್ಯನಿದ್ದನೆಂದು ಹೇಳಬಹುದು. ಈಗಲೂ ರಾಯದುರ್ಗದಲ್ಲಿ ಕೆಂಪಯ್ಯನ ಸಮಾಧಿಯನ್ನು ತೋರಿಸಲಾಗುತ್ತದೆ. ಚೆನ್ನವೀರಸ್ವಾಮಿ ಗವಿಮಠದ ಹಿಂಭಾಗದಲ್ಲಿನ ಕೊಳಚೆ ಪ್ರದೇಶದಲ್ಲಿ ಇರುವ ಕಲ್ಲಿನ ಸಮಾಧಿಯನ್ನು ಕೆಂಪಯ್ಯನದೆಂದು ಹೇಳಲಾಗುತ್ತದೆ. ತಿಪ್ಪೇಸ್ವಾಮಿಯನ್ನು ನೋಡದೆ ಪಲ್ಲಕ್ಕಿಯ ಮೆರವಣಿಗೆಯಲ್ಲಿ ಆಡಂಬರವನ್ನು ಪ್ರದರ್ಶಿಸಿದ್ದಕ್ಕಾಗಿ ಈತನ ಸಮಾಧಿ ತಿಪ್ಪೆಯಲ್ಲಿದೆ ಎಂದು ರಾಯದುರ್ಗದ ಚೆನ್ನವೀರಸ್ವಾಮಿ ಮಠದ ಪೂಜಾರಿಗಳು ಹೇಳುತ್ತಾರೆ.

ಬಾಲಬಸವರ ಗೋಣಿಬಸವ ಕಾವ್ಯದಲ್ಲಿ ಕೆಂಪಯ್ಯನನ್ನು ಕಣಗಲಿ ಕೆಂಪಯ್ಯ ಎಂದು ಸಂಬೋಧಿಸಲಾಗಿದೆ. ಕಣಗಲಿ ಎನ್ನುವ ಶಬ್ದಕ್ಕೂ ಕೆಂಪಯ್ಯನಿಗೂ ಇರುವ ಸಂಬಂಧದ ಬಗ್ಗೆ ಏನೊಂದು ಸ್ಪಷ್ಟ ಆಧಾರಗಳು ದೊರೆಯುವುದಿಲ್ಲ. ಕೆಂಪಯ್ಯನ ಕುರಿತು ಒಂದಷ್ಟು ಮಾಹಿತಿಯನ್ನು ಈ ಕಾವ್ಯ ಒದಗಿಸುತ್ತದೆ. ಅದರ ಪ್ರಕಾರ ಪಂಚಗಣಾದೀಶ್ವರರು ಕುಪ್ಪಿನಕೇರಿ ಹನುಮಂತನಿಗೆ ಲಿಂಗದೀಕ್ಷೆ ನೀಡಿದನಂತರ ಕೊಟ್ಟೂರಿನ ಮೂಲಕವಾಗಿ ಬಾಗಳಿಗೆ ಬರುತ್ತಾರೆ. ಬಾಗಳಿಯಲ್ಲಿ ಮದ್ದಾನಸ್ವಾಮಿ ಮತ್ತು ಕನಕವ್ವನ ಮದುವೆ ಆದನಂತರದಲ್ಲಿ ಈ ಐವರು ಸಂತರು ಅಲ್ಲಿಂದ ಚದುರುತ್ತಾರೆ. ಬಾಗಳಿ ಬಿಟ್ಟು ನಾಕು ಮಂದಿ ಶರಣ್ರು ಹರಪನಳ್ಳಿಗೆ ಹೋಗುತ್ತಾರೆ.

> ಹರಪನಳ್ಳಿಗೆ ಹೋಗುತ್ತಾರೆ ಆ ಸೂಜೀ ರಾಮೂವ್ವ ಸಾದಿಗೆ
> ಹರಪನಳ್ಳಿಗೆ ಹೋಗುತ್ತಾರೆ ಆ ಸೂಜೀ ರಾಮೂವ್ವ ಸಾದಿಗೆ
> ಅವ್ರು ಐದು ಮಂದಿ ಅಗಲತಾರೇ ಆ ಸೂಜೀ ರಾಮೂವ್ವ ಸಾದಿಗೆ
> ಅವು ಐದು ಮಂದಿ ಅಗಲತಾರೇ ಆ ಸೂಜೀ ರಾಯೂವ್ವ ಸಾದಿಗೆ

ಹರಪನಳ್ಳಿಗೆ ಹೋಗ್ಯಾರು, ಆಗ ಕಣಗಲಿ ಕೆಂಪಯ್ಯ "ಕೊಟ್ರೇಶ ನಾನು ಮುದುಕಪಾ, ಮುಪ್ಪಿನ ಕಾಲ, ಮುದ್ಕ ನನಕಡಿ ಬರದಾಗದುಲ್ಲಪ, ನಾನು ಇಲ್ಲೇ ಇರ್ತೀನಪ, ನೀವೆಲ್ಲರ ಹೋಗ್ರಿ" ಅಂತ್ಹೇಳಿ ಕಣಗಲಿ ಕೆಂಪಯ್ಯ ಹರಪ್ನಳ್ಯಾಗ ನಿತ್ಕೊಂಡ'(ಅನುಬಂಧ-೬, ಗೋಣಿಬಸವ ಕಾವ್ಯದ ಆಯ್ದಭಾಗ)

ಗೋಣಿಬಸವಕಾವ್ಯ ಮತ್ತು ರಾಯದುರ್ಗದಲ್ಲಿ ಕೆಂಪಯ್ಯನಿಗೆ ಸಂಬಂಧಿಸಿದ ಕತೆ ಗೊಂದಲವನ್ನುಂಟು ಮಾಡುತ್ತವೆ. ಗೋಣಿಬಸವನ ಕಾವ್ಯದ ಪ್ರಕಾರ ಕೆಂಪಯ್ಯ ಹರಪನಹಳ್ಳಿಯಲ್ಲಿ ನೆಲೆಗೊಂಡ ನಂತರ ಉಳಿದ ಗಣಾಧೀಶ್ವರರು ಮುಂದಕ್ಕೆ ಬೇರೆ-ಬೇರೆ ಊರುಗಳಿಗೆ(ಈಗಿರುವ ಸ್ಥಳಗಳಿಗೆ) ಹೋಗುತ್ತಾರೆ. ರಾಯದುರ್ಗದ ಜನರ ನಂಬಿಕೆಯ ಪ್ರಕಾರ ಕೆಂಪಯ್ಯ, ತಿಪ್ಪೇಸ್ವಾಮಿಯನ್ನು ಭೇಟಿಯಾಗಿದ್ದು ಇಲ್ಲಿಯೇ (ರಾಯದುರ್ಗದಲ್ಲಿ) ಎಂದು ಹೇಳಲಾಗುತ್ತದೆ. ಇದರ ಆಧಾರದ ಮೇಲೆ ಈ ರೀತಿ ಊಹಿಸಬಹುದಾಗಿದೆ. ಕೆಂಪಯ್ಯನು ಪರಪನಳ್ಳಿಯಲ್ಲಿ ಉಳಿದುಕೊಂಡ ನಂತರ ಉಳಿದ ಗಣಾಧೀಶ್ವರರು ಮುಂದೆ ಪ್ರಯಾಣ

ಬೆಳೆಸಿದರು ಹಾಗೆ ಪ್ರಯಾಣ ಬೆಳೆಸಿದ ನಂತರದಲ್ಲಿ ಹರಪನಳ್ಳಿಯಲ್ಲಿ ಉಳಿದಿದ್ದ ಕೆಂಪಯ್ಯ ವೈಭವ ಆಡಂಬರದಿಂದ ಕೆಲವು ದಿನ ಕಳೆಯುತ್ತಾ ರಾಯದುರ್ಗಕ್ಕೆ ಬಂದಿರಬೇಕು. ಅಲ್ಲಿ ಮರಳಿ ತಿಪ್ಪೇಸ್ವಾಮಿಯನ್ನು ಭೇಟಿ ಮಾಡಿ ಅವನಿಂದ ಹಾಸ್ಯಕ್ಕೆ ಒಳಗಾಗಿರಬೇಕು ಎಂದು ಊಹಿಸಬಹುದಾಗಿದೆ. ಅಲ್ಲದೆ ಕೆಂಪಯ್ಯ ರಾಯದುರ್ಗದಲ್ಲಿಯೇ ಸಮಾಧಿ ಹೊಂದಿದನು ಎಂದು ತಿಳಿಯಬಹುದು ಕಾರಣ ರಾಯದುರ್ಗದಲ್ಲಿ ಈಗಲೂ ಕೆಂಪಯ್ಯನ ಸಮಾಧಿಯನ್ನು ತೋರಿಸಲಾಗುತ್ತದೆ. ಈ ಘಟನೆ ೧೮ನೇ ಶತಮಾನದ ಉತ್ತರಾರ್ಧ ೧೭ನೇ ಶತಮಾನದ ಪೂರ್ವಾರ್ಧದಲ್ಲಿ ಸಂಭವಿಸಿದೆ. ಏಕೆಂದರೆ ತಿಪ್ಪೇಸ್ವಾಮಿ ಕಾಲವು ಇದೇ ಆಗಿದ್ದು, ಅವರಿಬ್ಬರು ಸಮಕಾಲೀನರಾಗಿದ್ದಾರೆ. ಆಗಿನ್ನೂ 'ಪಂಚಗಣಾಧೀಶ್ವರರು' ಎನ್ನುವ ಪರಿಕಲ್ಪನೆ ಜನಸಮುದಾಯದಲ್ಲಿ ಇರಲಿಲ್ಲ. ಆದರೆ ತಿಪ್ಪೇಸ್ವಾಮಿ ಪ್ರಸಿದ್ಧನಾದ ಸಂತನಾಗಿದ್ದು, ನಾಯಕನಟ್ಟಿ ಸುತ್ತ-ಮುತ್ತಲಿನ ಭಾಗದಲ್ಲಿ ಜನರ ಆರಾಧ್ಯದೈವವಾಗಿದ್ದಾನೆಂದು ತಿಳಿಯಬಹುದು. ಕ್ರಿ.ಶ.೧೬೧೫ರಲ್ಲಿ ಹರಪನಹಳ್ಳಿಯಲ್ಲಿ ಬದುಕಿದ್ದ ಚೀಲಾಳ ಸ್ವಾಮಿಯ ಜೀವನ ಚರಿತ್ರೆಯನ್ನು ವಿವರಿಸುವ 'ಷಟ್ಸ್ಥಲಶಿವಾಯಣ'(ಕ್ರಿ.ಶ.೧೭೦೦) ಕೃತಿಯು ಎಲ್ಲಿಯೂ ಹರಪನಳ್ಳಿ ಕೆಂಪಯ್ಯನ ಉಲ್ಲೇಖ ವನ್ನು ಮಾಡುವುದಿಲ್ಲ. ಪಂಚಗಣಾಧೀಶ್ವರಲ್ಲಿನ ಉಳಿದ ನಾಲ್ವರು ಸಂತರನ್ನು ಉಲ್ಲೇಖಿಸುವುದನ್ನು ನೋಡಬಹುದು.

ವೃದ್ಧಚಾರ್ಯ ನಿಮಿಷನ ವೃಷಭನ
ಸಿದ್ಧರಾಮಪ್ರಭುವ ಮರುಳನ
ಸಿದ್ದಲಿಂಗನ ಕೋಲಶಾಂತನ ಕೊಟ್ಟೂರೇಶ್ವರನ
ಮುದ್ದುಸಂಗನ ರುದ್ರಮುನಿಯ ಪ್ರ
ಸಿದ್ಧಯೋಗ ಸಮಾಧಿಗಿಂತಲೆ
ಮುದ್ದೆನಿಸಿತಹ ಬಸವಪ್ರಭು ಶಿವಯೋಗಮಂಟಪವು ||

(ಸಂ.೨, ಪ.೩೦)

ಹರಪನಳ್ಳಿಯಲ್ಲಿಯೇ ಬದುಕಿದ್ದ ಚೀಲಾಳ ಸ್ವಾಮಿಯ ಜೀವನ ಚರಿತ್ರೆಯನ್ನು ಆಧರಿಸಿ ರಚಿತವಾಗಿರುವ ಷಟ್ಸ್ಥಲ ಶಿವಾಯಣ ಕೃತಿಯು ಕೆಂಪಯ್ಯನನ್ನು ಎಲ್ಲಿಯೂ ಉಲ್ಲೇಖಿಸದೆ, ನೂರಾರು ಶರಣರ ಹೆಸರನ್ನು ಉಲ್ಲೇಖಿಸಿರುವುದನ್ನು ನೋಡಿದರೆ ಕೆಂಪಯ್ಯ ಹರಪನಳ್ಳಿಯಲ್ಲಿ ತನ್ನ ಜೀವನ ಕಳೆದಿಲ್ಲವೆಂದು ಹಾಗೂ ಈತ ಅಷ್ಟೊಂದು ಪ್ರಸಿದ್ಧಿಯನ್ನು ಹೊಂದಿರದ ಶರಣನೆಂದು ತಿಳಿಯಬಹುದಾಗಿದೆ. ಇಲ್ಲವೆ ಕೆಂಪಯ್ಯ ಈ ಷಟ್ಸ್ಥಲಶಿವಾಯಣ ಕೃತಿ ರಚನೆಯಾದ ಕಾಲದ(ಕ್ರಿ.ಶ.೧೭೦೦) ನಂತರದಲ್ಲಿ ಹರಪನಳ್ಳಿ, ರಾಯದುರ್ಗದಲ್ಲಿ ಸುತ್ತಾಡಿರಬೇಕೆಂದು ಊಹಿಸಬಹುದಾಗಿದೆ. ಈ ಎಲ್ಲ ಆಧಾರಗಳು ಕೆಂಪಯ್ಯನ ಬಗ್ಗೆ ನಿಖರವಾಗಿ ಹೇಳದಿದ್ದರೂ ಈಗ ದೊರೆತಿರುವ ಅಂಶಗಳೇ ಕೆಂಪಯ್ಯನ ಬಗ್ಗೆ ಒಂದಿಷ್ಟು ಮಾಹಿತಿಯನ್ನು ಒದಗಿಸುತ್ತವೆ.

ಕೋಲಶಾಂತಯ್ಯನ ಬಗ್ಗೆ ಕೂಡ ಮಾಹಿತಿಗಳ ಕೊರತೆ ಕಂಡುಬರುತ್ತದೆ. ಇರುವ ಅಲ್ಪ-ಸ್ವಲ್ಪ ಮಾಹಿತಿಗಳನ್ನು ಬಳಸಿ ವಿದ್ವಾಂಸರು ಇನ್ನಷ್ಟು ಗೊಂದಲಗಳನ್ನು ಉಂಟು ಮಾಡಿದ್ದಾರೆ. ಅರಸೀಕೆರೆ ಕೋಲಶಾಂತನ ಬಗೆಗಿರುವ ಕೆಲವು ಗೊಂದಲವನ್ನುಂಟು ಮಾಡುವ ಅಭಿಪ್ರಾಯಗಳೆಂದರೆ,

೧. ಅರಸೀಕೆರೆ ಕೋಲಶಾಂತ ೧೨ನೇ ಶತಮಾನದಲ್ಲಿನ ಬಸವಣ್ಣನ ಸಮಕಾಲೀನ

೨. ಅರಸೀಕೆರೆ ಕೋಲಶಾಂತನು ವಚನಗಳನ್ನು ಬರೆದಿದ್ದಾನೆ.

೩. ಅರಸೀಕೆರೆ ಕೋಲಶಾಂತನು ಪಂಚಗಣಾಧೀಶ್ವರರಲ್ಲಿ ಒಬ್ಬನಾಗಿದ್ದು ಯಾವುದೇ ವಚನಗಳನ್ನು ಬರೆದಿಲ್ಲ. ಹೀಗೆ ಮೂರು ಅಭಿಪ್ರಾಯಗಳಿದ್ದು ಕೋಲಶಾಂತನ ಬಗ್ಗೆ ಆಧಾರಸಹಿತ ಯಾವುದೇ ಸ್ಪಷ್ಟ ನಿರ್ಧಾರಕ್ಕೆ ಇದುವರೆಗೂ ಬಂದಿಲ್ಲ.

ಮೊದಲನೇ ಅಭಿಪ್ರಾಯವನ್ನು ವ್ಯಕ್ತಪಡಿಸಿದವರು ಬಿ.ಎಸ್.ಸಣ್ಣಯ್ಯ. ಇವರು ಕೋಲಶಾಂತ ೧೨ನೇ ಶತಮಾನದಲ್ಲಿನ ಬಸವಣ್ಣನ ಸಮಕಾಲೀನನೆನ್ನಲು ಚೆನ್ನಬಸವಣ್ಣನ ವಚನವೊಂದನ್ನು ಉಲ್ಲೇಖಿಸುತ್ತಾರೆ.

'ಹನ್ನೆರೆಡುಗಾವುದ ವಿಸ್ತೀರ್ಣದ ಮಹಾಪಟ್ಟಣಕ್ಕೆ ಕಲ್ಯಾಣವೆಂಬ ಪಣತಿ
ಆ ಪಣತಿಯಲ್ಲಿ ಮಹತ್ತೆಂಬ ಎಣ್ಣೆಯನೆಜಿದು
ಜ್ಞಾನವೆಂಬ ಜ್ಯೋತಿಯ ಹೊತ್ತಿಸಿ ಒಪ್ಪುತಿದ್ದಿತಯ್ಯಾ
ಅಲ್ಲಿ ಕಾಳಯ್ಯ, ಚೌಡಯ್ಯ, ಕೋಲಶಾಂತಯ್ಯ
ಮೊಗವಾಡದ ಕೇಶಿರಾಜಯ್ಯ, ಖಂಡೆಯ ಬೊಮ್ಮಣ್ಣ
ಮಿಂಡಮಲ್ಲಿನಾಥ, ಹಡಪದಪ್ಪಣ್ಣ, ಮಡಿವಾಳ ಮಾಚಯ್ಯ
ಅಕ್ಕ ನಾಗಾಯಿಗಳು ಸಹಿತ ಇವರೆಲ್ಲರು
ಸಂಗನ ಬಸವಣ್ಣನ ಬಯಲ ಕೂಡಿದರು
ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ
ಇವರೆಲ್ಲರ ಪ್ರಸಾದದ ಬಯಲು ಎನಗಾಯಿತ್ತು"

(ಡಾ.ಆರ್.ಸಿ.ಹಿರೇಮಠ(ಸಂ), ೧೯೬೫, ಪು.೬೫೭)

ಈ ಒಂದು ವಚನವಲ್ಲದೆ ಮಡಿವಾಳ ಮಾಚಿದೇವನೂ ತನ್ನದೊಂದು ವಚನದಲ್ಲಿ ಕೋಲಶಾಂತಯ್ಯನನ್ನು ಹೆಸರಿಸಿದ್ದಾನೆ.

ಕಪ್ಪಡಿಯ ಸಂಗಯ್ಯನಲ್ಲಿ
ಅಕ್ಕನಾಗಾಯಿ, ಮಿಂಡಮಲ್ಲಿನಾಥ
ಹಡಪದಪ್ಪಣ್ಣ, ಮೊಗವಾಡದ ಕೇಶಿರಾಜ
ಕೋಲಶಾಂತಯ್ಯ ಮೊದಲಾದ ಶಿವಗಣಂಗಳು

ಬಸವಣ್ಣನ ಬಯಲ ಪ್ರಸಾದವ ಬೆರೆದರು

----------------------

----------------------

ಇವರೆಲ್ಲರ ಒಕ್ಕುಮಿಕ್ಕ ಬಯಲ ಪ್ರಸಾದ

ಎನಗಾಯಿತ್ತು ಕಲಿದೇವರ ದೇವ

(ಫ.ಗು.ಹಳಕಟ್ಟಿ, ೧೯೩೬, ಪು.೨೭)

ಈ ಎರಡು ವಚನಗಳನ್ನು ಪ್ರಮುಖವಾಗಿ ಪ್ರಸ್ತಾಪಿಸಿರುವ ಬಿ.ಎಸ್ .ಸಣ್ಣಯ್ಯನವರು ಕೋಲಶಾಂತರು ೧೨ನೇ ಶತಮಾನದವನೆಂದು ಹೇಳಿದ್ದಾರೆ. ಅಲ್ಲದೆ ೧೨ನೇ ಶತಮಾನದ ನಂತರದಲ್ಲಿ ವೀರಶೈವ ಪುರಾಣಕೃತಿಗಳಲ್ಲಿ ಕೋಲಶಾಂತನ ಬಗ್ಗೆ ಉಲ್ಲೇಖವಾಗಿರುವುದನ್ನು ವಿವರಿಸಿದ್ದಾರೆ.

'ಕ್ರಿ.ಶ.೧೫೫೦ರಲ್ಲಿದ್ದ ಕಿಕ್ಕೇರಿ ಆರಾಧ್ಯ ನಂಜುಡನು ಬರೆದ 'ಭೈರವೇಶ್ವರ ಕಾವ್ಯ'ದಲ್ಲಿ ಕೋಲಶಾಂತಯ್ಯನ ಚಿತ್ರದ ಜಂಗಮವನ್ನಿರಿದವನನ್ನಿರಿದ ಕಥೆಯನ್ನು ಹೇಳಿದ್ದಾನೆ.(ಸಂ.೪, ಪ.೧೩೫) ನಂತರದಲ್ಲಿ ವಿರೂಪಾಕ್ಷ ಪಂಡಿತನು 'ಚೆನ್ನಬಸವ ಪುರಾಣ'ದಲ್ಲಿ(ಸಂ.೫೭-೬೦) ನಂತರ ಬಂದ ಶಾಂತಲಿಂಗದೇಶಿಕ ತನ್ನ 'ಭೈರವೇಶ್ವರ ಕಾವ್ಯ ಕಥಾಸೂತ್ರ ರತ್ನಾಕರ'ದಲ್ಲಿ ಸಿದ್ದನಂಜೇಶ 'ಗುರುರಾಜ ಚಾರಿತ್ರ'ದಲ್ಲಿ(ಸಂ.೮, ಪದ್ಯ-೨೭) ಕೋಲಶಾಂತನ ಕುರಿತು ವಿವರಿಸಿದ್ದಾರೆ.

ಮೇಲಿನ ಎಲ್ಲ ಕೃತಿಗಳು ಕೋಲಶಾಂತನ ಜೀವನದ ಕುರಿತು ಈ ಕೆಳಗಿನಂತೆ ವಿವರಿಸಿವೆ. 'ಬಿಜ್ಜಳರಾಯ ಚಾವಡಿಯ ಕಂಭ ಕುಸಿದಿರಲು ಬಿಚ್ಚಿ ಕಟ್ಟೆಸೆಂದು ಹರಿದಾಸನೆಂಬ ಉಪ್ಪಾರಗೆ ಹೇಳಲು ಅವ ಚಿತ್ರದಲ್ಲಿದ್ದ ಜಂಗಮನ ಕಂಡು ಇವ ಕಂಡ ಕಂಡ ಭಕ್ತರಲ್ಲಿ ಉಂಡು ಡೊಳ್ಳ ಬೆಳಸಿಕೊಂಡವನೆ ಎಂದು ಹಾರೆಯಲ್ಲಿರಿಯಲು ತಲೆಯ ಹೊಯ್ಯಲು ಅದಕೆ ಬಿಜ್ಜಳ ಬಸವಣ್ಣ ಉಪ್ಪಾರನ ಕೊಲ್ಲಬಹುದೆ ಎನೆ ಅವ ಜಂಗಮನನಿರಿಯಬಹುದೆ ಎನ್ನಲು ಹಾಂಗೆ ಬಂದು ಎಲೆ ಬಸವಣ್ಣ ಹಾರೆ ಹಾಕಿ ನೊಂದೆ ಸಂತೈಸಲು ಬಿಜ್ಜಳ ಇವನ ರಕ್ಷಿಸು ಎನ್ನಲು ಆಗ ಕೋಲಶಾಂತಯ್ಯನು ಹರಿದಾಸನ ಕೋಲ ಮುಟ್ಟಿಸಿ ಪ್ರಾಣವ ಪಡೆದರು'(ಬಿ.ಎಸ್.ಸಣ್ಣಯ್ಯ, ೧೯೭೦, ಪು.೧೫)

ಮೇಲಿನ ಎಲ್ಲ ವಿವರಣೆಗಳನ್ನು ವಿವರಿಸಿರುವ ಬಿ.ಎಸ್.ಸಣ್ಣಯ್ಯನವರು ೧೨ನೇ ಶತಮಾನದಲ್ಲಿನ ಶಿವಶರಣರ ಕಾಲದಲ್ಲಿ ಕೋಲಶಾಂತಯ್ಯನು ಇದ್ದನೆಂದು ಈತನೇ 'ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿಂಗಸಂಗ' ಎನ್ನುವ ಅಂಕಿತದಲ್ಲಿ ವಚನಗಳನ್ನು ಬರೆದಿದ್ದಾನೆ ಎಂದು ತಮ್ಮ ಕೃತಿಯಲ್ಲಿ(ಕೋಲಶಾಂತಯ್ಯ ಮತ್ತು ಮಧುವಯ್ಯಗಳ ವಚನಗಳು) ವಿವರಿಸಿದ್ದಾರೆ.

ಆದರೆ ಬಿ.ಎಸ್.ಸಣ್ಣಯ್ಯನವರು ಸಂಪಾದಿಸಿದ ವಚನಗಳಲ್ಲಿಯೇ ಇದಕ್ಕೆ ಸ್ಪಷ್ಟ ಆಧಾರಗಳಿಲ್ಲ. ಕೋಲಶಾಂತನದೆಂದು ಹೇಳಲಾಗುವ ವಚನವೊಂದು ಈ ರೀತಿಯಲ್ಲಿದೆ.

'ಆರು ಸ್ಥಲವನರಿದು ಮೂರು ಸ್ಥಲವ ಮುಟ್ಟಿ
ಮೂವತ್ತಾರು ಸ್ಥಲವ ಕೂಡಿ ಇಪ್ಪತ್ತೈದು ಸ್ಥಲದಲ್ಲಿ ನಿಂದು
ನೂರೊಂದರಲ್ಲಿ ಸಂಗವ ಮಾಡಿ, ಬೇರೆ ನೆಲೆಗಳೆದು ನಿಂದಲ್ಲಿ
ಕಾಯ ಜೀವದ ಬಂಧ ಅದೇತರಿಂದ ನಿಂದಿತ್ತೆಂದರಿ ನಿನ್ನ ನೀನೆ,
ಪುಣ್ಯಾರಣ್ಯ ದಹನ ಭೀಮೇಶ್ವರಲಿಂಗ ನಿರಂಗಸಂಗ...'

(ಬಿ.ಎಸ್.ಸಣ್ಣಯ್ಯ(ಸಂ), ೧೯೭೦, ಪು.೫)

ಈ ವಚನದಲ್ಲಿ ನೂರೊಂದು ಸ್ಥಳಗಳ ಕುರಿತು ಕೋಲಶಾಂತಯ್ಯ ಪ್ರಸ್ತಾಪ ಮಾಡಿದ್ದಾನೆ. ಬಸವಾದಿ ಪ್ರಮಥರ ವಚನಗಳನ್ನು ಸ್ಥಲಕಟ್ಟಿಗನ್ವಯ ಜೋಡಿಸುವ ಮತ್ತು ವ್ಯಾಖ್ಯಾನಿಸುವ ಕಾರ್ಯ ಕ್ರಿ.ಶ.೧೫ನೇ ಶತಮಾನದಿಂದೀಚೆಗೆ ಪ್ರಾರಂಭವಾಗಿದ್ದುದಾಗಿದೆ. "ನೂರೊಂದು ಸ್ಥಲಗಳು ಬಹುಹಿಂದೆ ಇದ್ದರೂ ಅವನ್ನು ೧೨ನೇ ಶತಮಾನದ ಬಸವಾದಿ ಪ್ರಮಥರ, ೧೫ನೇ ಶತಮಾನದ ನೂರೊಂದು ವಿರಕ್ತರ ನಡೆ-ನುಡಿಗಳಲ್ಲಿ ಕಂಡುಕೊಂಡು, ತತ್ಸಂಬಂಧಿಯಾದ ಸಾಹಿತ್ಯವನ್ನು ನಂತರದವರು ರಚಿಸುತ್ತಾ ಬಂದಿದ್ದಾರೆ. ೭೭೦ ಅಮರಗಣಂಗಳಿಗೆ ಸಂಕೇತವಾಗಿ ಆ ಸಂಖ್ಯೆಯ ವಚನ ಸಂಕಲನ ಗ್ರಂಥಗಳ ರಚನೆಯಾದಂತೆ ೧೦೧ ವಿರಕ್ತರ ಪ್ರತೀಕವಾಗಿ ೧೦೧ ಸ್ಥಲಗಳ ನಿರ್ದೇಶನವು ಈ ಕಾಲಕ್ಕೆ ನಿರ್ಣೀತವಾದಂತಿದೆ." (ಡಾ.ಶಿವಾನಂದ ವಿರಕ್ತಮಠ, ೧೯೭೮, ಪು.೨೬೧) ಅಲ್ಲದೆ ಕೋಲಶಾಂತನು ನೂರೊಂದು ವಿರಕ್ತರಲ್ಲಿ ಒಬ್ಬನಾಗಿದ್ದು, ಈತನನ್ನು ಮೋದಿರುದ್ರ 'ನೂರೊಂದು ವಿರಕ್ತರ ಕಾವ್ಯ'ದಲ್ಲಿ ಉಲ್ಲೇಖಿಸಿದ್ದಾನೆ.

ಈ ಮೇಲಿನ ಆಧಾರಗಳಿಂದ ೧೨ನೇ ಶತಮಾನದ ಕೋಲಶಾಂತಯ್ಯನು ಬೇರೆ ೧೬ನೇ ಶತಮಾನದಲ್ಲಿ 'ಪುಣ್ಯರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ' ಎನ್ನುವ ಅಂಕಿತನಾಮದಿಂದ ರಚಿತವಾಗಿರುವ ವಚನಗಳನ್ನು ಬರೆದಿರುವ ಕೋಲಶಾಂತನು ಬೇರೆ ಎನ್ನುವ ತೀರ್ಮಾನಕ್ಕೆ ಡಾ. ವೃಷಭೇಂದ್ರ ಸ್ವಾಮಿಯವರು ಬಂದಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಅವರು ತಮ್ಮ ಕೃತಿಯ ಪ್ರಸ್ತಾವನೆಯಲ್ಲಿ(ಕೋಲಶಾಂತಯ್ಯನ ವಚನಗಳು, ೧೯೮೬) 'ಪುಣ್ಯರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ' ಎನ್ನುವುದು ಕೋಲಶಾಂತನ ಆರಾಧ್ಯದೈವವಾಗಿರಬೇಕು. ಈ ಕೋಲಶಾಂತನು ಬಳ್ಳಾರಿ ಜಿಲ್ಲೆ ಅರಸೀಕೆರೆಯವನಾಗಿದ್ದು, ಭೀಮೇಶ್ವರ ಲಿಂಗ ಎನ್ನುವುದು ಅರಸೀಕೆರೆಗೆ ಹತ್ತಿರದಲ್ಲಿಯೇ ಇರುವ ನೀಲಗುಂದದ ಭೀಮೇಶ್ವರ ದೇವಸ್ಥಾನದ ಲಿಂಗವನ್ನು ಸೂಚಿಸುತ್ತದೆ ಎನ್ನುತ್ತಾರೆ. 'ಕೋಲಶಾಂತಯ್ಯನು ನೀಲಗುಂದದ ಗುಡ್ಡದ ಮಠದಲ್ಲಿ ಕೆಲಕಾಲ ನೆಲೆಸಿರಬೇಕು ಆ ಮಠದ ಪಕ್ಕದಲ್ಲಿಯೇ ಇರುವ ಭೀಮೇಶ್ವರಲಿಂಗವನ್ನೇ ತನ್ನ ವಚನಗಳ ಅಂಕಿತಮುದ್ರೆಯನ್ನಾಗಿ ಮಾಡಿಕೊಂಡಿರಬೇಕು. ಇಲ್ಲಿಂದ ಮತ್ತೆ ಪಕ್ಕದ ಅರಸೀಕೆರೆಗೆ ಹೋಗಿ ನೆಲೆಸಿ ಅಲ್ಲಿಯೇ ಐಕ್ಯಗೊಂಡಿದ್ದಾರೆ'(ಡಾ.ಎಂ.ವೃಷಭೇಂದ್ರಸ್ವಾಮಿ, ೧೯೮೬, ಪ್ರಸ್ತಾವನೆ) ಎನ್ನುವ ತೀರ್ಮಾನಕ್ಕೆ ಬಂದಿದ್ದಾರೆ.

ಈ ಒಂದು ಆಧಾರದ ಮೇಲೆಯೇ ಡಾ.ಎಂ. ವೃಷಭೇಂದ್ರಸ್ವಾಮಿಗಳ ತೀರ್ಮಾನವನ್ನು ಒಪ್ಪುವುದು ಸಾಧ್ಯವಿಲ್ಲ. ಏಕೆಂದರೆ ಅರಸೀಕೆರೆ ಕೋಲಶಾಂತಯ್ಯನು ವಚನಗಳನ್ನು ರಚಿಸಿದ್ದರೆ ಈತನನ್ನು ಕುರಿತು ಸಾಕಷ್ಟು ಸಲ ಪ್ರಸ್ತಾಪಿಸಿರುವ ಬಸವಲಿಂಗ ಕವಿಯ ಕೃತಿ 'ಕೊಟ್ಟೂರ ಬಸವೇಶ್ವರ ಚಾರಿತ್ರವು ಉಲ್ಲೇಖಿಸುತ್ತಿತ್ತು. ಈ ಕೃತಿಯಲ್ಲೆಲ್ಲೂ ಕೋಲಶಾಂತನು ವಚನಗಳನ್ನು ಬರೆದ ಉಲ್ಲೇಖವಿಲ್ಲ. ಕೋಲಶಾಂತಯ್ಯನ ವಚನಾಂಕಿತವು 'ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ' ಎಂಬುದಾಗಿದ್ದು ಇದರ ಆಧಾರದ ಮೇಲೆಯೇ ಇವನು ನೀಲಗುಂದದವನು ಅಲ್ಲಿಂದ ಅರಸೀಕೆರೆಗೆ ಬಂದು ಐಕ್ಯನಾದನೆನ್ನುವುದು ತಪ್ಪು. 'ಭೀಮೇಶ್ವರಲಿಂಗ' ಎನ್ನುವುದನ್ನೇ ಇನ್ನೂ ಹಲವಾರು ವಚನಕಾರರು ತಮ್ಮ ಅಂಕಿತವನ್ನಾಗಿ ಇಟ್ಟುಕೊಂಡಿದ್ದಾರೆ. 'ಕಾಲಾಂತಕ ಭೀಮೇಶ್ವರಲಿಂಗ' ಎಂಬುದನ್ನು ಡಕ್ಕೆಯ ಬೊಮ್ಮಣ್ಣನೂ, 'ಭೀಮೇಶ್ವರಲಿಂಗ' ಎಂಬುದನ್ನು ಪಾಕದ ಭೀಮಯ್ಯನೂ ಹಾಗು 'ಭೀಮೇಶ್ವರ' ಎಂಬ ಅಂಕಿತವನ್ನು ಸಿದ್ಧಬುದ್ಧಯ್ಯಗಳ ಪತ್ನಿ ಕಾಳವ್ವೆಯು ಹೊಂದಿದ್ದಾಳೆ. ಹಾಗಾದರೆ ಇವರೆಲ್ಲರೂ ನೀಲಗುಂದದ ಪರಿಸರದವರೆ?

ಇನ್ನು ಕೋಲಶಾಂತಯ್ಯ ಎನ್ನುವ ಹೆಸರಿನಲ್ಲಿರುವ 'ಕೋಲ' ಎನ್ನುವ ಪದ ಏನನ್ನು ಸೂಚಿಸುತ್ತದೆ? ಇದಕ್ಕೆ ಸಂಬಂಧಿಸಿದಂತೆ ಇತನದೇ ವಚನ ಈ ರೀತಿ ಹೇಳುತ್ತದೆ.

'ಇಚ್ಛಾಶಕ್ತಿ ಹೋಲೆಂಗೆ ಸತಿಯಾದಲ್ಲಿ
ಕ್ರಿಯಾಶಕ್ತಿ ಕೋಡಗಕ್ಕೆ ಸತಿಯಾದಲ್ಲಿ
ಜ್ಞಾನಶಕ್ತಿ ಬಳ್ಳುವಿನ ಬಾಗಿಲು ಕಾವಲ್ಲಿ
ಇವರೆಲ್ಲರ ನೀ ನೋಡುತಲಿದ್ದೆ
ನೀ ನೋಡುವ ನೋಟ ತ್ರಿವಿಧನಾಶ
ಕೋಲಿನ ಶಾಂತನ ವೇಶ ನಿನ್ನ ಕಾರುಣ್ಯವಾಸ
ಎನ್ನಯ ಭ್ರಾಂತಿನ ವೇಷ ನಾಶವಾಯಿತ್ತು
ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ'

(ಡಾ.ಎಸ್.ವಿದ್ಯಾಶಂಕರ್ (ಸಂ), ೨೦೦೨, ಪು.೭೦)

ಈ ವಚನದಲ್ಲಿ ಬರುವ 'ಕೋಲಿನ ಶಾಂತನವೇಷ' ಎನ್ನುವ ಪದ ಬಹಳ ಮುಖ್ಯವಾದುದು. 'ಕೋಲ' ಎಂದರೆ ತುಳುನಾಡಿನ ಭೂತಾರಾಧನೆಯ ಒಂದು ಪ್ರಕಾರ'(ಡಾ.ಚಂದ್ರಶೇಖರ ಕಂಬಾರ, ೧೯೮೫, ಪು.೫೬೮) ನಿರ್ದಿಷ್ಟವಾದ ಭೂತಗಳ ವೇಷ ಹಾಕಿ ಕುಣಿಸಿ ಹರಕೆಯನ್ನು ಸಲ್ಲಿಸಿ ಪ್ರಸಾದವನ್ನು ಸ್ವೀಕರಿಸುವ ಆಚರಣೆಗೆ ಭೂತದ ಕೋಲವೆನ್ನುವರು. ಭೂತದ ಕೋಲವು ಭೂತಾಲಯಗಳ ಎದುರಿನಲ್ಲಿ ಅಥವಾ ಮನೆಯ ಮುಂದೆ ಹಾಕುವ ಚಪ್ಪರದಲ್ಲಿ ನಡೆಯುತ್ತದೆ. ಪಂಬದ, ಪರವ, ನಲಿಕೆಯ

ಕೋಲಕಟ್ಟುವರು'(ಅದೇ, ಸಂಪುಟ-೨, ಪು.೧೫೦೫) ಕೋಲಶಾಂತನು ತುಳುನಾಡಿನ ಭೂತಾರಾಧನೆಯಲ್ಲಿ ವೇಷಕಟ್ಟುವ, ಪಂಬದ, ಪರವ, ನಲಿಕೆಯ ಈ ಮೂರರಲ್ಲಿ ಯಾವುದಾದರೊಂದು ಪಂಗಡಕ್ಕೆ ಸೇರಿದವನಾಗಿರಬೇಕು. ಈತನಿಗೆ ಭೂತಾರಾಧನೆಯ ಸಂಪೂರ್ಣ ಪರಿಚಯವಿದೆ.

ಕೋಲಶಾಂತನು ತುಳುನಾಡಿನವನು ಎನ್ನಲಿಕ್ಕೆ ಈತನೇ ಬರೆದ ಕೆಳಗಿನ ವಚನವು ಸಾಕ್ಷಿಯಾಗಿದೆ.

'ಅರ್ತಿಗಾರಿಕೆಯಲ್ಲಿ ಕೆಲಬರು ಮೆಚ್ಚಬೇಕೆಂದು ಮಾಡುವನ ಭಕ್ತಿ
ಮಂಡೆಯ ಮೇಲೆ ಹೊತ್ತ ಸುರೆಯ ಲಚ್ಚಣಿಯಂತೆ
ಅದು ನಿಶ್ಚಯವಲ್ಲ
ಒಳಗಣ ಕಪಟ ಹೊರಗಣ ಬಣ್ಣ
ಆ ತೊಡಿಗೆಯ ನಿನ್ನ ನೀ ನರಿ,
ಪೂಣ್ಯಾರಣ್ಯ ಭೀಮೇಶ್ವರಲಿಂಗ ನಿರಂಗಸಂಗ

(ಡಾ.ಎಸ್.ವಿದ್ಯಾಶಂಕರ್, ೨೦೦೧, ಪು.೬೨)

ಈ ವಚನದಲ್ಲಿ ಬರುವ 'ಮಂಡೆ' ಎನ್ನುವ ಪದಕ್ಕೆ 'ತಲೆ' ಎಂದು ಅರ್ಥ. 'ಮಂಡೆ' ಎನ್ನುವ ಪದ ಈಗಲೂ ಹೆಚ್ಚಾಗಿ ಬಳಕೆಯಲ್ಲಿರುವುದು ತುಳುನಾಡಿನಲ್ಲಿಯೇ. ತನ್ನ ಇನ್ನೊಂದು ವಚನದಲ್ಲಿಯೂ ಕೋಲಶಾಂತ ಈ ಪದ(ಮಂಡೆ) ಬಳಸಿದ್ದಾನೆ. 'ಮರಿಯ ಮಂಡೆಯ ದೆಸೆಯಲ್ಲಿ ಮರಿತಾಯ ನೆರೆ ನೋಡಿ'(ಅದೇ, ಪು.೬೩)

ಈ ಎಲ್ಲ ಆಧಾರಗಳ ಮೇಲೆ 'ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗಸಂಗ' ಎನ್ನುವ ಅಂಕಿತನಾಮದಿಂದ ವಚನಗಳನ್ನು ಬರೆದಿರುವ ಕೋಲಶಾಂತನು ೧೨ನೇ ಶತಮಾನದವನಲ್ಲ ೧೬ನೇ ಶತಮಾನದವನಾಗಿದ್ದು, ಇವನು ತುಳುನಾಡಿನವಾಗಿದ್ದಾನೆ. ಈತನಿಗೂ ಪಂಚಗಣಾಧೀಶ್ವರರಲ್ಲಿ ಬರುವ ಅರಸೀಕೆರೆ ಕೋಲಶಾಂತಯ್ಯನಿಗೂ ಸಂಬಂಧವಿಲ್ಲ. ಈ ಮೂರು ಜನ ಬೇರೆ ಬೇರೆಯವರಾಗಿದ್ದಾರೆ ಎಂದು ತೀರ್ಮಾನಿಸಬಹುದು. 'ಹಂಪಿ ಪ್ರದೇಶದಲ್ಲಿ ನಡೆದ ವಚನಗಳ ಸಂಕಲನ ಕಾರ್ಯದ ಸಂದರ್ಭದಲ್ಲಿ ಕೋಲಶಾಂತಯ್ಯಗಳ ವಚನಗಳನ್ನು ಮೊದಲಿಟ್ಟು ಸಂಕಲಿಸಿದ ಕಟ್ಟುಗಳು ಸಿಗುತ್ತವೆ. ಹಾಗಾಗಿ ವಚನಕಾರ ಕೋಲಶಾಂತ್ಯನ ಜೀವನ ಚರಿತ್ರೆಯನ್ನು ಹುಡುಕ ಹೊರಟಾಗ ಅರಸೀಕೆರೆ ಕೋಲು ಶಾಂತಯ್ಯ ಸಿಕ್ಕಿಬಿದ್ದುದು ವಿದ್ವಾಂಸರ ಸಮೀಕರಣ ಕಾರ್ಯಕ್ಕೆ ಕಾರಣವಾಯಿತು.'(ಎಸ್.ಎಸ್.ಹಿರೇಮಠ, ೧೯೯೭, ಪು.೭೭) ಎನ್ನುವುದನ್ನು ಗಮನಿಸಿದರೆ ಈ ಕೋಲಶಾಂತಯ್ಯನ ಬಗ್ಗೆ ಗೊಂದಲಗಳು ಹುಟ್ಟಿಕೊಳ್ಳಲು ಕಾರಣವೇನು ಎಂಬುದು ತಿಳಿದುಬರುತ್ತದೆ.

## ೫.೪.೨. ದೊರಕಿದ ಅತ್ಯಲ್ಪ ಮಾಹಿತಿಗಳು

ಹರಪನಹಳ್ಳಿ ಕೆಂಪಯ್ಯ ಮತ್ತು ಅರಸೀಕೆರೆ ಕೋಲಶಾಂತರ ಜೀವನದ ಬಗ್ಗೆಯಾಗಲಿ, ಇವರು ಮಾಡಿರುವ ಪವಾಡಗಳ ಬಗ್ಗೆಯಾಗಲಿ ನಮಗೆ ಮಾಹಿತಿಗಳು ಸಿಕ್ಕುವುದೇ ಇಲ್ಲ. ಸಿಗುವ ಮಾಹಿತಿಗಳಿಗೆ ಕೂಡ ಸ್ಪಷ್ಟ ಆಧಾರಗಳಿಲ್ಲ. ಇವರನ್ನು ಆರಾಧಿಸುವ ಜನಸಮುದಾಯವು ಕಡಿಮೆ ಇರುವುದರಿಂದ ಯಾವುದೇ ಜನಪದ ಕಥೆ, ಕಾವ್ಯಗಳು ಹುಟ್ಟಿಕೊಂಡಿಲ್ಲ. ಸಿಗುವ ಅತ್ಯಲ್ಪ ಮಾಹಿತಿಗಳನ್ನು ಆಧರಿಸಿಯೇ ಇವರಿಬ್ಬರ ಜೀವನ-ಪವಾಡಗಳನ್ನು ಈ ಕೆಳಗಿನಂತೆ ವಿವರಿಸಬಹುದಾಗಿದೆ.

ಹರಪನಹಳ್ಳಿ ಕೆಂಪಯ್ಯನಿಗೆ ಸಂಬಂಧಿಸಿದಂತೆ ಬಾಲಬಸವರ ಗೋಣಿಬಸವ ಕಾವ್ಯವು ಈತ ಐವರು ಗಣಾಧೀಶ್ವರರಲ್ಲಿ ಒಬ್ಬನಾಗಿದ್ದನೆಂದು ಕೈಲಾಸದಿಂದ ಭೂಲೋಕಕ್ಕೆ ಬಂದನೆಂದು ಹೇಳುತ್ತದೆ. ಹಾಗೆಯೇ ಕುಪ್ಪಿನಕೆರೆ ಹನುಮಂತನಿಗೆ ಲಿಂಗದೀಕ್ಷೆಯನ್ನು ನೀಡಿದ ಬಗ್ಗೆ ಹಾಗು ಬಾಗಳಿಗೆ ಗಣಾಧೀಶ್ವರರೊಂದಿಗೆ ಹೋಗಿ ಅಲ್ಲಿ ಮದ್ದಾನಸ್ವಾಮಿ ಕನಕವ್ವನನ್ನು ಮದುವೆ ಆಗುವ ಪ್ರಸಂಗ ಬಂದಾಗ ಕೊಟ್ಟೂರ ಗುರುಬಸವ, ನಾಯಕನಟ್ಟಿ ತಿಪ್ಪೇಸ್ವಾಮಿ, ಅರಸೀಕೆರೆ ಕೋಲಶಾಂತಯ್ಯನೊಂದಿಗೆ ಅಲ್ಲಿಂದ ಚೆದುರಿ ಹರಪನಹಳ್ಳಿಗೆ ಬಂದು ಉಳಿದುಕೊಂಡ ಬಗ್ಗೆ ವಿವರವನ್ನು ಒದಗಿಸುತ್ತದೆ.(ಅನುಬಂಧ-೬, ಗೋಣಿಬಸವನ ಕಾವ್ಯದ ಆಯ್ದಭಾಗ)

ನಾಯಕನಟ್ಟಿ ಭಾಗದಲ್ಲಿ ಪ್ರಚಲಿತದಲ್ಲಿರುವಂತೆ ತಿಪ್ಪೇಸ್ವಾಮಿ, ರಾಯದುರ್ಗದಲ್ಲಿ ಕೆಂಪಯ್ಯನು ವೈಭವದ ಮೆರವಣಿಗೆಯಲ್ಲಿ ಹೋಗುತ್ತಿದ್ದಾಗ ಈತನನ್ನು ನೋಡಿ ತಿಪ್ಪೆಯ ಮೇಲೆ ಹುಚ್ಚನಂತೆ ನಿಂತು ಹಾಸ್ಯ ಮಾಡಿ ಬುದ್ದಿ ಕಲಿಸಿದೆನೆಂದು ಹೇಳಲಾಗುತ್ತದೆ. ಇನ್ನೊಂದು ಐತಿಹ್ಯದ ಪ್ರಕಾರ 'ಹರಪನಹಳ್ಳಿ ಪಾಳೇಗಾರರು ತಮಗೆ ಲಿಂಗದೀಕ್ಷೆ ಕೊಡಬೇಕೆಂದು ಇಲ್ಲಿಯ ಹಲವು ಮಠಸ್ಥರನ್ನು ಕೇಳಿಕೊಂಡರಂತೆ ಆದರೆ ಕೆಲವರು ದೊರೆಗೆ ದೀಕ್ಷೆ ನೀಡದೆ ಊರುಬಿಟ್ಟು ಹೋದರಂತೆ 'ಹಾಲವರ್ತಿ ಮಠದಲ್ಲಿದ್ದ ಚೆನ್ನವೀರಸ್ವಾಮಿಗಳು ಹೀಗೆ ಊರುಬಿಟ್ಟು ಹೊಳೆದಂಡೆ ಹತ್ತಿರ ಮಂಗನಾಯಕನಹಳ್ಳಿಗೆ ಹೋದರಂತೆ, ಗುರುಪಾದ ದೇವರಮಠ, ಕಲ್ಲುಮಠ, ಹಿರೇಮಠದವರೆಲ್ಲ ಸೋಮಶೇಖರ ರಾಜನಿಗೆ ಲಿಂಗದೀಕ್ಷೆ ಕೊಟ್ಟರಂತೆ, ಈ ನೆನಪಿಗಾಗಿ 'ಐಗಳ ಕೆರೆ'' ಕಟ್ಟಿಸಿದನಂತೆ. ಈ ಮಠದವರೆ ಅಭಿಷೇಕ, ಕಾರ್ತಿಕಾದಿ ಸಂದರ್ಭಗಳಲ್ಲಿ ಕೆಂಪೇಶ್ವರನಿಗೆ ಕರುಣಕ್ರಿಯೆ(ಕರ್ಣಕ್ರಿಯೆ) ಕೊಡುತ್ತಾರೆ. ಈಗಲೂ ಹಳೇ ಬಸ್ ಸ್ಟಾಂಡಿನಲ್ಲಿರುವ ವೀರಭದ್ರ ದೇವರ ತೇರಿನ(ಗೌರಿ ಹುಣ್ಣಿಮೆ) ದಿನ ಪಲ್ಲಕ್ಕಿ ಕೆಂಪಯ್ಯನ ಮಠಕ್ಕೆ ಹೋಗಿ ಬರುವ ಪದ್ದತಿ ಇದೆ.(ಎಸ್.ಎಸ್.ಹಿರೇಮಠ, ೧೯೯೭, ಪು.೯೭)

ಈ ಚಾರಿತ್ರಿಕ ವಿವರಗಳನ್ನು ಬಿಟ್ಟರೆ ಕೆಂಪಯ್ಯನ ಪವಾಡಗಳು ದೊರೆಯುವುದಿಲ್ಲ. ಆಧುನಿಕವಾಗಿ ಈಗಲೂ ಕೆಲವು ಜನ ಈ ಮಠಕ್ಕೆ ನಡೆದುಕೊಳ್ಳುತ್ತಾರೆ. ಜನ ತಮ್ಮ ಮನೆಗಳಲ್ಲಿ ಕೆಂಪು ಇರುವೆಗಳು

ಹೆಚ್ಚಾಗಿ ಕಂಡುಬಂದರೆ ಕೆಂಪಯ್ಯನಿಗೆ ಬೇಡಿಕೊಳ್ಳುತ್ತಾರೆ. ಅವು ಮಾಯವಾದ ನಂತರ ಕೆಂಪಯ್ಯನಿಗೆ ಹಣ್ಣುಕಾಯಿ ಮಾಡಿಸುತ್ತಾರೆ. 'ಪಾದಗಟ್ಟೆ(ಗದ್ದುಗೆ) ಕೆಲವರ ಪ್ರಕಾರ ಕೆಂಪಯ್ಯ 'ಕುಂದುರಲು-ನಿಂದರಲು' ಕಟ್ಟಿಸಿದ್ದು, ಏನಾದರೂ ಅಪದ್ಧ ಸಂಭವಿಸಿದರೆ 'ಕಾವಿ ಹಾಕ್ಕೊಂಡು ನಿಂದುರುತಾನ' ಎಂದು ಹೇಳುತ್ತಾರೆ. ಹಿಂದೊಂಮ್ಮೆ ಒಬ್ಬ ಮುಸ್ಲಿಂನಿಗೆ ಕೆಂಪಯ್ಯ ಬಿಳಿಕಪನಿ ತೊಟ್ಟು, ಗಡ್ಡ ಬಿಟ್ಟು, ಕಮಂಡಲು ಹಿಡಿದು ಗಾಳಿಯಲ್ಲಿ ಹೊರಟಂತೆ ಕಂಡನಂತೆ, ಅವನ ಮುಂದೆ ದೀಪ ಹೋಗುತ್ತಿತ್ತಂತೆ. ಸಮಾಧಿ ಹತ್ತಿರ ಇವೆಲ್ಲ ಮಾಯವಾದವಂತೆ'(ಎಸ್.ಎಸ್.ಹಿರೇಮಠ, ೧೯೯೭, ಪು.೯೬) ಎನ್ನುವ ಕೆಲವು ಜನರ ಬಾಯಿಯಲ್ಲಿನ ಸಂಗತಿಗಳನ್ನು ಬಿಟ್ಟರೆ ಹೆಚ್ಚೇನು ಮಾಹಿತಿ ಕೆಂಪಯ್ಯನ ಕುರಿತು ದೊರೆಯಲಾರದು. 'ಕೆಂಪಯ್ಯನ ಮಠವಿರುವ ಲಿಂಗಾಯತ ಕೇರಿಯಲ್ಲಿ ಲಾಳಗಂಡರು ಅಥವಾ ಮಟ್ಟೇರು ಎಂಬ ಲಿಂಗಾಯತ ಪಂಗಡದ ಜನರಿದ್ದಾರೆ. ಇವರು ಕೆಂಪಯ್ಯನ ಭಕ್ತರು. ಮೈಲಾರನ ಕಾರ್ಣಿಕ ಕೇಳಿದರೆ, ಆತನ ಭಂಡಾರ ಹಚ್ಚಿಕೊಂಡರೆ ಕೆಂಪಯ್ಯ ಸಿಟ್ಟಾಗುತ್ತಾನೆಂದು ಈ ಕುಲದ ಹಿರಿಯರು ಹೇಳುತ್ತಾರೆ.(ಅದೇ, ಪು.೯೮)

೪೦ ವರ್ಷಗಳ ಹಿಂದೆ ಕೆಂಪಯ್ಯನ ರಥೋತ್ಸವ ಜರಗುತ್ತಿದ್ದು ಈಗ ಅದು ನಿಂತುಹೋಗಿದೆ. ಈಗ ನಿತ್ಯಪೂಜೆಗಳು ಮತ್ತು ಕಾರ್ತಿಕೋತ್ಸವ ಮಾತ್ರ ಜರಗುತ್ತದೆ. 'ಹರಪನಹಳ್ಳಿ ಸೋಮಶೇಖರರಾಜನ ಕಾಲದಲ್ಲಿ ಈ ಊರಲ್ಲಿ ಅರವತ್ನಾಲ್ಕು ಬೇರೆ-ಬೇರೆ ಮಠಗಳಿದ್ದವಂತೆ'(ಅದೇ, ಪು.೯೦) ಹಾಗಾಗಿ ಹಲವಾರು ಮಠಗಳ ಮಧ್ಯೆ ಜನಸಮುದಾಯದ ಭಕ್ತಿ ಹಂಚಿಹೋಗಿರಬೇಕು. ಈ ಮಠಗಳ ಮಧ್ಯದ ತೀವ್ರ ಪೈಪೋಟಿಯಿಂದಾಗಿ ಜನಸಮುದಾಯ ಹೆಚ್ಚಾಗಿ ಈ ಕೆಂಪಯ್ಯನನ್ನು ಆರಾಧಿಸದೇ ಇರಬಹುದಾಗಿದೆ.

ಇನ್ನು ಕೋಲಶಾಂತನ ಜೀವನದ ಕುರಿತು ಸಿಗುವ ಪ್ರಮುಖ ಆಧಾರವೆಂದರೆ ಬಸವಲಿಂಗಕವಿ ಬರೆದ ಕೊಟ್ಟೂರು ಬಸವೇಶ್ವರ ಚಾರಿತ್ರ್ಯ' ಕೃತಿ. ಇದರಲ್ಲಿ ಕೋಲಶಾಂತನು ಕೊಟ್ಟೂರಿನಲ್ಲಿ ಗುರುಬಸವನೊಂದಿಗೆ ಇದ್ದ ಬಗ್ಗೆ ವಿವರಿಸಲಾಗಿದೆ. ಗುರುಬಸವನ ಹಲವಾರು ಪವಾಡಗಳನ್ನು ತಿಳಿದು ಅವನನ್ನು ಭೇಟಿ ಮಾಡಲು ಕೊಟ್ಟೂರಿಗೆ ಬಂದ ಶರಣರಲ್ಲಿ ಕೋಲಶಾಂತನೂ ಒಬ್ಬನು.

ಈ ಮಹತ್ವಾತಿಶಯಪ್ಪಿಯಾಷಶರಧಿಯು
ದ್ಧಾಮತೆಯೊಳುರ್ವಿ ದಶದಿಕ್ಕಿನೊಳ್ ಪರ್ದಲಭಿ
ರಾಮದಿಂ ಸಕಲ ಶಿವಗಣರಾಜಹಂಸಂಗಳ್ ಮಳನಿರುಪಮತೇಜರು
ಸೌವನಸ್ಯರ್ ಪರಬ್ರಹ್ಮಸಂಪದವಿಲೀ
ನಾಮಲಿನಸುಗತಿಪ್ರವರ್ತಕರ್ ಗೌರವಸು
ಧಾಮಹಿತ ಮಾನಸಾಶ್ರಿತಮಹೇಶರ್ ವಿತತಸಂದರ್ಶನೋತ್ಸಾಕದೊಳು|

ಕೋಲಶಾಂತೇಶ ಭಿಕ್ಷದ ಮಹಂತೇಶ ಮುನಿ
ಪಾಲ ಯರಗಂಬಳಿಯ ಗುರುದೇವ ಕಿನ್ನರಿಯ

ಲೋಲಯತಿ ಕೆಂಚವೀರೇಶ ಚೆನ್ನಂಜೇಶ್ವರಾಯ ವೋಟೆಯ ಮಹೇಶಾ
ಶೂಲಪಾಣೇಶ ನಾಟ್ಯ ನಮಃಶಿವಾಯ ಜಿತ
ಕಾಲ ಮದ್ದಾನೆಯ ಮಹಾಸಿದ್ದಪತಿ ವಿರತ
ಮೌಳಿಮಣಿಬರಿಗಲ್ಲದೇವ ಮುಂತಾದ ಶಾಂಭವಗಣಾಧಿಪರೊಲ್ಮೆಯಂ |

(ಕೊಟ್ಟೂರು ಬಸವೇಶ್ವರ ಚಾರಿತ್ರ್ಯ ಸಂ.೯, ಪ.೨೮-೨೯)

ಕೊಟ್ಟೂರಿಗೆ ಬಂದ ಕೋಲಶಾಂತನು ಗುರುಬಸವನ ಅಂತಿಮಕಾಲದವರೆಗೂ ಇಲ್ಲಿಯೇ ಇದ್ದನೆಂದು ಬಸವಲಿಂಗಕವಿ ವಿವರಿಸಿದ್ದಾನೆ. ಆದರೆ ಕೊಟ್ಟೂರಿಗೆ ಎಲ್ಲಿಂದ ಬಂದ ಎನ್ನುವ ಬಗ್ಗೆ ವಿವರಣೆಯಿಲ್ಲ. ತುಮಕೂರು ಜಿಲ್ಲೆಯ ಮಧುಗಿರಿ ತಾಲೂಕಿನ ಭಸ್ಮಾಂಗಿ ಎನ್ನುವ ಸ್ಥಳದಲ್ಲಿ ಕೋಲಶಾಂತನ ಗದ್ದುಗೆ ಇದೆ. ಅಲ್ಲಿನ ಜನರ ಹೇಳಿಕೆಯ ಪ್ರಕಾರ ಪರಮತದವರನ್ನು ಈತನು ಭಸ್ಮ ಮಾಡಿದ್ದರಿಂದ ಈ ಊರಿಗೆ ಭಸ್ಮಾಂಗಿ ಎನ್ನುವ ಹೆಸರು ಬಂದಿದೆ ಎನ್ನಲಾಗುತ್ತದೆ. ಅಲ್ಲಿಂದ ಚಿತ್ರದುರ್ಗಕ್ಕೆ ಬಂದಿದ್ದಾರೆ. 'ಚಿತ್ರದುರ್ಗ ಜಿಲ್ಲೆಯ ಬಿದರ ಕೆರೆ ಸಮೀಪದಲ್ಲಿರುವ ಗುಡ್ಡದ ಗವಿಯಲ್ಲಿ ಕೆಲಕಾಲ ತಪಸ್ಸು ಮಾಡಿ, ಜಗಲೂರು, ಅಣಜಿ ಇತ್ಯಾದಿ ಸ್ಥಳಗಳಲ್ಲಿ ಸಂಚರಿಸಿದ ಮಾಹಿತಿಗಳಿವೆ.'(ಸದ್ಯೋಜಾತ ಮೂರ್ತಿ.ಸಿ., ೧೯೮೪, ಪು.೨೬) ಆದರೆ ಈ ಬಗ್ಗೆ ಹೆಚ್ಚಿನ ಆಧಾರಗಳು ದೊರೆಯುವುದಿಲ್ಲ.

ಗುರುಬಸವನೊಂದಿಗೆ ಜೀವನ ಕಳೆದ ಬಗ್ಗೆ 'ಕೊಟ್ಟೂರ ಬಸವೇಶ್ವರ ಚಾರಿತ್ರ್ಯ'ದಲ್ಲಿ ಸ್ಪಷ್ಟ ಆಧಾರಗಳಿವೆ. ಕುರುಡನೊಬ್ಬ ಕಣ್ಣುಕೇಳಲು ಬಂದಾಗ ಗುರುಬಸವ ಆತನನ್ನು ದಾದಿನಾಯಕನ ಬಳಿ ಹೋಗೆಂದು ಹೇಳುತ್ತಾನೆ. ಆಗ 'ಕೊಡುವಂ ದಾದಿನಾಯಕಂ ಪಿಂಗು ಪೆರತೊಲಗೆಂದ ಗುರುನಿರೂಪಂಬಿಡಿದು ಕೋಲಶಾಂತೇಶನೆಂದಂ ಮಂಗಳಾತ್ಮಕನ ಮಹಿಮೋನ್ನತಿಯದಾವ ವಿಭುಧಂಗರಿಯಬರ್ಪುದಾರ್ಯ ಬೆಸಸಿದಂತೆ ಭೂಪಂಗೆ ಪೇಳೆನಲವಂ'(ಸಂ.೯, ಪ.೩೩) ಎಂದು ಆ ಕುರಡನನ್ನು ದಾದಿನಾಯಕನ ಬಳಿ ಹೋಗಲು ಸಹಾಯ ಮಾಡುತ್ತಾನೆ. ಆ ಕುರುಡನಿಗೆ ಕಣ್ಣು ಕೊಟ್ಟ ದಾದಿನಾಯಕನಿಗೆ ನಂದಿಲಿಂಗನ ಮಹಿಮೆಯನ್ನು ಪಾಲ್ಕುರಿಕೆ ಸೋಮನಾಥನ ಕಥೆಯನ್ನು ವಿವರಿಸುತ್ತಾನೆ.(ಸಂ.೯, ಪ.೪೦-೮೦)

ಬಸವಲಿಂಗ ಕವಿಯ ಕೃತಿಯುದ್ದಕ್ಕೂ ಕೋಲಶಾಂತನು ಗುರುಬಸವನ ಒಡನಾಡಿಯಾಗಿ ಆತನ ಮಹಿಮೆಯನ್ನು ಸಾಮಾನ್ಯ ಜನರಿಗೆ ತಿಳಿಸುತ್ತಾ ಕಾಲಕಳೆಯುತ್ತಿದ್ದನು. ಗುರುಬಸವ ಜನರ ಮಧ್ಯದಲ್ಲಿ ಕುಳಿತೇ ತುಂಗಭದ್ರ ನದಿಯಲ್ಲಿ ಮುಳುಗುತ್ತಿದ್ದ ಕೂಸನ್ನು ರಕ್ಷಿಸಿದ ಪವಾಡವನ್ನು ವಿವರಿಸಿ ಭಕ್ತರಿಗೆ ಹೇಳಿದನು. ನೂತನ ಗಣಾಧೀಶ್ವರರಾದ ಪ್ರಭುಸ್ವಾಮಿಯ ಕಥೆಯನ್ನು ಹೇಳಿದನು.(ಸಂ.೧೨) ಕೊಟ್ಟೂರ ಗುರುಬಸವನು ಸಮಾಧಿಯಾಗುವ ಸಂದರ್ಭದಲ್ಲಿ ಕೋಲಶಾಂತನು ಆತನೊಂದಿಗೆ ಇದ್ದನು. ಗುರುಬಸವನ ಪ್ರಾಣವೇ ಕೋಲಶಾಂತನಾಗಿದ್ದನೆಂದು ಬಸವಲಿಂಗಕವಿ ಉಲ್ಲೇಖಿಸುತ್ತಾನೆ.

'ಚಿತ್ಕೋಶ ಪರಮ ಗುರುಬಸವೇಶ ನಿರುಪಮ ಭ
ವತ್ಕೇಕರದೊಳಭೀಕ್ಷಿಸಿ ರಕ್ಷಿಸುವುದು ಶುಂ
ಭತ್ಕರುಣ ರಸಸಿಂಧುವೇಯೆಂದು ವಂದಿಸುವ ಚನ್ನಂಜಯತಿಯ ನೋಡಿ
ಮತ್ಕಯವೇ ನೀನು ಮೆನ್ನ ಜೀವಂ ತತ್ವ
ವಿತ್ಕೋಲಶಾಂತೇಶ್ವರಂ ಸಕಲ ವಿರಕರೇ
ಸತ್ಕರಣಸಂಕುಲಂ ನಿಮ್ಮೊಳೆನಗಂ ಭೇದಮಣಮಿಲ್ಲ ಪರಮಾರ್ಥದಿಂ

(ಕೊಟ್ಟೂರು ಬಸವೇಶ್ವರ ಚಾರಿತ್ರ್ಯ, ಸಂ.೧೯, ಪ.೬)

ಹೀಗೆ ಕೋಲಶಾಂತನು ಗುರುಬಸವನೊಂದಿಗೆ ಇದ್ದು ಗುರುಬಸವನ ಕೊನೆಗಾಲದಲ್ಲಿಯೂ 'ವಿಕಲ ನಿರಹಿತಚಿತ್ತ ಕೋಲಶಾಂತೇಶ್ವರಂ ಸ್ತುತಿಸುತರ್ಚಿಸಿ ನೆಗೆವುತಂ ಪ್ರಕಟಿಸುತ ಗುರುಬಸವರಾಜ ಮಹಿಮೋನ್ನತಿಯ'ನ್ನು ಸಾರುತ್ತಾ ಗುರುಬಸವನ ಸಮಾಧಿ ನಂತರ ಕೊಟ್ಟೂರನ್ನು ಬಿಟ್ಟು ಅರಸೀಕೆರೆಗೆ ಬಂದಿರಬೇಕು. ಆದರೆ ಬಾಲಬಸವರ ಗೋಣಿಬಸವ ಕಾವ್ಯದ ಪ್ರಕಾರ ಬಾಗಳಿಯಿಂದ ಚದುರಿದ ಶರಣರು ಈಗಿರುವ ಸ್ಥಳಗಳಿಗೆ ಸೇರಿದಂತೆ ಕೋಲಶಾಂತನು ಅರಸೀಕೆರೆಗೆ ಬಂದನೆಂದು ಹೇಳುತ್ತದೆ. ಅರಸೀಕೆರೆಯಲ್ಲಿ 'ಬಡವಿಯ ಸತ್ತ ಎಮ್ಮೆ ಬದುಕಿಸಿದ, ಕೊಟ್ಟೂರ ಗುರುಬಸವನ ಮಠವನ್ನು ಮಾಡಿಸಿಕೊಟ್ಟ, ಊರಿನ ಗ್ರಾಮದೇವತೆ ದುರುಗಮ್ಮ ಈತನ ಮಹಿಮೆಯಿಂದ ಕೈ ಮುಗಿದಳು. ಮಠಕ್ಕೆ ಕಾವಲಾದಳು' ಎನ್ನುವ ಪವಾಡಗಳನ್ನು ಈತನು ಮಾಡಿದನೆಂದು ಕೋಲಶಾಂತನ ಬಗ್ಗೆ ಹೆರೂರು ಬಸವಣ್ಣ ಎಂಬುವರು ಬರೆದ ಅಪ್ರಕಟಿತ 'ಕೋಲುಶಾಂತೇಶ್ವರ ಮಹಾಸ್ವಾಮಿಯವರ ನೂರೆಂಟು ನಾಮಾವಳಿ' ಎನ್ನುವ ಕೃತಿ ಹೇಳುತ್ತದೆ. ಈ ಬಗ್ಗೆ ಕೂಡ ಆಧಾರಗಳು ಇಲ್ಲ. ಇಷ್ಟು ಬಿಟ್ಟರೆ ಕೋಲಶಾಂತನ ಜೀವನದ ಬಗ್ಗೆ ನಮಗೆ ಹೆಚ್ಚಿನ ವಿವರಗಳು ದೊರೆಯುವುದಿಲ್ಲ.

ಒಟ್ಟಾರೆ ಕೆಂಪಯ್ಯ ಮತ್ತು ಕೋಲಶಾಂತನ ಬಗ್ಗೆ ಮಾಹಿತಿಗಳ ಕೊರತೆ ಇದ್ದು ಇವರ ಜೀವನವನ್ನು ವಿವರಿಸಲು ತೊಡಕಾಗಿದೆ. ಇದಕ್ಕೆ ಮುಖ್ಯ ಕಾರಣ ಬಹುಸಂಖ್ಯೆಯ ಜನರು ಇವರನ್ನು ಆರಾಧಿಸದೇ ಇರುವುದು, ಇವರ ಬಗ್ಗೆ ಶಾಸನಗಳಾಗಲಿ, ಕೃತಿಗಳಾಗಲಿ ರಚನೆಯಾಗಿಲ್ಲದಿರುವುದು. ಇದೇ ಭಾಗದಲ್ಲಿದ್ದ ಹರಪನಹಳ್ಳಿ ಪಾಳೇಗಾರರ ಅಥವಾ ಇನ್ನಿತರ ಮಾಂಡಲೀಕರ ಆಶ್ರಯ, ದಾನ-ದತ್ತಿ ಇವರ ಮಠಗಳಿಗೆ ಸಿಗದೇ ಇರುವುದು, ಇವರ ಬಗ್ಗೆ ಹೆಚ್ಚಿನ ಮಾಹಿತಿಗಳು ಕಾಣೆಯಾಗಲು ಕಾರಣವಾಗಿದೆ. ಸಿಗುವ ಮಾಹಿತಿಗಳನ್ನಾಧರಿಸಿಯೇ ಈ ಮೇಲಿನಂತೆ ಕೆಂಪಯ್ಯ ಮತ್ತು ಕೋಲಶಾಂತನ ಬಗ್ಗೆ ವಿವರಗಳನ್ನು ನೀಡಲಾಗಿದೆ.

# ಅಧ್ಯಾಯ ೬

# ಪಂಚಗಣಾಧೀಶ್ವರರು ಮತ್ತು ಆಚರಣಾಲೋಕ

# ಪಂಚಗಣಾಧೀಶ್ವರರು ಮತ್ತು ಆಚರಣಾಲೋಕ

ಮಧ್ಯ ಕರ್ನಾಟಕದ ಸಮುದಾಯಗಳ ಬದುಕಿನಲ್ಲಿ ತಮ್ಮ ಜೀವನ ಸಾಧನೆಗಳ ಮೂಲಕ ಆರಾಧ್ಯ ದೈವಗಳಾದ ಪಂಚಗಣಾಧೀಶ್ವರರು ಈ ಹೊತ್ತು ಬೇರೊಂದು ರೀತಿಯಲ್ಲಿ ಬದುಕಿದ್ದಾರೆ. ಈ ಐವರು ಸಂತರ ಸುತ್ತ ಇರುವ ಆಚರಣೆಗಳನ್ನು ನಂಬಿಕೆಗಳನ್ನು ಗಮನಿಸಿದರೆ ಸಮುದಾಯಗಳು ತಮ್ಮ ನಿತ್ಯ ಜೀವನದಲ್ಲಿ ಅದರೊಂದಿಗೆ ಇಟ್ಟುಕೊಂಡಿರುವ ಒಡನಾಟ ಬಾಂಧವ್ಯದ ಅರಿವಾಗುತ್ತದೆ. ದಿನನಿತ್ಯವೂ ನೂರಾರು ಜನರು ಈ ಸಂತರ ಮಠಗಳಿಗೆ ಬರುವುದನ್ನು ನೋಡಿದರೆ ಅವರ ಮನದಲ್ಲಿ ಈ ಸಂತರ ಬಗ್ಗೆ ಇರುವ ಭಕ್ತಿಯ ಅರಿವಾಗುತ್ತದೆ. ಕೊಟ್ಟೂರ ಗುರುಬಸವನ ಜಾತ್ರೆಗೆ ಸೇರುವ ಲಕ್ಷಾಂತರ ಜನ, ನಾಯಕನಟ್ಟಿ ಜಾತ್ರೆಯಲ್ಲಿ ಬಲಿಯಾಗುವ ಸಾವಿರಾರು ಕುರಿ ಕೋಳಿಗಳು, ಗೋಣಿಬಸವನ ಜಾತ್ರೆಗೆ ತಮ್ಮ ಕರ್ತವ್ಯವನ್ನು ಮಾಡಲು ಬರುವ ವಿವಿಧ ವರ್ಗಗಳು ಇವೆಲ್ಲ ಏನನ್ನು ಸೂಚಿಸುತ್ತವೆ? ಇತ್ತೀಚೆಗೆ ಬಂದು ಸೇರುತ್ತಿರುವ ವಿವಿಧ ಪದ್ಧತಿಗಳು, ಆಚರಣೆಗಳು ಯಾವ ಒತ್ತಡದಿಂದ ರೂಪುಗೊಂಡಿವೆ? ಈ ಎಲ್ಲ ಆಚರಣೆ ಪದ್ಧತಿಗಳನ್ನು ಅಧ್ಯಯನ ಮಾಡಲೆತ್ನಿಸಿದರೆ ಪಂಚಗಣಾಧೀಶ್ವರರ ಬದುಕಿನೊಂದಿಗೆ ಈ ಭಾಗದ ಜನಸಮುದಾಯದ ಭೂತ, ವರ್ತಮಾನದ ಬದುಕಿನ ಸಂಘರ್ಷಗಳು, ಒಪ್ಪಂದಗಳು, ಗೋಚರವಾಗುತ್ತವೆ.

## ೬.೧. ಸಮುದಾಯಗಳ ಅಭಿವ್ಯಕ್ತಿ ಮಾಧ್ಯಮವಾಗಿ ಆಚರಣೆಗಳು

ಆಚರಣೆಗಳು ಯಾವಾಗಲೂ ಧಾರ್ಮಿಕ ಕಾರಣಗಳಿಗಾಗಿ ರೂಪುಗೊಳ್ಳುವುದಿಲ್ಲ. ಸಮುದಾಯಗಳ ಲೌಕಿಕ ಆಶೋತ್ತರಗಳು, ಆಚರಣೆಯಲ್ಲಿ ಅಭಿವ್ಯಕ್ತಿಗೊಳ್ಳುತ್ತವೆ. ಆಯಾ ಪ್ರದೇಶದ ಭೌಗೋಳಿಕ ವೈಶಿಷ್ಟ್ಯತೆ, ಸಮುದಾಯದ ಸಾಮಾಜಿಕ, ರಾಜಕೀಯಾರ್ಥಿಕ ಕಾರಣಗಳು, ಇವು ಕೂಡ ಆಚರಣೆಗಳು ರೂಪುಗೊಳ್ಳಲು ಕಾರಣವಾಗುತ್ತವೆ. ಆಚರಣೆಗಳು ಒಂದು ರೀತಿಯಲ್ಲಿ ಕ್ರಿಯಾತ್ಮಕ ಪಠ್ಯಗಳು. ಇಲ್ಲಿ ಅಕ್ಷರಗಳು, ಮಾತುಗಳು, ಮಂತ್ರಗಳು, ಘೋಷಣೆಗಳು, ಹಾಡುಗಳ ಜೊತೆ ಜೊತೆಯಲ್ಲಿಯೇ ಅನೇಕ ಕ್ರಿಯೆಗಳು ಇರುತ್ತವೆ. ಪೂಜೆಗಳು, ಉನ್ಮಾದ ನೃತ್ಯಗಳು, ವಾದ್ಯಗಳು ಇಲ್ಲಿ ಪಾಲ್ಗೊಂಡಿರುತ್ತವೆ.

ಆಚರಣೆಗಳು ಏಕಕಾಲದಲ್ಲಿ ವ್ಯಕ್ತಿಯ ತೀರ ವೈಯಕ್ತಿಕವೆನ್ನಿಸುವ ಭಾವ ತೀವ್ರತೆಯಲ್ಲಿ ಮತ್ತು ಸಮೂಹದ ಪ್ರೋತ್ಸಾಹದ ಫಲವಾಗಿ ಅಸ್ತಿತ್ವಕ್ಕೆ ಬಂದಿರುತ್ತವೆ. ಜನಪದ ಆಚರಣೆಗಳು ಬೇರೊಂದು ಪಂಥ ಅಥವಾ ಧರ್ಮದಿಂದ ತನಗೆ ಬೇಕಾದದ್ದನ್ನು ಸ್ವೀಕಾರ ಮಾಡಿಕೊಳ್ಳಲು ಹಿಂಜರಿಯುವುದಿಲ್ಲ.

ಆದ್ದರಿಂದಲೇ ಪಂಚಗಣಾಧೀಶ್ವರರ ಆಚರಣೆಗಳಲ್ಲಿ ಶೈವನಾಥಸಿದ್ಧರ ಆಚರಣೆಗಳಲ್ಲದೆ, ಸೂಫಿ ಆಚರಣೆಗಳು, ವೈದಿಕ ಅನುಕರಣೆಗಳು ಕಂಡುಬರುತ್ತವೆ. ಕಂಡಾಯ ಪೂಜೆ, ಕೊಬ್ಬರಿ ಸುಡುವುದು, ಮಾಲೆಧರಿಸುವುದು ಮುಂತಾದವು ಈ ರೀತಿಯ ಸ್ವೀಕರಣೆಯಿಂದ ಬಂದಂತಹುಗಳಾಗಿವೆ.

ಪಂಚಗಣಾಧೀಶ್ವರರಿಗೂ ಮತ್ತು ಸಮುದಾಯಗಳಿಗೂ ಇರುವ ನಿಕಟ ಸಂಬಂಧ ಆಚರಣೆಗಳಲ್ಲಿ ಅಭಿವ್ಯಕ್ತಿಪಡೆದಿರುವುದನ್ನು ಕಾಣಬಹುದು. ನಾಯಕ ಜನಾಂಗದ ಪೂಜಾರಿ, ದಲಿತರ ಆರತಿ ಬೆಳಗುವಿಕೆ, ಕುರುಬರು ಪಲ್ಲಕ್ಕಿ ಹೋರುವುದು ಕೂಲಹಳ್ಳಿಯಲ್ಲಿ, ಇವೆಲ್ಲ ಆಯಾ ಜನಾಂಗದ ಜೊತೆಯಲ್ಲಿ ಈ ಸಂತರು ಹೊಂದಿದ ನಿಕಟ ಸಂಬಂಧವನ್ನು ಸೂಚಿಸುತ್ತವೆ. ಇವರಲ್ಲದೆ ಕುಲೇಳು ೧೮ ಜಾತಿಗಳು ಜಾತ್ರೆ, ಕಾರ್ತಿಕೋತ್ಸವ ಮುಂತಾದ ಆಚರಣೆಗಳಲ್ಲಿ ಭಾಗವಹಿಸುತ್ತವೆ. ಈ ಉತ್ಸವಗಳಲ್ಲಿ ಪ್ರತಿಯೊಂದು ಜನಾಂಗಕ್ಕೂ ತಮ್ಮದೆ ಆದ ಕರ್ತವ್ಯಗಳನ್ನು ಮಾಡುವ ಹಕ್ಕು ಲಭಿಸಿರುತ್ತದೆ. ವಿವಿಧ ಜಾತಿಗಳು ಆಚರಣೆಯ ಮೂಲಕ ಸೃಷ್ಟಿಯಾಗುವ ಜಾತ್ರೆ, ಉತ್ಸವಗಳಂತ ಸಾಂಸ್ಕೃತಿಕ ಸಂದರ್ಭದಲ್ಲಿ ಮುಖ್ಯರಾಗಿ ಬಿಡುತ್ತಾರೆ. ಅಂದರೆ ಇಂತಹ ಆಚರಣೆಗಳಲ್ಲಿ ಒಂದೊಂದು ಬಗೆಯ ಅಧಿಕಾರವನ್ನು ಪಡೆದುಕೊಂಡು ತಮ್ಮ ಸಾಂಸ್ಕೃತಿಕ ಅನನ್ಯತೆಯನ್ನು ಪ್ರದರ್ಶಿಸುತ್ತವೆ. ಪಂಚಗಣಾಧೀಶ್ವರರ ಜಾತ್ರೆ ಮತ್ತು ಕಾರ್ತಿಕೋತ್ಸವದ ಸಂದರ್ಭದಲ್ಲಿ ಪಲ್ಲಕ್ಕಿ ಹೋರುವವರು ಪಂಜು ಹಿಡಿಯುವರು, ಆರತಿ ಬೆಳಗುವವರು, ಮಡಿಸೀರೆ ಹಾಸುವವರು, ತೇರು ಕಟ್ಟುವವರು, ಸಾಂಸ್ಕೃತಿಕ ಅಧಿಕೃತತೆಯನ್ನು ಪಡೆದಿರುತ್ತಾರೆ.

ಆಚರಣೆಗಳು ಬಹುಮುಖಿ ಸಂವೇದನೆಯಿಂದ ರೂಪುಗೊಂಡಿರುತ್ತವೆ. ಅನೇಕ ಕಾಲಘಟ್ಟಗಳು, ಅಸಂಖ್ಯಾತ ಅನುಭವಗಳು, ಇಲ್ಲಿ ಒಟ್ಟಾಗಿರುತ್ತವೆ. ೧೬-೧೭ನೇ ಶತಮಾನದ ಪಂಚಗಣಾಧೀಶ್ವರರ ಕಾಲದ ಅನುಭವಗಳ ಜೊತೆಯಲ್ಲಿಯೇ ೨೧ನೇ ಶತಮಾನದ ಅನುಭವಗಳೂ ಸೇರಿಕೊಂಡು ಅಭಿವ್ಯಕ್ತವಾಗುತ್ತಿರುತ್ತವೆ. ಇದಕ್ಕೆ ಮುಖ್ಯವಾಗಿ ಜೀವಂತ ಸಮುದಾಯ ಯಾವಾಗಲೂ ಈತರ ಆಚರಣೆಗಳಿಗೆ ವರ್ತಮಾನದ ತಮ್ಮ ಬದುಕಿನ ಮೂಲಕವೇ ಪ್ರತಿಕ್ರಿಯೆ ನೀಡುವುದು ಕಾರಣವಾಗಿದೆ. ವರ್ತಮಾನದ ರಾಜಕೀಯಾರ್ಥಿಕ ಒತ್ತಡಗಳು ಆಚರಣೆಗಳನ್ನು ರೂಪಾಂತರಿಸುವುದೋ ಇಲ್ಲವೆ ಹೊಸದೊಂದು ಆಚರಣೆಯನ್ನು ಸೇರಿಸುವ ಕ್ರಿಯೆಗೆ ಕಾರಣವಾಗುತ್ತವೆ. ಕುಪ್ಪಿನಕೇರಿ ಹನುಮಂತನಿಗೆ ಪೂಜೆ ಮಾಡುವುದು, ನಾಯಕನಟ್ಟಿಯಲ್ಲಿ ೩೨ ವರ್ಷಗಳಿಗೊಮ್ಮೆ ನಡೆಯುವ ಮಾರಮ್ಮನ ಪೂಜೆ, ನಾಗಪ್ರತಿಮೆಗಳನ್ನು ಪೂಜಿಸುವುದು ಇವೆಲ್ಲ ಚಾರಿತ್ರಿಕ ಒತ್ತಡಗಳಿಂದ ಪಂಚಗಣಾಧೀಶ್ವರ ಪಂಥದಲ್ಲಿ ಸೇರಿಕೊಂಡಿದ್ದರೆ, ಮಾಲೆಧರಿಸುವುದು, ಲಕ್ಷದೀಪೋತ್ಸವ ಆಚರಿಸುವುದು, ಬೆಳ್ಳಿರಥದಲ್ಲಿ ಉತ್ಸವ ನಡೆಸುವುದು ಇತ್ಯಾದಿಗಳು ೨೧ನೇ ಶತಮಾನದ ರಾಜಕೀಯಾರ್ಥಿಕ ಒತ್ತಡಗಳಿಂದ ರೂಪುಗೊಂಡಂತಹ ಆಚರಣೆಗಳಾಗಿವೆ (ಗಮನಿಸಿ ಅಧ್ಯಾಯ ೪).

ನಾಯಕನಟ್ಟಿಯಲ್ಲಿನ ತೆಪ್ಪೋತ್ಸವದಂತಹ ಆಚರಣೆಗಳು ಬರಗಾಲ ಬಂದು ಮಳೆಯೇ ಬರದಿದ್ದಾಗ ಹರಕೆ ಹೊತ್ತ ಜನ, ಹರಕೆಯನ್ನು ತೀರಿಸಲು ಮಾಡುತ್ತಾರೆ. ಇದು ಜನರ ವರ್ತಮಾನದ ಸ್ಥಿತಿಗತಿಯನ್ನು

ಸೂಚಿಸಿದರೆ, ಕೂಲಹಳ್ಳಿ ಮಠದಲ್ಲಿನ ಮದುವೆ ಆಚರಣೆಗಳು ಮದ್ದಾನ ಸ್ವಾಮಿ ಮತ್ತು ಗೋಣಿ ಬಸವ ಮದುವೆಯಾದ ಚಾರಿತ್ರಿಕ ಘಟನೆಗೆ ಅಭಿವ್ಯಕ್ತಿಯಾಗಿದೆ. ಹೀಗೆ ಹಲವಾರು ಆಚರಣೆಗಳು ಸಮುದಾಯದ ಚಾರಿತ್ರಿಕ ಹಾಗೂ ವರ್ತಮಾನದ ಬದುಕಿನ ಅಭಿವ್ಯಕ್ತಿಯಾಗಿವೆ.

ಇದಲ್ಲದೆ ಆಚರಣೆಗಳೊಂದಿಗೆ ಹಾಡುಗಳು, ನೃತ್ಯಗಳು ಇನ್ನಿತರ ಕಲಾಪ್ರಕಾರಗಳು ಅಭಿವ್ಯಕ್ತ ಗೊಳ್ಳುತ್ತವೆ. ನಾಯಕನಟ್ಟಿ ಜಾತ್ರೆಯ ಸಂದರ್ಭದಲ್ಲಿ ಹೊರಮಠದ ಹತ್ತಿರ ಸಾವಿರಾರು ಜೋಗಿಗಳು ಹಾಡುಗಳನ್ನು ಹಾಡುತ್ತಾ, ಭಂಗಿಯ ಉನ್ಮತ್ತತೆಯಲ್ಲಿ ಇರುತ್ತಾರೆ. ಕೊಟ್ಟೂರಿನ ರಥೋತ್ಸವದ ಸಂದರ್ಭದಲ್ಲಿ ಹರಿಜನಕೇರಿಯ ಹೆಂಗಸರೂ ಹಾಡುಗಳನ್ನು ಹಾಡುತ್ತಾರೆ. ಕೋಲಾಟ ಪದಗಳು, ಭಜನೆ ಮೇಳಗಳು ಎಲ್ಲ ಜಾತ್ರೆಗಳಲ್ಲೂ ಕಂಡುಬರುತ್ತವೆ. ಹೀಗೆ ಸಮುದಾಯದೊಳಗಿನ ವಿವಿಧ ಕಲಾಪ್ರಕಾರಗಳು ಆಚರಣೆಯ ಮೂಲಕ ಅಭಿವ್ಯಕ್ತಿಗೊಳ್ಳುತ್ತಿರುತ್ತವೆ.

## ೬.೨. ಆಚರಣೆಗಳ ಕೇಂದ್ರಸ್ಥಳವಾಗಿ ಮಠಗಳು

ವಿಜಯನಗರ ಸಾಮ್ರಾಜ್ಯದ ಕೇಂದ್ರ ಭಾಗವಾಗಿದ್ದ ಮಧ್ಯಕರ್ನಾಟಕದಲ್ಲಿ ಆಣೆಕಟ್ಟುಗಳ ನಿರ್ಮಾಣದಿಂದಾಗಿ ನೀರಾವರಿ ವ್ಯವಸ್ಥೆಯು ಪ್ರಗತಿ ಹೊಂದಿ ಕೃಷಿಯ ಸಮೃದ್ಧಿಯನ್ನು ಹೊಂದಿತು. ಇದರಿಂದಾಗಿ ಉತ್ಪಾದನೆಯು ಹೆಚ್ಚಾಗಿ ವ್ಯಾಪಾರ ವಾಣಿಜ್ಯ ವ್ಯವಹಾರಗಳು ಹೆಚ್ಚಾದವು. ಇದು ಬಂಜರು ಭೂಮಿಯನ್ನು ಸಾಗುವಳಿ ಭೂಮಿಯನ್ನಾಗಿ ಮಾಡಲು ಇನ್ನಷ್ಟು ಪ್ರೋತ್ಸಾಹವನ್ನು ನೀಡಿತು. ಇದರಿಂದಾಗಿ ಬೇಟೆ ಮತ್ತು ಸಂಗೋಪನಾ ಸಮುದಾಯಗಳು ಕೃಷಿ ಸಂಸ್ಕೃತಿಯನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸಿದವು. ಈ ಎಲ್ಲ ಐತಿಹಾಸಿಕ ಪರಿವರ್ತನೆ ಪಂಚಗಣಾಧೀಶ್ವರರ ಜೀವನ ಹಾಗೂ ಅವರ ಮಠಗಳಲ್ಲಿ ನಡೆಯುವ ಆಚರಣೆಗಳಲ್ಲಿ ತನ್ನ ಪ್ರಭಾವವನ್ನು ಬೀರುವುದನ್ನು ಕಾಣಬಹುದು.

ಪಂಚಗಣಾಧೀಶ್ವರರ ಮಠಗಳ ವಿನ್ಯಾಸ ಆಚರಣೆಗಳಿಗೆ ಮತ್ತು ರಾಜಕೀಯ ಪ್ರಭುತ್ವಕ್ಕೆ ನೇರವಾದ ಸಂಬಂಧವಿದೆ. ಕೂಲಹಳ್ಳಿಯ ಮದ್ದಾನಸ್ವಾಮಿ ಮಠವು ಹೊರಗಡೆ ಕೋಟೆಯಾಕಾರದಲ್ಲಿ ಕಂಡುಬರುತ್ತದೆ (ಅನುಬಂಧ ೭, ಛಾಯಾಚಿತ್ರ ಸಂ.೧೧-೧೨). ಮಠದ ಒಳಗಡೆ ಹೋದರೆ ಅಲ್ಲಿ ನೆಲದೊಳಗಡೆ ಹೋಗಲು ಕೊರೆದಿರುವ ಸುರಂಗ ಮಾರ್ಗಗಳುಂಟು. ಒಟ್ಟು ಮೂರು ಕಡೆಯಿಂದ ಈ ಸುರಂಗ ಮಾರ್ಗದೊಳಕ್ಕೆ ಹೋಗಬಹುದಾಗಿದ್ದು ನೆಲದೊಳಗಡೆಯೇ ಚಂದ್ರಶಾಲೆ, ಗರಡಿಮನೆ, ಕುದುರೆಕಟ್ಟುವ ಮನೆ, ದವಸಧಾನ್ಯ ಸಂಗ್ರಹಿಸುವ ೨೧ ವಡೇವುಗಳು ೫ ಬಾವಿಗಳು ಕಂಡುಬರುತ್ತವೆ. ಮಠದ ಹೊರಗಡೆಯಲ್ಲಿ ಮೂರು ಅಂತಸ್ತುಗಳ ಉಪ್ಪರಿಕೆ ಕಂಡುಬರುತ್ತದೆ. ಇದು ಸುಮಾರು ೫೦ ಅಡಿ ಎತ್ತರವಾಗಿದ್ದು, ಮೇಲ್ಭಾಗದಲ್ಲಿ ಒಂಟಿ ನಿಶಾನೆಯನ್ನು ಹಾರಿಸಲಾಗಿದೆ. ೫೦ x ೪೦ ಅಡಿ ಕಟ್ಟಡದ ಮಧ್ಯಭಾಗದಲ್ಲಿ ವಡೇವು ಇದೆ.

ಈ ಮಠದ ರಚನೆ ಮತ್ತು ಗೋಣಿಬಸವನ ಜೀವನಕ್ಕೆ ನಿಕಟ ಸಂಬಂಧವಿದೆ. ಬಾಲಬಸವರ ಕಾವ್ಯದ ಪ್ರಕಾರ ಈ ಮಠವನ್ನು ಗೋಣಿಬಸವೇಶ್ವರ ಕಟ್ಟಿಸಿದನೆಂದು ಹೇಳಲಾಗುತ್ತದೆ. ಹಾಗಾದರೆ ಗೋಣಿಬಸವನಿಗೆ ತನ್ನ ತಂದೆ ಮದ್ದಾನಸ್ವಾಮಿ ಮಠವನ್ನು ಈ ರೀತಿಯಲ್ಲಿ ಯಾಕಾಗಿ ಕಟ್ಟಿಸಿದ? ಮಠದ ಒಳಗಡೆ ನೆಲದೊಳಗಡೆ ಇರುವ ಗುಪ್ತ ಕೋಣೆಗಳು, ಬಾವಿಗಳು, ೨೧ ವಡೇವು ಇವೆಲ್ಲ ಏನನ್ನು ಸೂಚಿಸುತ್ತವೆ?

ಗೋಣಿಬಸವ ಮತ್ತು ಚಿಗಟೇರಿ ಶಿವನಯ್ಯನ ಸಂಘರ್ಷ ಈಗಾಗಲೆ ವಿವರಿಸಿದೆ. ಈ ಸಂಘರ್ಷದ ಫಲವಾಗಿ ಈ ಮಠ ರಚನೆಗೊಂಡಂತಿದೆ. ಮಠದಲ್ಲಿರುವ ಸುರಂಗ ಮಾರ್ಗಗಳ ಮೂಲಕ ಗುಮ್ಮಗೋಳದ ತನಕ ಹೋಗಬಹುದೆಂದು ಹೇಳಲಾಗುತ್ತದೆ. ಈಗದನ್ನು ನೆಲದೊಳಗಡೆ ಇರುವ ಕೋಣೆಗಳಿಗೆ ಹೋಗಲು ಮಾತ್ರ ತೆರೆದಿದ್ದು, ಅಲ್ಲಿಂದ ಸುರಂಗವನ್ನು ಮುಚ್ಚಲಾಗಿದೆ. ಗುಮ್ಮಗೋಳದ (ಮುಂಡರಗಿ ತಾ.) ಮಠದ ಒಳಗಡೆಯಲ್ಲಿಯೂ ಇದೇ ತರ ಸುರಂಗ ಮಾರ್ಗಗಳಿವೆ. ಇವನ್ನು ಮುಚ್ಚಲಾಗಿದೆ.

ಇವು ಸ್ಪಷ್ಟವಾಗಿ ಪ್ರಭುತ್ವದೊಟ್ಟಿಗಿನ ಧಾರ್ಮಿಕ ಸಂತನೊಬ್ಬನು ಕಾದಾಟಕ್ಕಿಳಿದಿರುವ ಪರಿಣಾಮವಾಗಿ ನಿರ್ಮಾಣಗೊಂಡ ರಚನೆಗಳು. ಧಾರ್ಮಿಕ ಸಂತರು ರಾಜ್ಯದಲ್ಲಿ ಪ್ರಭುತ್ವದಷ್ಟೇ ಶಕ್ತಿಯನ್ನು, ಪ್ರಭಾವವನ್ನು ಸಮುದಾಯದ ಮೇಲೆ ಹೊಂದಿದ್ದರು. ಮಠಗಳು ಸಹಿತ ಮಾಂಡಲೀಕರಂತೆ, ಸಾಮಂತರಂತೆ ಆಳ್ವಿಕೆಯನ್ನು ಮಧ್ಯಕಾಲದುದ್ದಕ್ಕೂ ನಡೆಸಿವೆ. ರಾಜರು ತಮ್ಮ ಅಧಿಕಾರ ಪೋಷಣೆಗಾಗಿ ಮಾಂಡಲೀಕರನ್ನು ಅಧಿಕಾರಿಗಳನ್ನು ನೆಚ್ಚಿಕೊಂಡಷ್ಟೆ ಪ್ರಬಲವಾಗಿ ಮಠಗಳನ್ನು ನಂಬಿದ್ದರು. ಇವತ್ತು ಪಂಚಗಣಾಧೀಶ್ವರರ ೫೦ಕ್ಕಿಂತ ಹೆಚ್ಚು ಮಠಗಳು ಕಂಡುಬರುತ್ತವೆ. ಗೋಣಿಬಸವೇಶ್ವರ ಚರಿತ್ರೆಯು ಈತನು ೭೭೦ ಮಠಗಳನ್ನು ಸ್ಥಾಪಿಸಿದನೆಂದು ಹೇಳುತ್ತದೆ(ಈಡಿಗರ ಚಂದ್ರಪ್ಪ, ೧೯೯೦, ಪು.೪). ಏತಕ್ಕಾಗಿ ಇಷ್ಟೊಂದು ಮಠಗಳ ನಿರ್ಮಾಣ?

ಮಠಗಳು ಲೌಕಿಕವಾಗಿ ರಾಜಪ್ರಭುತ್ವವನ್ನು ಪೋಷಿಸಿದರೂ ಇವು ಬಹುದೊಡ್ಡ ಖಾಸಗೀ ಆಸ್ತಿಯ ಒಡೆತನ ಹೊಂದಿದ್ದವು. ಮದ್ದಾನಸ್ವಾಮಿ ಮಠಕ್ಕೆ ೩೫೧ ಎಕರೆ ಜಮೀನನ್ನು ಹರಪನಹಳ್ಳಿಯ ಸೋಮಶೇಖರ ರಾಜ ಕೊಟ್ಟಿದ್ದಾನೆ(ಅದೇ, ಪು.೭೦). ಕೊಟ್ಟೂರ ಗುರುಬಸವನ ಮಠಕ್ಕೆ ಸಂಬಂಧಿಸಿದಂತೆ ೩೭ ಎಕರೆ ಹೊಲ ೮ ಎಕರೆ ಗದ್ದೆ ಪಾಳೇಗಾರರ ಕಾಲದಲ್ಲಿ ಕೊಡಲಾಗಿದೆ(ಎಂ.ಶರಣಪ್ಪ, ೧೯೯೬, ಪು.೭೭). ಪಂಚಗಣಾಧೀಶ್ವರರ ಶಾಖಾ ಮಠಗಳು ಆಯಾ ಪ್ರದೇಶದಲ್ಲಿನ ಸಮುದಾಯಗಳ ಬದುಕಿನಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತಿದ್ದವು. ಇಂತಹ ಶಾಖಾ ಮಠಗಳಿಗೆ ಆಯಾ ಪ್ರದೇಶದ ಜನರೆಲ್ಲ ಮೂಲ ಮಠಕ್ಕೆ ನಿಷ್ಠೆಯನ್ನು ಹೊಂದಿರುತ್ತಿದ್ದರು. ಎಷ್ಟೋ ಸಲ ಇದು ರಾಜ್ಯದ ಗಡಿಯನ್ನು ಮೀರಿ ಸುತ್ತಮುತ್ತಲಿದ್ದ ರಾಜ್ಯಗಳಲ್ಲಿಯೂ ಮೂಲ ಹರಪನಹಳ್ಳಿ ಮತ್ತು ಚಿತ್ರದುರ್ಗದ ಪಾಳೇಗಾರರು ಬದ್ಧವೈರಿಗಳು. ಆದರೆ ಇಬ್ಬರೂ ಗುರುಬಸವನಿಗೆ ತಲೆಬಾಗುತ್ತಿದ್ದರು. ಈಗಲೂ ಕೊಟ್ಟೂರಿನ ಮಠದಲ್ಲಿ ನಡೆಯುವ ಕಾರ್ತಿಕ ಮಾಸದ ಸಂದರ್ಭದಲ್ಲಿನ ಸೋಮವಾರದ ಕಾರ್ತಿಕೋತ್ಸವವನ್ನು ಹರಪನಹಳ್ಳಿ ಪಾಳೇಗಾರ ಸೋಮಶೇಖರ ರಾಜನ ಹೆಸರಿನಲ್ಲಿ ನಡೆಸಲಾಗುವುದು. ಇದು ಇಬ್ಬರು

ರಾಜಕೀಯ ವೈರಿಗಳು ಮಠಗಳ ಅಡಿಯಲ್ಲಿ ಒಂದಾಗುತ್ತಿದ್ದುದನ್ನು ಸೂಚಿಸುತ್ತದೆ. ಬೇಡ ಪಾಳೇಗಾರರ ಕಡುವೈರಿಯಾಗಿದ್ದ ಹೈದರಾಲಿ ನಾಯಕನಟ್ಟಿ ಹೊರಮಠಕ್ಕೆ ಪ್ರಾರ್ಥನೆ ಸಲ್ಲಿಸಿ ಮಗನನ್ನು ಪಡೆದನೆಂದು ಜನ ನಂಬಿದ್ದಾರೆ. ಈ ಮಾತಿನ ಸತ್ಯಾಸತ್ಯತೆ ಏನೇ ಇರಲಿ ಇದು ಧಾರ್ಮಿಕ ಸಂತರ ಮಠಗಳಿಗೆ ಎಲ್ಲ ಪ್ರಭುಗಳು ಗೌರವ ಸಲ್ಲಿಸುತ್ತಿದ್ದುದರ ಸಂಕೇತವಾಗಿದೆ.

ಹಾಗಾದರೆ ಮಠಗಳು ಮತ್ತು ಪ್ರಭುತ್ವಗಳು ತಮ್ಮ ತಮ್ಮ ಖಾಸಗೀ ಆಸ್ತಿಯನ್ನು, ವೈಯಕ್ತಿಕ ಹಿತಾಸಕ್ತಿಯನ್ನು ಕಾಪಾಡಿಕೊಳ್ಳಲು ಒಂದಕ್ಕೊಂದು ಪೂರಕವಾಗಿ ವರ್ತಿಸುತ್ತಿದ್ದವೆ? ಮಠಗಳಿಗೆ ಬೇರೆಯ ಆದರ್ಶಗಳೇ ಇರಲಿಲ್ಲವೆ? ಪಂಚಗಣಾಧೀಶ್ವರರು ಈ ಭಾಗದಲ್ಲಿ ದೈವಗಳಾಗಲು ಕಾರಣಗಳೇನು? ನಿಶ್ಚಿತವಾಗಿಯೂ ಈ ಸಂತರು ಮತ್ತು ಅವರ ಮಠಗಳು ಹಲವಾರು ಆದರ್ಶ ಮೌಲ್ಯಗಳನ್ನು ನಂಬಿದ್ದವು. ಅವುಗಳನ್ನು ಆಚರಣೆಗೆ ತರಲೂ ಪ್ರಯತ್ನಿಸಿದರು. ಮ್ಯಾಸನಾಯಕರನ್ನು ಪೂಜಾರಿಯಾಗಿ ಕೂಲಹಳ್ಳಿ ಮತ್ತು ನಾಯಕನಟ್ಟಿಯ ಮಠಗಳಲ್ಲಿ ಸ್ವೀಕರಿಸಿದುದು, ದಲಿತ ಮಹಿಳೆ ಜಾತ್ರೆಯಲ್ಲಿ ಆರತಿ ಬೆಳಗುವುದು, ಕುರುಬರು ಪಲ್ಲಕ್ಕಿ ಹೊರುವುದು ಇತ್ಯಾದಿಗಳು ಸಂತರು ಆದರ್ಶಗಳನ್ನು ಹೊಂದಿದ್ದರು ಎನ್ನಲು ಆಚರಣೆಗಳಲ್ಲಿ ಕಂಡುಬರುವ ಸಾಕ್ಷಿಗಳಾಗಿವೆ. ಆದರೆ ಎಂತಹುದೇ ಮೌಲ್ಯಗಳನ್ನು ಇಟ್ಟುಕೊಂಡು ಪಂಚಗಣಾಧೀಶ್ವರರು ಮಠಗಳನ್ನು ಸ್ಥಾಪಿಸಿದರೂ ಅವು ನಂತರದ ದಿನಗಳಲ್ಲಿ ಉನ್ನತ ವರ್ಗದ ಹಿತಾಸಕ್ತಿಗಳನ್ನು ಪ್ರಚಾರ ಮಾಡುವ ಹಾಗೂ ಗಟ್ಟಿ ಮಾಡುವ ಸಾಧನಗಳಾಗಿ ಬಳಕೆಯಾಗುತ್ತಾ ಬಂದಿವೆ. 'ಮಧ್ಯಕಾಲದಲ್ಲಿ ಸಾಮಂತಶಾಹಿ(ಫ್ಯೂಡಲ್) ರಾಜ್ಯವ್ಯವಸ್ಥೆ ಇತ್ತು ಎಂದು ಗ್ರಹಿಸುವ ಇತಿಹಾಸಕಾರರು ದೇವಾಲಯಗಳು ಸಾಮಂತಶಾಹಿಯ ಮೌಲ್ಯಗಳನ್ನು ಗಟ್ಟಿ ಮಾಡುವಲ್ಲಿ ಅಗತ್ಯವಾಗಿದ್ದವು ಎಂದು ವಾದಿಸುತ್ತಾರೆ'(ರಾಜರಾಮ್ ಹೆಗಡೆ, ೨೦೦೧, ಪು.೧೯). ಪಂಚಗಣಾಧೀಶ್ವರರ ಮಠಗಳು ಇದಕ್ಕೆ ಹೊರತಾಗಿಲ್ಲ. ಇಲ್ಲಿ ನಿತ್ಯ ನಡೆಯುವ ಪೂಜೆಗಳು ಸಮಾಜದ ಉನ್ನತ ವರ್ಗ ಎನಿಸಿಕೊಂಡ ವೈಧಿಕರನ್ನು ಅನುಸರಿಸುತ್ತಿವೆ. ಸಂಸ್ಕೃತ ಶ್ಲೋಕಗಳು ಬಳಕೆಯಾಗುತ್ತವೆ. ಮಠಗಳಲ್ಲಿ ಹೆಚ್ಚು ಹೆಚ್ಚು ಹಣವನ್ನು ಪಾವತಿಸಿದರೆ ಅವರ ಹೆಸರಿನಲ್ಲಿ ವಿಶೇಷ ಪೂಜೆಯನ್ನು ಕೈಗೊಳ್ಳಲಾಗುತ್ತದೆ.

ಪಂಚಗಣಾಧೀಶ್ವರರ ಮಠಗಳಿಗೆ ಸಂಬಂಧಿಸಿದ ಇನ್ನೊಂದು ಮುಖ್ಯ ಅಂಶವೆಂದರೆ ಅವು ಅನ್ಯ ಧರ್ಮ ಪಂಥಗಳೊಂದಿಗೆ ನಡೆಸಿದ ಸಂಘರ್ಷ, ಸಂಬಂಧಗಳು. ಇವು ಕೂಡ ಮಠಗಳ ಆಚರಣೆ ಮತ್ತು ವಾಸ್ತುಶೈಲಿಯಲ್ಲಿ ಅಭಿವ್ಯಕ್ತಿಗೊಂಡಿವೆ. ಕೊಟ್ಟೂರು ಮತ್ತು ನಾಯಕನಟ್ಟಿಯಲ್ಲಿರುವ ಮಠಗಳು ವಿವಿಧ ಧರ್ಮ ಪಂಥಗಳೊಂದಿಗಿನ ಅನುಸಂಧಾನದ ಪ್ರಕ್ರಿಯೆಗಳು.

ನಾಯಕನಟ್ಟಿಯ ಒಳಮಠವು ಮೊದಲಿಗೆ ಮಾರಮ್ಮನ ಗುಡಿಯಾಗಿದ್ದರೂ ತಿಪ್ಪೇಸ್ವಾಮಿ ಇಲ್ಲಿಗೆ ಬಂದು ಜೋಳಿಗೆ ಬೆತ್ತಗಳ ಪವಾಡ ಮಾಡಿ ಮಾರಮ್ಮನನ್ನು ವಡ್ನಳ್ಳಿಗೆ ತೆರಳುವಂತೆ ಮಾಡಿದನು.

ಇಂದು ೩೨ ವರ್ಷಗಳಿಗೊಮ್ಮೆ ವಡ್ಡಳ್ಳಿ ಮಾರಮ್ಮನ ಹೆಸರಿನಲ್ಲಿ ಮ್ಯಾಸಕುಲದ ೧೨ ಪೆಟ್ಟಿಗೆ ದೇವರುಗಳು ಸೇರಿ ಒಳಮಠದ ಹತ್ತಿರ ಸಿಡಿಯಾಡಿ ಬಲಿಯಾಚರಣೆ ನಡೆಸುತ್ತಾರೆ.

ಕೊಟ್ಟೂರಿನ ಹಿರೇಮಠವು ಮೂಲತಃ ವೀರಭದ್ರ ದೇವರ ಗುಡಿಯಾಗಿತ್ತು. ಗುರುಬಸವ ಅವನನ್ನು ತೆರಳುವಂತೆ ಮಾಡಿದನೆಂದು ಜನಸಮುದಾಯ ನಂಬಿದೆ. ಈಗಲೂ ಹಿರೇಮಠದ ಗರ್ಭಗುಡಿಯ ಹಿಂಭಾಗದಲ್ಲಿ ವೀರಭದ್ರ ದೇವರ ಶಿಲ್ಪವಿದೆ. ಕೊಟ್ಟೂರಿನಲ್ಲಿರುವ ಮೂಕ್ಕಲ್‌ಮಠ ಜೈನರ ಉಡುಕೇಶ್ವರ ಎನ್ನುವ ದೇವಾಲಯವಾಗಿತ್ತೆಂದು ಮಠದ ಆವರಣದಲ್ಲಿರುವ ಶಾಸನ ತಿಳಿಸುತ್ತದೆ (ದೇವರ ಕೊಂಡಾರೆಡ್ಡಿ, ಸಂ.೧, ಶಾಸನಸಂಪುಟ, ಬಳ್ಳಾರಿ ಜಿಲ್ಲೆ, ೧೯೯೮, ಪು.೧೩೪).

ಮಠಗಳು ಹೀಗೆ ಪರಿವರ್ತನೆ ಹೊಂದುತ್ತಿರುವಾಗ ಪ್ರಭುತ್ವದ ಮೇಲಾಗಲಿ ಸಮುದಾಯಗಳ ಮೇಲಾಗಲಿ ಗಮನಾರ್ಹ ಪರಿಣಾಮವಾಗಲೇ ಇಲ್ಲ. ರಾಜರು ಪೂಜಾ ಪಂಥಗಳ ಅಧಿಕಾರದ ಪೈಪೋಟಿ ಅವುಗಳ ಆಂತರಿಕ ಸಮಸ್ಯೆಗಳೆಂಬಂತೆ ಪ್ರತಿಕ್ರಿಯಿಸುತ್ತಿದ್ದರೇ ವಿನಃ ತಮ್ಮ ರಾಜನೈತಿಕ ಸಮಸ್ಯೆಯನ್ನಾಗಿ ಪರಿಗಣಿಸಲಿಲ್ಲ. ಹೀಗಾಗಿ ಒಂದು ಪಂಥದ ದೇವಾಲಯಗಳನ್ನು ಮತ್ತೊಬ್ಬರು ನಾಶಮಾಡಿದರೂ ಅದು ರಾಜಶಾಸನದ ಸಮಸ್ಯೆಯಾಗಿರಲಿಲ್ಲ. ಅಷ್ಟೇ ಅಲ್ಲ ಈ ದೇವಾಲಯಗಳು ಆಯಾ ಪಂಥಗಳ ಸೀಮಿತ ಪ್ರಪಂಚಗಳಾಗಿದ್ದು ಅವುಗಳ ನಾಶ ಉಳಿದವರ ಮೇಲೆ ಯಾವ ಪರಿಣಾಮವನ್ನೂ ಬೀರಿದ ಸಾಧ್ಯತೆಗಳಿರಲಿಲ್ಲ (ರಾಜರಾಮ್ ಹೆಗಡೆ, ೨೦೦೧, ಪು.೨೪). ಪಂಚಗಣಾಧೀಶ್ವರರ ಕಾಲಕ್ಕಾಗಲೆ ಮಾರಮ್ಮ, ವೀರಭದ್ರ, ಜೈನ ಪ್ರಭಾವ ಆ ಭಾಗಗಳಲ್ಲಿ ಪ್ರಭಾವ ಕಳೆದುಕೊಳ್ಳುತ್ತಿರುವ ಕಾರಣವಾಗಿ ಜನರು ಇವುಗಳ ನಾಶ ಅಥವಾ ಮಠಗಳಾಗಿ ಪರಿವರ್ತನೆಗೆ ಪ್ರತಿರೋಧ ವ್ಯಕ್ತಪಡಿಸಿಲ್ಲ. ಪಂಚಗಣಾಧೀಶ್ವರರ ಜೀವನ ಎಲ್ಲದರಲ್ಲಿಯೂ ಸಕ್ರಿಯವಾಗಿದ್ದ ರಾಜಕೀಯ ಪ್ರಭುತ್ವವು ಮಠಗಳಾಗಿ ಆಕ್ರಮಿಸಿಕೊಳ್ಳುತ್ತಿರುವ ಈ ಪ್ರಕ್ರಿಯೆಗೆ ಸುಮ್ಮನಿರುವುದು ಈ ಸಂತರು ಪ್ರಭುತ್ವದ ಮೇಲೆ ಹೊಂದಿರುವ ಹಿಡಿತವನ್ನು ಸೂಚಿಸುತ್ತದೆ.

ಪಂಚಗಣಾಧೀಶ್ವರರ ಸಮಾಧಿಗದ್ದುಗೆಗಳು ಕೆಲವು ಸೂಫಿ ಮಾದರಿಯಲ್ಲಿದ್ದರೆ ಇನ್ನು ಕೆಲವು ವೀರಶೈವ ಮಾದರಿಯಲ್ಲಿವೆ. ಸೂಫಿ ಸಂತರ ಗದ್ದುಗೆಗಳು ಉತ್ತರ ದಕ್ಷಿಣಾಭಿಮುಖವಾಗಿ ಇರುತ್ತವೆ. ಮಂಟೇಸ್ವಾಮಿ ಪರಂಪರೆಯ ಸಂತರ ಗದ್ದುಗೆಗಳೆಲ್ಲ ಇದೇ ರೀತಿಯಲ್ಲಿವೆ. ಬೊಪ್ಪೆಗೌಡನಪುರದ ಮಂಟೇಸ್ವಾಮಿ ಗದ್ದುಗೆ, ಕಪ್ಪಡಿಯ ರಾಚಪ್ಪಾಜಿ, ಚೆನ್ನಮ್ಮನವರ ಗದ್ದಿಗೆ, ಮುಟ್ಟನಳ್ಳಿಯ ತೋಪಿನ ದೊಡ್ಡಮ್ಮನವರ ಗದ್ದುಗೆ, ಚಿಕ್ಕಲೂರು ಸಿದ್ದಪ್ಪಾಜಿಯವರ ಗದ್ದುಗೆ, ಕುರುಬನಕಟ್ಟೆಯ ನಿಂಗಯ್ಯ ಚೆನ್ನಯ್ಯನವರ ಗದ್ದುಗೆಗಳೆಲ್ಲಾ ಉತ್ತರ ದಕ್ಷಿಣಾಭಿಮುಖವಾಗಿದ್ದು ಅತ್ಯಂತ ಸುಂದರವಾದ ಸೂಫಿ ವಾಸ್ತು ಶಿಲ್ಪಗಳಂತಿವೆ(ಮಹಾದೇವ ಶಂಕನಪುರ, ೨೦೦೨, ಪು.೧೦೭). ಪಂಚಗಣಾಧೀಶ್ವರರಿಗೂ ಸೂಫಿಗಳ ಪ್ರಭಾವವಿರುವುದು ಕಂಡುಬರುತ್ತದೆ(ಅಧ್ಯಾಯ ೩.೩.ರಲ್ಲಿ ಈ ಬಗ್ಗೆ ವಿವರಿಸಲಾಗಿದೆ).

ನಾಯಕನಹಟ್ಟಿಯ ಹೊರಮಠವು ತಿಪ್ಪೇಸ್ವಾಮಿಯ ಸಮಾಧಿಮಠವಾಗಿದ್ದು, ಅದು ಉತ್ತರ ದಕ್ಷಿಣಾಭಿಮುಖವಾಗಿದೆ. ಈ ಮಠದ ವಾಸ್ತುಶೈಲಿಯು ಸೂಫಿ ಮಾದರಿಯಲ್ಲಿಯೇ ಇದೆ. ಮಠದ ಗರ್ಭಗುಡಿಯ ಮೇಲ್ಭಾಗದಲ್ಲಿ ವೃತ್ತಾಕಾರದ ಗುಂಬಜ್ ಇದ್ದು ದರ್ಗಾದಂತೆ ಕಂಡುಬರುತ್ತದೆ. ಇಲ್ಲಿ ಬರುವ ಸಿದ್ದರು ಜೋಗಿಗಳು ಭಂಗಿ ಸೇದುತ್ತಾ ತಿರುಗುತ್ತಿರುತ್ತಾರೆ. ಹೊರಮಠದ ಹತ್ತಿರ ಜಾತ್ರೆ ಸಂದರ್ಭದಲ್ಲಿ ಪ್ರಾಣಿ ಬಲಿಯನ್ನು ಕೊಡುತ್ತಾರೆ. ವೀರಶೈವ ಮಠಗಳಿಗಿಂತ ಹೆಚ್ಚಾಗಿ ಸೂಫಿ ಪ್ರಭಾವಗಳಲ್ಲಿದ್ದ ಮಠಗಳಲ್ಲಿ ಈ ಲಕ್ಷಣಗಳು ಸಾಮಾನ್ಯವಾಗಿ ಕಂಡುಬರುತ್ತದೆ. ತಿಪ್ಪೇಸ್ವಾಮಿ ಹೊರಮಠವೂ ಶೈವ-ನಾಥಸಿದ್ದರ ಮತ್ತು ಸೂಫಿಗಳ ಪ್ರಭಾವದಲ್ಲಿ ರಚಿತವಾಗಿರುವ ಮಠವಾಗಿದೆ. ಆದರೆ ಒಳಮಠದಲ್ಲಿ ಇರುವ ಗದ್ದುಗೆ ಪೂರ್ವ, ಪಶ್ಚಿಮಾಭಿಮುಖವಾಗಿದ್ದು, ಇಲ್ಲಿ ಪ್ರಾಣಿ ಬಲಿಯಾಗಲಿ, ಸಾಧುಗಳಾಗಲಿ ಸೇರುವುದಿಲ್ಲ.

ಕೊಟ್ಟೂರಿನಲ್ಲಿನ ಎಲ್ಲ ಮಠಗಳು ಪೂರ್ವಪಶ್ಚಿಮಾಭಿಮುಖದಲ್ಲಿವೆ. ಕಂಡಾಯ ಪೂಜೆಯಂತ ಸೂಫಿ ಲಕ್ಷಣಗಳು ಕಂಡುಬಂದರೂ ಇಲ್ಲಿ ಹೆಚ್ಚಾಗಿ ನಡೆದುಕೊಳ್ಳುವವರು ಲಿಂಗಾಯತ ಸಮುದಾಯದವರಾಗಿದ್ದಾರೆ. ಮತ್ತು ಗುರುಬಸವನು ವೀರಶೈವರ ಶಿಷ್ಯಪರಂಪರೆಯೊಂದಿಗೆ ತೋಂಟದ ಸಿದ್ಧಲಿಂಗಯತಿ ಪರಂಪರೆ ಗುರುತಿಸಿಕೊಂಡಿರುವುದೇ ಹೆಚ್ಚು. ಈತನ ಕುರಿತು ಬಸವಲಿಂಗಕವಿ, ಸಿದ್ದನಂಜೇಶ ಮುಂತಾದವರು ತಮ್ಮ ಕೃತಿಗಳಲ್ಲಿ ವಿವರಿಸಿದ್ದಾರೆ. ಹೆಚ್ಚಾಗಿ ವೀರಶೈವ ಪರಂಪರೆಯಲ್ಲಿ ಗುರುತಿಸಿಕೊಂಡಿರುವುದರಿಂದ ಈ ಮಠಗಳು ಅದಕ್ಕೆ ತಕ್ಕವಾಗಿಯೇ ಪೂರ್ವಪಶ್ಚಿಮಾಭಿಮುಖವಾಗಿವೆ.

ಕೂಲಹಳ್ಳಿ, ಗೋಣಿಬಸವನ ಗದ್ದುಗೆ ಮಠ ಹಾಗೂ ಮದ್ದಾನಸ್ವಾಮಿ ಗದ್ದುಗೆ ಮಠಗಳು ಎಲ್ಲಿವೆಯೋ ಅವೆಲ್ಲವೂ ಉತ್ತರ ದಕ್ಷಿಣಾಭಿಮುಖವಾಗಿವೆ. ಗೋಣಿಬಸವನಿಗೂ ಕೊಡೇಕಲ್ ಪರಂಪರೆಯ ಪ್ರಭಾವವಿದೆ. ಗೋಣಿಬಸವನಿಂದ ದೀಕ್ಷೆಗೊಳಗಾದ ಬಾಲಬಸವರ ಕಾಲಜ್ಞಾನಗಳು ಕೊಡೇಕಲ್ ಪರಂಪರೆಯ ಕಾಲಜ್ಞಾನಗಳನ್ನೇ ಹೊಲುತ್ತವೆ. ಈತನ ಜೀವನದಲ್ಲಿನ ಹುಲಿ ಸವಾರಿ, ಕಂಬಳಿ ಹಾಸಿ ನದಿ ದಾಟುವುದು ಇತ್ಯಾದಿಗಳು ನಾಥಸಿದ್ಧ ಮತ್ತು ಸೂಫಿ ಸಿದ್ದರ ಪವಾಡಗಳನ್ನೇ ಹೋಲುತ್ತವೆ. ಇಲ್ಲಿ ಸೂಫಿಗಳ ಗದ್ದುಗೆಗಳಲ್ಲಿರುವಂತೆ ಕಂಡಾಯಗಳನ್ನು ಪೂಜಿಸಲಾಗುತ್ತದೆ.

ಅರಸೀಕೆರೆಯ ಕೋಲಶಾಂತನ ಹೊರಮಠವು ಪೂರ್ವಾಭಿಮುಖವಾಗಿದ್ದರೆ ಒಳಮಠವು ದಕ್ಷಿಣ ಉತ್ತರಾಭಿಮುಖವಾಗಿದೆ. ಆದರೆ ಇಲ್ಲಿ ಸೂಫಿ ಆಚರಣೆಗಳಾವುವು ಕಂಡುಬರುವುದಿಲ್ಲ. ಬರಿ ಅನುಕರಣೆಯಿಂದಲೂ ಈ ವೈವಿಧ್ಯ ಉಂಟಾಗಿರಬಹುದು. ಇನ್ನು ಕೆಂಪಯ್ಯನ ಸಮಾಧಿ ಎಂದು ರಾಯದುರ್ಗದಲ್ಲಿ ಗುರುತಿಸಲಾಗಿರುವ ಸ್ಥಳ (ಚೆನ್ನವೀರಸ್ವಾಮಿ ಮಠದ ಹಿಂಭಾಗ) ತಿಪ್ಪೆಯಲ್ಲಿ ಇದ್ದು ಕಲ್ಲುಗಳ ಗುಂಪು ಇದೆ. ಇದನ್ನು ನೋಡಿದರೆ ಯಾವ ದಿಕ್ಕಿಗೆ ಮುಖ ಮಾಡಿದೆ ಎಂಬುದು ಸ್ಪಷ್ಟವಾಗುವುದಿಲ್ಲ. ಮತ್ತು ಇಲ್ಲಿ ಯಾವುದೇ ಕಟ್ಟಡವೂ ಇಲ್ಲ. ಹರಪನಹಳ್ಳಿಯಲ್ಲಿರುವ ಕೆಂಪಯ್ಯನ

ಮಠ ಉತ್ತರ ದಕ್ಷಿಣಾಭಿಮುಖವಾಗಿದೆ. ಈ ಸಂತನ ಬಗೆಗೆ ನಮಗೆ ಹೆಚ್ಚಿನ ಮಾಹಿತಿಗಳೇ ಇಲ್ಲದಿರುವುದರಿಂದ ಏನನ್ನೂ ಹೇಳಲು ಸಾಧ್ಯವಿಲ್ಲ.

ಒಟ್ಟಾರೆ ಪಂಚಗಣಾಧೀಶ್ವರರ ಮಠಗಳು ಮಧ್ಯಕರ್ನಾಟಕ ಜನಸಮುದಾಯದ ಮೇಲೆ ಧಾರ್ಮಿಕವಾಗಿ ಮಾತ್ರ ಗುರುತಿಸಿಕೊಳ್ಳದೆ ಸಮುದಾಯದ ರಾಜಕೀಯ, ಸಾಮಾಜಿಕ ಬದುಕಿನಲ್ಲಿ ತಮ್ಮದೇ ಆದ ಪ್ರಭಾವವನ್ನು ಬೀರಿದ್ದವು. ಹಲವಾರು ಪಂಥ ಪರಂಪರೆಗಳ ಪ್ರಭಾವ ಹಾಗೂ ರಾಜಕೀಯವಾಗಿ ಇವುಗಳು ನಿರ್ವಹಿಸುತ್ತಿದ್ದ ಪಾತ್ರದಿಂದಾಗಿ ಹತ್ತು ಹಲವು ಆಚರಣೆಗಳು ವೈಶಿಷ್ಟ್ಯಪೂರ್ಣವಾಗಿ ರೂಪುಗೊಂಡಿವೆ. ಹಾಗೆ ರೂಪುಗೊಂಡ ಆಚರಣೆಗಳನ್ನು ಅವುಗಳ ಸಾಂಸ್ಕೃತಿಕ ಹಿನ್ನೆಲೆಯ ಮೂಲಕ ಮುಂದೆ ವಿವರಿಸಲಾಗಿದೆ.

## ೬.೩. ನಿತ್ಯಪೂಜೆಗಳು

ಪಂಚಗಣಾಧೀಶ್ವರರ ಮಠಗಳಿಗೆ ಸಂಬಂಧಿಸಿದಂತೆ ನಿತ್ಯಪೂಜೆಯ ಕ್ರಿಯೆಯಲ್ಲಿಯೂ ವೈಶಿಷ್ಟ್ಯವಿದೆ. ದಿನನಿತ್ಯ ಬರುವ ನೂರಾರು ಭಕ್ತರನ್ನು ಆಕರ್ಷಿಸುವ ಪೂಜೆಯ ಬಹುಮುಖ್ಯ ಅಂಗಗಳೆಂದರೆ ಭಕ್ತಿ ಮತ್ತು ಆಚರಣೆ. ಭಕ್ತಿಯು ಆಯಾ ದೇವತೆಯ ಕುರಿತಾದ ಭಾವನಾತ್ಮಕ ಶ್ರದ್ಧೆಗೆ ಸಂಬಂಧಿಸಿದ್ದರೆ, ಆಚರಣೆಯು ವ್ಯಕ್ತಿಯ ಬಾಹ್ಯ ಕ್ರಿಯೆಗೆ ಸಂಬಂಧಿಸಿದ್ದಾಗಿದೆ.

ವೈದಿಕ ಧರ್ಮವನ್ನು ವಿರೋಧಿಸಿ ಬೆಳೆದ ವೀರಶೈವ ಧರ್ಮವು ಮಧ್ಯಕಾಲದಲ್ಲಿ ವೈದಿಕೀಕರಣಗೊಳ್ಳಲು ಪ್ರಯತ್ನಿಸಿತು. ಈ ವೈದಿಕೀಕರಣ ಪ್ರಕ್ರಿಯೆ ಇವತ್ತಿನ ಪೂಜಾಚರಣೆಗಳಲ್ಲಿಯೂ ಕಂಡುಬರುತ್ತದೆ. ಈಗಲೂ ಅದೆಷ್ಟೋ ವೀರಶೈವ ಮಠಗಳಲ್ಲಿನ ಪೂಜೆಗಳು ಸಂಸ್ಕೃತ ಶ್ಲೋಕಗಳಿಂದಲೇ ಆರಂಭಗೊಳ್ಳುತ್ತಿವೆ. ಕೊಟ್ಟೂರ ಗುರುಬಸವನಿಗೆ ಸಂಬಂಧಿಸಿದಂತೆ ನಿತ್ಯಪೂಜೆಯು ಸಂಸ್ಕೃತ ಶ್ಲೋಕಗಳ ಮೂಲಕ ಆರಂಭಗೊಳ್ಳುತ್ತಿದೆ. ನಾಯಕನಹಟ್ಟಿಗೆ ಸಂಬಂಧಿಸಿದಂತೆ ಒಳಮಠವುಸಹಿತ ಸಂಸ್ಕೃತ ಶ್ಲೋಕಗಳನ್ನು ಪೂಜೆಯ ಸಂದರ್ಭದಲ್ಲಿ ಬಳಸಲಾಗುತ್ತದೆ. ಆದರೆ ಹೊರಮಠದಲ್ಲಿ ಇದು ಕಂಡುಬರುವುದಿಲ್ಲ. ಇದಕ್ಕೆ ಕಾರಣ ಸಾಮಾಜಿಕವಾಗಿ ಮೇಲುಸ್ತರದಲ್ಲಿರುವ ವೈದಿಕರನ್ನು ಅನುಕರಿಸಬೇಕೆನ್ನುವ ಹಂಬಲ ಒಳಮಠದಲ್ಲಿರುವ ಲಿಂಗಾಯತಸ್ವಾಮಿಗೆ ಇದ್ದರೆ, ಹೊರಮಠದ ಸ್ವಾಮಿಗೆ ಈ ರೀತಿಯ ಒತ್ತಡಗಳಿಲ್ಲ. ಕಾರಣ ಹೊರಮಠದಲ್ಲಿನ ಮಾಂಸ ಎಡೆಕೊಡುವ ಆಚರಣೆ, ಭಂಗಿ ಸೇದುವ ಸಾಧುಗಳ ಭೇಟಿ ಮ್ಯಾಸಬೇಡ ಪೂಜಾರಿ ಮುಂತಾದ ಅಂಶಗಳೆ ಅದನ್ನು ವೈದಿಕೀಕರಣಗೊಳ್ಳಲು ಅಡ್ಡಿಪಡಿಸುತ್ತವೆ. ಇದಕ್ಕಿಂತ ಮುಖ್ಯವಾಗಿ ಈ ಪೂಜಾರಿ ಅನಕ್ಷರಸ್ತನಾಗಿರುವುದೂ ಒಂದು ಕಾರಣವಾಗಿದೆ. ಕೂಲಹಳ್ಳಿಯ ಗೋಣಿಬಸವ ಮಠದ ಸ್ವಾಮಿಗಳು(ಚಿನ್ಮಯಾನಂದ) ಸಂಸ್ಕೃತ ಶ್ಲೋಕಗಳನ್ನು ಬಳಸುತ್ತಾರೆ. ಒಟ್ಟಾರೆ ಇದನ್ನು ಪಂಚಗಣಾಧೀಶ್ವರರ ವೈದಿಕೀಕರಣ ಎನ್ನಬಹುದು ಅಥವಾ ಈ ಪಂಥದ ವಿಕಾಸ ಕ್ರಮ ಎನ್ನಬಹುದೇ?

ಪ್ರತಿದಿನವೂ ನೂರಾರು ಭಕ್ತರು ಮಠಗಳಿಗೆ ಬರಲು ಅಲ್ಲಿ ನಡೆಯುವ ನಿತ್ಯಪೂಜೆಗಳು ಪ್ರಮುಖ ಕಾರಣವಾಗಿವೆ. ನಿತ್ಯಪೂಜೆಯ ಸಂದರ್ಭಗಳೂ ದಿನ-ದಿನಕ್ಕೂ ಹೆಚ್ಚೆಚ್ಚು ಆಡಂಬರಗೊಳ್ಳುತ್ತಿವೆ. ಇದಕ್ಕೆ ಮುಖ್ಯ ಕಾರಣ ಧಾರ್ಮಿಕ ಸಂತರ ಶ್ರೇಷ್ಠ ಅನುಯಾಯಿಯಾಗಿ ಗುರುತಿಸಿಕೊಳ್ಳಲು ಹಲವಾರು ಜನರು ನಿತ್ಯಪೂಜೆಗಾಗಿ ಹಣವನ್ನು ಮಠಗಳಿಗೆ ಸಂದಾಯ ಮಾಡುತ್ತಾರೆ. ಕೊಟ್ಟೂರ ಹಿರೇಮಠದಲ್ಲಿ ನಿತ್ಯಪೂಜೆಗಾಗಿ ಹಣಕೊಟ್ಟವರ ಹೆಸರಿನಲ್ಲಿ ವಿಶೇಷ ಪೂಜೆಯನ್ನು ಮಾಡಲಾಗುತ್ತದೆ.

ಮೂಲತಃ ಜನಸಮುದಾಯಗಳಲ್ಲಿರುವ ದೈವೀ ಶ್ರದ್ಧೆ ಮತ್ತು ಪಾಪ-ಪುಣ್ಯಗಳನ್ನಾಧರಿಸಿಯೇ ಇರುವ ಈ ಪೂಜೆಗಳು ಪ್ರಾಚೀನ ಕಾಲದಿಂದಲೂ ಸಮುದಾಯದಲ್ಲಿ ವಿಧೇಯ ಭಾವವನ್ನು ತುಂಬುತ್ತಿವೆ. 'ಇತಿಹಾಸಕಾರರು ದೇವಾಲಯಗಳು ಸಾಮಂತಶಾಹಿಯ ಮೌಲ್ಯಗಳನ್ನು ಗಟ್ಟಿಮಾಡುವಲ್ಲಿ ಅಗತ್ಯವಾಗಿದ್ದವು ಎಂದು ವಾದಿಸುತ್ತಾರೆ. ಅವರ ಪ್ರಕಾರ 'ಭಕ್ತಿ' ಈ ಪೂಜಾ ಸಂಸ್ಕೃತಿಯ ತತ್ವವಾಗಿದ್ದು, ಈ ಭಕ್ತಿಯು ಸಾಮಂತಶಾಹಿ ಪ್ರಭುತ್ವದ ವೈಶಿಷ್ಟ್ಯತೆಯಾದ ಸ್ವಾಮಿ-ದಾಸರ ವಿಧೇಯತೆಯ ಸಂಬಂಧಕ್ಕೆ ಒಂದು ಐಡಿಯಾಲಜಿಯಾಗಿ ಒದಗುತ್ತವೆ.''(ರಾಜರಾಮ ಹೆಗಡೆ, ೨೦೦೧, ಪು.೧೯) ಕೊಟ್ಟೂರಿನ ಹಿರೇಮಠದ ಧರ್ಮಕರ್ತರಿಗೆ, '೩೭ ಎಕರೆ ಹೊಲ, ೮ ಎಕರೆ ಗದ್ದೆಯನ್ನು ಹರಪನಹಳ್ಳಿ ಪಾಳೇಗಾರರು ಕೊಟ್ಟಿದ್ದಾರೆ'(ಎಂ.ಶರಣಪ್ಪ, ೧೯೯೭, ಪು.೭೭) ಎಂದು ಹೇಳಲಾಗುತ್ತದೆ. ಈ ಧರ್ಮಕರ್ತರು(ಪೂಜಾರಿಗಳು) ಸಮುದಾಯದಲ್ಲಿ ಪೂಜೆಯಂತಹ ಧಾರ್ಮಿಕ ವಿಧಿಗಳ ಮೂಲಕ ಪ್ರಭುತ್ವದ ಬಗೆಗೆ ವಿಧೇಯತೆಯನ್ನು ತುಂಬುತ್ತಿದ್ದರು.

ಕೊಟ್ಟೂರಿನಲ್ಲಿ ಗುರುಬಸವನ ಎಲ್ಲ ಆಚರಣೆಗಳು ಹಿರೇಮಠದಲ್ಲಿಯೇ ಮುಖ್ಯವಾಗಿ ನಡೆಯುವುದು. ಈ ಆಚರಣೆಗಳನ್ನು ನಡೆಸಿಕೊಂಡು ಹೋಗುವವರು ಕರಲಿಂಗೇಶ್ವರರ ವಂಶಕ್ಕೆ ಸೇರಿದ ಪೂಜಾರಿಗಳು, ಇವರು ಮೂಲತಃ ಹಾಸನ ಜಿಲ್ಲೆಯ ನುಗ್ಗೆಹಳ್ಳಿಯವರು. ಈಗ ಕೊಟ್ಟೂರಿನ ಪಕ್ಕದಲ್ಲಿರುವ ಐಯ್ಯನ ಹಳ್ಳಿಯಲ್ಲಿ ಇರುತ್ತಾರೆ. ಇವರಿಂದ ಗುರುಬಸವನಿಗೆ ಪ್ರತಿನಿತ್ಯ ಐದು ಬಾರಿ ಪೂಜೆ ನಡೆಯುತ್ತದೆ. ಮೊದಲನೇ ಪೂಜೆ ಬೆಳಿಗ್ಗೆ ೫ ಗಂಟೆಗೆ, ಇದು ಕರುಣ ಪ್ರಸಾದದ ಪೂಜೆಯಾಗಿರುತ್ತದೆ. ಈ ಪೂಜೆಯಲ್ಲಿ ಕ್ರಿಯಾಮೂರ್ತಿಗಳು ಭಕ್ತರಿಗೆ ಕರುಣಪ್ರಸಾದ ಕೊಡುತ್ತಾರೆ. ಎರಡನೇ ಪೂಜೆ ಮಧ್ಯಾಹ್ನ ೧೨ ಗಂಟೆಗೆ ನಡೆಯುತ್ತದೆ. ಈ ಪೂಜೆ ಮುಗಿದ ಕೂಡಲೆ ಹಿರೇಮಠದಿಂದ ಕ್ರಿಯಾ ಎಡೆಯು ನೈವೇದ್ಯಕ್ಕಾಗಿ ಗಚ್ಚಿನಮಠಕ್ಕೆ(ಜೀವಂತ ಸಮಾಧಿಮಠ) ಹೋಗುತ್ತದೆ. ಅಲ್ಲಿ ಸ್ವಾಮಿಯ ಅಷ್ಟಾವರಣದ ಗದ್ದುಗೆಗೆ ನೈವೇದ್ಯ ಮಾಡಿದ ಮೇಲೆ ಅಲ್ಲಿಯ ಧರ್ಮಕರ್ತರು ಪ್ರಸಾದವನ್ನು ಸ್ವೀಕರಿಸುತ್ತಾರೆ. ಮೂರನೇ ಪೂಜೆ ಮಧ್ಯಹ್ನ ೩.೩೦ಕ್ಕೆ ಜರಗುತ್ತದೆ. ಇದು ಸಾಮಾನ್ಯ ಪೂಜೆಯಾಗಿರುತ್ತದೆ. ಇಲ್ಲಿ ಕರುಣ ಪ್ರಸಾದವಿರುವುದಿಲ್ಲ. ನಾಲ್ಕನೇ ಪೂಜೆ, ರಾತ್ರಿ ೯ ಗಂಟೆಗೆ ನಡೆಯುತ್ತದೆ. ಇದು ೨ನೇ ಪೂಜೆ ರೀತಿಯಲ್ಲಿಯೇ ಇರುತ್ತದೆ. ಐದನೇ ಪೂಜೆ ರಾತ್ರಿ ೧೦ ಗಂಟೆಗೆ ನಡೆಯುತ್ತದೆ. ಇದು ಸಾಮಾನ್ಯ ಪೂಜೆಯಾಗಿದ್ದು ಪೂಜೆ ಮುಗಿದ ಕೂಡಲೇ ಅಷ್ಟಾವರಣ ಮೂರ್ತಿಯನ್ನು ಗದ್ದುಗೆಯ ಹಿಂದುಗಡೆ ಹಾಸಿಗೆ ಹಾಸಿದ ಮಂಚದ ಮೇಲೆ

ಮಲಗಿಸಲಾಗುತ್ತದೆ. ಉಳಿದ ಗುರುಬಸವನ ಮಠಗಳಲ್ಲಿ(ತೊಟ್ಟಿಲಮಠ, ಮೂರ್ಕಲ್ಲಮಠ, ಮರಿಕೊಟ್ಟೂರೇಶ್ವರ ಮಠ) ಇದೇ ರೀತಿ ಪೂಜೆ ನಡೆಯುತ್ತದೆ.

ಅರಸೀಕೆರೆ ಕೋಲಶಾಂತಯ್ಯನಿಗೆ ಸಂಬಂಧಿಸಿದಂತೆ ಕೂಡ ಇದೇ ರೀತಿ ಐದು ಬಾರಿ ಪೂಜೆ ನೆರವೇರಿಸಲಾಗುತ್ತದೆ. ೧೯೮೪ರಲ್ಲಿ ಗದುಗಿನ ತೋಂಟದಾರ್ಯ ಮಠದಿಂದ ನಿಯುಕ್ತರಾದ ಶ್ರೀ ಶಾಂತವೀರ ದೇಶೀಕೇಂದ್ರರು ಪೂಜಾಕಾರ್ಯವನ್ನು ನೆರವೇರಿಸುವರು. ಇಲ್ಲಿ ಕ್ರಿಯಾ ಎಡೆಯು ಒಳಮಠದಿಂದ ಹೊರಮಠಕ್ಕೆ ಹೋಗಿ ಬರುತ್ತದೆ.

ನಾಯಕನಟ್ಟಿಯಲ್ಲಿ ಪ್ರತಿದಿನ ಮೂರು ಬಾರಿ ಮಾತ್ರ ಪೂಜೆ ನಡೆಯುತ್ತಿದ್ದು, ಪ್ರತಿ ಸೋಮವಾರ ಒಳಮಠದಿಂದ ಹೊರಮಠಕ್ಕೆ ಶ್ರೀ ಸ್ವಾಮಿಯ ಪಲ್ಲಕ್ಕಿ ಉತ್ಸವವಾದ 'ವಾರೋತ್ಸವ' ಸಕಲ ಬಿರುದಾವಳಿಗಳೊಂದಿಗೆ(ಈ ೭೭ ಬಿರುದಾವಳಿಗಳನ್ನು ಅಧ್ಯಾಯ ೫.೧ರಲ್ಲಿ ವಿವರಿಸಿರುತ್ತೇನೆ) ಸಾಯಂಕಾಲ ನಡೆಯುತ್ತದೆ. ಕೂಲಳ್ಳಿಯಲ್ಲಿ ಪ್ರತಿದಿನ ಪೂಜೆಯು ಮೂರು ಬಾರಿ ಮಾತ್ರ ನಡೆಯುತ್ತದೆ. ಮದ್ದಾನೇಶ್ವರ ಸ್ವಾಮಿಯ ಮಠದಲ್ಲಿ ಪ್ರತಿದಿನದ ಪೂಜೆ ಪಂಚಾಚಾರ(ಲಿಂಗಾಯತ) ಪೂಜಾರಿಯಿಂದ ನಡೆಯುತ್ತದೆ. ಈ ಸಂದರ್ಭದಲ್ಲಿ ಪಟ್ಟದ ಸ್ವಾಮಿ(ಇವರು ಬೇಡ ಕುಲದವರು)ಯನ್ನು ನೋಡಬಾರದೆಂದು ಪ್ರತೀತಿ ಇದೆ. ಹರಪನಹಳ್ಳಿಗೆ ಸಂಬಂಧಿಸಿದಂತೆ ಮಠಕ್ಕೆ ಬರುವ ಭಕ್ತಾದಿಗಳು ಕಡಿಮೆ ಇದ್ದು ಇಲ್ಲಿ ಕೆಂಪಯ್ಯನ ಮಠ ಒಂದೇ ಇದ್ದು ದಿನಕ್ಕೆ ಮೂರುಬಾರಿ ಪೂಜೆ ನಡೆಯುತ್ತದೆ.

ಇದಲ್ಲದೆ ಏಕಾದಶಿ, ರುದ್ರಾಭಿಷೇಕ, ಪಂಚಾಮೃತಾಭಿಷೇಕ, ಏಕವಾರು ರುದ್ರಾಭಿಷೇಕ, ಬಿಲ್ವಾರ್ಚನೆ, ಎಲೆಪೂಜೆ, ತೊಟ್ಟಿಲು ಸೇವೆ ಮುಂತಾದ ಆಚರಣೆಗಳು ಆಗಾಗ (ಭಕ್ತರು ಬೇಡಿಕೊಂಡಾಗ) ಎಲ್ಲ ಮಠಗಳಲ್ಲಿಯೂ ನಡೆಯುತ್ತವೆ.

## ೬.೪. ನಾಗಾರಾಧನೆ

ನಾಗಪ್ರತಿಮೆಗಳನ್ನು ಪೂಜಿಸುವುದು ಆದಿಕಾಲದಿಂದಲೂ ಭಾರತದಾದ್ಯಂತ ಇರುವಂತಹ ಆಚರಣೆಯಾಗಿದೆ. ಕರ್ನಾಟಕದಲ್ಲಿಯೂ ನಾಗಪ್ರತಿಮೆಗಳನ್ನು ಪೂಜಿಸುವ ಪದ್ಧತಿ ಎಲ್ಲೆಡೆಯಲ್ಲಿಯೂ ಕಂಡುಬರುತ್ತದೆ. ಪಂಚಗಣಾಧೀಶ್ವರರಿಗೆ ಸಂಬಂಧಿಸಿದಂತೆ ನಾಗಪ್ರತಿಮೆಗಳು ಎಲ್ಲ ಮಠಗಳಲ್ಲಿಯೂ ಪ್ರಮುಖವಾಗಿ ಕಂಡುಬರುತ್ತವೆ. ಗರ್ಭಗುಡಿಯಲ್ಲಿನ ಶಿಲ್ಪದ ಮೇಲೆ, ಕಲ್ಲುಗೋಡೆಗಳ ಮೇಲೆ, ಅಲ್ಲದೆ ಮಠಗಳ ಆವರಣದಲ್ಲಿ ಹಲವಾರು ನಾಗಪ್ರತಿಮೆಗಳು ಕಂಡುಬರುತ್ತವೆ.(ಅನುಬಂಧ-೭, ಛಾಯಾಚಿತ್ರಗಳು, ಚಿತ್ರ ಸಂ.೧೫)

'ನಾಗ' ಎನ್ನುವ ಅರಣ್ಯವಾಸಿ ಗಣಗಳು ಪ್ರಾಚೀನ ಕಾಲದಿಂದಲೂ ಭಾರತದಾದ್ಯಂತ ಬದುಕಿದ್ದರು. ಈ ಗಣಗಳು ಸಂಕೇತವಾಗಿ ಹಾವನ್ನು ಹೊಂದಿದ್ದರು. ಈ ರೀತಿ ಹಾವಿನ ಸಂಕೇತವುಳ್ಳವರನ್ನೆಲ್ಲ 'ನಾಗರು'

ಎಂದು ಸಂಭೋದಿಸಲಾಗುತ್ತಿತ್ತು. 'ಕರ್ನಾಟಕಕ್ಕೆ ಸಂಬಂಧಿಸಿದಂತೆ ಕದಂಬರು, ಕುರುಗೋಡು(ಬಳ್ಳಾರಿ) ದೊರೆಗಳೂ ಗುತ್ತಲದ(ಬಳ್ಳಾರಿ) ಸಿಂಧರು ನಾಗವಂಶಿಯರೆ' ಆಗಿದ್ದರೆಂದು ಎಸ್ .ಎಸ್ .ಹಿರೇಮಠರು ಅಭಿಪ್ರಾಯ ಪಡುತ್ತಾರೆ.(ದಲಿತರು ನಾಗರೇ(ಲೇ), ಸಂವಾದ ಪತ್ರಿಕೆ, ಮಾರ್ಚ ೨೦೦೪, ಪು.೩೨) 'ಹಾವಿನ ಬಗ್ಗೆ ಅಪಾರ ಭಕ್ತಿಯನ್ನು ಹೊಂದಿದ್ದ ಈ ರಾಜವಂಶಗಳು ಅವುಗಳನ್ನು ಪೂಜಿಸುತ್ತಿದ್ದುದಾಗಿ ತಿಳಿದುಬರುತ್ತದೆ. ಹಾವನ್ನು ಪೂಜಿಸುವುದು, ಅದಕ್ಕೆ ಹಾಲೆರೆಯುವುದು ನಮ್ಮ ಜನಪದರು ವಿಶೇಷವಾಗಿಟ್ಟು ಕೊಂಡ ಆಚರಣೆಗಳಾಗಿವೆ. ನಾಗಪೂಜೆಯನ್ನು ಸಮೃದ್ಧಿಯ ಸಂಕೇತವೆಂದು ಭಾವಿಸಲಾಗುತ್ತದೆ.

ಹಾವು ಪಂಚಗಣಾಧೀಶ್ವರರ ಜೀವನದಲ್ಲಿ ವಿಶಿಷ್ಟ ಪಾತ್ರವನ್ನೂ ವಹಿಸಿದೆ. ಗೋಣಿಬಸವೇಶ್ವರ ಚಿಗಟೇರಿಯ ಶಿವನಯ್ಯನೊಂದಿಗಿನ ಸಂಘರ್ಷದಲ್ಲಿ ಒಮ್ಮೆ ಗಾಳಿಪೂಜೆ ಪಟ್ಟಣದ ಸಿದ್ಧರು ಮಂತ್ರದಿಂದ ಮಾಡಿದ ಮೊರವಿ ಅಂಗಿಯನ್ನು ಧರಿಸಿ ಸತ್ತು ಹೋಗುತ್ತಾನೆ. ಆಗ ಬಾಲಬಸವ ಹಾವಿನ ವೇಷದಿಂದ ಬಂದು ಗೋಣಿಬಸವನ ಮೈಯಲ್ಲಿನ ವಿಷವನ್ನೆಲ್ಲಾ ಹೀರುತ್ತಾನೆ. ಈಗಲೂ ಕೂಲಹಳ್ಳಿ ಮಠಗಳಲ್ಲಿ ಬೃಹತ್ ಪ್ರಮಾಣದಲ್ಲಿನ ಹಾವಿನ ಚಿತ್ರಗಳನ್ನು ಗೋಡೆಯ ಮೇಲೆ ಕಾಣಬಹುದು. ಗೋಣಿಬಸವ ವ್ಯವಸಾಯ ಮಾಡುವಾಗ ಕೈಯಲ್ಲಿ ಹಾವನ್ನು ಬಾರಿಕೋಲನ್ನಾಗಿ ಹಿಡಿದ ಚಿತ್ರ ಗುಮ್ಮಗೋಳ ಮಠದಲ್ಲಿ ಇದೆ.(ಅನುಬಂಧ-೭, ಛಾಯಾಚಿತ್ರಗಳು, ಚಿತ್ರ ಸಂ.೨೨)

ಕೊಟ್ಟೂರ ಗುರುಬಸವನು ಮದಕರಿ ಮತ್ತು ಸಿದ್ದೋಜಿಯ ವಿರುದ್ಧವಾಗಿ ಯುದ್ಧ ಮಾಡುವಾಗ ಕೈಯಲ್ಲಿ ಹಾವಿನ ಚಾಟಿ ಹಿಡಿದ ಚಿತ್ರಣವನ್ನು ಕೊಟ್ಟೂರೇಶ್ವರರ ಮುತ್ತುಗೆ ಪದ್ಯಾವಳಿಗಳು ವಿವರಿಸುತ್ತವೆ.

ಹಾವನ್ನು ಚಾಟಿಯಾಗಿ ಹಿಡಿಯುವುದು ಯೌಗಿಕ ಪಂಥಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಚಿತ್ರಣವಾಗಿದೆ. ಶಿರಹಟ್ಟಿ ಪಕ್ಕೀರೇಶ, ಖಾಜಾ ಬಂದೇನವಾಜ್, ಸಾವಳಗಿ ಶಿವಲಿಂಗ ಮುಂತಾದ ಅನುಭಾವಿ ಯೌಗಿಕ ಸಂತರ ಜೀವನದಲ್ಲಿ ಒಂದಲ್ಲ ಒಂದು ಸಂದರ್ಭದಲ್ಲಿ ಹಾವು ಕಂಡುಬರುತ್ತದೆ. ಪಂಚಗಣಾಧೀಶ್ವರರು ಅನುಭಾವಿಗಳು, ಆರೂಢರು ಆಗಿದ್ದು ಯೌಗಿಕ ವಿದ್ಯೆಯನ್ನು ಕಲಿತವರಾಗಿದ್ದಾರೆ. ಹಾವಿನ ಚಿತ್ರಣ ಇವರ ಮೂಲಕ ಶಿಲ್ಪಕಲೆಯಲ್ಲಿ ಅಭಿವ್ಯಕ್ತವಾಗಿದೆ. ಪಂಚಗಣಾಧೀಶ್ವರರನ್ನು ಆರಾಧಿಸುವ ಜನಸಮುದಾಯವು ಹಾವನ್ನು ಪೂಜಿಸುವ ಪದ್ಧತಿಯನ್ನು ಬೆಳೆಸಿಕೊಂಡಿದೆ.

### ೭.೫. ಕಾರ್ತಿಕೋತ್ಸವಗಳು

ಪಂಚಗಣಾಧೀಶ್ವರರಿಗೆ ಸಂಬಂಧಿಸಿದಂತೆ ಸಾಕಷ್ಟು ಜನರನ್ನು ಆಕರ್ಷಿಸುವ ಪ್ರಮುಖ ಆಚರಣೆಯೆಂದರೆ ಕಾರ್ತಿಕೋತ್ಸವ. ಪ್ರತಿವರ್ಷ ದೀಪಾವಳಿ ಪಾಡ್ಯದಿಂದ ಆರಂಭವಾಗಿ ಹೊಸ್ತಿಲ ಹುಣ್ಣಿಮೆಯ ಸಮೀಪದ ಸೋಮವಾರದಂದು ಈ ಕಾರ್ತಿಕಮಾಸ ಮುಗಿಯುತ್ತದೆ. ಐದು ಗಣಾಧೀಶ್ವರರಲ್ಲಿ ಕಂಡುಬರುವ

ಮುಖ್ಯವಾದ ಲಕ್ಷಣವೆಂದರೆ ಕಾರ್ತೀಕದ ಸಂದರ್ಭದಲ್ಲಿ ನಡೆಯುವ ಉತ್ಸವಗಳಲ್ಲಿ ದೀಪೋತ್ಸವವನ್ನು ಆಚರಿಸಲಾಗುತ್ತದೆ. ಕೊಟ್ಟೂರು ಮತ್ತು ನಾಯಕನಟ್ಟಿಗಳಲ್ಲಿ ಈ ಸಂದರ್ಭದಲ್ಲಿ ಲಕ್ಷದೀಪೋತ್ಸವವನ್ನು ಆಚರಿಸಿದರೆ ಕೂಲಹಳ್ಳಿ ಮಠಗಳಲ್ಲಿ ಹಲವು ಸಾವಿರ ದೀಪಗಳನ್ನು ಹಚ್ಚಲಾಗುತ್ತದೆ. ಅರಸೀಕೆರೆಯಲ್ಲಿ ಮತ್ತು ಹರಪನಹಳ್ಳಿಯಲ್ಲಿ ದೀಪಗಳನ್ನು ಹಚ್ಚುವ ಪ್ರಮಾಣ ತುಂಬಾ ಕಡಿಮೆಯಿದ್ದು, ೧೦೧ ಇಲ್ಲವೆ ೫೦೧ ದೀಪಗಳನ್ನು ಹಚ್ಚಲಾಗುತ್ತದೆ. (ಅನುಬಂಧ-೭, ಛಾಯಾಚಿತ್ರಗಳು, ಚಿತ್ರ ಸಂ.೧೯)

ನಾಯಕನಟ್ಟಿಯಲ್ಲಿ ಕಾರ್ತಿಕ ಮಾಸದ ಆರಂಭದಲ್ಲಿ ಶ್ರೀ ಬಂಡೇರಂಗಸ್ವಾಮಿಗೆ ದೀಪ ಹಚ್ಚುವ ಮೂಲಕ ಕಾರ್ತಿಕ ಮಾಸದ ಪೂಜಾವಿಧಿಗಳು ಆರಂಭಗೊಳ್ಳುತ್ತವೆ. ಒಂದು ತಿಂಗಳು ಪ್ರತಿ ಗುರುವಾರ ಸಾಯಂಕಾಲ ಬಸೆಟ್ಲೆಯವರ ಕಾರ್ತಿಕ, ತಾಳ್ವೇದರ ಕಾರ್ತಿಕ, ಸಂದೇರ ಕಾರ್ತಿಕ, ಬಸವನ ಉಚ್ಛಾಯ ನಡೆಯುತ್ತದೆ. ಇದರ ಸೇವಾಕರ್ತರು ಗ್ರಾಮದ ಈಡಿಗ ಜನಾಂಗದವರದಾಗಿರುತ್ತದೆ. ಸಣ್ಣ 'ಕಾರ್ತಿಕೋತ್ಸವ ಜರುಗಿದ ಮುಂದಿನ ಶುಕ್ರವಾರ ಅಷ್ಟಮಿಯಂದು 'ದೊಡ್ಡ ಕಾರ್ತಿಕೋತ್ಸವ' ಜರಗುತ್ತದೆ. ಈ ಸಂದರ್ಭದಲ್ಲಿ ಒಳಮಠದಿಂದ ದೇವರು ಹೊರಮಠಕ್ಕೆ ಹೋಗಿ ಪೂಜೆಯಲ್ಲಿ ಪಾಲ್ಗೊಳ್ಳುತ್ತದೆ. ಅಂದು ಸಾಯಂಕಾಲ ಆರು ಗಂಟೆಯಿಂದ ಕ್ಷೇತ್ರದ ಒಳಮಠ, ಹೊರಮಠ, ಏಕಾಂತ ಮಠ, ಈಶ್ವರ ದೇವಸ್ಥಾನ ಒಳಗೊಂಡಂತೆ ಇಡೀ ಕ್ಷೇತ್ರದಲ್ಲಿ ಲಕ್ಷದೀಪೋತ್ಸವವನ್ನು ಆಚರಿಸಲಾಗುತ್ತದೆ.

ಕೊಟ್ಟೂರಿನಲ್ಲಿನ ಕಾರ್ತಿಕೋತ್ಸವವು ಮರಿಜಾತ್ರೆಯಂತೆ ನಡೆಯುತ್ತದೆ. ಕಾರ್ತಿಕಮಾಸದಲ್ಲಿ ಪ್ರತಿ ಸೋಮವಾರ ಮತ್ತು ಗುರುವಾರ ರಾತ್ರಿ ಗುರುಬಸವನ ಅಷ್ಟಾವರಣ ಮೂರ್ತಿಯನ್ನು ಪಲ್ಲಕ್ಕಿಯಲ್ಲಿಟ್ಟು ತೊಟ್ಟಿಲುಮಠ, ಗಚ್ಚಿನಮಠಕ್ಕೆ ತರಲಾಗುವುದು. ಗಚ್ಚಿನಮಠದಲ್ಲಿ ಅಕ್ಬರ್ ಕೊಟ್ಟಿದ್ದೆಂದು ಹೇಳಲಾಗುವ ಮಂಚದ ಮೇಲೆ ಆತನೇ ಕೊಟ್ಟನೆಂದು ಹೇಳಲಾಗುವ ಖಡ್ಗವನ್ನು ಇಟ್ಟು, ಮೂರ್ತಿ ಬಂದ ನಂತರ ಅದಕ್ಕೆ ಮಂಗಳಾರತಿಯನ್ನು ಮಾಡಲಾಗುತ್ತದೆ. ಸೋಮವಾರದ ಕಾರ್ತಿಕೋತ್ಸವವನ್ನು ಹರಪನಹಳ್ಳಿಯ ಪಾಳೇಗಾರ ಸೋಮಶೇಖರ ರಾಜನ ಹೆಸರಿನಲ್ಲಿ ನಡೆಸಿದರೆ ಗುರುವಾರದ ಕಾರ್ತಿಕೋತ್ಸವವನ್ನು ಮದಕರಿನಾಯಕನ ಹೆಸರಿನಲ್ಲಿ ನಡೆಸಲಾಗುವುದು.

ಕೊನೆಯ ಕಾರ್ತಿಕೋತ್ಸವವು ವಿಜೃಂಭಣೆಯಿಂದ ನಡೆಯುತ್ತದೆ. ಆಗ ಬೃಹತ್ ಪ್ರಮಾಣದಲ್ಲಿ ಕೊಬ್ಬರಿಯನ್ನು ಹಿರೇಮಠದ ಆವರಣದಲ್ಲಿ ಸುಡಲಾಗುತ್ತದೆ.(ಅನುಬಂಧ-೭, ಛಾಯಚಿತ್ರಗಳು, ಚಿತ್ರ ಸಂ.೨೭) ಊರಿನ ಗೌಡ ಶಾನಭೋಗ, ಬಣಕಾರ, ಇವರ ಸಮಕ್ಷಮದಲ್ಲಿ ಕಾರ್ತಿಕೋತ್ಸವ ಹಿರೇಮಠದಲ್ಲಿ ಆರಂಭವಾಗುತ್ತದೆ. ಮಠದ ಗರ್ಭಗುಡಿಯಿಂದ ಸ್ವಾಮಿ ಹೊರಡುವುದಕ್ಕಿಂತ ಮುಂಚೆ ಧರ್ಮಕರ್ತರೊಬ್ಬರು ಅಕ್ಬರ್ ಕೊಟ್ಟಿರುವ ಖಡ್ಗವನ್ನು ಹಿಡಿದು ಮುಂದೆ ತರುತ್ತಾರೆ. (ಈ ಖಡ್ಗವನ್ನು ಮೊದಲು ಉತ್ಸವದಲ್ಲಿ ಗೌಡರ ಮನೆತನಕ್ಕೆ ಸೇರಿದವರು ಹಿಡಿಯುತ್ತಿದ್ದರು. ಇತ್ತೀಚೆಗೆ ಅವರವರಲ್ಲಿಯೇ ಜಗಳವಾದ ಕಾರಣ ಧರ್ಮಕರ್ತರು ಹಿಡಿಯುತ್ತಾರೆ). ನಂತರ ಸ್ವಾಮಿಯ ಮೂರ್ತಿಯನ್ನು ವಾದ್ಯಗಳ ಮೂಲಕ ಪಲ್ಲಕ್ಕಿಯಲ್ಲಿಟ್ಟು

ಕೂಡಿಸುತ್ತಾರೆ. ಈಗ ಪಲ್ಲಕ್ಕಿಯ ಬದಲು ೨ ವರ್ಷಗಳಿಂದ ಬೆಳ್ಳಿ ರಥವನ್ನು ಮಾಡಿದ್ದು ಸ್ವಾಮಿಯ ಮೂರ್ತಿಯನ್ನು ಈ ರಥದಲ್ಲಿಟ್ಟು ಎಳೆಯಲಾಗುತ್ತದೆ.

ಅಷ್ಟಾವರಣ ಮೂರ್ತಿ ದೇವಾಲಯದಿಂದ ಹೊರಬರುತ್ತಿದ್ದಂತೆ ಮಠದ ಬಾಗಿಲನ್ನು ಮುಚ್ಚಲಾಗುತ್ತದೆ. ಬೆಳ್ಳಿರಥವನ್ನು ಮೂರುಕಲ್ಲು ಮಠದ ದಾರಿಗೆ ತರಲಾಗುತ್ತದೆ. ಅಲ್ಲಿಂದ ಧರ್ಮಕರ್ತರು ಮೂರುಕಲ್ಲು ಮಠಕ್ಕೆ ಹೋಗಿ ದೀಪಹಚ್ಚಿ ಬರುತ್ತಾರೆ. ನಂತರ ಬೆಳ್ಳಿರಥ ತೊಟ್ಟಿಲ ಮಠದ ಹತ್ತಿರ ಬರುತ್ತದೆ. ಅಲ್ಲಿ ತೊಟ್ಟಿಲ ಮಠದ ಧರ್ಮಕರ್ತರಿಂದ ವೀಳೆಯವನ್ನು ಸ್ವಾಮಿ ಸ್ವೀಕರಿಸುತ್ತಾನೆ. ಕಾರಣ ತೊಟ್ಟಿಲು ಮಠ ಮೊದಲಿಗೆ ನಿಂಬಿಯಕ್ಕ ಎನ್ನುವವಳ ಮನೆಯಾಗಿದ್ದು, ಇವಳು ಗುರುಬಸವನು ಕೊಟ್ಟೂರಿಗೆ ಬಂದಾಗ ಮನೆಯಲ್ಲಿಟ್ಟುಕೊಂಡು ಸಾಕಿದಳು ಎಂದು 'ಕೊಟ್ಟೂರ ಬಸವೇಶ್ವರ ಚಾರಿತ್ರ್ಯ' ಕೃತಿಯು(ಸಂ.೮) ತಿಳಿಸುತ್ತದೆ. ತೊಟ್ಟಿಲು ಮಠದಿಂದ ಸ್ವಾಮಿಯ ರಥವನ್ನು ಗಚ್ಚಿನಮಠಕ್ಕೆ ಎಳೆದು ತರಲಾಗುತ್ತದೆ. ಇಲ್ಲಿ ಕ್ರಿಯಾಮೂರ್ತಿಯನ್ನು ಅಕ್ಬರ್ ಕೊಟ್ಟ ಮಂಚದ ಮೇಲೆ ಕೂರಿಸುತ್ತಾರೆ. ಒಂದು ಗಂಟೆಯ ಕಾಲ ವೀರಭದ್ರದೇವರ ಒಡಪುಗಳನ್ನು ಹೇಳಲಾಗುತ್ತದೆ. ಇಲ್ಲಿಂದ ಪುನಃ ರಥವನ್ನು ಹಿರೇಮಠಕ್ಕೆ ಎಳೆದು ತರಲಾಗುತ್ತದೆ. ಈ ರಥಕ್ಕೆ 'ಉಚ್ಚಯ್ಯ' ಎಂದು ಕರೆಯಲಾಗುತ್ತದೆ. ರಥವನ್ನು ಎಳೆಯುವಾಗ ಮುಂದುಗಡೆ ನಂದಿಕೋಲು, ಕರಪಾಲ ಡೊಳ್ಳು, ಕಹಳೆ ಮುಂತಾದ ವಾದ್ಯಗಳ ಅರ್ಭಟ ಕೇಳುತ್ತಿರುತ್ತದೆ.

ಕೊಬ್ಬರಿಸುಡುವ ಆಚರಣೆ, ಅಕ್ಬರನ ಖಡ್ಗ(ಕಂಡಾಯ) ಪೂಜೆ, ಹುಣ್ಣಿಮೆ ಬೆಳಕು ಇವೆಲ್ಲ ಕೊಟ್ಟೂರ ಗುರುಬಸವ ನಾಥಪಂಥದವನು ಎನ್ನುವುದನ್ನು ಸಾಬೀತು ಪಡಿಸುತ್ತವೆ.(ಈ ಬಗ್ಗೆ ಅಧ್ಯಾಯ ೩.೨ರಲ್ಲಿ ವಿವರಿಸಲಾಗಿದೆ)

ಕೂಲಹಳ್ಳಿಯ ಮದ್ದಾನಸ್ವಾಮಿ ಮತ್ತು ಗೋಣಿಬಸವೇಶ್ವರ ಮಠಗಳಲ್ಲಿಯೂ ಕಾರ್ತಿಕೋತ್ಸವ ನಡೆಯುತ್ತದೆ. ಕೊಟ್ಟೂರಿನ ಕಾರ್ತಿಕೋತ್ಸವ ನಡೆದು ಎಂಟು ದಿನಗಳ ನಂತರ ಗೋಣಿಬಸವೇಶ್ವರ ಕಾರ್ತಿಕೋತ್ಸವ ನಡೆಯುತ್ತದೆ. ಪಲ್ಲಕ್ಕಿಯಲ್ಲಿ ಗೋಣಿಬಸವನ ಉತ್ಸವ ಮೂರ್ತಿಯನ್ನು ಇಟ್ಟುಕೊಂಡು ಬೆಟ್ಟದ ಮಲ್ಲಪ್ಪನಿಗೆ ಹೋಗಿ ಬರುತ್ತಾರೆ. ದೇವರ ಸಂಕೇತಗಳಾಗಿ ಮದ್ದಾನಸ್ವಾಮಿ ಮಠದಲ್ಲಿರುವ ಬೆತ್ತ, ಹಾವುಗೆ, ಕೊಡಲಿಗಳು ಪಲ್ಲಕ್ಕಿಯಲ್ಲಿರುತ್ತವೆ. ಪಲ್ಲಕ್ಕಿಯನ್ನು ಹೋರುವವರು ಕುರುಬ ಜನಾಂಗದವರಾಗಿದ್ದಾರೆ. ಬೆಟ್ಟದ ಮಲ್ಲಯ್ಯನ ಗುಡಿಗೆ ಬಂದು ಅಲ್ಲಿ ಒಂದು ದಿನ ವಸತಿ ಮಾಡುತ್ತಾರೆ. ಬೆಟ್ಟದ ಮಲ್ಲಯ್ಯನು ಗೋಣಿಬಸವ ಸಂಕಷ್ಟದಲ್ಲಿದ್ದಾಗಲೆಲ್ಲಾ ಸಹಾಯ ಮಾಡಿದ್ದಾಗಿ ಬಾಲಬಸವರ ಗೋಣಿಬಸವ ಕಾವ್ಯ ಮತ್ತು ಗೋಣಿಬಸವ ಚರಿತ್ರೆ ಪಠ್ಯಗಳು ತಿಳಿಸುತ್ತವೆ. ಬೆಟ್ಟದ ಮಲ್ಲಯ್ಯನಲ್ಲಿ ಒಂದು ದಿನ ವಸತಿ ನಂತರ ಮರಳಿ ಬಂದು ಮೂರ್ತಿ ಮಠವನ್ನು ಸೇರುತ್ತದೆ. ಇಲ್ಲಿ ಕೂಡ ದೀಪೋತ್ಸವವನ್ನು ಆಚರಿಸಲಾಗುತ್ತದೆ.

ಅರಸೀಕೆರೆಯಲ್ಲಿ ಕೂಡ ಕೊಟ್ಟೂರು ಕಾರ್ತಿಕೋತ್ಸವದ ಎಂಟು ದಿನಗಳ ನಂತರ ಕಾರ್ತಿಕೋತ್ಸವವನ್ನು ಆಚರಿಸಲಾಗುತ್ತದೆ. ಆ ಸಂದರ್ಭದಲ್ಲಿ ಕೊಬ್ಬರಿಯನ್ನು ಸುಡಲಾಗುತ್ತದೆ. ಆದರೆ ಕೊಟ್ಟೂರಿನಲ್ಲಿಯಷ್ಟು ಬೃಹತ್ ಪ್ರಮಾಣದಲ್ಲಿ ಇಲ್ಲಿ ಸುಡುವುದಿಲ್ಲ. ಮಠದ ಮೂರ್ತಿಯನ್ನು ಹತ್ತಿರದ ಕೆರೆಗೆ ಪಲ್ಲಕ್ಕಿಯಲ್ಲಿ ಒಯ್ದು ಬಸವಣ್ಣ ದೇವರ ಕಟ್ಟೆಗೆ ಬಂದು ಪೂಜೆ ಮಾಡಿ ಮರಳಿ ತರಲಾಗುತ್ತದೆ. ಹರಪನಹಳ್ಳಿ ಕೆಂಪಯ್ಯನ ಕಾರ್ತಿಕೋತ್ಸವವು ಕೊಟ್ಟೂರಿನ ಕಾರ್ತೀಕದ ೮ ದಿನಗಳ ನಂತರ ನಡೆಯುತ್ತದೆ. ಕಾರ್ತೀಕದಂದು ಕೆಂಪಯ್ಯನ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಕೆಂಪಯ್ಯನ ಸಮಾಧಿ ಬಾವಿ ಎಂದು ಹೇಳಲಾಗುವ ಬಾವಿಗೆ ಪ್ರದಕ್ಷಿಣೆ ಹಾಕಿ ಒಂದು ದೀಪಹಚ್ಚಿ ಮರಳಿ ಮಠಕ್ಕೆ ತರುತ್ತಾರೆ. ಇಲ್ಲಿ ೧೦೧, ೫೦೧ ಹಾಗೂ ೧೦೦೧ ಹೀಗೆ ಪ್ರಣತಿಗಳಲ್ಲಿ ದೀಪ ಹಚ್ಚಿ ಇಡಲಾಗುತ್ತದೆ.

ಒಟ್ಟಾರೆ ಕಾರ್ತಿಕೋತ್ಸವ ಆಚರಣೆ ಐವರು ಸಂತರಲ್ಲಿಯೂ ಕಂಡುಬರುತ್ತಿದ್ದು ಇವರು ನಾಥಸಿದ್ಧರೆನ್ನಲು ಕಾರ್ತಿಕೋತ್ಸದಲ್ಲಿ ನಡೆಯುವ ಕೊಬ್ಬರಿ ಸುಡುವ ಪದ್ಧತಿ, ಕಂಡಾಯಪೂಜೆ ಸಾಕ್ಷಿಗಳಾಗಿವೆ.

## ೬.೬. ಹನುಮಂತನಿಗೆ ಪೂಜೆ

ಪಂಚಗಣಾಧೀಶ್ವರರ ಪಂಥದಲ್ಲಿ ಹನುಮಂತನಿಗೆ ವಿಶೇಷ ಸ್ಥಾನವಿದೆ. ಐವರು ಸಂತರ ದೇವಾಲಯಗಳಿರುವ ಸ್ಥಳಗಳಲ್ಲಿ ಹನುಮಂತನೊಂದಿಗೆ ಇವರ ಮಠಗಳು ಸಂಬಂಧವನ್ನು ಹೊಂದಿವೆ. ಇವರ ರಥೋತ್ಸವಗಳು ನಡೆಯುವ ಸಂದರ್ಭದಲ್ಲಿ ಮೊಟ್ಟಮೊದಲ ಪೂಜೆ ಕುಪ್ಪಿನಕೇರಿ ಹನುಮಂತನಿಗೆ ಮಾಡಲಾಗುತ್ತದೆ. ಇದಕ್ಕೆ ಸಂಬಂಧಿಸಿದಂತೆ ಕತೆಯೊಂದಿದೆ. ಪಂಚಗಣಾಧೀಶ್ವರರು ಕಲ್ಯಾಣ ಪಟ್ಟಣದಿಂದ ಹಂಪಿಗೆ ಬಂದು ಅಲ್ಲಿಂದ ಕುಪ್ಪಿನಕೇರಿಗೆ ಬರುತ್ತಾರೆ. ಆಗ ರಾತ್ರಿಯಾಗುತ್ತದೆ. ಮಲಗಿಕೊಳ್ಳಲು ಹನುಮಂತನ ಗುಡಿಗೆ ಹೋಗುತ್ತಾರೆ. ಅಲ್ಲಿ ಮಲಗೆದ್ದು ಮುಂಜಾನೆ ಕೊಟ್ಟೂರಿಗೆ ಹೋಗುವಾಗ ಲಿಂಗವಿಲ್ಲದ ಹನುಮಂತನಿಗೆ ಲಿಂಗದೀಕ್ಷೆಯನ್ನು ನೀಡುತ್ತಾರೆ.(ಅನುಬಂಧ-೬, ಗೋಣಿಬಸವನ ಕಾವ್ಯದ ಆಯ್ದಭಾಗ)

ವೀರಶೈವ ಧರ್ಮದಲ್ಲಿ ನೂರೊಂದು ವಿರಕ್ತರಿಗೆ ವಿಶಿಷ್ಟಸ್ಥಾನವಿದೆ. ನೂರೊಂದು ವಿರಕ್ತರಿದ್ದ ಹಂಪೆಯು ಪ್ರೌಢದೇವರಾಯನ ಕಾಲದಲ್ಲಿ ಲಕ್ಕಣ್ಣದಂಡೇಶನ ನೇತೃತ್ವದಲ್ಲಿ ವಚನಗಳ ಸಂಕಲನ, ಪರಿಷ್ಕರಣ, ವ್ಯಾಖ್ಯಾನ ಮುಂತಾದ ಕಾರ್ಯಗಳನ್ನು ಮಾಡಿತು. ಪ್ರೌಢದೇವರಾಯನ ನಂತರ ಬಂದ ಅರಸರು ವೈಷ್ಣವ ಮತಾವಲಂಬಿಗಳಾಗಿದ್ದರಿಂದ ವೀರಶೈವ ಮತಕ್ಕಿಂತ ಹೆಚ್ಚಾಗಿ ವೈಷ್ಣವ ಮತಕ್ಕೆ ಪ್ರೋತ್ಸಾಹ ದೊರೆಯಿತು. ಹೀಗೆ ಬದಲಾದ ಸಂದರ್ಭದಲ್ಲಿ ವೀರಶೈವ ಧರ್ಮವು ಹಂಪಿ ಪ್ರದೇಶದಿಂದ ಎಡೆಯೂರನ್ನು ತನ್ನ ಕೇಂದ್ರಸ್ಥಳವನ್ನಾಗಿ ಮಾರ್ಪಾಡಿಸಿಕೊಂಡಿತು. ತೋಂಟದ ಸಿದ್ದಲಿಂಗಯತಿಗಳ ನೇತೃತ್ವದಲ್ಲಿ ೭೦೧ ಗಣಂಗಳು ವೀರಶೈವ ಧರ್ಮವನ್ನುದ್ಧಾರ ಮಾಡಲು ವ್ಯವಸ್ಥಿತವಾಗಿ ಪ್ರಯತ್ನಿಸಿದರು. ಈ ಎಲ್ಲ ಘಟನೆಗೆ ಸಂಬಂಧಿಸಿದಂತೆ ಪಂಚಗಣಾಧೀಶ್ವರರು ಕುಪ್ಪಿನಕೇರಿ ಹನುಮಂತನಿಗೆ ಲಿಂಗದೀಕ್ಷೆ

ನೀಡಿರುವುದನ್ನು ಗಮನಿಸಬೇಕಾಗುತ್ತದೆ. ಏಕೆಂದರೆ ಬದಲಾದ ಸಂದರ್ಭದಲ್ಲುಂಟಾದ ವೈಷ್ಣವ ಧರ್ಮದ ಪ್ರಾಬಲ್ಯಕ್ಕೆ ಧರ್ಮದ ರಾಮನ ದಾಸನಾದ ಹನುಮಂತನಿಗೆ ಲಿಂಗದೀಕ್ಷೆ ನೀಡುವ ಮೂಲಕ ಪಂಚಗಣಾಧೀಶ್ವರರು ಪ್ರತಿಕ್ರಿಯೆ ನೀಡಿದ್ದಾರೆ (ಗಮನಿಸಿ, ಅಧ್ಯಾಯ ೩,೪,೧).

ಹನುಮಂತ ದ್ರಾವಿಡ ಜನಾಂಗದವನಾಗಿದ್ದು, ಮೂಲತಃ ಕಿಷ್ಕಿಂದೆ(ಹಂಪಿ)ಯವನು ಆರ್ಯರ ರಾಮನಿಗೆ ಭಕ್ತನಾಗಿ ಆತನ ದಾಸನಾಗಿ ವೈಷ್ಣವ ಮತಾವಲಂಬಿಯಾದವನು. ಮೂಲತಃ ಇದೇ ಭಾಗದವನಾದ ಹನುಮಂತನಿಗೆ ಲಿಂಗದೀಕ್ಷೆ ನೀಡುವ ಮೂಲಕ ಆತನ ಒಕ್ಕಲಿನವರನ್ನೆಲ್ಲಾ ತಮ್ಮ ಪಂಥಕ್ಕೆ ಸೇರಿಸಿಕೊಳ್ಳಲು ಪಂಚಗಣಾಧೀಶ್ವರರು ಪ್ರಯತ್ನಿಸಿದ್ದಾರೆ. ಹನುಮಂತನಿಗೆ ಲಿಂಗದೀಕ್ಷೆ ನೀಡಿದ ನೆನಪಿಗಾಗಿ ಈಗಲೂ ರಥೋಥ್ಸವದ ಸಂದರ್ಭದಲ್ಲಿ ಮೊದಲಿಗೆ ಹನುಮಂತನ ಪೂಜಾಚರಣೆಯು ಕಂಡುಬರುತ್ತದೆ.

ನಾಯಕನಟ್ಟಿಯಲ್ಲಿ ರಥೋತ್ಸವ ನಡೆಯುವ ಆರಂಭದಲ್ಲಿ ನಡೆಯುವ ಮಂಟಪಪೂಜೆ, ಕಂಕಣಧಾರಣೆ, ಸ್ವಸ್ತಿವಾಚನ, ಪ್ರಾಕಾರೋತ್ಸವ, ಸರ್ಪವಾಹನೋತ್ಸವ, ಮಯೂರವಾಹನೋತ್ಸವ, ಕಳಸಸ್ಥಾಪನೆ, ಗಜವಾಹನೋತ್ಸವ, ಸಿಂಹವಾಹನೋತ್ಸವ ಅಶ್ವವಾಹನೋತ್ಸವ, ತೈಲಾಭಿಷೇಕ, ಚಿಕ್ಕರಥೋತ್ಸವ ಮುಗಿದ ನಂತರ ದೊಡ್ಡರಥೋತ್ಸವಕ್ಕೆ ಆರಂಭದಲ್ಲಿ ದೇವರ ಮೂರ್ತಿಯನ್ನು ಒಳಮಠದಿಂದ ಮೆರವಣಿಗೆಯಲ್ಲಿ ತಂದು ದೊಡ್ಡರಥದಲ್ಲಿ ಕುಳ್ಳಿರಿಸಲಾಗುತ್ತದೆ. ಹಾಗೆ ಕುಳ್ಳಿರಿಸಿ ರಥದಿಂದ ಎಲ್ಲರೂ ಇಳಿದುಬರುತ್ತಾರೆ. ಕೆಳಗೆ ಬಂದನಂತರ ರಥನಿಂತ ಸ್ಥಳದ ಪಕ್ಕದಲ್ಲಿರುವ ಹನುಮಂತನಿಗೆ ಪೂಜೆ ಮಾಡಲಾಗುತ್ತದೆ. ಆ ನಂತರ ರಥವನ್ನು ಎಳೆಯಲಾಗುತ್ತದೆ. ಕೊಟ್ಟೂರಿನಲ್ಲಿಯೂ ಸಹ ವಾಹನೋತ್ಸವಗಳು ಮುಗಿದನಂತರ ರಥೋತ್ಸವದ ಸಂದರ್ಭದಲ್ಲಿ ಉತ್ಸವಮೂರ್ತಿಯನ್ನಿಟ್ಟು ಪಲ್ಲಕ್ಕಿಯಲ್ಲಿ ಮೆರವಣಿಗೆ ಮೂಲಕ ರಥವಿದ್ದ ಸ್ಥಳಕ್ಕೆ ಒಯ್ಯುವಾಗ ಬೀದಿಯಲ್ಲಿ ಹನುಮಂತನ ಗುಡಿಯಲ್ಲಿ ಪೂಜೆ ಸಲ್ಲಿಸಲಾಗುತ್ತದೆ. ಕೂಲಹಳ್ಳಿಯ ಗೋಣಿಬಸವನ ರಥೋತ್ಸವದ ಸಂದರ್ಭದಲ್ಲಿ ಗೋಣಿಬಸವನ ಮಠದಲ್ಲಿನ ಗರುಡ ಗಂಭದಲ್ಲಿನ ಹನುಮಂತನಿಗೆ ಪೂಜೆ ಸಲ್ಲಿಸಲಾಗುತ್ತದೆ. ಕುಪ್ಪಿನಕೇರಿ ಹನುಮಂತನೆ ಈ ಗರುಡಗಂಭದಲ್ಲಿರು ವನೆಂದು ಗೋಣಿಬಸವ ಚರಿತ್ರೆ ತಿಳಿಸುತ್ತದೆ. ಹರಪನಳ್ಳಿಯ ಕೆಂಪಯ್ಯನ ಜಾತ್ರೆ ಈಗ ನಡೆಯುತ್ತಿಲ್ಲ. ಈಗ್ಗೆ ೪೦-೫೦ ವರ್ಷಗಳ ಹಿಂದೆ ಕೆಂಪಯ್ಯನ ರಥೋತ್ಸವ ನಡೆಯುತ್ತಿದ್ದಿತೆಂದು ಸ್ಥಳೀಯ ಹಿರಿಯರು ನೆನಪಿಸಿಕೊಳ್ಳುತ್ತಾರೆ. ಹನುಮಂತನ ಪೂಜೆಯ ಬಗೆಗೆ ಅವರು ನಿಖರವಾಗಿ ಹೇಳಲಿಲ್ಲ. ಆದರೆ ಕೆಂಪಯ್ಯನ ಮಠದ ಸಮೀಪದಲ್ಲಿಯೇ ಹನುಮಂತನಮೂರ್ತಿ ಇರುವುದು ಕಂಡುಬರುತ್ತದೆ. ಇದು ಕುಪ್ಪಿನಕೆರೆ ಹನುಮಂತನೆ ಎನ್ನುವ ಬಗ್ಗೆ ಸ್ಪಷ್ಟವಾಗಿ ಯಾರಿಗೂ ತಿಳಿದಿಲ್ಲ. ಈಗಂತೂ ಈ ಹನುಮಂತನ ವಿಗ್ರಹ ಮತ್ತು ಕೆಂಪಯ್ಯನ ಮಠದ ಮಧ್ಯ ಯಾವುದೇ ರೀತಿಯ ಆರಚಣೆಗಳು ಉಳಿದಿಲ್ಲ.

ಕೋಲಶಾಂತಯ್ಯನ ಮಠಕ್ಕೆ ಸಂಬಂಧಿಸಿದಂತೆ ಮಠದಲ್ಲಿರುವ ಚೌಡಮ್ಮನಿಗೆ ಎಡೆ ಮಾಡಿದನಂತರ ತೇರು ಹೊರಡುವುದು. ಚೌಡಮ್ಮನಿಗೂ ಕೋಲಶಾಂತನಿಗೂ ಇರುವ ನಂಟಿನ ಬಗ್ಗೆ ತಿಳಿದುಬರುವುದಿಲ್ಲ. ಆದರೆ ಕೋಲಶಾಂತನು ಮಾಡಿದ ಪವಾಡಗಳಲ್ಲಿ ಆತ ಚೌಡಮ್ಮನನ್ನು ತಾನು ಹೇಳಿದಂತೆ ಕೇಳುವ ಹಾಗೆ ಮಾಡಿದನೆಂದು ಹೇಳಲಾಗುತ್ತದೆ. ಈ ಬಗ್ಗೆನೂ ಹೆಚ್ಚಿನ ವಿವರಣೆಗಳು ದೊರೆಯುವುದಿಲ್ಲ. ಆದರೆ ಚೌಡಮ್ಮನನ್ನು ಪೂಜಿಸುವವರೇ ಊರಿನ ಹನುಮಂತನ ಗುಡಿಯನ್ನು ಪೂಜಿಸುತ್ತಾರೆ.

ಹನುಮಂತನ ಸ್ಥಳವಾದ ಕಿಷ್ಕಿಂದೆ(ಹಂಪಿ) ಇದೇ ಪರಿಸರದಲ್ಲಿದ್ದು ಹನುಮಂತನ ಗುಡಿಗಳು, ಆತನನ್ನು ಪೂಜಿಸುವ ಭಕ್ತಾದಿಗಳು ಪ್ರತಿ ಊರಿನಲ್ಲಿಯೂ ಸಾಕಷ್ಟು ಜನ ಕಂಡುಬರುತ್ತಾರೆ. ಪಂಚಗಣಾಧೀಶ್ವರರು ಈ ಭಾಗದಲ್ಲಿ ಬಂದು ತಮ್ಮ ನೆಲೆಯನ್ನು ಕಂಡುಕೊಳ್ಳಬೇಕಾದ ಸಂದರ್ಭದಲ್ಲಿ ಹನುಮಂತನಿಗೆ ಲಿಂಗದೀಕ್ಷೆ ಮೂಲಕ ಆತನನ್ನು ತಮ್ಮ ಭಕ್ತನನ್ನಾಗಿಸಿಕೊಂಡಿದ್ದಾರೆ. ಆ ಮೂಲಕ ಹನುಮಂತನನ್ನು ಪೂಜಿಸುವ ಸಮುದಾಯವನ್ನೆಲ್ಲಾ ತಮ್ಮ ಪಂಥದ ತೆಕ್ಕೆಗೆ ತೆಗೆದುಕೊಳ್ಳುವ ಪ್ರಯತ್ನವನ್ನು ಮಾಡಿದ್ದಾರೆ. ಇದರ ನೆನಪುಗಳು ಹನುಮಂತನಿಗೆ ವಿಶೇಷ ಪೂಜೆಯನ್ನು ಸಲ್ಲಿಸುವ ಮೂಲಕ ಪಂಚಗಣಾಧೀಶ್ವರ ಪಂಥದಲ್ಲಿ ಕಾಣಬಹುದು. ಒಂದು ದೈವವನ್ನು ಆರಾಧಿಸುವ ಸಮುದಾಯ ಮತ್ತೊಂದು ದೈವಾರಾಧನೆಯ ಸಮುದಾಯದಲ್ಲಿ ಸಂಕರಗೊಳ್ಳುವ ಸಂದರ್ಭದಲ್ಲಿ ಹಲವಾರು ಆಚರಣೆಗಳು ಒಂದರೊಳಗೊಂದು ಸೇರಿಕೊಳ್ಳುತ್ತವೆ.

## ೬.೭. ಜಾತ್ರೆಯಲ್ಲಿ ಕೆಳವರ್ಗದವರ ಆಚರಣೆಗಳು

ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ೧೨ನೇ ಶತಮಾನ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಹೊಂದಿದೆ. ಮೊಟ್ಟ ಮೊದಲ ಬಾರಿಗೆ ಕೆಳವರ್ಗದವರನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುವುದರ ಮೂಲಕ ಅವರಲ್ಲಿ ಆತ್ಮವಿಶ್ವಾಸವನ್ನು ಶರಣ ಚಳುವಳಿ ತುಂಬಿತು. ಈ ಪ್ರಕ್ರಿಯೆ ೧೨ನೇ ಶತಮಾನದ ನಂತರವೂ ಮಂಟೇಸ್ವಾಮಿ, ಮಲೆಮಾದೇಶ್ವರ ಮುಂತಾದ ಪಂಥಗಳ ಮೂಲಕ ನಡೆದುಕೊಂಡು ಬಂದಿದೆ. ಕೆಳವರ್ಗದವರಿಗೆ ವಿಶೇಷ ಆಧ್ಯತೆಯನ್ನು, ಸ್ಥಾನಮಾನವನ್ನು ನೀಡಿದ ಪಂಥಗಳಲ್ಲಿ ಪಂಚಗಣಾಧೀಶ್ವರರ ಪಂಥವೂ ಒಂದು. ಪಂಚಗಣಾಧೀಶ್ವರರ ಆಚರಣೆಗಳನ್ನು ಗಮನಿಸಿದರೆ ದಲಿತರು ಈ ಪಂಥದಲ್ಲಿ ಪಡೆದಿರುವ ಪ್ರಾಮುಖ್ಯತೆಯನ್ನು ಕಾಣಬಹುದು.

ನಾಯಕನಟ್ಟಿಯ ತಿಪ್ಪೇಸ್ವಾಮಿಗೆ ಸಂಬಂಧಿಸಿದಂತೆ ಕೆಳವರ್ಗ ಹೆಚ್ಚಿನ ಪ್ರಮಾಣದಲ್ಲಿ ಪಾಲ್ಗೊಂಡಿದ್ದಾರೆ. ಹೊರಮಠದಲ್ಲಿನ ಪೂಜಾರಿಗಳು ಮ್ಯಾಸಬೇಡರಾಗಿದ್ದಾರೆ. ಹೊರಮಠದಲ್ಲಿ ರಥೋತ್ಸವದ ಮರುದಿನ ನಡೆಯುವ ಓಕಳಿಯ ದಿನ ಹೊರಮಠಕ್ಕೆ ಸ್ವಾಮಿಯ ಉತ್ಸವ ಮೂರ್ತಿಯನ್ನು ತಂದು ಪೂಜೆಮಾಡಿಕೊಂಡು ಹೋಗುತ್ತಾರೆ. ಮ್ಯಾಸನಾಯಕರು ಹೊರಮಠಕ್ಕೆ ಸಂಬಂಧಿಸಿದ ಪೂಜಾವಿಧಾನಗಳ ಜವಾಬ್ದಾರಿಯನ್ನು

ವಹಿಸಿಕೊಂಡಿರುತ್ತಾರೆ. ಜಾತ್ರೆಯ ನಂತರ ಬಿಡುವಿನ ಸಮಯದಲ್ಲಿಯೂ ಇವರೇ ಅರ್ಚಕರಾಗಿರುತ್ತಾರೆ. ಜಾತ್ರೆಯ ಸಂದರ್ಭದಲ್ಲಿ ರಥಕ್ಕೆ ಹಗ್ಗ ಬಿಗಿದು ಅಲಂಕಾರ ಮಾಡುವವರು ಇವರೇ ಆಗಿರುತ್ತಾರೆ. ನಾಯಕ ಜನಾಂಗದ ಬಸವಿಯರು ಜಾತ್ರೆಯಲ್ಲಿ ಕಂಕಣ ಕಟ್ಟಿಸಿಕೊಳ್ಳುವುದರೊಂದಿಗೆ ಉತ್ಸವ ಮೂರ್ತಿಯು ರಥವನ್ನು ಪ್ರದಕ್ಷಿಣೆ ಹಾಕುವಾಗ ಚಾಮರ ಬೀಸುತ್ತಾರೆ. ಓಕುಳಿಯಾಡುವ ದಿನ ಬಸವಿಯರು ವಿಶೇಷವಾಗಿ ಭಾಗವಹಿಸುತ್ತಾರೆ. ಮಡಿವಾಳರು ಜಾತ್ರೆ, ಕಾರ್ತಿಕೋತ್ಸವ, ದಿಪೋತ್ಸವದ ಸಮಯದಲ್ಲಿ ಪಂಜು ಹಿಡಿಯುವುದು ನಡೆಮುಡಿ ಹಾಸುವುದು ಇವರ ಕರ್ತವ್ಯವಾಗಿದೆ. ಪ್ರತಿವರ್ಷ ಜಾತ್ರೆಯಲ್ಲಿ ಮಡಿವಾಳರ ಐದು ಕುಟುಂಬದ ಅಣ್ಣತಮ್ಮಂದಿರು ಸೇರಿಕೊಂಡು ಈ ಸೇವೆಯನ್ನು ಮಾಡುತ್ತಾರೆ. ಹಗಲಿನಲ್ಲಿ ನಡೆಯುವ ಉತ್ಸವಗಳಲ್ಲಿಯೂ ಈ ರೀತಿ ಪಂಜನ್ನು ಹಿಡಿಯಲಾಗುತ್ತದೆ. ನಗಾರಿ ಪಂಜು, ನಂದಿಕೋಲು ಪಂಜು, ಬಸವನ ಪಂಜು, ಖಾಸಾ ಪಂಜು, ಉಚ್ಛ್ರಾಯದ ಪಂಜು ಎಂದು ಒಟ್ಟು ಐದು ಪಂಜುಗಳನ್ನು ಅನುಕ್ರಮವಾಗಿ ನಗಾರಿಯ ಮುಂದೆ, ನಂದಿಕೋಲು, ಬಸವ(ಎತ್ತು)ನ ಮುಂದೆ ಹಿಡಿಯಲಾಗುತ್ತದೆ. ಖಾಸಪಂಜು ವಾರೋತ್ಸವದಲ್ಲಿ ಹಿಡಿಯುವ ಪಂಜಾಗಿರುತ್ತದೆ. ಇದು ೫-೬ ಅಡಿ ಉದ್ದ ಇರುತ್ತದೆ. ಉಚ್ಛ್ರಾಯದ ಪಂಜು ಕಾರ್ತಿಕೋತ್ಸವದಲ್ಲಿ ಮುಖ್ಯವಾಗಿ ಹಿಡಿಯಲಾಗುತ್ತದೆ. ಇದು ೨೦-೨೫ ಅಡಿ ಎತ್ತರ ಇರುತ್ತದೆ. ಅಲ್ಲದೆ ಮಡಿವಾಳರು ನಡೆಮುಡಿ ಆಚರಣೆಯನ್ನು ಆಚರಿಸುತ್ತಾರೆ. ಹೊರಮಠದಿಂದ ಒಳಮಠದವರೆಗೆ ನಡೆಮುಡಿ ಹಾಸಿಕೊಂಡು ಬರಲಾಗುತ್ತದೆ. ಇದನ್ನು ಮಡಿವಾಳರೇ ಮಾಡಬೇಕಾಗುತ್ತದೆ. ದೊಡ್ಡರಥೋತ್ಸವ ನಡೆಯುವ ಸಂದರ್ಭದಲ್ಲಿ ರಥದ ಒಂದು ಗಾಲಿಯ ಹತ್ತಿರ ನಿಂತಿರುತ್ತಾರೆ. ಅದರ ಮೇಲೆ ಬೀಳುವ ಕಾಯಿಹಣ್ಣು ಇವೆಲ್ಲವೂ ಮಡಿವಾಳರಿಗೆ ಸಲ್ಲುತ್ತವೆ.

ನಾಯಕನಹಟ್ಟಿಯಲ್ಲಿ ಸುಮಾರು ೧೫೦-೨೦೦ ಮನೆಗಳನ್ನು ಹೊಂದಿರುವ ಮಣೆಗಾರರು ಪ್ರತಿವರ್ಷ ಜಾತ್ರೆಯ ಸಂದರ್ಭದಲ್ಲಿ ತೇರಿಗೆ ಕಟ್ಟುವ ಈಚಲು ಉರಿಗಳನ್ನು ತಂದುಕೊಡುತ್ತಾರೆ. ರಥೋತ್ಸವದ ಸಂದರ್ಭದಲ್ಲಿ ದೊಡ್ಡ ರಥದ ಮೇಲೆ ಕಟ್ಟಿರುವ ತಮ್ಮ ಪಾಲಿನ ಜೋಳಿಗೆಯಲ್ಲಿ ಬಿದ್ದಿರುವ ಬಾಳೆ ಹಣ್ಣು, ದವನ, ಹೂವು, ಪತ್ರೆಗಳನ್ನು ಪ್ರಸಾದವನ್ನಾಗಿ ಪಡೆದುಕೊಂಡು ಇದನ್ನು ಹಟ್ಟಿಯ ಆಯಗಾರರೆಲ್ಲ ಹಂಚಿಕೊಳ್ಳುತ್ತಾರೆ.

ಕೊಟ್ಟೂರಿನಲ್ಲಿ ಬಡಗಿ ಮತ್ತು ಕಮ್ಮಾರರು ತೇರುಕಟ್ಟುವ ಕೆಲಸದಲ್ಲಿ ನಿರತರಾಗಿದ್ದರೆ, ದೀವಟಿಗೆಯವರು-ದೀವಟಿಗೆ ಹಿಡಿಯುವ ಕೆಲಸ ಮಾಡುತ್ತಾರೆ. ಮೇಳದವರು ಉತ್ಸವದ ಮುಂದೆ ಮೇಳ ಮಾಡುತ್ತಾರೆ. ಪಾತ್ರದವರು(ನರ್ತನ) ಹಿಂದೆ ಉತ್ಸವದ ಸಂದರ್ಭದಲ್ಲಿ ನರ್ತನ ಮಾಡುತ್ತಿದ್ದರೆಂದು ಹೇಳುತ್ತಾರೆ. ಆದರೆ ಈಗ ಆ ಪದ್ದತಿ ಇಲ್ಲ. ಮೇದಾರರು ತೇರಿನ ಮೇಲೆ ಇಡುವ ಬಿದುರಿನ ಜಲ್ಲೆಯನ್ನು ಕಟ್ಟುತ್ತಾರೆ. ಅಗಸರು ಉತ್ಸವದಲ್ಲಿ ಮಡಿ ಹಾಸುವ ಆಚರಣೆಯನ್ನು ಮಾಡುತ್ತಾರೆ. ಕುರುಬರು ತೇರಿನ ಗಡ್ಡೆಗೆ(ರಥದ ಕೆಳಭಾಗ) ಎಣ್ಣೆಯನ್ನು ಹಚ್ಚುತ್ತಾರೆ. ಹರಿಜನರು ಗಾಲಿಗೆ ಎಣ್ಣೆ ಎರೆಯುವುದು, ಏಣಿ

ತಂದು ಹಾಕುವುದು, ಹಲಗೆ ಸೇವೆ, ಬಿದುರಿನ ಜಲ್ಲೆಯನ್ನು ರಥದ ಮೇಲ್ಭಾಗಕ್ಕೆ ಏರಿಸುವುದು ಮಾಡುತ್ತಾರೆ.

ಮುಖ್ಯವಾಗಿ ರಥೋತ್ಸವದ ದಿನ ಹಿರೇಮಠದಿಂದ ಪಲ್ಲಕ್ಕಿಯಲ್ಲಿ ದೇವರ ಮೂರ್ತಿಯನ್ನು ಒಯ್ಯುವಾಗ ಹರಿಜನಕೇರಿ ಬಂದ ಕೂಡಲೆ ಹರಿಜನ ಜಾತಿಯ ದೇವದಾಸಿಯಾದ ಹಿರೆಮನೆ ಕರಿಯಮ್ಮ ಎಂಬಾಕೆ ತನ್ನ ಮಗಳು ಉಡುಸಲಮ್ಮನ ಜೊತೆಗೆ ಬಂದು(ಅನುಬಂಧ-೭, ಛಾಯಾಚಿತ್ರಗಳು, ಚಿತ್ರ ಸಂ.೨೯) ಪಲ್ಲಕ್ಕಿಯಲ್ಲಿರುವ ಮೂರ್ತಿಗೆ ಕಳಸ ಮತ್ತು ಧೂಪಾರ್ತಿಯನ್ನು ಬೆಳಗುತ್ತಾಳೆ. ಈಕೆಯದು ವಂಶಪಾರಂಪರ್ಯವಾಗಿ ಉಳಿದುಕೊಂಡು ಬಂದಿರುವ ಸೇವೆಯಾಗಿದೆ. ಈಕೆಯನ್ನು ಮೊದಲು ದೇವರಿಗೆ ಬಿಡುವಾಗ ಕ್ರಿಯಾಮೂರ್ತಿಗಳು ಕೊಟ್ಟೂರೇಶ್ವರ(ಗುರುಬಸವ) ಸ್ವಾಮಿಯ ಪಾದೋದಕವನ್ನು ಆಕೆಯ ಮೇಲೆ ಚಿಮುಕಿಸಿ ಮಂತ್ರ ಹೇಳಿ ತಾಳಿಕಟ್ಟುತ್ತಾರೆ. ಈ ರೀತಿ ದೇವದಾಸಿ ಎಂದು ನೇಮಕಗೊಂಡ ಮೇಲೆ ದೇವರ ಸೇವೆಗೆ ಮೀಸಲಾಗಿರುತ್ತಾಳೆ. ಈಕೆ ತೀರಿ ಹೋದ ಮೇಲೆ ಈಕೆಯ ವಂಶದ ಹೆಣ್ಣು ಮಗಳೆ ದೇವದಾಸಿಯಾಗಿ ಸೇವೆ ಸಲ್ಲಿಸಬೇಕು. ರಥೋತ್ಸವ ನಡೆಯುವ ಸಂದರ್ಭದಲ್ಲಿ ಮೊದಲಿನ ದಿನದ ನಾಗರೋತ್ಸವದ ದಿನದಿಂದ ರಥೋತ್ಸವದ ಐದು ದಿನದವರೆಗೆ ಉಪವಾಸವಿದ್ದು, ಆ ಸಂದರ್ಭದಲ್ಲಿ ಹಣ್ಣು-ಹಾಲು ಮಾತ್ರ ಸ್ವೀಕರಿಸುತ್ತಾಳೆ. ರಥೋತ್ಸವದ ದಿನ ಹಿರೇಮಠದಿಂದ ಕುಪ್ಪಸ ಕೊಟ್ಟ ಮೇಲೆ ಸ್ನಾನ ಮಾಡಿ ಹೊಸಬಟ್ಟೆ ಧರಿಸಿ ಉತ್ಸವಮೂರ್ತಿಗೆ ರಥೋತ್ಸವದ ಸಂದರ್ಭದಲ್ಲಿ ಕಳಸದ ಆರತಿ ಬೆಳಗುವ ಆಚರಣೆ ಇದೆ.

ಕೂಲಹಳ್ಳಿಯಲ್ಲಂತೂ ಕೆಳವರ್ಗಗಳೇ ಪ್ರಧಾನವಾಗಿ ಆಚರಣೆಗಳಲ್ಲಿ ಭಾಗವಹಿಸುತ್ತವೆ. ಗೋಣಿಬಸವ ಮತ್ತು ಮದ್ದಾನಸ್ವಾಮಿ ಮಠಗಳನ್ನು ಬೇಡರು ಪೂಜೆ ಮಾಡುತ್ತಿದ್ದರೆ, ವಡ್ಡೆಟ್ಟವನ(ಗೋಣಿಬಸವನ ಹೆಂಡತಿ) ಗುಡಿಯನ್ನು ಕುರುಬರು ಪೂಜೆ ಮಾಡುತ್ತಾರೆ. ಹಾಗೆಯೇ ಜಂಬಾರದಯ್ಯನ(ಗೋಣಿಬಸವನ ಕಾಲಜ್ಞಾನ ಸಾರುವ ವ್ಯಕ್ತಿ) ಗುಡಿಯನ್ನು ಬಾಲಬಸವರು ಪೂಜಿಸುತ್ತಿದ್ದರು. ಈಗ ಕೂಲಹಳ್ಳಿಯ ಮಾದಿಗರು ಇದನ್ನು ಪೂಜಿಸುತ್ತಾರೆ.

ಕಾರ್ತಿಕ, ರಥೋತ್ಸವಗಳ ಸಂದರ್ಭದಲ್ಲಿ ಮೊದಲದಿನ ಮಠದ ಗುಡಿಗಳೆದುರು ಹಂದರ ಹಾಕುತ್ತಾರೆ. ಹರಿಜನ ಕೇರಿಯಲ್ಲಿರುವ ಗುರುಬಸವನ ಗುಡಿಯೆದುರು ಹರಿಜನರು, ಗೋಣಿಬಸಪ್ಪನ ಗುಡಿ ಎದುರು ಕುರುಬರು, ಸದರಕಟ್ಟೆಯ ಮುಂದೆ ಹರಪನಹಳ್ಳಿಯ ಉಪ್ಪಾರರು, ಹಂದರ(ಚಪ್ಪರ) ಕಟ್ಟುತ್ತಾರೆ. ಅಲ್ಲದೆ ಗೋಣಿಬಸವನ ಜಾತ್ರೆ ಸಂದರ್ಭದಲ್ಲಿ ಅಡವಿ ಹಳ್ಳಿಯ ಕುಂಬಾರರು ಒಂದು ಬಂಡಿ ಗಡಿಗೆಗಳನ್ನು ತಂದೊಪ್ಪಿಸುವ ಪದ್ಧತಿ ಇದೆ. ಕೊಳಚೆ ಗ್ರಾಮದ ಕಚ್ಚಾ ಅರವೇರ ಮನೆತನದವರು ಒಂದು ಬಂಡಿ ಕಾಯಿ ಮತ್ತು ಗರಿಗಳನ್ನು ಮಠಕ್ಕೆ ಒಪ್ಪಿಸುತ್ತಾರೆ.

ಬಂಡ್ರಿಯ ಕೊರಚರು ೧೦೧ ಕಸಬರಿಕೆಗಳನ್ನು, ಅಡವಿಸೋಮಲಾಪುರದ ಕುರುಬರು ಒಂದು ಡಬ್ಬಿ ಎಣ್ಣೆಯನ್ನು ಒಪ್ಪಿಸಿದರೆ, ಹರಪನಳ್ಳಿಯ ಉಪ್ಪಾರರು ಒಂದು ವಾರ ಮುಂಚಿತವಾಗಿ ಬಂದು ಕೂಲಹಳ್ಳಿಯ ಎಲ್ಲ ದೇವಸ್ಥಾನಗಳಿಗೆ ಸುಣ್ಣ ಬಳಿದು ಹೋಗುತ್ತಾರೆ. ರಥೋತ್ಸವದ ಸಂದರ್ಭದಲ್ಲಿ ಕುರುಬರು ಪಲ್ಲಕ್ಕಿಯನ್ನು ಹೋರುತ್ತಾರೆ. ತಳವಾರ, ಬಾರಿಕ, ಚಲವಾದಿ, ಮಾದಿಗ ಕುಲಗಳ ದೇವದಾಸಿ ಹೆಂಗಸರು ಕಂಕಣ ಕಟ್ಟಿಸಿಕೊಂಡು(ಮಠದ ಪೂಜಾರಿಯಿಂದ) ಓಕಳಿಯಾಡುತ್ತಾರೆ. ಪಲ್ಲಕ್ಕಿಯ ಮುಂದೆ ಇಬ್ಬರು ತಳವಾರ ಮತ್ತು ಮಾದಿಗರು ಪಂಜು ಹಿಡಿದಿರುತ್ತಾರೆ. ಹೀಗೆ ಕೂಲಹಳ್ಳಿಯ ಜಾತ್ರೆ ಮತ್ತು ಕಾರ್ತಿಕೋತ್ಸವಗಳ ಆರಂಭದಿಂದ ಕೊನೆಯವರೆಗೂ ಕೆಳವರ್ಗದವರು ಪ್ರಮುಖವಾಗಿ ಆಚರಣೆಯಲ್ಲಿ ಭಾಗವಹಿಸುತ್ತಾರೆ.

ಕೋಲಶಾಂತಯ್ಯನ ಜಾತ್ರೆಗೆ ಸಂಬಂಧಿಸಿದಂತೆ ಮಡಿವಾಳರು ತಮ್ಮದೇ ಮಡಿಸೀರೆಗಳನ್ನು ನಡೆಮುಡಿಯಾಗಿ ಒಳಮಠದಿಂದ ಸ್ವಾಮಿ ತೇರಿಗೆ ಬರುವವರೆಗೆ ಹಾಸುತ್ತಾರೆ. ಇದಕ್ಕೆ ಪ್ರತಿಫಲವಾಗಿ ಇವರಿಗೆ ತೇರಿನ ಮುಂದೆ ಹಾಕಿದ ಎಡೆಗಳಲ್ಲಿ ಒಂದು ಮತ್ತು ಐದು ರೂ. ಕಾಣಿಕೆ ಕೊಡಲಾಗುತ್ತದೆ. ಉಳಿದವುಗಳನ್ನು ಬಾರಿಕರು, ತಳವಾರರು, ಮಾದಿಗರು, ಚಲುವಾದಿಗಳಿಗೆ ಕೊಡಲಾಗುತ್ತದೆ. ಕೋಲಶಾಂತನಿಗೆ ಸಂಬಂಧಿಸಿದಂತೆ ಲಿಂಗಾಯತ ಜನಾಂಗವೆ ಹೆಚ್ಚಾಗಿ ನಡೆದುಕೊಳ್ಳುವುದರಿಂದ ವಿಶೇಷ ಎನ್ನುವ ಯಾವ ಆಚರಣೆಗಳೂ ಕೆಳವರ್ಗಕ್ಕೆ ಸಂಬಂಧಿಸಿದಂತೆ ಕಂಡುಬರುವುದಿಲ್ಲ. ಇನ್ನು ಕೆಂಪಯ್ಯನ ಜಾತ್ರೆಯೇ ನಡೆಯುವುದಿಲ್ಲ. ಇದು ನಿಂತು ೪೦-೫೦ ವರ್ಷಗಳಾಯಿತೆಂದು ಆ ಊರಿನ ಹಿರಿಯರು ಹೇಳುತ್ತಾರೆ.

ಒಟ್ಟಾರೆ ಈ ಎಲ್ಲ ಆಚರಣೆಗಳನ್ನು ಗಮನಿಸಿದರೆ ಪಂಚಗಣಾಧೀಶ್ವರರ ಪಂಥವು ಕೆಳವರ್ಗಕ್ಕೆ ವಿಶೇಷ ಮಾನ್ಯತೆಯನ್ನು ನೀಡಿದೆ ಎನ್ನುವುದು ಸ್ಪಷ್ಟವಾಗುತ್ತದೆ. ಅದರಲ್ಲೂ ನಾಯಕನಟ್ಟಿ, ಕೊಟ್ಟೂರು, ಕೂಲಹಳ್ಳಿಗಳ ಆಚರಣೆಗಳಲ್ಲಿ ಇವರು ವಿಶೇಷ ಮಹತ್ವವನ್ನು ಪಡೆದುಕೊಂಡಿದ್ದಾರೆ.

೧೨ನೇ ಶತಮಾನದ ನಂತರದ ಕಾಲದಲ್ಲಿ ಕೆಳವರ್ಗವನ್ನು ದೂರವಿಟ್ಟಿದ್ದ ತೋಂಟದ ಸಿದ್ದಲಿಂಗಯತಿಗಳ ಕಾಲಘಟ್ಟಕ್ಕಿಂತ ಭಿನ್ನವಾಗಿ ಈ ಮೌಖಿಕಪರಂಪರೆಗಳು ಕೆಳವರ್ಗದೊಂದಿಗೆ ನಿಕಟ ಸಂಬಂಧವನ್ನು ಹೊಂದಿವೆ. ಪಂಚಗಣಾಧೀಶ್ವರರ ರಥೋತ್ಸವದ ಸಂದರ್ಭದಲ್ಲಿ ರಥಗಳಿಗೆ ಬಾಳೆಹಣ್ಣನ್ನು ಎಸೆಯುವ ಆಚರಣೆ ಇದೆ. ಬಾಳೆಹಣ್ಣು ರಥದ ಕಳಸಕ್ಕೆ ಬಡಿದರೆ ಮನದಾಸೆ ನೆರವೇರುತ್ತದೆ ಎನ್ನುವ ನಂಬಿಕೆ ಜನಸಾಮಾನ್ಯರಲ್ಲಿದೆ. ಹೀಗೆ ಎಸೆದ ಬಾಳೆಹಣ್ಣುಗಳನ್ನು ಪ್ರಸಾದ ಎಂದು ಜನ ಸ್ವೀಕರಿಸುತ್ತಾರೆ. ಒಬ್ಬ ಕೆಳವರ್ಗದ ವ್ಯಕ್ತಿಯು ಎಸೆದ ಬಾಳೆಹಣ್ಣು ಮೇಲ್ವರ್ಗದವನಿಗೆ ದೊರೆತರೆ ಆತನು ಅದನ್ನು ಪ್ರಸಾದ ಎಂದೇ ಸ್ವೀಕರಿಸುತ್ತಾನೆ. ರಥೋತ್ಸವದ ಸಂದರ್ಭದಲ್ಲಿ ಭಾಗವಹಿಸಿದ ವಿವಿಧ ವರ್ಗಗಳು ಬಾಳೆಹಣ್ಣುಗಳನ್ನು ಎಸೆಯುವ ಮೂಲಕ,, ಬೇರೆಯವರು ಎಸೆದ ಹಣ್ಣುಗಳನ್ನು ಪ್ರಸಾದವೆಂದು ಸ್ವೀಕರಿಸುವ ಮೂಲಕ

ಕೆಳವರ್ಗ-ಮೇಲ್ವರ್ಗ ಎನ್ನುವ ಗಡಿ ಮುರಿದು ಎಲ್ಲರೂ ಒಂದೇ ಎನ್ನುವ ಭಾವನೆ ಈ ಆಚರಣೆ ಸೂಚಿಸುತ್ತದೆ.

ಹೀಗೆ ಪಂಚಗಣಾಧೀಶ್ವರರು ಕೆಳವರ್ಗಕ್ಕೆ ತಮ್ಮ ಪಂಥದಲ್ಲಿ ಹಲವಾರು ಆಚರಣೆಗಳಲ್ಲಿ ವಿಶೇಷ ಮಾನ್ಯತೆಯನ್ನು ನೀಡುವ ಮೂಲಕ ಜನಸಮುದಾಯದಲ್ಲಿ ಕುಲೇಳು ಹದಿನೆಂಟು ಜಾತಿಗಳು ಒಂದು ಎನ್ನುವ ಭಾವನೆಯನ್ನು ಮೂಡಿಸಲು ಪ್ರಯತ್ನಿಸಿದ್ದಾರೆ.

## ೬.೮. ತಿಪ್ಪೇಸ್ವಾಮಿಗೆ ಮಾಂಸ ಎಡೆಕೊಡುವುದು

ತಿಪ್ಪೇಸ್ವಾಮಿಗೆ ಸಂಬಂಧಿಸಿದಂತೆ ಇರುವ ವಿಶಿಷ್ಟ ಆಚರಣೆ ಎಂದರೆ ಮಾಂಸ ಎಡೆಕೊಡುವುದು. ತಿಪ್ಪೇಸ್ವಾಮಿ ಜೀವಂತ ಸಮಾಧಿಯಾದ ಸ್ಥಳವೆಂದು ಹೇಳಲಾಗುವ ಹೊರಮಠದಲ್ಲಿ ಬೇಡ, ಕುರುಬ, ಕಾಡುಗೊಲ್ಲ, ಮಾದಿಗ ಮುಂತಾದ ಕೆಳವರ್ಗದ ಜನರು ಹೆಚ್ಚಾಗಿ ನಡೆದುಕೊಳ್ಳುತ್ತಿದ್ದು ಅವರು ತಿಪ್ಪೇಸ್ವಾಮಿಗೆ ಮಾಂಸವನ್ನು ಎಡೆಯಾಗಿ ಕೊಡುತ್ತಾರೆ.

ಒಳಮಠಕೆ ಜಂಗಮುರು ಹೊರಮಠುಕೆ ಭಕ್ತಾರು
ಕುಲವನ್ನೆಲ್ಡೆ ಜಾತಿ ಕಲಿಯಾಲಿ-ಹೊರಮಠುದಾಗೆ
ಮದ್ದೂ-ಮಾಂಸಗಳೇ ಬೇಸಾಲಿ-ಹೊರಮಠುದಲ್ಲಿ
ಅಪ್ಪಯ್ಗೆ ಈ ಎಡಿಯೇ ಏರಾಲಿ
ಒಪ್ಪೀದ ಕುರಿಗಾಳ ಮತ್ತಲ್ಲಿ ಕಡೀರಣ್ಣ
ಹೊರಮಠುದಾಗೆ ನೀವು ಮಾಡೀರಣ್ಣ-ನಾಯಕನ್ನಟ್ಟಿ
ಹೊರಮಠುದಲ್ಲೀಗ ಎಡಿಯೇ ಏರಾಲಿ

(ಅನುಬಂಧ ೨, ತಿಪ್ಪೇಸ್ವಾಮಿ ಕಾವ್ಯ)

ಒಳಮಠವನ್ನು ಜಂಗಮರಿಗೆ ಬಿಟ್ಟು ಹೊರಮಠಕ್ಕೆ ಬರುವಂತೆ ತಿಪ್ಪೇಸ್ವಾಮಿಯನ್ನು ಒತ್ತಾಯಿಸಿದ ಸಂದರ್ಭಗಳಾವುವು ಎನ್ನುವುದನ್ನು ಅರಿತರೆ ಈಗಿರುವ ಮಾಂಸ ಎಡೆಕೊಡುವ ಆಚರಣೆಗೆ ಕಾರಣ ಏನು ಎನ್ನುವುದು ತಿಳಿದಂತಾಗುತ್ತದೆ. ಬೇಟೆ ಸಂಸ್ಕೃತಿಯಿಂದ ಬೇಡ ಜನಾಂಗವನ್ನು ಕೃಷಿ ಸಂಸ್ಕೃತಿಯನ್ನಾಗಿ ಪರಿವರ್ತಿಸುವಲ್ಲಿ ತಿಪ್ಪೇಸ್ವಾಮಿ ಸಾಕಷ್ಟು ಶ್ರಮಿಸಿದವನು. ಅದಕ್ಕಾಗಿ ಏಳು ಕೆರೆಗಳನ್ನು ಕಟ್ಟಿಸಿದವನೆಂದು ಹೇಳಲಾಗುತ್ತದೆ.(ಗಮನಿಸಿ ಅಧ್ಯಾಯ-೫.೧.೩) ಈ ರೀತಿ ಜನಪರ ಕಾರ್ಯಗಳನ್ನು ಮಾಡುತ್ತಾ ಅವರನ್ನು ಶೈವೀಕರಣಗೊಳಿಸಿದನು. ತಿಪ್ಪೇಸ್ವಾಮಿ ಭಕ್ತರಾಗಿ ಶೈವೀಕರಣಗೊಂಡರೂ ತಮ್ಮ ಮೂಲ ಆಹಾರಪದ್ಧತಿಯನ್ನು ಬೇಡಜನಾಂಗ ಒಳಗೊಂಡಂತೆ ಹೊರಮಠಕ್ಕೆ ಮಾಂಸ ಎಡೆಕೊಡುವ, ಯಾವ ಜನಾಂಗಗಳೂ ಪೂರ್ತಿ ಕೈಬಿಡದೆ ಹಾಗೆ ಉಳಿಸಿಕೊಂಡುಬಂದಿವೆ. ತಿಪ್ಪೇಸ್ವಾಮಿಗೆ ಸಂಬಂಧಿಸಿದ ಮೇಲಿನ

ಪದ್ಯಗಳನ್ನು ಗಮನಿಸಿದರೆ ಈತನೂ ಈ ಕೆಳವರ್ಗಗಳ ಆಹಾರಪದ್ಧತಿಯನ್ನು ಒಪ್ಪಿಕೊಂಡಿದ್ದನೆ ಎನ್ನುವುದು ತಿಳಿದುಬರುತ್ತದೆ. ಈ ಭಾಗದಲ್ಲಿ ಹೆಚ್ಚಾಗಿ ವಾಸಿಸುವ ಬೇಡಜನಾಂಗ ಆರ್ಥಿಕವಾಗಿ, ಸಾಮಾಜಿಕವಾಗಿ ಪ್ರಬಲವಾಗಿರುವುದು ಇದಕ್ಕೆ ಕಾರಣವಾಗಿದೆ.

ಕೂಲಹಳ್ಳಿಯ ಹರಿಜನಕೇರಿಯಲ್ಲಿರುವ ಕೊಟ್ಟೂರ ಗುರುಬಸವನ ಮಠ ಇದಕ್ಕೆ ವ್ಯತಿರಿಕ್ತವಾದ ಘಟನೆಗೆ ಸಾಕ್ಷಿಯಾಗಿದೆ. ಅಲ್ಲಿನ ಹರಿಜನರು ಕುರಿ, ಕೋಳಿ ಮಾಂಸ ತಿನ್ನುತ್ತಿದ್ದರು. ಗುರುಬಸವನು ಅಲ್ಲಿ ನೆಲೆಸಿದ ನಂತರದಲ್ಲಿ ಅವರು ಅವುಗಳನ್ನೆಲ್ಲ ಬಿಟ್ಟು ಸಸ್ಯಹಾರ ಜೀವನ ಪದ್ಧತಿಯನ್ನು ಆಚರಿಸುತ್ತಿದ್ದರು ಎಂದು 'ಗೋಣಿಬಸವೇಶ್ವರ ಚರಿತ್ರೆ' ಹೇಳುತ್ತದೆ.(ಈಡಿಗರ ಚಂದ್ರಪ್ಪ, ೧೯೯೦, ೧೦೮-೧೧೦) ಆದರೆ ಈಗ ಅವರು ಮಾಂಸ ತಿನ್ನುವ ಪದ್ಧತಿಯನ್ನು ಮರಳಿ ರೂಢಿಸಿಕೊಂಡಿದ್ದಾರೆ.

ತಿಪ್ಪೇಸ್ವಾಮಿಯ ಜಾತ್ರೆಯ ಸಂದರ್ಭದಲ್ಲಿಯಂತೂ ಮಾಂಸ ಎಡೆಕೊಡುವ ಪದ್ಧತಿ ಬೃಹತ್ ಪ್ರಮಾಣದಲ್ಲಿ ಆಚರಿಸಲಾಗುತ್ತದೆ. ರಥೋತ್ಸವದ ಹಿಂದಿನ ದಿನವೇ ಹೊರಮಠದ ಆವರಣದಲ್ಲಿ ವಿವಿಧ ವರ್ಗದ ಜನರು ಬಂದು ಬೀಡುಬಿಟ್ಟಿರುತ್ತಾರೆ. ತಾವು ಉಳಿದುಕೊಳ್ಳಲು ನಿರ್ಮಿಸಿದ ಬಿಡಾರದಲ್ಲಿಯೇ ತಿಪ್ಪೇಸ್ವಾಮಿಯ ಫೋಟವನ್ನು ಇಟ್ಟು ಪೂಜಿಸುತ್ತಾರೆ. ರಥೋತ್ಸವ ಜರುಗಿದ ನಂತರದಲ್ಲಿ ತಾವು ತಂದಿದ್ದ ಪ್ರಾಣಿಯನ್ನು(ಕುರಿ ಅಥವಾ ಕೋಳಿ) ಕೊಂದು ಅದರ ಮಾಂಸವನ್ನು ಬಿಡಾರದಲ್ಲಿಯೇ ಪ್ರತಿಷ್ಠಾಪಿಸಿದ್ದ ತಿಪ್ಪೇಸ್ವಾಮಿಗೆ ಎಡೆಯಾಗಿ ಸಲ್ಲಿಸಿ ಪೂಜೆಸಲ್ಲಿಸುತ್ತಾರೆ. ನಂತರದಲ್ಲಿ ಹೊರಮಠಕ್ಕೆ ಒಯ್ದು ದೇವರಿಗೆ ಸಲ್ಲಿಸುತ್ತಾರೆ. ಆನಂತರದಲ್ಲಿ ಅವರು ಮಾಂಸ ಊಟ ಮಾಡುತ್ತಾರೆ. ಈ ಸಂದರ್ಭದಲ್ಲಿ ಮಹಾರಾಷ್ಟ್ರ, ಆಂಧ್ರ, ತಮಿಳುನಾಡನ್ನೊಳಗೊಂಡಂತೆ ಕರ್ನಾಟಕದ ನಾನಾ ಪ್ರದೇಶಗಳಿಂದ ಬಂದ ಜೋಗಿಗಳಿಗೆ ಮಾಂಸ ಊಟವನ್ನು ಹಾಕಲಾಗುತ್ತದೆ. ಅಂದು ಹೊರಮಠದ ಆವರಣದಲ್ಲೆಲ್ಲ ಮಾಂಸ, ಭಂಗಿ, ಹೆಂಡದ ವಾಸನೆ ತುಂಬಿರುತ್ತದೆ. ಇದು ಚಿಕ್ಕಲೂರಿನಲ್ಲಿ(ಚಾಮರಾಜನಗರ ಜಿಲ್ಲೆ) ಸಿದ್ದಪ್ಪಾಜಿಯ ಜಾತ್ರೆಯಲ್ಲಿ ನಡೆಯುವ ಪಂತಿಸೇವೆ, ಸಿದ್ದರಸೇವೆಯನ್ನು ಹೋಲುತ್ತದೆ. ಮದ್ಯಕಾಲೀನ ಸಂದರ್ಭದಲ್ಲಿನ ಮೌಖಿಕ ಪರಂಪರೆಗಳ ನಾಯಕರು ಕೆಳವರ್ಗಗಳ ಆಹಾರ ಪದ್ಧತಿಯನ್ನು ಒಪ್ಪಿಕೊಂಡಿದುದರ ಸಂಕೇತವಾಗಿ ಈ ಆಚರಣೆಗಳು ಉಳಿದುಬಂದಿವೆ.

## ೬.೯. ಕೊಬ್ಬರಿ ಸುಡುವ ಆಚರಣೆ

ಪಂಚಗಣಾಧೀಶ್ವರ ಪಂಥದಲ್ಲಿನ ವಿಶಿಷ್ಟ ಆಚರಣೆಗಳಲ್ಲಿ ಕೊಬ್ಬರಿ ಸುಡುವುದು, ಜ್ಯೋತಿ ಆರಾಧಿಸುವುದು ಒಂದು. ಜಾತ್ರೆ ಇಲ್ಲವೆ ಕಾರ್ತಿಕೋತ್ಸವದ ಸಂದರ್ಭದಲ್ಲಿ ನಡೆಯುವ ಈ ಆಚರಣೆ ಶೈವ-ನಾಥಸಿದ್ಧರಿಂದ ಬಂದುದಾಗಿದೆ. ನಾಯಕನಹಟ್ಟಿ, ಕೂಲಹಳ್ಳಿಯಲ್ಲಿ ಜಾತ್ರೆಯ ಸಂದರ್ಭದಲ್ಲಿ ಈ ಆಚರಣೆ ನಡೆದರೆ ಕೊಟ್ಟೂರು, ಅರಸೀಕೆರೆ ಮತ್ತು ಹರಪನಳ್ಳಿಯಲ್ಲಿ ಕಾರ್ತಿಕೋತ್ಸವದ ಸಂದರ್ಭದಲ್ಲಿ ನಡೆಯುತ್ತದೆ.

ನಾಯಕನಟ್ಟಿಯ ರಥೋತ್ಸವದ ದಿನ ಒಳಮಠದ ಹತ್ತಿರ ಹಗಲಿನಲ್ಲಿ ಸಾವಿರಾರು ಜನ ಭಕ್ತರು ಕೊಬ್ಬರಿಯನ್ನು ಸುಡಲು ಹರಕೆ ಹೊತ್ತು ಇಲ್ಲಿಗೆ ಬಂದಿರುತ್ತಾರೆ. ಅದು ತಿಪ್ಪೇಸ್ವಾಮಿಯ ದರ್ಶನವನ್ನು ಮಾಡಿಕೊಂಡು ಅಲ್ಲಿ ಪೂಜೆ ಸಲ್ಲಿಸಿ ಒಳಮಠದ ಮುಂದಿರುವ ನಿರ್ದಿಷ್ಟ ಸ್ಥಳದಲ್ಲಿ(ಅನುಬಂಧ-೭, ಛಾಯಾಚಿತ್ರಗಳು, ಚಿತ್ರ ಸಂ.೨೮) ಕೊಬ್ಬರಿಯನ್ನು ಸುಟ್ಟು ಅದು ಕರಕಲಾದ ನಂತರ ಹಣೆಗೆ ಹಚ್ಚಿಕೊಳ್ಳುವರು. ಕೆಲವರು ಅದನ್ನು ಸಂಗ್ರಹಿಸಿ ತಮ್ಮ ಊರುಗಳಿಗೆ ಒಯ್ದು ದನಕರುಗಳಿಗೂ ಹಚ್ಚುವುದುಂಟು.

ಈ ರೀತಿ ಕೊಬ್ಬರಿ ಸುಡುವುದಕ್ಕೆ ಜನಸಮುದಾಯದಲ್ಲಿ ಪ್ರಚಲಿತವಾಗಿರುವ ಕಾರಣವೆಂದರೆ ತಿಪ್ಪೇಸ್ವಾಮಿ ಫಣಿಯಪ್ಪನೊಂದಿಗೆ ರಾಯದುರ್ಗದಿಂದ ನಾಯಕನಟ್ಟಿಗೆ ಬರುವಾಗ ರಾತ್ರಿ ಕತ್ತಲಾಗಿದ್ದರಿಂದ ದಾರಿ ಮಧ್ಯದಲ್ಲಿ ಬೆಳಕಾಗಿಸಲು ಫಣಿಯಪ್ಪ ಕೊಬ್ಬರಿ ಸುಟ್ಟು ಆ ಬೆಳಕಿನಲ್ಲಿ ನಾಯಕನಟ್ಟಿಗೆ ಕರೆತಂದನೆಂದು ಹೇಳಲಾಗುತ್ತದೆ. ಅದರ ನೆನಪಿಗಾಗಿ ಈ ಆಚರಣೆ ಜಾರಿಯಲ್ಲಿದೆ ಎಂದು ಹೇಳಲಾಗುತ್ತದೆ.

ಕೂಲಹಳ್ಳಿಯಲ್ಲಿ 'ಜಾತ್ರೆಯ ಮೊದಲ ದಿನ ದೇವರ ಮತ್ತು ಊರ 'ಸಿವೋಗ' ಆದ ನಂತರ ಮಾದಿಗರು ಹೊಲಗಳಲ್ಲಿ ಆರಿಸಿ ತಂದ ೩೦-೪೦ ಬಂಡಿ ಕುಳ್ಳುಗಳನ್ನು ಮಠದ ಎದುರು ಒಟ್ಟಿ ಸುಡುತ್ತಾರೆ. ಈ ಬೂದಿಯನ್ನೇ ಇಡೀ ವರ್ಷ ಭಕ್ತರು ಅಂಗಾರವಾಗಿ ಉಪಯೋಗಿಸುತ್ತಾರೆ.'(ಎಸ್.ಎಸ್. ಹಿರೇಮಠ, ೧೯೯೭, ಪು.೭೦) ಇನ್ನು ಗುಮ್ಮಗೋಳದಲ್ಲಿನ ಗೋಣಿಬಸವನ ಜಾತ್ರೆಯ ಸಂದರ್ಭದಲ್ಲಿ ಅಲ್ಲಿಪುರದಲ್ಲಿ ಎರಡು ಗುಡಿಸಲುಗಳನ್ನು ಹಾಕಿ ಸುಡಲಾಗುತ್ತದೆ. ಇದಕ್ಕೆ ಕಾರಣ ಗೋಣಿಬಸವನನ್ನು ಕೊಲ್ಲಲು ಹಿಂಬಾಲಿಸಿ ಶಿವನಯ್ಯ ಬರುವಾಗ, ಅಲ್ಲಿಪುರದ ಹತ್ತಿರ ಬಂದ ಗೋಣಿಬಸವ ಅಲ್ಲಿನ ಅಂಬಿಗರಿಗೆ ನದಿಯ ಆಚೆಯ ದಡವನ್ನು ಸೇರಲು ಸಹಾಯ ಮಾಡಿರೆಂದು ಕೇಳಿಕೊಂಡನು. ಅವರು ಇದನ್ನು ನಿರಾಕರಿಸಿದರು. ಆಗ ಅಲ್ಲಿಯೇ ಇದ್ದ ಒಬ್ಬ ಅಜ್ಜಿಯಿಂದ ಕಂಬಳಿಯನ್ನು ಪಡೆದು ಅದನ್ನೇ ನೀರ ಮೇಲೆ ಹಾಸಿ ಅದರ ಮೇಲೆ ಕುಳಿತು ದಡ ಸೇರಿದನು. ಹಾಗೆ ದಡಸೇರುವಾಗ ಸಹಾಯ ನಿರಾಕರಿಸಿದ ಅಂಬಿಗರ ಗುಡಿಸಲುಗಳು ಸುಟ್ಟು ಹೋಗುವಂತೆ ಹೇಳಿದನು. ಈಗಲೂ ಗುಮ್ಮಗೋಳ ಜಾತ್ರೆ ಸಂದರ್ಭದಲ್ಲಿ ಅಲ್ಲಿಪುರದಲ್ಲಿ ಎರಡು ಗುಡಿಸಲುಗಳನ್ನು ಹಾಕಿ ಸುಡಲಾಗುತ್ತದೆ.

ಕೊಟ್ಟೂರಿನಲ್ಲಿ ರಥೋತ್ಸವದ ಸಂದರ್ಭದಲ್ಲಿ ಕೊಬ್ಬರಿಯನ್ನು ಸುಡದೆ ಕಾರ್ತಿಕೋತ್ಸವದ ಸಂದರ್ಭದಲ್ಲಿ ರಾತ್ರಿ ಕೊಬ್ಬರಿಯನ್ನು ಸುಡಲಾಗುತ್ತದೆ. ಕಾರ್ತಿಕೋತ್ಸವದ ಸಂಜೆ ಹಿರೇಮಠದ ಮುಂದುಗಡೆ, ಲಕ್ಷಾಂತರ ಭಕ್ತಾದಿಗಳು ಕೊಬ್ಬರಿಯನ್ನು ಹಾಕಿ ಸುಡುತ್ತಾರೆ.(ಅನುಬಂಧ-೭, ಛಾಯಾಚಿತ್ರಗಳು ಚಿತ್ರ ಸಂ.೨೭) ಹೀಗೆ ಸುಟ್ಟು ಬೂದಿಯಾದುದನ್ನು ಹಣೆಗೆ ಹಚ್ಚಿ ಕೊಳ್ಳುತ್ತಾರೆ. ಈ ಘಟನೆಗೆ ಸಂಬಂಧಿಸಿದಂತೆ ಯಾವುದೇ ಮಿತ್‌ಗಳು ಕೊಟ್ಟೂರಲ್ಲಿ ಪ್ರಚಲಿತದಲ್ಲಿಲ್ಲ. ಹಾಗೆಯೆ ಅರಸೀಕೆರೆ ಕೋಲಶಾಂತಯ್ಯನ ಒಳಮಠದಲ್ಲಿ ಕೊಬ್ಬರಿಯನ್ನು ಕೊಟ್ಟೂರ ಗುರುಬಸವನ ಕಾರ್ತಿಕೋತ್ಸವದ

ನಂತರದಲ್ಲಿ ೮ ದಿನಗಳಲ್ಲಿ ನಡೆಯುವ ಕಾರ್ತಿಕೋತ್ಸವದಲ್ಲಿ ಸುಡಲಾಗುತ್ತದೆ. ಇದಕ್ಕೆ ಸಂಬಂಧಿಸಿದ ಯಾವುದೇ ಕತೆಗಳು ಇಲ್ಲಿಯೂ ಇಲ್ಲ. ಹರಪನಹಳ್ಳಿಯಲ್ಲಿ ಕೆಂಪಯ್ಯನಿಗೆ ಸಂಬಂಧಿಸಿದಂತೆ ನೂರಾರು ದೀಪಗಳನ್ನು ಕಾರ್ತಿಕೋತ್ಸವದ ಸಂದರ್ಭದಲ್ಲಿ ಹಚ್ಚಲಾಗುತ್ತದೆ.

ಕೊಬ್ಬರಿಸುಡುವ ಮೂಲಕ ಇಲ್ಲವೆ ಇನ್ನಿತರ ವಸ್ತುಗಳನ್ನು ಸುಡುವ ಮೂಲಕ ಜ್ಯೋತಿ ಆರಾಧಿಸುವುದು ಸಿದ್ಧಪಂಥದ ಲಕ್ಷಣವಾಗಿದೆ. ಮತ್ತು ಈ ಎಲ್ಲ ಆಚರಣೆಗಳು ಹುಣ್ಣಿಮೆಯ ಸಮೀಪದಲ್ಲಿಯೇ ನಡೆಯುವುದನ್ನು ಗಮನಿಸಿದರೆ ಹುಣ್ಣಿಮೆಯ ಬೆಳಕಿಗೂ, ಈ ಜ್ಯೋತಿ ಆರಾಧನೆಗೂ ಸಂಬಂಧವಿದೆ ಎನ್ನಿಸುತ್ತದೆ. ಬೌದ್ಧಸಿದ್ಧರು ಹುಣ್ಣಿಮೆಯ ಬೆಳಕನ್ನು ಜ್ಞಾನ ಅಥವಾ ಸಿದ್ಧಿಗೆ ಸಂಕೇತವಾಗಿ ಬಳಸುತ್ತಾರೆ. ಗೌತಮ ಬುದ್ಧನಿಗೆ ಹುಣ್ಣಿಮೆಯ ದಿನವೇ ಜ್ಞಾನೋದಯವಾಗಿದ್ದರಿಂದ ಆ ದಿನವನ್ನು ಅವರು ಪವಿತ್ರವೆಂದು, ಜ್ಞಾನದ ಸಂಕೇತವೆಂದೂ ಭಾವಿಸುತ್ತಾರೆ. ಶೈವ-ನಾಥಪಂಥದ ಸಿದ್ಧರ ಮೂಲಕ ಪಂಚಗಣಾಧೀಶ್ವರರನ್ನು ಪ್ರಭಾವಿಸಿದೆ. ಪಂಚಗಣಾಧೀಶ್ವರರ ರಥೋತ್ಸವದ ಸಂದರ್ಭದಲ್ಲಿ(ಹಗಲಿನಲ್ಲಿ) ಉರಿಯುತ್ತಿರುವ ಪಂಜುಗಳನ್ನು ಹಿಡಿದಿರುತ್ತಾರೆ. ನಾಯಕನಟ್ಟಿಯಲ್ಲಂತೂ ಪಂಜುಗಳನ್ನು ಹಿಡಿಯುವ ಮಡಿವಾಳರ ಐದು ಮಂದಿ ಅಣ್ಣತಮ್ಮಂದಿರು ರಥೋತ್ಸವದ ಸಂದರ್ಭದಲ್ಲಿ ಮೆರವಣಿಗೆಯಲ್ಲಿ ರಥದ ಮುಂದುಗಡೆ ನಗಾರಿ ನಂದಿಕೋಲು ಮತ್ತು ಬಸವನ ಮುಂದುಗಡೆ ಒಂದೊಂದು ಪಂಜುಗಳನ್ನು ಹಿಡಿದಿರುತ್ತಾರೆ. ಖಾಸಾಪಂಜು(ಇದು ವಾರೋತ್ಸವದ ಸಂದರ್ಭದಲ್ಲಿ ಹಿಡಿಯಲಾಗುತ್ತದೆ) ಮತ್ತು ಉಚ್ಛಾಯದ ಪಂಜು(ಇದು ೨೦-೨೫ ಅಡಿ ಇರುತ್ತದೆ. ಉಳಿದವೆಲ್ಲ ೫-೬ ಅಡಿ ಇರುತ್ತವೆ)ಗಳನ್ನು ಸಹ ಈ ಸಂದರ್ಭದಲ್ಲಿ ಹಿಡಿಯಲಾಗುತ್ತದೆ.

ಅಗ್ನಿಯನ್ನು ಆರಾಧಿಸುವ ವೈಧಿಕ ಧರ್ಮವು ವಿಜಯನಗರ ಸಾಮ್ರಾಜ್ಯದಲ್ಲಿ ಪ್ರಬಲವಾಗಿತ್ತಾದರೂ ಪಂಚಗಣಾಧೀಶ್ವರರಿಗೆ ಸಂಬಂಧಿಸಿದಂತೆ ಕೊಬ್ಬರಿಸುಡುವ ಆಚರಣೆ ವೈಧಿಕ ಮೂಲದಿಂದ ಬಂದಿರದೆ, ಬೌದ್ಧ ಸಿದ್ಧ ಮೂಲದಿಂದ ಶೈವ-ನಾಥರ ಪರಂಪರೆಯಲ್ಲಿ ಕಂಡುಬಂದು ಪಂಚಗಣಾಧೀಶ್ವರ ಪಂಥವನ್ನು ಪ್ರಭಾವಿಸಿದೆ ಎಂದು ತೀರ್ಮಾನಿಸಬೇಕಾಗುತ್ತದೆ. ಏಕೆಂದರೆ ಪಂಚಗಣಾಧೀಶ್ವರರ ಜೀವನದಲ್ಲಿ ಕೆಳವರ್ಗಗಳ ಪಾಲ್ಗೊಳ್ಳುವಿಕೆ, ಅದರಲ್ಲೂ ಬೇಡ-ಕುರುಬ ಜನಾಂಗಗಳ ಭಾಗವಹಿಸುವಿಕೆ ಪ್ರಮುಖವಾಗಿದ್ದು, ಇವರು ಪ್ರಾಚೀನ ಕಾಲದಿಂದಲೂ ಶೈವ-ನಾಥ ಪರಂಪರೆಗೆ ನಡೆದುಕೊಂಡು ಬಂದಿದ್ದಾರೆ. ಅಲ್ಲದೆ ಪಂಚಗಣಾಧೀಶ್ವರರ ಜೀವನ-ಪವಾಡಗಳನ್ನು ಗಮನಿಸಿದರೆ ಇವರು ಶೈವ-ನಾಥಸಿದ್ಧರೆಂಬುದು ಸ್ಪಷ್ಟವಾಗಿದೆ. ಹಾಗಾಗಿ ಜ್ಯೋತಿ ಆರಾಧನೆ ವೈಧಿಕರ ಅನುಕರಣೆಯಾಗಿರದೆ ಶೈವ-ನಾಥಸಿದ್ಧರ ಅನುಕರಣೆಯಾಗಿದೆ.

## ೬.೧೦. ತೆಪ್ಪೋತ್ಸವ

ತಿಪ್ಪೇಸ್ವಾಮಿ ಉತ್ಸವಗಳಲ್ಲಿ ತೆಪ್ಪೋತ್ಸವ ಕೂಡ ಒಂದು. ದೊಡ್ಡಕೆರೆ, ಚಿಕ್ಕಕೆರೆಗಳು ತುಂಬಿ ಕೋಡಿಬಿದ್ದಾಗ ಈ ಉತ್ಸವವನ್ನು ಆಚರಿಸಲಾಗುತ್ತದೆ. ಕಾರ್ತಿಕಮಾಸದಲ್ಲಿ ನಡೆಯುವ ಈ ಆಚರಣೆ

೮-೧೦ ವರ್ಷಗಳಿಗೊಮ್ಮೆ ನಡೆಯುತ್ತದೆ. 'ಈ ಭಾಗದಲ್ಲಿ ಮಳೆ ಬಾರದಿದ್ದಾಗ ಶ್ರಾವಣ ಮಾಸದಲ್ಲಿ ಗ್ರಾಮದ ಅಧಿದೈವಕ್ಕೆ ಪೂಜೆ ಸಲ್ಲಿಸಿ ಮಳೆಗಾಗಿ ಪ್ರಾರ್ಥಿಸಿಕೊಳ್ಳುವ ಪದ್ಧತಿಯು 'ಕೆರೆಗಂಗಮ್ಮನ' ಮಾಡುವ ಮೂಲಕ 'ಕೋಡಿ ಬಸವಣ್ಣನ ಪರವು', ಏಕಾಂತ ಸ್ವಾಮಿಯ ಆರಾಧನೆ, 'ಆಲದ ಮರಕ್ಕೆ ಅಭಿಷೇಕ' ಹೀಗೆ ಹಲವಾರು ರೀತಿಯಿಂದ ಪೂಜೆ ಸಲ್ಲಿಸಲಾಗುವುದು. ಇದಾವುದಕ್ಕೂ ವರುಣದೇವ ಮಣಿಯದಿದ್ದಾಗ ಉಪಯೋಗಿಸುವ ಕೊನೆಯ ಅಸ್ತ್ರ 'ನಗಾರಿಯ ಮೇಲೆ ಕೈ ಹಾಕುವುದು.' ೩೬ ಹಳ್ಳಿಯ ಪ್ರಮುಖರು ಸೇರಿ ಒಳಮಠದಲ್ಲಿರುವ ನಗಾರಿಯ ಪೂಜೆ ಮಾಡಿ, ಶ್ರೀ ಸ್ವಾಮಿಯಲ್ಲಿ ಭಕ್ತಿಪೂರ್ವಕವಾಗಿ ಪೂಜೆ ಸಲ್ಲಿಸಿ, ಮಳೆ ಬಂದು ಕೆರೆ ಕೋಡಿ ಬಿದ್ದರೆ ನಿನಗೆ 'ತೆಪ್ಪೋತ್ಸವ' ಮಾಡಿಸುತ್ತೇವೆಂಬ ಸಂಕಲ್ಪ ಹೊಂದಿ ನಗಾರಿಯ ಮೇಲೆ ಕೈ ಹಾಕುವ ಪದ್ಧತಿ'(ಚಂದ್ರಶೇಖರ್ .ವಿ ದಾವಣಗೆರೆ, ೨೦೦೧, ಪು.೬೫) ಇದೆ.

ಈ ಉತ್ಸವದ ತೆಪ್ಪಕ್ಕಾಗಿ ಅತ್ತಿ ಮತ್ತು ಬೂರುಗದ ಮರಗಳನ್ನು ಬಳಸುತ್ತಾರೆ. '೪ ನೆಲೆಯಲ್ಲಿ ನಿರ್ಮಿತವಾಗುವ ತೆಪ್ಪದ ಪ್ರತಿಯೊಂದು ನೆಲೆಯೂ ೨೧ ಅಡಿಯ ೮ ಮರದ ದಿಮ್ಮಿಗಳನ್ನು ಬಳಸಿ, ಒಟ್ಟು ೩೨ ಅಡಿ ಉದ್ದ ಚೌಕಾಕಾರದಲ್ಲಿ ಸುಮಾರು ಐದು ಅಡಿ ಮೇಲ್ಪಟ್ಟು ಎತ್ತರದಲ್ಲಿ ನಿರ್ಮಿಸುವ, ಪ್ರತಿಯೊಂದು ನೆಲೆಯ ಮಧ್ಯದಲ್ಲಿ ಸುಮಾರು ಒಂದು ಅಡಿಯ ಅಂತರವಿದ್ದು, ಅದರ ಮಧ್ಯದಲ್ಲಿ ಬಾಳೆಯ ದಿಂಡುಗಳನ್ನು ಚಾಪೆಯಂತೆ ಹೊಂದಿಸಿ ಕಟ್ಟಲಾಗುತ್ತದೆ.(ಅನುಬಂಧ-೭, ಛಾಯಾಚಿತ್ರಗಳು, ಚಿತ್ರ, ಸಂ.೨೫) ಈ ನಾಲ್ಕು ನೆಲೆಯ ಮೇಲಿನ ಮಧ್ಯಭಾಗದಲ್ಲಿ ಸುಮಾರು ೨.೫. ಅಡಿಯಿಂದ ೩ ಅಡಿಯ ಸುಂದರವಾದ ಮಂಟಪವನ್ನು ನಿರ್ಮಿಸಿ ಆ ಮಂಟಪದ ಮೇಲೆ ಕಳಸಾರೋಹಣ ಮಾಡಲಾಗುತ್ತದೆ.

ಕಾರ್ತಿಕ ಮಾಸದಲ್ಲಿ ಚಿಕ್ಕ ಕಾರ್ತಿಕೋತ್ಸವ ಮುಗಿದ ನಂತರ ತೆಪ್ಪೋತ್ಸವವನ್ನು ಆಚರಿಸುತ್ತಾರೆ. ಅಂದು ಉತ್ಸವ ಮೂರ್ತಿಯನ್ನು ಹಿರೇಕೆರೆಗೆ ಪಲ್ಲಕ್ಕಿಯಲ್ಲಿ ಕೊಂಡೊಯ್ಯುತ್ತಾರೆ. ಆ ಸಂದರ್ಭದಲ್ಲಿ ಗೊಂಚಿಗಾರ್(ಗಾಣಿಗ ಗೌಡರು) ಮನೆಯಿಂದ ಹಾಲು ತುಪ್ಪದ ಮೀಸಲು, ಗಂಗಾದೇವಿ ಪೂಜೆ ಸಾಮಾನು ಗಳನ್ನು ಮುತ್ತೈದೆಯರು ಒಂದೆತ್ತಿನ ಮೂಲಕ ಸ್ವಾಮಿಯ ಜೊತೆಯಲ್ಲಿ ಕೊಂಡೊಯ್ಯುತ್ತಾರೆ. ತೆಪ್ಪೋತ್ಸವಕ್ಕೆ ಕುರಿಮೇಕೆಯನ್ನೂ ಜೋಗಿಹಟ್ಟಿ ಗೌಡರು ಕೊಡುತ್ತಾರೆ. ಅವರ ಮುಖಂಡತ್ವದಲ್ಲಿ ಬಲಿಸೇವೆ ನಡೆಯುತ್ತದೆ.

ಹಿರಿಕೆರೆ ದಡದ ಮೇಲೆ ಉತ್ಸವಮೂರ್ತಿಯನ್ನು ತಂದು ಗದ್ದುಗೆ ಮೇಲೆ ಕೂರಿಸಲಾಗುತ್ತದೆ. ಅಲ್ಲಿ ಬಲಿ ಅನ್ನವನ್ನು ತಯಾರಿಸಲಾಗುತ್ತದೆ. ಹಿರೇಕೆರೆಗೆ ಇರುವ ಎರಡು ಜೋಡಿ ಬಸವಗಳಿಗೆ ಗೌಡರ ಮನೆ ಹೆಂಗಸರು ಪೂಜೆಯನ್ನು ಸಲ್ಲಿಸುತ್ತಾರೆ. ದಡದ ಮಧ್ಯಭಾಗದಲ್ಲಿರುವ ಜೋಡುಬಸವನಿಗೂ ಪೂಜೆಯನ್ನು ಸಲ್ಲಿಸಲಾಗುತ್ತದೆ. ಸುಮಾರು ಮೂರುಗಂಟೆ ವೇಳೆಗೆ ಬಲಿ ಅನ್ನ, ಕುರಿಮೇಕೆಯನ್ನು ವಾದ್ಯಗಳೊಂದಿಗೆ ಉತ್ಸವಮೂರ್ತಿಯ ಹತ್ತಿರದಿಂದ ಕೆರೆಯ ಹಿಂಭಾಗದಲ್ಲಿರುವ ತೆಪ್ಪದ ಹತ್ತಿರಕ್ಕೆ

ಕೊಂಡೊಯ್ಯುತ್ತಾರೆ. ಸುಮಾರು ೧೫೦-೨೦೦ ಜನರು ನಿಲ್ಲುವಂತಹ ದೊಡ್ಡ ತೆಪ್ಪದಲ್ಲಿ ಉತ್ಸವಮೂರ್ತಿಯನ್ನಿಟ್ಟು ಬಲಿ ಅನ್ನ, ಕುರಿ ಮೇಕೆ ಕಟ್ಟುತ್ತಾರೆ. ತೆಪ್ಪದಲ್ಲಿ ೧೨ ಜನ ಆಯಗಾರರು, ಪೂಜಾರಿಗಳು, ಧರ್ಮದರ್ಶಿಗಳು ಭಾಗವಹಿಸುತ್ತಾರೆ. ಕೆರೆಯ ಹಿಂಭಾಗದಿಂದ ತೆಪ್ಪ ನೀರಿನಲ್ಲಿ ಕೆರೆ ಏರಿಯ ಹತ್ತಿರ ಬರುವ ಹೊತ್ತಿಗಾಗಲೇ ಸಂಜೆಯಾಗಿರುತ್ತದೆ. ನಂತರ ಊರಿನಲ್ಲಿ ನಡೆಯುವ ಲಕ್ಷದೀಪೋತ್ಸವದಲ್ಲಿ ಜನರು ಪಾಲ್ಗೊಳ್ಳುತ್ತಾರೆ.

ತಿಪ್ಪೇಸ್ವಾಮಿಯ ಜೀವನದಲ್ಲಿ ನೀರಿಗೆ ವಿಶಿಷ್ಟವಾದ ಸ್ಥಾನವಿದೆ. ಆತ್ಮ ಬಿಳಿನೀರಿನ ಚಿಲುಮೆ ಉಕ್ಕಿಸುವುದಾಗಲಿ, ನಿಡುಗಲ್ಲು ದೊರೆಗೆ ಕೆರೆ ಕಟ್ಟಲು ಸಹಾಯ ಮಾಡುವುದಾಗಲಿ, ಏಳು ಕೆರೆಗಳನ್ನು ಕಟ್ಟುವುದಾಗಲಿ, ತುರುನೂರು ಹಳ್ಳ ತಿರುವಿ ನಾಯಕನಟ್ಟಿ ಕೆರೆಗೆ ನೀರುಬರುವಂತೆ ಮಾಡುವುದಾಗಲಿ, ನೀರಿನ ಮಹತ್ವದ ಬಗೆಗೆ ಈತ ಹೊಂದಿದ ಅರಿವನ್ನು ಸೂಚಿಸುತ್ತದೆ. ತೆಪ್ಪೋತ್ಸವವು ಕೂಡ ಮಳೆ ಬರದಿದ್ದಾಗ ಜನರು ಬೇಡಿಕೊಂಡು ಆ ಆಸೆ ಈಡೇರಿದರೆ ನಡೆಸುವ ಉತ್ಸವವಾಗಿದೆ. ತಿಪ್ಪೇಸ್ವಾಮಿಗೆ ಸಂಬಂಧಿಸಿದ ಈ ಆಚರಣೆ ಆತನು ಕೆರೆ ಬಾವಿಗಳ ಬಗೆಗೆ ಮಳೆ-ಬೆಳೆಯ ಬಗೆಗೆ ಹೊಂದಿರುವ ಕಾಳಜಿಯ ದ್ಯೋತಕವಾಗಿದೆ.

## ೬.೧೧. ಗೋಣಿಬಸವನ ಜಾತ್ರೆಯಲ್ಲಿ ಮದುವೆ ಆಚರಣೆಗಳು

ಗೋಣಿಬಸವನ ಜಾತ್ರೆಯಲ್ಲಿ ಮಠದ ಪೂಜಾರಿಯನ್ನು ಮದುಮಗನನ್ನು ಮಾಡುವುದು ವಿಶೇಷವಾದ ಆಚರಣೆಯಾಗಿದೆ. ಜಾತ್ರೆಗಿಂತ ೧೧ ದಿನ ಮುಂಚಿತವಾಗಿ ಕಂಕಣವನ್ನು ಕಟ್ಟಲಾಗುತ್ತದೆ. ಕಂಕಣ ಕಟ್ಟಿಸಿಕೊಂಡು ನಂತರದಿಂದ ಪೂಜಾರಿ ಮದುಮಗ ಎನಿಸಿಕೊಳ್ಳುತ್ತಾನೆ. ಹೀಗೆ ಕಂಕಣ ಕಟ್ಟಿಸಿಕೊಂಡ ಪೂಜಾರಿಗೆ ಮದುವೆಯಾಗಿರಬೇಕು. ಮದುವೆಯಾಗದ ಪೂಜಾರಿಯನ್ನು ಮದುಮಗನನ್ನಾಗಿ ಮಾಡುವುದಿಲ್ಲ. 'ಮದುವೆಯಾದ ಪೂಜಾರಿಗೆ 'ಮುತ್ತೈದೆ ಗಂಡುಮಗ', ಆಗದವರಿಗೆ "ಕೋರುಹುಡುಗರು" ಎನ್ನಲಾಗುತ್ತದೆ.' (ಎಸ್.ಎಸ್.ಹಿರೇಮಠ, ೧೯೯೭, ಪು.೬೮) ಮದುಮಗನಾದ ಪೂಜಾರಿ ಲಂಗೋಟಿಯನ್ನು ಮಾತ್ರ ಹಾಕಿಕೊಂಡು ಕಂಬಳಿ ಮೈಮೇಲೆ ಧರಿಸಿಕೊಂಡಿರಬೇಕು. ಈ ೧೧ ದಿನ ಯಾವುದೇ ಕೆಲಸ ಕಾರ್ಯಗಳನ್ನು ಮಾಡದೆ ಪೂಜೆಯನ್ನು ಮಾಡಿಕೊಂಡು ಒಂದು ಹೊತ್ತು ಊಟ ಮಾಡಿ ಮಠದಲ್ಲಿಯೇ ವಾಸ ಮಾಡಿಕೊಂಡಿರಬೇಕು. ರಥೋತ್ಸವದ ದಿನ ಮೆರವಣಿಗೆಯಲ್ಲಿ ಹೋಗಿ ರಥದ ಚಕ್ರಗಳಿಗೆ ಪೂಜೆ ಮಾಡಿ ಪಲ್ಲಕ್ಕಿ ಸಮೇತ ರಥವನ್ನು ಮೂರು ಬಾರಿ ಪ್ರದಕ್ಷಿಣೆ ಹಾಕಿ ಪಲ್ಲಕ್ಕಿಯಲ್ಲಿದ್ದಂತ ಕೊಟ್ಟೂರೇಶ್ವರ ಉತ್ಸವಮೂರ್ತಿಯನ್ನು ರಥದಲ್ಲಿ ಕುಳ್ಳಿರಿಸಿದ ನಂತರ ರಥವು ಮುಂದೆ ಸಾಗುತ್ತದೆ.

ಈ ರಥೋತ್ಸವವು ಗೋಣಿಬಸವನ ಹೆಸರಿನಲ್ಲಿಯೇ ನಡೆದರೂ ರಥದಲ್ಲಿ ಕುಳ್ಳಿರಿಸುವ ಮೂರ್ತಿ ಮಾತ್ರ ಕೊಟ್ಟೂರ ಗುರುಬಸವನದು. ಇದಕ್ಕೆ ಸಂಬಂಧಿಸಿದಂತೆ ಗೋಣಿಬಸವೇಶ್ವರ ಚರಿತ್ರೆ ವಿವರಿಸುತ್ತದೆ.

ಗೋಣಿಬಸವನಿಗೆ ತನ್ನ ರಥೋತ್ಸವವನ್ನು ನಡೆಸಬೇಕೆಂಬ ಆಸೆ ಉಂಟಾಗಿ ಪಂಚಗಣಾಧೀಶ್ವರರ ಒಪ್ಪಿಗೆ ಪಡೆಯಲು ಮೊದಲು ತನ್ನ ತಂದೆಯನ್ನು ಕೇಳುತ್ತಾನೆ. ಈತನ ತಂದೆಯಾದ ಮದ್ದಾನಸ್ವಾಮಿ ರಥೋತ್ಸವಕ್ಕೆ ಒಪ್ಪಿಗೆ ನೀಡುತ್ತಾನೆ. ನಂತರ ಗೋಣಿಬಸವನು ಕೋಲಶಾಂತನ ಬಳಿಗೆ ಹೋಗಿ(ಅರಸೀಕೆರೆ) ಆತನ ಅಪ್ಪಣೆ ಪಡೆದು, ಹರಪನಳ್ಳಿಗೆ ಹೋಗಿ ಕೆಂಪಯ್ಯನ ಅಪ್ಪಣೆಯನ್ನು ಪಡೆದು ನಾಯಕನಟ್ಟಿಗೆ ಹೋಗಿ ತಿಪ್ಪೇಸ್ವಾಮಿಯ ಅಪ್ಪಣೆಯನ್ನು ಪಡೆಯುತ್ತಾನೆ. ಕೊನೆಗೆ ಕೊಟ್ಟೂರಿಗೆ ಬಂದು ಗುರುಬಸವನ ಅಪ್ಪಣೆಯನ್ನು ಪಡೆಯಲು ಹೋದರೆ ಆತನು ಇರುವುದಿಲ್ಲ. ಗೋಣಿಬಸವನು ರಾತ್ರಿಯೆಲ್ಲ ಮಠದಲ್ಲಿ ಸೇವೆ ಮಾಡಿ ಕೊಟ್ಟೂರ ಗುರುಬಸವನ ಅಪ್ಪಣೆ ಪಡೆಯುತ್ತಾನೆ. ಅಲ್ಲದೆ ಬೆಂಗಾವಲಿಗೆ ಕೂಲಹಳ್ಳಿಗೆ ಗುರುಬಸವನನ್ನು ಕರೆದುಕೊಂಡು ಹೋಗಲು ಇಚ್ಛಿಸುತ್ತಾನೆ. ಈತನ ಭಕ್ತಿಗೆ ಮೆಚ್ಚಿದ ಗುರುಬಸವನು 'ಕೂಲಹಳ್ಳಿ ಕ್ಷೇತ್ರದಲ್ಲಿ ಮಾತ್ರವೇ ಅಲ್ಲ, ನೀನು ಯಾವ ಯಾವ ಊರುಗಳಲ್ಲಿ ದೇವಸ್ಥಾನಗಳನ್ನು ನಿರ್ಮಾಣ ಮಾಡಿರುವೆಯೋ ಅಲ್ಲಿಯೂ ಸಹ ನಾನು ನಿನಗೆ ಬೆಂಬಲಿಗನಾಗಿಯೂ ಮತ್ತು ಯಾವ ಕ್ಷೇತ್ರದಲ್ಲಿ ನಿನ್ನ ರಥೋತ್ಸವವು ನೆರವೇರುವುದೋ ನಿನ್ನ ರಥವನ್ನು ಏರುವ ಕರ್ತವ್ಯವು ನನ್ನನ್ನೇ ಕೂಡಿರುತ್ತದೆ'(ಈಡಿಗರ ಚಂದ್ರಪ್ಪ, ೧೯೯೦, ಪು.೧೦೨) ಎಂದು ಹೇಳುತ್ತಾನೆ. ಆಗಿನಿಂದ ಗೋಣಿಬಸವನ ಮಠಗಳು ಗೋಣಿಬಸವನದಾದರು ಅದರಲ್ಲಿರುವ ದೇವರು ಕೊಟ್ಟೂರ ಗುರುಬಸವನೆಂದು ಹೇಳಲಾಗುತ್ತದೆ. ಮತ್ತು ಜಾತ್ರೆಯಲ್ಲಿಯೂ ಗುರುಬಸವನ ಮೂರ್ತಿಯನ್ನು ರಥದಲ್ಲಿ ಕುಳ್ಳಿರಿಸಿ ತೇರನ್ನು ಎಳೆಯಲಾಗುತ್ತದೆ.

ರಥೋತ್ಸವ ಜರುಗಿದ ನಂತರದ ದಿನ ಓಕಳಿಯಾಡಲಾಗುತ್ತದೆ. ಅಂದು ಹರಿಜನ ಕೇರಿಯಲ್ಲಿರುವ ಕೊಟ್ಟೂರ ಗುರುಬಸವನ ಮಠದ(ಅನುಬಂಧ-೭, ಛಾಯಾಚಿತ್ರಗಳು ಚಿತ್ರ, ಸಂ.೧೩) ಹತ್ತಿರ ಕಂಕಣ ಕಟ್ಟಿಸಿಕೊಂಡ ಊರಿನ ಉಣಕಾರ, ಮಡಿವಾಳ, ಕುರುಬ, ಬೇಡ ಇನ್ನಿತರ ಬಾಬುದಾರರು ದೇವದಾಸಿಯರಿಗೆ ಬಣ್ಣ ಚೆಲ್ಲುತ್ತಾರೆ. ಮೊದಲಿಗೆ ಮದುಮಗನಾದ ಪೂಜಾರಿಯು ದೇವದಾಸಿಯರಿಗೆ ಬಣ್ಣ ಚೆಲ್ಲುವುದು ಸಂಪ್ರದಾಯ. ಅಂದು ಆರಂಭದಲ್ಲಿ ಮದುಮಗನು ಮದ್ದಾನಸ್ವಾಮಿ ಮಠ, ಗೋಣಿಬಸವನ ಮಠ, ಕೊಟ್ಟೂರ ಗುರುಬಸವನ ಮಠಗಳಿಗೆ ಪೂಜೆ ಸಲ್ಲಿಸುತ್ತಾನೆ. ಓಕಳಿಯಾಡಿದನಂತರ ಮಜ್ಜನ ಬಾವಿಯಲ್ಲಿ ಸ್ನಾನ ಮಾಡಿ ಕಂಕಣ ಬಿಚ್ಚಿ ಹೊಸ ಬಟ್ಟೆಗಳನ್ನು ಹಾಕಿಕೊಳ್ಳುತ್ತಾನೆ. ನಂತರ ಬಾಬುದಾರರು ಮತ್ತು ಸೇವಕರು ಹಣವನ್ನು ಪಡೆದು ತಮ್ಮ ಊರುಗಳಿಗೆ ಮರಳುತ್ತಾರೆ.

ಜಾತ್ರೆಯಲ್ಲಿ ಪೂಜಾರಿಯು ಮದುಮಗನಾಗುವ ಆಚರಣೆ ಏನನ್ನು ಸೂಚಿಸುತ್ತಿದೆ? ಸನ್ಯಾಸಿಯಾಗಿ ತಿರುಗುತ್ತಿದ್ದ ಸಂತನೊಬ್ಬ(ಮದ್ದಾನಸ್ವಾಮಿ) ಸಂಸಾರಕ್ಕೆ ತಿರುಗಿದುದರ ಸಂಕೇತವೇ? ಅಥವಾ ಮದ್ದಾನಸ್ವಾಮಿ ತನ್ನದಲ್ಲದ ತಪ್ಪಿಗಾಗಿ ಕನಕವ್ವನನ್ನು ಮದುವೆಯಾಗಿ ಕೂಲಹಳ್ಳಿಯಲ್ಲಿ ಉಳಿದ ಬಗ್ಗೆ ಮತ್ತು ಇದೇ ಕಾರಣವಾಗಿ ಪಂಚಗಣಾಧೀಶ್ವರರು ಇಲ್ಲಿಂದ ಚದುರಿದ ಸಂಕೇತವೇ? ಏಕೆಂದರೆ ಜಾತ್ರೆ ಸಂದರ್ಭದಲ್ಲಿ ಪೂಜಾರಿ, ಮದುಮಗನಾದ ದಿನದಿಂದ ೧೧ ದಿನಗಳವರೆಗೆ ಪಂಚಗಣಾಧೀಶ್ವರರು ಕೂಲಹಳ್ಳಿಯಲ್ಲಿ ಕಾಣಿಸಿಕೊಳ್ಳುತ್ತಾರೆ ಎಂದು ಜನತೆ ನಂಬಿದ್ದಾರೆ.

ಮದ್ದಾನಸ್ವಾಮಿಯ ಮದುವೆಗೆ ಸಂಬಂಧಿಸಿದಂತೆ ಮೇಲಿನ ಅಂಶಗಳಿಗಿಂತ ಮುಖ್ಯವಾಗಿ ಗಮನಿಸಬೇಕಾದುದು ಈತ ಕೊಡೇಕಲ್ ಪರಂಪರೆಯವನೇಕಿರಬಾರದು? ಎನ್ನುವುದು. ಏಕೆಂದರೆ ಕೊಡೇಕಲ್ ಪರಂಪರೆಯಲ್ಲಿ ಕೊಡೇಕಲ್ ಬಸವಣ್ಣ ಎರಡು ಮದುವೆಯಾಗುತ್ತಾನೆ.(ಕಾಶಮ್ಮ ಮತ್ತು ನೀಲಾಲೋಚನೆ) ಆರೂಢ ಸಂಗಮನಿಂದ ಆರೂಢ ದೀಕ್ಷೆಯನ್ನು ಹೊಂದಿ, ಸನ್ಯಾಸಿಯಾಗದೆ ಮದುವೆಯಾಗಿ ಮಕ್ಕಳನ್ನು ಪಡೆದು ಜನತೆಯ ಮಧ್ಯ ಬದುಕಿದ್ದಾನೆ. ಮದ್ದಾನಸ್ವಾಮಿಯು ಕೊಡೇಕಲ್ ಪರಂಪರೆಯಿಂದ ಪ್ರಭಾವಿತನಾದವನಾಗಿದ್ದಾನೆ. ಹಾಗಾಗಿ ಮದ್ದಾನಸ್ವಾಮಿ ಕನಕವ್ವನನ್ನು ಮದುವೆಯಾದದ್ದು ಆಕಸ್ಮಿಕ ಘಟನೆಯಲ್ಲ, ಅದೊಂದು ಉದ್ದೇಶಪೂರ್ವಕವಾಗಿ ನಡೆದುದಾಗಿದೆ. ಮದ್ದಾನಸ್ವಾಮಿಯದು ಆಕಸ್ಮಿಕ ಮದುವೆಯಾಗಿದ್ದರೆ ಅಥವಾ ಈತ ತಪ್ಪು ಮಾಡಿದ ('ಮದ್ದಾನಸ್ವಾಮಿ ಹುದಲಿಗೆ ಬಿದ್ದ' ಎಂದು ನಾಲ್ವರು ಗಣಾಧೀಶ್ವರರು ಅಪಹಾಸ್ಯ ಮಾಡುವ ಚಿತ್ರಣ ಗೋಣಿಬಸವ ಕಾವ್ಯದಲ್ಲಿ ಚಿತ್ರಿತವಾಗಿದೆ) ಎನ್ನುವುದಾದರೆ ಅದೇ ತಪ್ಪನ್ನು ಗೋಣಿಬಸವ ಮಾಡುತ್ತಿರಲಿಲ್ಲ. ಗೋಣಿ ಬಸವ ಅಡವಿ ಸೋಮಲಾಪುರದ ವಡ್ಡೆಟ್ಟವ್ವನನ್ನು ಮದುವೆಯಾದುದು ಕೂಡ ಕೊಡೇಕಲ್ ಪರಂಪರೆಯಿಂದ ಪ್ರಭಾವಿತವಾಗಿರುವುದನ್ನೇ ಸೂಚಿಸುತ್ತದೆ. ಏಕೆಂದರೆ ಈ ಪರಂಪರೆಯಲ್ಲಿ ಮದುವೆ ನಿಷಿದ್ಧವಲ್ಲ, ಅದೊಂದು ಸಹಜಕ್ರಿಯೆಯಾಗಿರುವುದರಿಂದ ಮದ್ದಾನಸ್ವಾಮಿ ಮತ್ತು ಗೋಣಿಬಸವ ಮದುವೆಯಾಗಿದ್ದಾರೆ. ಈ ಮಠದ ಸ್ವಾಮಿಗಳು ಕೂಡ ಮದುವೆಯಾಗುವ ಪದ್ಧತಿ ಇದೆ. ಮದ್ದಾನಸ್ವಾಮಿ ಮತ್ತು ಗೋಣಿಬಸವ ಕೊಡೇಕಲ್ ಪರಂಪರೆಯವರಿರಬೇಕು ಎನ್ನುವ ಕುರಿತು ಅಧ್ಯಾಯ ೩.೨.ರಲ್ಲಿ ವಿವರಿಸಲಾಗಿದೆ.

ಒಟ್ಟಾರೆ ಮದ್ದಾನಸ್ವಾಮಿ ಮತ್ತು ಗೋಣಿಬಸವ ತಮ್ಮ ಜೀವಿತಾವಧಿಯಲ್ಲಿ ಮದುವೆಯಾದ ಬಗೆಗಿನ ಅಂಶವನ್ನು ಈವೊತ್ತು ಗೋಣಿಬಸವನ ಜಾತ್ರೆಯಲ್ಲಿ, ಪೂಜಾರಿ ಮದುಮಗನಾಗುವ ಆಚರಣೆಯ ಮೂಲಕ ಸೂಚಿಸುತ್ತಿದ್ದಾನೆ.

## ೬.೧೨. ಬಾಲಬಸವರ ದೀಕ್ಷೆ

ಮಾದಿಗ ಕುಲದಲ್ಲಿಯೆ ಬಾಲಬಸವರು ಗುರುಸ್ಥಾನವುಳ್ಳವರು. ರೂಢಿಯಂತೆ ಈ ಜನಾಂಗದ ಪುರುಷರೆಲ್ಲರಿಗೆ ಆಚಾರ, ವಿಚಾರಗಳಲ್ಲಿ ಕುಲದ ಧಾರ್ಮಿಕ ಕಾರ್ಯಗಳಿಗೆ ಸಂಬಂಧಿಸಿದಂತೆ ಲಿಂಗದೀಕ್ಷೆ ಕ್ರಮ ಕಡ್ಡಾಯವಾಗಿದೆ. ಬಾಲಬಸವರು ಲಿಂಗದೀಕ್ಷೆ ಇಲ್ಲದೆ ಮದುವೆ ಮಾಡಿಕೊಳ್ಳುವಂತಿಲ್ಲ. ಸಾಮಾನ್ಯವಾಗಿ ೧೨ ರಿಂದ ೧೮ ವರ್ಷದೊಳಗೆ ಲಿಂಗದೀಕ್ಷೆಯನ್ನು ಬಾಲಬಸವರು ಮಾಡಿಸಿಕೊಳ್ಳುತ್ತಾರೆ.

ಲಿಂಗದೀಕ್ಷೆ ಕ್ರಮವು ವೀರಶೈವ ಪದ್ಧತಿ ಪ್ರಕಾರವೇ ನಡೆಯುತ್ತದೆ. ನೆತ್ತಿಯಲ್ಲಿ ಸ್ವಲ್ಪ ಕೂದಲು ಬಿಟ್ಟು ಗಡ್ಡ ಮೀಸೆ ಉಳಿದಂತೆ ಕೂದಲು ಬೋಳಿಸುತ್ತಾರೆ. ತಲೆಗೆ ಎಣ್ಣೆ, ತುಪ್ಪ, ಪಂಚಾಮೃತದ ಅಭ್ಯಂಜನ ಸ್ನಾನ ಮಾಡಿ ವಾರ, ತಿಥಿ, ನಕ್ಷತ್ರ, ರಾಹುಕಾಲಗಳಿಗನುಗುಣವಾಗಿ ಕಷಾಯವಸ್ತ್ರ

ಧರಿಸಿಕೊಳ್ಳುತ್ತಾರೆ. ಈಗ ಉಜ್ಜಯಿನಿ ಪೀಠದ ಸ್ವಾಮಿಗಳು ಈ ಲಿಂಗಧಾರಣೆಗೆ ಕಡ್ಡಾಯವಾಗಿ ಆಗಮಿಸುತ್ತಾರೆ. ಸ್ವಾಮಿಗಳ ಅಮೃತ ಹಸ್ತದಿಂದ ಕೊಡಲಾದ ಇಷ್ಟಲಿಂಗವನ್ನು ಎಡಗೈಯಲ್ಲಿ ಹಿಡಿದು ಕೊಂಡು ತರುವಾಯ ಲಿಂಗಕ್ಕೆ ಪೂಜೆ ಮಾಡಲಾಗುವುದು. ಸ್ವಾಮಿಗಳಿಂದ ಬಾಲಬಸವರಿಗೆ ಗೌಪ್ಯ ಮಂತ್ರೋಪದೇಶ ನಡೆಯುವುದು. 'ನಮಃ ಶಿವಾಯ' ಪಂಚಾಕ್ಷರಿ ಮಂತ್ರೋಚ್ಛಾರ ಸಾಗುವುದು. ಕಿವಿಯಲ್ಲಿ ಮೂರು ಸಾರಿ ಮಂತ್ರವನ್ನು ಉಚ್ಚರಿಸಿ ಯಾರಿಗೂ ಹೇಳದಂತೆ ನಿರ್ಬಂಧಿಸುವರು. ತರುವಾಯ ಲಿಂಗಧಾರಣೆ ನಡೆಯುವುದು. ಒಂಟಿ ಜಂಗಿನ ನಾಗಬೆತ್ತ, ಕಾವಿವಸ್ತ್ರ, ತಂಬೂರಿ, ಕರ್ಣಕುಂಡಲ, ಬಸವ ಮುದ್ರೆ, ಚಂದನದ ಆವುಗೆ ಮತ್ತು ಜೋಳಿಗೆ ನೀಡುವರು. ನಂತರ ಎಲ್ಲರಿಗೂ ಪ್ರಸಾದ ನೀಡುವರು.

ಬಾಲಬಸವನು ಲಿಂಗದೀಕ್ಷೆಯಾದ ತರುವಾಯ ಆತನನ್ನು ಎಲ್ಲರೂ ಗೌರವದಿಂದ ಕಾಣುತ್ತಾರೆ. ಲಿಂಗದೀಕ್ಷೆಯಾದ ನಂತರ ದಿನಕ್ಕೆರೆಡು ಸಾರಿ ಕಡ್ಡಾಯವಾಗಿ ಮಡಿಮೈಲಿಗೆಯಲ್ಲಿದ್ದು ಲಿಂಗಪೂಜೆಯನ್ನು ಮಾಡಿಕೊಳ್ಳಬೇಕು.

ಬಾಲಬಸವರು ಮೂಲತಃ ಮಾದಿಗರಾಗಿದ್ದು ಇವರಿಗೆ ಲಿಂಗದೀಕ್ಷೆಯನ್ನು ನೀಡಿದ ಬಗ್ಗೆ 'ಗೋಣಿಬಸವೇಶ್ವರ ಚರಿತ್ರೆ' ವಿವರಗಳನ್ನು ಒದಗಿಸುತ್ತದೆ. ಅದರ ಪ್ರಕಾರ ಒಮ್ಮೆ ಹೀಲದಳ್ಳಿ (ಕಂಬದಮ್ಮನಳ್ಳಿ)ಯಲ್ಲಿ ಭಿಕ್ಷೆ ಬೇಡಲು ಹೋದಾಗ ಯಾರೊಬ್ಬರೂ ಭಿಕ್ಷೆ ನೀಡುವುದಿಲ್ಲ. ಊರಿನ ಮಾದಿಗರ ಕೇರಿಯಲ್ಲಿ ಗೋಣಿಬಸವನನ್ನು ಕೆಲವರು ಹಾಸ್ಯ ಮಾಡಿದರು. 'ನೀವು ನಿಜವಾದ ಜಂಗಮರಾಗಿದ್ದರೆ ನಮ್ಮ ಕೇರಿಯಲ್ಲಿ ಬಹಳ ದಿವಸಗಳಿಂದ ಗೊಡ್ಡುಬಿದ್ದಿರುವ ಆಕಳಿದೆ ಅದಕ್ಕೆ ಸಂತಾನವು ಪ್ರಾಪ್ತವಾಗುವಂತೆ ಮಾಡಬೇಕು' ಎಂದು ಸವಾಲನ್ನು ಹಾಕುತ್ತಾರೆ. ಆಗ ಗೋಣಿಬಸವ ತನ್ನ ಜೋಳಿಗೆಯಲ್ಲಿನ ವಿಭೂತಿಯನ್ನು ಆ ಆಕಳ ಮೈಗೆ ಬಳಿದು ಅದಕ್ಕೆ ಸಂತಾನಪ್ರಾಪ್ತಿಯಾಗುವಂತೆ ಮಾಡುತ್ತಾನೆ. ಇದನ್ನು ಕಂಡ ಮಾದಿಗ ಕೇರಿಯವರು ಗೋಣಿಬಸವನಿರುವ ಕೂಲಹಳ್ಳಿಗೆ ಬಂದು ಶರಣಾಗುತ್ತಾರೆ. 'ನಿಮಗೆ ಬಾಲದಕರು ಕೊಟ್ಟಿದ್ದರಿಂದ ಮುಂದೆ ನಿಮಗೆ ನಿಮ್ಮ ವಂಶಕ್ಕೆ 'ಬಾಲಬಸವಾ' ಎಂಬ ಹೆಸರು ಅಚ್ಚಳಿಯದಂತೆ ಉಳಿಯಲಿ ಎಂದು ಹಾರೈಸಿದನು. ಆಗ ಹರಿಜನರಿಗೆ ಗೋಣಿಬಸವನೇ ಲಿಂಗಧಾರಣೆಯನ್ನು ಮಾಡಿ ಮುಂದೆ ಜಗತ್ತಿನಲ್ಲಿ ನಿಮ್ಮ ನುಡಿಯಿಂದ ಪ್ರಗತಿ ಹೊಂದಿರಿ ಎಂದು ಆಶೀರ್ವದಿಸಿದನು.(ಈಡಿಗರ ಚಂದ್ರಪ್ಪ, ೧೯೯೦, ಪು.೪೮-೫೦) ಇನ್ನೊಮ್ಮೆ ಚಿಗಟೇರಿ ಶಿವನಯ್ಯ ಮಂತ್ರವಾದಿಗಳಿಂದ ಮಾಡಿಸಿದ ಮೊರವಿ ಅಂಗಿಯನ್ನು ತೊಟ್ಟು ಪ್ರಜ್ಞೆ ತಪ್ಪಿ ಬಿದ್ದಾಗ ಹಾವಿನ ರೂಪದಲ್ಲಿ ಬಂದ ಬಾಲಬಸವನು ಗೋಣಿಬಸವನ ಮೈಯಲ್ಲಿನ ವಿಷವನ್ನೆಲ್ಲಾ ಹೀರಿ ಆತನನ್ನು ಬದುಕಿಸಿ ತಾನು ಸಾಯುತ್ತಾನೆ. ಬದುಕಿದ ಗೋಣಿಬಸವ ಆತನಿಗೆ ಕರ್ಣಕುಂಡಲಗಳನ್ನು, ತಂಬೂರಿಯನ್ನು ಕೊಟ್ಟು ಮುಂದೆ ನಡೆಯುವುದೆಲ್ಲ ನಿನಗೆ ಅರಿವಾಗಲಿ' ಎಂದು ಹೇಳಿದನು.(ಅದೇ, ಪು.೧೫೨)

ಬಾಲಬಸವರಿಗೆ ಲಿಂಗದೀಕ್ಷೆ ನೀಡುವುದಾಗಲಿ, ಅವರು ಕಾಲಜ್ಞಾನ, ಗೋಣಿಬಸವನ ಕಾವ್ಯವನ್ನು ಹಾಡುವುದಾಗಲಿ ಒಂದು ಪಂಥದ ಪ್ರಚಾರದ ದೃಷ್ಟಿಯಿಂದ ಪ್ರಮುಖವಾದುದಾಗಿದೆ. 'ಒಂದು ಪಂಥ, ಚಳುವಳಿ, ಸಂಸ್ಕೃತಿ ಬೆಳೆಯಲು ಆ ಪಂಥದ ಪ್ರಚಾರಕರು ಮುಖ್ಯ. ಈ ರೀತಿಯ ಸಂಸ್ಕೃತಿ ಚಳುವಳಿಯನ್ನು ಪ್ರಚಾರ ಮಾಡಲು, ಮುಂದುವರಿಸಲು ಆಯಾ ಪಂಥ, ಧರ್ಮಗಳಲ್ಲಿ ಧಾರ್ಮಿಕ ವ್ಯಕ್ತಿಗಳಿರುತ್ತಾರೆ. ಇಂತಹ ಒಂದು ವ್ಯವಸ್ಥೆ ಹುಟ್ಟಿದ್ದು ಬುದ್ಧ ಧರ್ಮದಲ್ಲಿ ಧರ್ಮ ಪ್ರಚಾರಕ್ಕೆ, ಧರ್ಮ ಅನುಷ್ಠಾನ, ಆಚರಣೆಗೆ ಬಿಕ್ಕು ಪರಂಪರೆ ಹುಟ್ಟಿಕೊಂಡಿತು. ಅದೇ ರೀತಿ ಹಿಂದೂಧರ್ಮ-ಪುರೋಹಿತರನ್ನು, ಇಸ್ಲಾಂ-ಮೌಲಿಗಳನ್ನು, ಕ್ರೈಸ್ತ ಧರ್ಮ-ಪಾದ್ರಿಗಳನ್ನು ಹೊಂದಿದೆ.'(ಮಹದೇವ ಶಂಕನಪುರ, ೨೦೦೨, ಪು.೩೩) ಆದರೆ ಬಹುದೊಡ್ಡ ಸಾಮ್ರಾಜ್ಯದ ಆಶ್ರಯವಿಲ್ಲದೆ, ಪ್ರಾದೇಶಿಕವಾಗಿ ಇರುತ್ತಿದ್ದ ಮೌಖಿಕ ಪರಂಪರೆಗಳು ತಮ್ಮ ಪಂಥದ ಪ್ರಚಾರಕ್ಕಾಗಿ ವ್ಯವಸ್ಥಿತವಾದ ತಂಡಗಳನ್ನು ನಿರ್ಮಿಸಿಕೊಂಡವು. ಮಂಟೇಸ್ವಾಮಿ ಪಂಥವು ನೀಲಗಾರರ ದೀಕ್ಷೆಯ ಮೂಲಕ ಆ ಪಂಥದ ಪ್ರಚಾರಕ್ಕೆ, ಬೆಳವಣಿಗೆಗೆ ನೀಲಗಾರರನ್ನು ಬಳಸಿಕೊಂಡರೆ, ಮಲೆಮಾದೇಶ್ವರ ಪಂಥವು ದೇವರಗುಡ್ಡ ಪರಂಪರೆಯನ್ನು ತನ್ನ ಪಂಥದ ಪ್ರಚಾರಕ್ಕೆ ಬಳಸಿಕೊಂಡಿದೆ.

ಗೋಣಿಬಸವನು ಮಾದಿಗರ ಜನಾಂಗಕ್ಕೆ ಲಿಂಗದೀಕ್ಷೆಯನ್ನು ನೀಡಿ ಅವರನ್ನು 'ಬಾಲಬಸವ'ರನ್ನಾಗಿಸುವ ಮೂಲಕ ತನ್ನ ಪಂಥವು ಜನಪದರಲ್ಲಿ ಬೆಳೆಯಲು ಪ್ರಚಾರ ಹೊಂದಲು ಸಾಧ್ಯವಾಗುವಂತೆ ಪ್ರಯತ್ನಿಸಿದ್ದಾನೆ. ಇದೇ ಕಾರಣಕ್ಕಾಗಿಯೇ ಪಂಚಗಣಾಧೀಶ್ವರರಲ್ಲಿಯೇ ಹೆಚ್ಚು ಜನಪದೀಕರಣಕ್ಕೆ ಒಳಗಾಗಲು ಗೋಣಿಬಸವನಿಗೆ ಸಾಧ್ಯವಾಗಿರಬೇಕು.

ವೈರುಧ್ಯವಿರುವುದು ಬಾಲಬಸವರ ಲಿಂಗದೀಕ್ಷೆ ಮತ್ತು ಅವರ ಕಾವ್ಯಕ್ಕೆ, ಏಕೆಂದರೆ ಬಾಲಬಸವರು ಹಾಡುವ 'ಗೋಣಿಬಸವ ಕಾವ್ಯ'ದ ಆರಂಭದ ಕಲ್ಯಾಣ ಪ್ರಸಂಗದಲ್ಲಿ ಅವರು ಲಿಂಗದೀಕ್ಷೆಯನ್ನು ತೀವ್ರ ಸ್ವರೂಪದಲ್ಲಿ ವಿಡಂಬಿಸುವುದನ್ನು ಕಾಣಬಹುದು.(ಅನುಬಂಧ-೬, ಗೋಣಿಬಸವ ಕಾವ್ಯದ ಆಯ್ದ ಭಾಗಗಳು) ಆದರೆ ಮಂಟೇಸ್ವಾಮಿ ಕಾವ್ಯದಲ್ಲಿನ ನೀಲಗಾರದೀಕ್ಷೆ ಕಾಯಕದೀಕ್ಷೆಯಾಗಿದ್ದು ಆಚರಣೆ ಮತ್ತು ಕಾವ್ಯಕ್ಕೆ ಅಂತರ್ ಸಂಬಂಧವಿದೆ. ಬಾಲಬಸವರ ದೀಕ್ಷೆ ಮತ್ತು ಕಾವ್ಯದ ಮಧ್ಯದಲ್ಲಿ ವೈರುಧ್ಯ ಕಂಡುಬರುತ್ತದೆ. ಮುಖ್ಯ ಕಾರಣವೆಂದರೆ, ಕಾವ್ಯ ಆದರ್ಶದ ನೆನಪಿನಲ್ಲಿ ವೈಯಕ್ತಿಕವಾಗಿ ರೂಪುಗೊಂಡಿದ್ದರೆ, ಆಚರಣೆ ವಾಸ್ತವದಲ್ಲಿ ಸಮಾಜದ ಹಲವು ವರ್ಗಗಳನ್ನೊಳಗೊಂಡು ರೂಪುಗೊಂಡಿರುತ್ತದೆ(ಈ ಬಗ್ಗೆ ಅಧ್ಯಾಯ ೬.೭ರಲ್ಲಿ ಚರ್ಚಿಸಲಾಗಿದೆ).

## ೬.೧೩. ಇನ್ನಿತರ ಆಚರಣೆಗಳು

ಈಗಾಗಲೇ ವಿವರಿಸಿದ ಪ್ರಮುಖ ಆಚರಣೆಗಳಲ್ಲನ್ನಲ್ಲದೆ ಪಂಚಗಣಾಧೀಶ್ವರರ ಪಂಥದಲ್ಲಿ ಇನ್ನೂ ಕೆಲವು ಪದ್ಧತಿಗಳನ್ನು ಆಚರಿಸುತ್ತಾರೆ. ಕೆಲವು ಆಚರಣೆಗಳು ಚಾರಿತ್ರಿಕವಾಗಿ ರೂಪುಗೊಂಡಿದ್ದರೆ ಕೆಲವು ಆಚರಣೆಗಳಿಗೆ ಆಧುನಿಕ ಸಮಾಜದ ಸನ್ನಿವೇಶಗಳು ಒತ್ತಡವನ್ನುಂಟು ಮಾಡಿವೆ.

**ವಾರೋತ್ಸವ :** ನಾಯಕನಟ್ಟಿಯಲ್ಲಿ ತಿಪ್ಪೇಸ್ವಾಮಿಗೆ ಪ್ರತಿ ಸೋಮವಾರ ವಿಶೇಷ ಪೂಜೆಸಲ್ಲುತ್ತದೆ. ಹೊರ ಮಠ ಮತ್ತು ಒಳಮಠಗಳಲ್ಲಿ ನಡೆಯುವ ಈ ಉತ್ಸವವನ್ನು 'ವಾರೋತ್ಸವ' ಎಂದು ಕರೆಯಲಾಗುತ್ತದೆ. ಸೋಮವಾರದಂದು ಒಳಮಠದಿಂದ ಉತ್ಸವಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಸಕಲ ಬಿರುದಾವಳಿಗಳೊಂದಿಗೆ ಮೆರವಣಿಗೆಯಲ್ಲಿ ಒಯ್ಯಲಾಗುತ್ತದೆ. ದಾರಿಯಲ್ಲಿ ಹಟ್ಟಿದೊರೆ ಮಲ್ಲಪ್ಪನಾಯಕನ ವಂಶಜರ ಮನೆಯ ಹತ್ತಿರ (ಅರಮನೆಯ ಅವಶೇಷಗಳಿರುವ ಸ್ಥಳ), ಗೊಂಚಿಗಾರ ಬೀದಿ, ಈಶ್ವರ ಮತ್ತು ಆಂಜನೇಯ ದೇವಾಲಯಗಳ ಹತ್ತಿರ ನಿಲ್ಲಿಸಲಾಗುತ್ತದೆ. ಈ ಸ್ಥಳಗಳಲ್ಲಿ ಭಕ್ತರಿಗೆ ನೈವೇದ್ಯ ಮಾಡಿಕೊಡಲಾಗುತ್ತದೆ. ಪಲ್ಲಕ್ಕಿಯನ್ನು ಹೊರಮಠದ ಮುಂಭಾಗದಲ್ಲಿನ ಮಂಟಪದಲ್ಲಿ ತಂದು ಇಡುತ್ತಾರೆ. ಪಲ್ಲಕ್ಕಿ ಜೊತೆಯಲ್ಲಿ ಬಂದ ಒಳಮಠದ ಪೂಜಾರಿಯು ಹೊರಮಠದ ಮೂರ್ತಿಯನ್ನು(ಸಮಾಧಿ) ಪೂಜಿಸುತ್ತಾನೆ. ಹೊರಮಠದ ಪೂಜಾರಿಯಿಂದ ಒಂದು ಜೋಳಿಗೆ ಬಿಲ್ವಪತ್ರೆಯನ್ನು ಪಡೆದುಕೊಳ್ಳುತ್ತಾರೆ. ನಂತರ ಅಲ್ಲಿದ್ದವರಿಗೆಲ್ಲ ಹಸಿಕಡಲೆ, ಕೊಬ್ಬರಿ, ಸಕ್ಕರೆ ಮಿಶ್ರಣದ ಪ್ರಸಾದವನ್ನು ಹಂಚುತ್ತಾರೆ. ಪೂಜೆಯ ನಂತರ ಪಲ್ಲಕ್ಕಿಯು ಹೊರಮಠದಿಂದ ಹಿಂದಿರುಗಿ ಹೋಗುವಾಗ, ಹರಕೆ ಹೊತ್ತ ಭಕ್ತರೆಲ್ಲ ಪಲ್ಲಕ್ಕಿ ಬರುವ ದಾರಿಯಲ್ಲಿ ನೆಲದ ಮೇಲೆ ಸಾಲಾಗಿ ಮಲಗಿಕೊಂಡಿರುತ್ತಾರೆ. ಆಗ ಉತ್ಸವಮೂರ್ತಿಯನ್ನು ಅವರ ಮೇಲಿಂದ ಎತ್ತಿಕೊಂಡು ಹೋಗುತ್ತಾರೆ. ಇದರಿಂದ ಮಲಗಿದವರ ಕಷ್ಟಗಳೆಲ್ಲ ತೀರುತ್ತವೆ ಎಂದು ಜನರು ನಂಬಿದ್ದಾರೆ. ಪಲ್ಲಕ್ಕಿ ವಾಪಾಸು ಬರುವಾಗ ಗೋಧಿಹಿಟ್ಟನಿಂದ ಮಾಡಿದ ಆರತಿಯನ್ನು ಮಹಿಳೆಯರು ಬೆಳಗುತ್ತಾರೆ. ಅಲ್ಲದೆ ಕರಿ ಮತ್ತು ಕೆಂಪು ಬಣ್ಣದ ಓಕಳಿಯನ್ನು ಉತ್ಸವ ಮೂರ್ತಿಗೆ ನಿವಾಳಿಸಿ ಚೆಲ್ಲುತ್ತಾರೆ. ಪಲ್ಲಕ್ಕಿಯನ್ನು ಒಳಮಠದ ಮಹಾದ್ವಾರದ ಮೂಲಕ ತಂದು ಗರ್ಭಗುಡಿಯನ್ನು ಪ್ರದಕ್ಷಿಣೆ ಹಾಕಿ ನವರಂಗ ಮಂಟಪದಡಿಯಲ್ಲಿ ಇಳಿಸುತ್ತಾರೆ. ಅಲ್ಲಿಂದ ಉತ್ಸವ ಮೂರ್ತಿಯನ್ನು ಗರ್ಭಗುಡಿಯ ಗದ್ದುಗೆಗೆ ಪ್ರತಿಷ್ಠಾಪಿಸುತ್ತಾರೆ.

**ವಾಹನೋತ್ಸವ :** ಸಾಮಾನ್ಯವಾಗಿ ಪಂಚಗಣಾಧೀಶ್ವರರೊಳಗೊಂಡಂತೆ ಎಲ್ಲ ಜಾತ್ರೆಗಳಲ್ಲಿ ಕಂಡುಬರುವ ಆಚರಣೆಯೆಂದರೆ 'ವಾಹನೋತ್ಸವ'. ಇದು ಹರಪನಹಳ್ಳಿ ಕೆಂಪಯ್ಯನನ್ನು ಬಿಟ್ಟರೆ (ಇಲ್ಲಿ ರಥೋತ್ಸವ ನಡೆಯುವುದಿಲ್ಲ) ನಾಲ್ವರು ಗಣಾಧೀಶ್ವರರ ಜಾತ್ರೆಯ ಸಂದರ್ಭದಲ್ಲಿ ಕಂಡುಬರುತ್ತದೆ. ನಾಯಕನಟ್ಟಿಯಲ್ಲಿ ಪ್ರತಿಯೊಂದು ಪಲ್ಲಕ್ಕಿಯಲ್ಲಿ ದಿನವು ಒಂದೊಂದು ಪ್ರಾಣಿಯ ಮೂರ್ತಿಯನ್ನು ಇಟ್ಟು ಮೆರವಣಿಗೆಯಲ್ಲಿ ಚಿಕ್ಕರಥದ ಹತ್ತಿರ ತಂದು ಪೂಜೆ ಮಾಡಿ ರಥದಲ್ಲಿ ಕುಳ್ಳಿರಿಸಿ ಒಂದು ಕಿ.ಮೀ. ದೂರದಲ್ಲಿರುವ ಪಾದಗಟ್ಟೆಯ ತನಕ ಎಳೆದೊಯ್ಯುತ್ತಾರೆ. ಅಲ್ಲಿ ಪೂಜೆ ಮಾಡಿ ವಾಪಾಸು ಮರಳಿ ತರುತ್ತಾರೆ. ಸರ್ಪವಾಹನೋತ್ಸವ(ನಾಗರೋತ್ಸವ), ಮಯೂರವಾಹನೋತ್ಸವ(ನವಿಲೋತ್ಸವ), ಗಜವಾಹನೋತ್ಸವ, ಸಿಂಹವಾಹನೋತ್ಸವ, ಅಶ್ವವಾಹನೋತ್ಸವ ಹೀಗೆ ಕ್ರಮಬದ್ಧವಾಗಿ ಪ್ರತಿದಿನ ಒಂದೊಂದು ವಾಹನೋತ್ಸವ ಗಳು ನಡೆಯುತ್ತವೆ.

ಕೊಟ್ಟೂರಿನಲ್ಲಿಯೂ ಚಿಕ್ಕ ರಥವನ್ನು ತಯಾರಿಸಿ ಪ್ರತಿದಿನ ಒಂದೊಂದು ಮೂರ್ತಿಯನ್ನು ಇಟ್ಟು ಪೂಜೆ ಮಾಡಿ ಹಿರೇಮಠದಿಂದ ಮೂರ್ಕಲ್‌ಮಠ, ತೊಟ್ಟಿಲಮಠ, ಗಚ್ಚಿನಮಠಕ್ಕೆ ಹೋಗಿ ಮರಳಿ ತರಲಾಗುತ್ತದೆ. ಇಲ್ಲಿ ನಾಗರೋತ್ಸವ, ನವಿಲೋತ್ಸವ, ಗಜೋತ್ಸವ, ಬಸವೋತ್ಸವ ನಡೆಯುತ್ತದೆ. ಕೂಲಹಳ್ಳಿಯಲ್ಲಿ ಮತ್ತು ಅರಸೀಕೆರೆ ಜಾತ್ರೆಗಳಲ್ಲಿಯೂ ಸಹ ಇದೇ ರೀತಿ ವಿವಿಧ ಪ್ರಾಣಿಗಳ ಮೂರ್ತಿಗಳನ್ನು ಚಿಕ್ಕರಥದಲ್ಲಿ (ಇದನ್ನು 'ಉಚ್ಚಯ್ಯ' ಎಂದು ಕರೆಯುತ್ತಾರೆ). ಕುಳ್ಳಿರಿಸಿ ಮೆರವಣಿಗೆಯಲ್ಲಿ ಪಾದಗಟ್ಟೆಯವರೆಗೆ ತಂದು ಪೂಜಿಸಲಾಗುತ್ತದೆ.

**ಬಾಯಿಬೀಗ :** ತಿಪ್ಪೇಸ್ವಾಮಿ ಜಾತ್ರೆಯಲ್ಲಿ ಕೆಲವರು ಭಕ್ತರು 'ಬಾಯಿಬೀಗ' ಎನ್ನುವ ಆಚರಣೆಯನ್ನು ಆಚರಿಸುತ್ತಾರೆ. ವಡ್ನಳ್ಳಿ ಮಾರಮ್ಮ ಇಲ್ಲವೆ ತಿಪ್ಪೇಸ್ವಾಮಿಯ ಹೆಸರಿನಲ್ಲಿ ಕೆಲವು ಭಕ್ತರು 'ಬಾಯಿಬೀಗ' ಹರಕೆ ಕಟ್ಟುತ್ತಾರೆ. ರಥೋತ್ಸವದ ದಿನ ಭಕ್ತರು ಮುಖದ ಎರಡು ದವಡೆಗಳ ಮೂಲಕ ಬಾಯಿ ಒಳಗೆ ಒಂದು ತಾಮ್ರದ ತಂತಿಯನ್ನು ಸೇರಿಸಿ ಕೊಂಡಿಯನ್ನು ಹಾಕುತ್ತಾರೆ. ಇದನ್ನೇ ಬಾಯಿಬೀಗ ಎನ್ನುತ್ತಾರೆ. ಕಾಲ್ನಡಿಗೆಯಲ್ಲಿ ಹೊರಮಠಕ್ಕೆ ಬಂದು ಪೂಜಾರಿಗಳಿಂದ ತೀರ್ಥವನ್ನು ತಲೆಯ ಮೇಲೆ ಹಾಕಿಸಿಕೊಂಡನಂತರ ಬಾಯಿಗೆ ಹಾಕಿದ ತಾಮ್ರದ ತಂತಿಯನ್ನು ತೆಗೆಯಲಾಗುತ್ತದೆ. ಸಾಮಾನ್ಯವಾಗಿ ಹೀಗೆ 'ಬಾಯಿಬೀಗ' ಹರಕೆಯನ್ನು ಆಚರಿಸುವವರು ದಲಿತವರ್ಗದವರಾಗಿರುತ್ತಾರೆ. ಹೆಚ್ಚಾಗಿ ವಡ್ನಳ್ಳಿ ಮಾರಮ್ಮನ ಹೆಸರಿನಲ್ಲಿಯೇ ಹರಕೆ ಕಟ್ಟುತ್ತಾರೆ. ಈ ಆಚರಣೆ, ಸತ್ಯವನ್ನು ಮುಚ್ಚಿಡುವ ಅಥವಾ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವುದನ್ನು ಸಂಕೇತಿಸುತ್ತದೆ. ಜೋಳಿಗೆ ಬೆತ್ತ ಪವಾಡದ ಮೂಲಕ ಮಾರಮ್ಮನನ್ನು ಓಡಿಸಿ ತಿಪ್ಪೇಸ್ವಾಮಿ ನಾಯಕನಟ್ಟಿ ಯಲ್ಲಿ ಉಳಿದುಕೊಂಡಿದ್ದನ್ನು ಈ ಆಚರಣೆ ಸೂಚಿಸುತ್ತದೆ.

**ಕಡುಬಿನ ಕಾಳಗ :** ಈ ಆಚರಣೆ ಕೊಟ್ಟೂರು ಮತ್ತು ಕೂಲಹಳ್ಳಿಯಲ್ಲಿ ಪ್ರಮುಖವಾಗಿ ಕಂಡುಬರುತ್ತದೆ. ಕೊಟ್ಟೂರಿನಲ್ಲಿ ರಥೋತ್ಸವ ಜರಗುವ ಆರಂಭದಲ್ಲಿ ರಥದ ಗಾಲಿಗಳನ್ನು ಹೊರ ಹಾಕಿ (ತೇರು ನಿಲ್ಲುವ ಸ್ಥಳದಿಂದ) ಪೂಜೆ ಮಾಡಲಾಗುತ್ತದೆ. ತೇರು ಗಾಲಿಗಳನ್ನು ಹೊರಹಾಕುವಾಗ ಕ್ರಿಯಾಮೂರ್ತಿಗೆ ಮತ್ತು ಗಾಲಿಗಳಿಗೆ ಬತ್ತಿ ಕಾಯಿಗಳಿಂದ ಹೊಡೆಯುತ್ತಾರೆ. ಇದಕ್ಕೆ ಸಂಬಂಧಿಸಿದಂತೆ ಕತೆ ಹೇಳುತ್ತಾರೆ. ಕೊಟ್ಟೂರ ಗುರುಬಸವ ಆರಂಭದಲ್ಲಿ ಹುಚ್ಚನಂತೆ ಇಲ್ಲಿಗೆ ಬಂದಾಗ ಆತನಿಗೆ ಜನರು ಕಲ್ಲಿನಿಂದ ಹೊಡೆಯುತ್ತಿದ್ದರು. ಆದರೆ ಯಾವುದೇ ಹೊಡೆತ ಬೀಳದೆ ಗುರುಬಸವ ತಿರುಗಾಡುತ್ತಿದ್ದನು. ಅದನ್ನು ಸಂಕೇತಿಸಲಿಕ್ಕಾಗಿ ಬತ್ತಿಕಾಯಿಗಳಿಂದ ಗುರುಬಸವನ ಮೂರ್ತಿಗೆ ಹೊಡೆಯಲಾಗುತ್ತದೆ ಎಂದು ಹೇಳಲಾಗುತ್ತದೆ.

ಆದರೆ ಕೂಲಹಳ್ಳಿಯಲ್ಲಿ ಇದೇ ಆಚರಣೆ ಗೋಣಿಬಸವನ ರಥೋತ್ಸವದ ಮರುದಿನ ಓಕಳಿ ಆಡಿದ ನಂತರದಲ್ಲಿ ಆಡಲಾಗುತ್ತದೆ. ಒಂದು ದಿನ ಕಡುಬಿನ ಕಾಳಗ ಆಚರಿಸಿದರೆ ಮರುದಿನ ಟಗರಿನ ಕಾಳಗವನ್ನು ಆಚರಿಸುತ್ತಾರೆ(ಗಮನಿಸಿ ಅನುಬಂಧ ೮, ಆಹ್ವಾನ ಪತ್ರಿಕೆಗಳು). ಹೆಚ್ಚಾಗಿ ಕುರುಬ

ಜನಾಂಗದವರೆ ಭಕ್ತರಾಗಿರುವುದರಿಂದ ಟಗರಿನ ಕಾಳಗವನ್ನು ತಮ್ಮ ಮನೋರಂಜನೆಗಾಗಿ ಜನರು ಆಚರಿಸುತ್ತಿಬಹುದು.

**ಓಕಳಿಯಾಡುವುದು :** ಓಕಳಿಯಾಡುವ ಆಚರಣೆ ನಾಲ್ವರು ಸಂತರ ಜಾತ್ರೆಗಳಲ್ಲಿ ಕಂಡುಬರುವ ಆಚರಣೆಯಾಗಿದೆ. ನಾಯಕನಟ್ಟಿಯಲ್ಲಿ ಹೊರಮಠದಲ್ಲಿ ಆಡಿದರೆ, ಕೊಟ್ಟೂರಿನಲ್ಲಿ ಗಚ್ಚಿನಮಠದ ಹತ್ತಿರ, ಕೂಲಹಳ್ಳಿಯಲ್ಲಿ ಹರಿಜನಕೇರಿಯಲ್ಲಿರುವ ಗುರುಬಸವನ ಮಠದ ಹತ್ತಿರ, ಅರಸೀಕೆರೆಯಲ್ಲಿ ಕೋಲಶಾಂತಯ್ಯನ ಒಳಮಠದ ಆವರಣದಲ್ಲಿ ಆಡುವ ಪದ್ಧತಿ ಇದೆ.

ಓಕಳಿಯ ಸಂದರ್ಭದಲ್ಲಿ ಮಠದ ದೇವದಾಸಿಯರಿಗೆ ಕೆಂಪುಬಣ್ಣದ ನೀರನ್ನು ಚೆಲ್ಲಲಾಗುತ್ತದೆ. ಮೊದಲು ಮಠದ ಪೂಜಾರಿ ಚೆಲ್ಲಿದ ನಂತರ ನೆರೆದ ಜನರೆಲ್ಲ ದೇವದಾಸಿಯರಿಗೆ ಬಣ್ಣದ ನೀರನ್ನು ಚೆಲ್ಲುತ್ತಾರೆ. ನಂತರ ಒಬ್ಬರಿಗೊಬ್ಬರು ಬಣ್ಣದ ನೀರನ್ನು ಚೆಲ್ಲಾಡುತ್ತಾರೆ. ಇದರಲ್ಲಿ ವಿವಿಧ ವರ್ಗದ ಹೆಂಗಸರು ಗಂಡಸರೂ ಪಾಲ್ಗೊಳ್ಳುತ್ತಾರೆ.

ಕರ್ನಾಟಕದ ತುಂಬೆಲ್ಲ ಜಾತ್ರೆ ಸಂದರ್ಭದಲ್ಲಿ ಓಕಳಿಯಾಡುತ್ತಾರೆ. ಇದು ಬರಿ ಹೋಳಿ ಹಬ್ಬಕ್ಕೆ ಸೀಮಿತವಾದ ಆಚರಣೆ ಮಾತ್ರವಲ್ಲ. ಒಬ್ಬರಿಗೊಬ್ಬರು ಪರಸ್ಪರ ಗಂಡು ಹೆಣ್ಣುಗಳು ಓಕಳಿಯಾಡುವುದು ಶೃಂಗಾರದಾಟದ ಸಂಕೇತವಾಗಿದೆ. ಹೋಳಿ ಹಬ್ಬದಲ್ಲಿ ಮಾಡುವಂತೆ ಅನೇಕ ಕಡೆಗಳಲ್ಲಿ ಬಣ್ಣದ ನೀರನ್ನು ಎರಚುವುದು ಕಾಮದ ಪ್ರಚೋದನೆಗೆ ಸಂಕೇತವಾಗಿದೆ. ಈ ಆಚರಣೆಯಲ್ಲಿ ಗ್ರಾಮದ ಬೇರೆ ಬೇರೆ ಜಾತಿ, ಜನಾಂಗದ ಹೆಂಗಸರು, ಗಂಡಸರು ಪರಸ್ಪರ ನೀರನ್ನು ಎರಚುವುದು ಜಾತಿಗಳನ್ನು ಮೀರಿ ಅವರುಗಳಲ್ಲಿ ಏರ್ಪಡುವ ಒಳ ಸಂಬಂಧಗಳ ಸೂಚನೆಯಾಗಿದೆ. ಇದು ಸೃಷ್ಟಿಕ್ರಿಯೆಗೆ ಆರಂಭವನ್ನು ಸೂಚಿಸುವ ಆಚರಣೆಯಾಗುತ್ತದೆ(ಮಹದೇವ ಶಂಕನಪುರ, ೨೦೦೧, ಪು.೧೪೯).

**ಮಾಲೆಹಾಕುವುದು :** ಆಧುನಿಕ ಸಮಾಜದ ಒತ್ತಡದಿಂದಾಗಿ ಇತ್ತೀಚೆಗೆ ನಾಯಕನಟ್ಟಿ ಮತ್ತು ಕೊಟ್ಟೂರಿನಲ್ಲಿ ಸೇರ್ಪಡೆಯಾಗಿರುವ ವಿಶಿಷ್ಟ ಆಚರಣೆ ಎಂದರೆ ಮಾಲೆ ಹಾಕುವುದು. ಕೊಟ್ಟೂರಿನಲ್ಲಿ ಈ ಆಚರಣೆ ಕ್ರಿ.ಶ.೧೯೯೭ ರಿಂದ ಆರಂಭವಾಗಿದ್ದರೆ ನಾಯಕನಟ್ಟಿಯಲ್ಲಿ ಕ್ರಿ.ಶ.೨೦೦೦ ಇಸ್ವಿಯಿಂದ ಆರಂಭವಾಗಿದೆ.

ಮಾಲೆ ಹಾಕುವವರು ಜಂಗಮರ ಮೂಲಕ ಬಿಳಿಯ ಅಂಗಿ, ಬಿಳಿಯ ಲುಂಗಿ ಹಾಗೂ ಕೆಂಪು ವಸ್ತ್ರವನ್ನು (ನಾಯಕನಟ್ಟಿಯಲ್ಲಿ ಬಿಳಿಯ ಲುಂಗಿ ಬದಲು ಕಾವಿಲುಂಗಿಯನ್ನು) ಪಡೆದು ಧರಿಸಿಕೊಳ್ಳಬೇಕು. ಹೀಗೆ ಧರಿಸಿದ ಭಕ್ತಾದಿಗಳು ಪ್ರಾರ್ಥನೆ, ಧ್ಯಾನಗಳ ಮೂಲಕ ದೇಹವನ್ನು ಶುದ್ಧವಾಗಿಟ್ಟುಕೊಳ್ಳತಕ್ಕದ್ದು, ತಾವು ಇರುವಲ್ಲಿಯೇ ಸಾಮೂಹಿಕವಾಗಿ (ಅಯ್ಯಪ್ಪಸ್ವಾಮಿ ಭಕ್ತರಂತೆ) ಪೂಜೆ ಸಲ್ಲಿಸತಕ್ಕದ್ದು. ಕೊಟ್ಟೂರಿನಲ್ಲಿ ಇದಕ್ಕೆ 'ಕೊಟ್ಟೂರೇಶ್ವರ ಮಾಲೆ' ಎನ್ನುತ್ತಾರೆ. ಜಾತ್ರೆ, ಆರಂಭವಾಗುವ ಒಂದು ತಿಂಗಳು ಮೊದಲು ಮಾಲೆ ಧರಿಸಲು ಆರಂಭಿಸುತ್ತಾರೆ. ಮತ್ತು ಕಾರ್ತೀಕ ಮಾಸದಲ್ಲಿ ಈ ಪದ್ಧತಿಯನ್ನು

ಆಚರಿಸಲಾಗುತ್ತದೆ. ಇದು ವೈಯಕ್ತಿಕ ಆಸಕ್ತಿಯಿಂದ ಪಾಲ್ಗೊಳ್ಳುವುದಾಗಿದ್ದು ಕಡ್ಡಾಯವಾಗಿ ಕೊಟ್ಟೂರಿನ ಭಕ್ತರೆಲ್ಲ ಧರಿಸಬೇಕೆಂದೇನೂ ಇಲ್ಲ.

ನಾಯಕನಟ್ಟಿಯಲ್ಲಿ ಮಾಲೆಧರಿಸುವುದಕ್ಕೆ 'ರುದ್ರಾಕ್ಷಿ ಮಾಲೆ' ಎಂದು ಕರೆಯುತ್ತಾರೆ. ಪ್ರತಿವರ್ಷ ಧನುರ್ಮಾಸದಲ್ಲಿ ಆರಂಭವಾಗಿ ಮಕರ ಸಂಕ್ರಾಂತಿಯಂದು ಮುಗಿಯುತ್ತದೆ. ಈ ಮಾಲೆ ಧರಿಸುವವರು 'ಅಕ್ಷಯಬುತ್ತಿ' ಎಂದು ಅಕ್ಕಿ, ಒಣಕೊಬ್ಬರಿ, ಬೆಲ್ಲ, ಉತ್ತುತ್ತಿ, ಅರಿಷಿಣಕೊಂಬು ಹೊಂದಿರುವ ಬಟ್ಟೆ ಗಂಟನ್ನು ಕಟ್ಟಿಕೊಂಡು ಅದನ್ನು ಮಕರ ಸಂಕ್ರಾಂತಿಯ ದಿನದಂದು ದೇವಾಲಯಕ್ಕೆ ದಾಸೋಹ ಮಾಡಲು ಒಪ್ಪಿಸುತ್ತಾರೆ(ಈ ಬಗ್ಗೆ ಅಧ್ಯಾಯ ೩.೫ರಲ್ಲಿ ವಿವರಿಸಿದೆ).

# ಅಧ್ಯಾಯ ೭

# ಪಂಚಗಣಾಧೀಶ್ವರರ ಕುರಿತ ಸಾಹಿತ್ಯ

೭.೧. ಶಿಷ್ಟಸಾಹಿತ್ಯದ ನಾಯಕನಾಗಿ ಗುರುಬಸವ

೭.೨. ಸ್ವರವಚನ, ಅಷ್ಟಕ, ಶತಕ ಇತ್ಯಾದಿ ಬರಹಗಳು

೭.೩. ಮೌಖಿಕ ಪರಂಪರೆ

೭.೩.೧. ಸೃಷ್ಟಿ-ಸ್ಥಿತಿ-ಲಯ

೭.೩.೨. ಬುಡಕಟ್ಟು ಜನಾಂಗಗಳ ನೆಲೆಗೊಳ್ಳುವಿಕೆ

೭.೪. ಶಿಷ್ಟ ಮತ್ತು ಮೌಖಿಕ ಪರಂಪರೆಯಲ್ಲಿ ಕಲ್ಯಾಣ

೭.೫. ಕಾಲಜ್ಞಾನ ಸಾಹಿತ್ಯ

೭.೬. ಸಾಂಸ್ಕೃತಿಕ ನಾಯಕರ ಪಯಣ

೭.೭. ಪಠ್ಯಕ್ಕೂ ಆಚರಣೆಗೂ ಇರುವ ವೈರುಧ್ಯ

# ಪಂಚಗಣಾಧೀಶ್ವರರ ಕುರಿತು ಸಾಹಿತ್ಯ

ಪಂಚಗಣಾಧೀಶ್ವರರ ಕುರಿತಂತೆ ಸಾಹಿತ್ಯಿಕ ಪಠ್ಯಗಳು ಅತ್ಯಲ್ಪ. ಮಧ್ಯಕರ್ನಾಟಕದ ಲಕ್ಷಾಂತರ ಜನರು ಆಚರಣೆಗಳ ಮೂಲಕವೆ ಇವರನ್ನು ಆರಾಧಿಸುತ್ತಾ ಬಂದಿದ್ದಾರೆ. ಲಿಖಿತ ಸಾಹಿತ್ಯಕ್ಕೆ ಸಂಬಂಧಿಸಿದಂತೆ ನಮಗೆ ಮುಖ್ಯವಾಗಿ ಬಸವಲಿಂಗಕವಿ ಬರೆದ ಕೊಟ್ಟೂರ ಬಸವೇಶ್ವರ ಚಾರಿತ್ರ್ಯ(೧೬೭೮) ಕೃತಿಯೊಂದು ಗುರುಬಸವನನ್ನು ಕುರಿತು ಸಮಗ್ರವಾಗಿ ವಿವರಿಸುತ್ತದೆ ಅನ್ನುವುದನ್ನು ಬಿಟ್ಟರೆ ಮತ್ತಾವ ಕೃತಿಗಳು ಈ ಸಂತರ ಕುರಿತು ಸಮಗ್ರವಾಗಿ ವಿವರಿಸುವುದಿಲ್ಲ. ಕೋಲಶಾಂತ, ಮದ್ದಾನಸ್ವಾಮಿ, ಗೋಣಿಬಸವ, ತಿಪ್ಪೇಸ್ವಾಮಿಯನ್ನು ಕುರಿತು ಹಲವಾರು ಕೃತಿಗಳು ಹೆಸರನ್ನು ನಮೂದಿಸುತ್ತವೆಯೆ ಹೊರತು ಜೀವನ ವಿವರಗಳನ್ನು ಕೊಡುವುದಿಲ್ಲ. ಬಸವಲಿಂಗಕವಿ ಸಹಿತ ಕೋಲಶಾಂತನ ಬಗೆಗೆ ಒಂದಿಷ್ಟು ಮಾಹಿತಿ ಒದಗಿಸುತ್ತಾನೆ. ಮದ್ದಾನಸ್ವಾಮಿಯನ್ನು ಮದ್ದಾನಿ ಸಿದ್ಧಲಿಂಗಯ್ಯ ಎಂದು ಹೆಸರು ನಮೂದಿಸಿರುವುದನ್ನು ಬಿಟ್ಟರೆ ಇನ್ನುಳಿದ ಯಾವ ಸಂತರ ಹೆಸರು ಸಹಿತ ನಮೂದಿಸಿಲ್ಲ. ಗುರುಸಿದ್ಧನಂಜೇಶನು(೧೬೦೦) ಗುರುರಾಜ ಚಾರಿತ್ರದಲ್ಲಿಯೂ ಗುರುಬಸವನ ಕೆಲವು ಪವಾಡಗಳನ್ನು ವಿವರಿಸುತ್ತಾನೆ. ಇನ್ನುಳಿದಂತೆ ಮದ್ದಾನಸ್ವಾಮಿ ಹೆಸರನ್ನು ನಮೂದಿಸಿದ್ದನ್ನು ಬಿಟ್ಟರೆ ಮತ್ತೆಲ್ಲೂ ಈ ಸಂತರ ಜೀವನ ವಿವರಗಳು ದೊರೆಯುವುದಿಲ್ಲ. ಮಳೆಯರಾಜ ಚಾರಿತ್ರ್ಯ(ಸೆಜ್ಜೆ ಸಿದ್ಧಲಿಂಗರಾಯ), ಚೆನ್ನಬಸವಪುರಾಣ(ವಿರೂಪಾಕ್ಷ ಪಂಡಿತ), ಗುರುಲಿಂಗಜಂಗಮ ಚಾರಿತ್ರ(ಮರುಳಸಿದ್ದೇಶ), ಶ್ರೀ ಪ್ರಭುದೇವರ ಪುರಾಣ (ಎಳಂದೂರು ಹರೀಶ್ವರ) ಹಾಗೂ ತೆಲುಗಿನ ಕೃತಿ ಸದ್ಗುರು ರಹಸ್ಯ(ಗುರುಬಸವ) ಕೃತಿಗಳಲ್ಲಿ ಹಲವಾರು ಸ್ವರವಚನಗಳಲ್ಲಿ, ಕಾಲಜ್ಞಾನ ಶತಕ, ಅಷ್ಟಕಗಳಲ್ಲಿ ಕೊಟ್ಟೂರ ಗುರುಬಸವನ ಹೆಸರಿನ ಉಲ್ಲೇಖ ಕಂಡುಬರುತ್ತದೆ.

ತಿಪ್ಪೇರುದ್ರಸ್ವಾಮಿಗೆ ಸಂಬಂಧಿಸಿದಂತೆ ಕೆಲವು ಸ್ವರವಚನಗಳಿವೆ. ಯಾವಕೃತಿಗಳೂ ಇಲ್ಲ. ಷಟ್ಸ್ಥಲ ಶಿವಾಯಣ ಕೃತಿಯು(೧೭೦೦) ಕೆಂಪೇಶನನ್ನು ಹೊರತುಪಡಿಸಿ ಎಲ್ಲ ಸಂತರನ್ನು ವಿವರಿಸಿದೆ. ಮದ್ದಾನಸ್ವಾಮಿಯ ಕುರಿತು ಕೆಲವು ಸ್ವರವಚನಗಳಿವೆ.

ಇನ್ನು ಜನಪದ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಈ ಐವರು ಸಂತರ ಕುರಿತು ವಿವರಿಸುವ, ಪ್ರಮುಖ ಪಠ್ಯವೆಂದರೆ ಬಾಲಬಸವರು ಹಾಡುವ ಗೋಣಿಬಸವನ ಕಾವ್ಯ, ಅದನ್ನು ಬಿಟ್ಟರೆ ತಿಪ್ಪೇಸ್ವಾಮಿಗೆ ಸಂಬಂಧಿಸಿದಂತೆ ಭಜನೆ ಪದಗಳು, ಕಾಡುಗೊಲ್ಲರು ಹಾಡುವ ತಿಪ್ಪೇಸ್ವಾಮಿ ಪದ, ಮ್ಯಾಸನಾಯಕರು ಹಾಡುವ ಬಿಡಿಪದಗಳಿವೆ. ಗೋಣಿಬಸವನಿಗೆ ಸಂಬಂಧಿಸಿದಂತೆ ವಿವಿಧ ಪ್ರದೇಶಗಳ ಬಾಲಬಸವರು

ಅಲ್ಪಸ್ವಲ್ಪ ಭಿನ್ನತೆಯೊಂದಿಗೆ ಗೋಣಿಬಸವನ ಕಾವ್ಯ ಹಾಡುತ್ತಾರೆ. ಕೊಟ್ಟೂರ ಗುರುಬಸವನಿಗೆ ಸಂಬಂಧಿಸಿದಂತೆ ಕೊಟ್ಟೂರಿನ ಹರಿಜನ ಕೇರಿಯ ಹೆಂಗಸರು ಹಾಡುವ ಬಿಡಿಪದಗಳು, ಗಂಡಸರು ಹಾಡುವ ಕೋಲಾಟ ಪದಗಳು ಸಿಗುತ್ತವೆ. ಇನ್ನುಳಿದಂತೆ ಕೋಲಶಾಂತಯ್ಯ ಮತ್ತು ಕೆಂಪಯ್ಯನಿಗೆ ಸಂಬಂಧಿಸಿದಂತೆ ಹೆಚ್ಚಿನ ಭಕ್ತರು ಇಲ್ಲದ ಕಾರಣ ಈ ಬಗ್ಗೆ ಯಾವ ಪಠ್ಯಗಳು ದೊರೆಯುವುದಿಲ್ಲ. ಗೋಣಿಬಸವ ಕಾವ್ಯ ಮತ್ತು ತಿಪ್ಪೇಸ್ವಾಮಿ ಪದಗಳಲ್ಲಿ ಅಲ್ಲಲ್ಲಿ ಇವರ ಉಲ್ಲೇಖವಿದೆ.

ಒಟ್ಟಾರೆ ಪಂಚಗಣಾಧೀಶ್ವರರ ಹೆಸರನ್ನು ಉಲ್ಲೇಖಿಸುವ ಪಠ್ಯಗಳು ಸಾಕಷ್ಟು ದೊರೆತರು ಅವರ ಜೀವನ ವಿವರವನ್ನು ಕೊಡುವ ಇವರ ಬಗೆಗೆ ಚರ್ಚಿಸಲು ಸಾಧ್ಯವಾಗುವಂತಹ ಪಠ್ಯಗಳು ದೊರೆಯುವುದು ಕಡಿಮೆ. ಬಸವಲಿಂಗಕವಿಯ 'ಕೊಟ್ಟೂರು ಬಸವೇಶ್ವರ ಚಾರಿತ್ರ್ಯ', ಬಾಲಬಸವ 'ಗೋಣಿಬಸವನ ಕಾವ್ಯ', ಕಾಡುಗೊಲ್ಲರು ಹಾಡುವ 'ತಿಪ್ಪೇಸ್ವಾಮಿ ಪದ'ಗಳನ್ನು ಪ್ರಮುಖವಾಗಿ ಇಟ್ಟುಕೊಂಡು ಮುಂದಿನ ಚರ್ಚೆಯನ್ನು ಮಾಡಲಾಗಿದೆ.

## ೭.೧. ಶಿಷ್ಟಸಾಹಿತ್ಯದ ನಾಯಕನಾಗಿ ಗುರುಬಸವ

ಪಂಚಗಣಾಧೀಶ್ವರರಲ್ಲಿ ಲಿಖಿತ ಪರಂಪರೆಗೆ ಹತ್ತಿರವಾದವನೆಂದರೆ ಕೊಟ್ಟೂರ ಗುರುಬಸವ. ಈತನ ಜೀವನ ವಿವರನ್ನು ಮೊದಲು ಸಿದ್ಧನಂಜೇಶನು ಗುರುರಾಜ ಚಾರಿತ್ರದ(೧೬೦೦) ೧೪ನೇ ಸಂಧಿಯಲ್ಲಿ ವಿವರಿಸಿದ್ದಾನೆ. ಆದರೆ ಪೂರ್ಣಪ್ರಮಾಣದಲ್ಲಿ ಗುರುಬಸವನ ಜೀವನ ವಿವರನ್ನು ಆಧರಿಸಿಯೇ ರಚಿತವಾದ ಕೃತಿಯೆಂದರೆ ಬಸವಲಿಂಗಕವಿಯ 'ಕೊಟ್ಟೂರು ಬಸವೇಶ್ವರ ಚಾರಿತ್ರ್ಯ'(೧೬೭೮).

ಕನ್ನಡದಲ್ಲಿ ರಚಿತವಾದ ಪ್ರಾಚೀನ ಪಠ್ಯಗಳು ಶರಣರ ಜೀವನವನ್ನು ಅಖಂಡವಾಗಿ ಕಟ್ಟುತ್ತವೆ. ಕಾವ್ಯದ ನಾಯಕರಿಗೆ ಹುಟ್ಟು ಸಾವು ಎರಡೂ ಒಂದು ನೆಪಮಾತ್ರ. ಮೂಲತಃ ಶರಣರು ಕೈಲಾಸದಲ್ಲಿದ್ದು ಅಲ್ಲಿಂದ ಭೂಲೋಕದಲ್ಲಿ ಶಿವಪಾರಮ್ಯವನ್ನು ಹೆಚ್ಚಿಸಲಿಕ್ಕಾಗಿ ಅವತಾರ ಎತ್ತಿದವರೆಂದು ಚಿತ್ರಿಸಲಾಗುತ್ತದೆ. ನರಮನುಷ್ಯರ ಜನ್ಮದಲ್ಲಿ ಹುಟ್ಟಿ ಭೂಲೋಕದಲ್ಲಿ ಶಿವಧರ್ಮವನ್ನು ಸ್ಥಾಪಿಸಿ ಮರಳಿ ಕೈಲಾಸವನ್ನು ಸೇರುವಂತೆ ಚಿತ್ರಿಸಲಾಗುತ್ತದೆ. ಮನುಷ್ಯನ ಜೀವನವನ್ನು ಹುಟ್ಟಿನಿಂದ ಸಾವಿನವರೆಗಿನ ಚಲನೆ ಎಂದು ತಿಳಿದ ಆಧುನಿಕ ಮನಸ್ಸುಗಳಿಗೆ ವ್ಯತಿರಿಕ್ತವಾದ ಬಗೆ ಇದು. ಹರಿಹರ, ರಾಘವಾಂಕ, ಚಾಮರಸ ಮುಂತಾದ ಶೈವ ಕವಿಗಳಲ್ಲಿಯೂ ಕೈಲಾಸದಿಂದ ಕೈಲಾಸದವರೆಗಿನ ಚಿತ್ರಣವೇ ಕಂಡುಬರುತ್ತದೆ. ಕೈಲಾಸವನ್ನು ತಿರಸ್ಕರಿಸಿದ ಬಸವನೂ ಕೂಡ ಕೈಲಾಸದಿಂದ ಭೂಲೋಕಕ್ಕೆ ಬಂದ ಗಣನಾಯಕನಂತೆ ಈ ಕವಿಗಳು ಚಿತ್ರಿಸುತ್ತಾರೆ.

'ಕೊಟ್ಟೂರ ಬಸವೇಶ್ವರ ಚಾರಿತ್ರ್ಯ' ಕೃತಿಯೂ ಇದಕ್ಕಿಂತ ಭಿನ್ನವಾಗೇನು ಇಲ್ಲ. ಅಲ್ಲಮಪ್ರಭು ಮತ್ತು ಬಸವಣ್ಣನು ಗುರುಬಸವನ ಅವತಾರವಾಗಿ ಭೂಲೋಕಕ್ಕೆ ಬರುವುದನ್ನು ಈ ಕೃತಿ ವಿವರಿಸುತ್ತದೆ.

ಚಿಂತಿತ ಫಲಂಗಳಂ ಸಕಲ ಶರಣಾವಳಿಗೆ
ಸಂತಸಂ ಮಿಗಲೀವ ನಿರುಪಮಾಚಲಭಕ್ತಿ
ಸಂತಾನಮಂ ಜಗದೊಳಾರಯ್ಯೆ ನೀನಲ್ಲದೇಳ್ಗೆಯಿಂ ಪಾಲಿಸುವರು
ರಂತೆ ನಾಂ ಪ್ರಭುಚರಂ ಭಕ್ತಿಭಂಡಾರಿರೂ
ಪಂದಳೆದು ನೀಂ ಪೋದ ಪರಿಯಲ್ತು ತದ್ವಿವಿಧ
ಮಂತೊಂದುಗೂಡಿ ದೇಶಿಕಭಾದಿಂ ಗಮನಿಸಯ್ಯ ಗಣನಾಥ ಬಸವಾ

(ಕೊಟ್ಟೂರ ಬಸವೇಶ್ವರ ಚಾರಿತ್ರ್ಯ, ಸಂ.೧, ಪ.೭೯)

ಗುರುಬಸವನು-ಅಲ್ಲಮ ಮತ್ತು ಬಸವ ಇವರಿಬ್ಬರು ಕೂಡಿದ ದೇಶಿಕಭಾವದಿಂದ ಭೂಲೋಕಕ್ಕೆ ಬಂದನೆಂದು ವಿವರಿಸುತ್ತದೆ. ಅಲ್ಲಮನ ಅಂತರ್ಮುಖಿ ವ್ಯಕ್ತಿತ್ವ ಮತ್ತು ಬಸವನ ಸಮಾಜಮುಖಿ ವ್ಯಕ್ತಿತ್ವಗಳೆರಡೂ ಕೂಡಿದವನಾಗಿ ಗುರುಬಸವ ಅವತರಿಸುತ್ತಾನೆ. ಅಲ್ಲಮನು ಅನುಭಾವಕ್ಕೆ ಹೆಚ್ಚು ಕೊಟ್ಟಿದ್ದನ್ನು ಅವನ ವಚನಗಳೇ ವಿವರಿಸುತ್ತವೆ. ಹಾಗೆಯೇ ಬಸವನು ಸಮಾಜದಲ್ಲಿ ನಡೆಯುವ ಪ್ರತಿಯೊಂದು ಕ್ರಿಯೆಗಳಿಗೂ ತೀವ್ರವಾಗಿ ಸ್ಪಂದಿಸುತ್ತಾ ಬದುಕಿದ್ದಗ ಬಗ್ಗೆ ವಚನಗಳು ಸಾಕ್ಷಿಗಳಾಗಿವೆ. ಗುರುಬಸವನು 'ಪುಚ್ಚನಂತಚ್ಚರಿಯೊಳಾಡುತ್ತ' ಬದುಕಿದ್ದ ಬಗ್ಗೆ ಕೊಟ್ಟೂರ ಬಸವೇಶ್ವರ ಚಾರಿತ್ರ್ಯ ವಿವರಿಸುತ್ತದೆ. ಹುಚ್ಚುತನ ಅನುಭಾವಿಗಳ ಲಕ್ಷಣ. ಹೀಗೆ ಹುಚ್ಚನಂತೆ ಬದುಕುತ್ತಲೇ ಸಮಾಜದಲ್ಲಿನ ನೂರಾರು ಮಂದಿಯ ರೋಗಗಳನ್ನು ವಾಸಿ ಮಾಡುವ, ರಾಜಪ್ರಭುತ್ವದೊಂದಿಗೆ ಸಂಘರ್ಷ, ಒಪ್ಪಂದಗಳನ್ನು ಮಾಡಿಕೊಳ್ಳುತ್ತಾ ಬದುಕಿದ್ದಾನೆ.

ಈ ಕೃತಿ ರಚನೆಯಾದ ಕಾಲಘಟ್ಟವು ಕ್ರಿ.ಶ.೧೬೭೮ ವೀರಶೈವ ಧರ್ಮವು ಸಾಂಸ್ಥಿಕರಣ ಹೊಂದಿದ ಸಂದರ್ಭವಾಗಿತ್ತು. ಅದರಲ್ಲೂ ಮಧ್ಯಕರ್ನಾಟಕ ಪ್ರದೇಶವು ನೂರೊಂದು ವಿರಕ್ತರ, ನಂತರದಲ್ಲಿ ವೈಷ್ಣವ ಧರ್ಮದ ಪ್ರಾಬಲ್ಯವನ್ನು ಪಡೆದಿದ್ದಿತು. ಹಾಗಾಗಿ ಕೊಟ್ಟೂರಬಸವೇಶ್ವರ ಚಾರಿತ್ರ್ಯ ಕೃತಿಯಲ್ಲಿ ಗುರುಬಸವನು ವೈದಿಕ ಧರ್ಮವನ್ನು ಹೀನವಾಗಿ ಕಾಣುವಂತೆ ವೈದಿಕರಿಗೆ ಶೈವ ಕಥೆಗಳನ್ನು ಹೇಳುವ ಮೂಲಕ ಅವರನ್ನು ಶಿವಭಕ್ತರನ್ನಾಗಿಸಲು ಪ್ರಯತ್ನಿಸುವಂತೆ ಚಿತ್ರಿತವಾಗಿದೆ. ಈ ಕೃತಿಯಲ್ಲಿ ಹಲವಾರು ಬಾರಿ ಸಂಸ್ಕೃತ ಶ್ಲೋಕಗಳನ್ನು, ಉಪನಿಷತ್ತುಗಳ ಆಧಾರಗಳನ್ನು ಪಡೆದುಕೊಂಡು ಪರಸಮಯದವರನ್ನು ಗೆಲ್ಲುವ ತಂತ್ರವನ್ನು ಬಳಸಿಕೊಳ್ಳಲಾಗಿದೆ.

ಜನಪದ ಆಚರಣೆಗಳಲ್ಲಿ ಇಂದು ಗುರುಬಸವನನ್ನು ಕುರಿತು ಇರುವ ಮಾಹಿತಿಯೇ ಬೇರೆಯಾಗಿದೆ. ಆಚರಣೆಗಳಲ್ಲಿ ದಲಿತ ಸ್ತ್ರೀ ಆರತಿ ಬೆಳಗುವ ಸನ್ನಿವೇಶವನ್ನು ಕುರಿತು ಬಸವಲಿಂಗಕವಿ ಏನನ್ನೂ ಹೇಳುವುದಿಲ್ಲ. ಗೋಣಿಬಸವೇಶ್ವರ ಚರಿತ್ರೆ ಪ್ರಕಾರ ಗುರುಬಸವನೊಳಗೊಂಡತೆ ಎಲ್ಲ ಸಂತರೂ ಕುಪ್ಪಿನಕೇರಿ ಹನುಮಂತನಿಗೆ ಲಿಂಗದೀಕ್ಷೆ ಮಾಡಿ ಕೊಟ್ಟೂರಿಗೆ ಬರುತ್ತಾರೆ. ಕೊಟ್ಟೂರಿನಲ್ಲಿ ವಿಚಾರನಾರಿ

ಎಂಬ ಹೆಂಗಸು ಇವರನ್ನು ಊಟಕ್ಕೆ ಆಮಂತ್ರಿಸುತ್ತಾಳೆ. ಇವರ ಆಮಂತ್ರಣವನ್ನು ತಿರಸ್ಕರಿಸಿ ಹೊರಟ ಇವರಿಗೆ ಕಣ್ಣುಗಳು ಹೋಗಲಿ ಎಂದು ಶಾಪವನ್ನು ಆ ಹರಿಜನ ಹೆಂಗಸು ನೀಡುತ್ತಾಳೆ. ಸ್ವಲ್ಪ ಹೊತ್ತಿನಲ್ಲಿಯೇ ಐವರು ಸಂತರು ಕಣ್ಣುಗಳನ್ನು ಕಳೆದುಕೊಳ್ಳುವರು. ಅವರು ಮರಳಿ ಬಂದು ಹರಿಜನ ಹೆಂಗಸನ ಹತ್ತಿರ ಕ್ಷಮೆ ಕೇಳಿ ಅವಳ ಮನೆಯಲ್ಲಿ ಊಟ ಮಾಡುವರು. ಅಂದಿನಿಂದ ಕೊಟ್ಟೂರಿನ ಜಾತ್ರೆಯಲ್ಲಿ ಹರಿಜನ ಹೆಂಗಸಿನಿಂದ ಎಡೆಯನ್ನು ತಂದು ಆರತಿ ಬೆಳಗಾದ ನಂತರ ರಥೋತ್ಸವ ಜರುಗುತ್ತದೆ'(ಈಡಿಗರ ಚಂದ್ರಪ್ಪ, ೧೯೯೧, ಪು.೮-೧೧).

ಕೊಟ್ಟೂರ ಬಸವೇಶ್ವರ ಚಾರಿತ್ರ್ಯ ಕೃತಿಯಲ್ಲಿ ಗುರುಬಸವ ಮತ್ತು ಹರಿಜನ ಹೆಂಗಸಿನ ಪ್ರಸಂಗವೇ ಇಲ್ಲ. ಈ ಕೃತಿಯಲ್ಲಿ ಈತನೇನಿದ್ದರೂ ತಪ್ಪು ಮಾಡಿದವರಿಗೆ ಶಿಕ್ಷೆ ನೀಡುವವನೇ ಹೊರತು ಸ್ವತಃ ತಪ್ಪು ಮಾಡುವವನಲ್ಲ.

ಹಲವಾರು ಪವಾಡಗಳನ್ನು ಮಾಡುತ್ತಾ, ಮಠಗಳ ನಿರ್ಮಾಣ ಮಾಡುತ್ತಾ, ರಾಜಪ್ರಭುತ್ವದ ಕಪ್ಪಕಾಣಿಕೆಗಳನ್ನು ಒಪ್ಪಿಕೊಳ್ಳುತ್ತಾ ವಿವಿಧ ವರ್ಗಗಳಿಗೆ ಲಿಂಗದೀಕ್ಷೆ ನೀಡುತ್ತಾ, ಒಟ್ಟಾರೆ ಮಧ್ಯಕಾಲದಲ್ಲಿ ವೀರಶೈವ ಧರ್ಮವು ಹೊಂದಿದ ಸಾಂಸ್ಥಿಕರಣ ಪ್ರಕ್ರಿಯೆಯ ಕುರುಹಾಗಿ ಗುರುಬಸವನ ಜೀವನವನ್ನು ಈ ಕೊಟ್ಟೂರು ಬಸವೇಶ್ವರ ಚಾರಿತ್ರ್ಯ ಕೃತಿಯಲ್ಲಿ ಚಿತ್ರಿಸಲಾಗಿದೆ.

## ೭.೨. ಸ್ವರವಚನ, ಅಷ್ಟಕ, ಶತಕ ಇತ್ಯಾದಿ ಬರಹಗಳು

ಪಂಚಗಣಾಧೀಶ್ವರರಲ್ಲಿ ಗುರುಬಸವ, ತಿಪ್ಪೇರುದ್ರ, ಮದ್ದಾನಸ್ವಾಮಿಗೆ ಸಂಬಂಧಿಸಿದಂತೆ ಹಲವಾರು ಸ್ವರವಚನಗಳು ಕಂಡುಬರುತ್ತವೆ. ಉಳಿದಂತೆ ಗುರುಬಸವನಿಗೆ ಸಂಬಂಧಿಸಿದಂತೆ, ಅಷ್ಟಕಗಳು, ದಂಡಕಗಳು, ಶತಕಗಳು, ಕಾಲಜ್ಞಾನಗಳು ಕಂಡುಬರುತ್ತವೆ. ಈ ಬರಹಗಳು ಅತ್ಯಂತ ಚಿಕ್ಕ ಚಿಕ್ಕ ರಚನೆಗಳಾಗಿರುವುದರಿಂದ ಪವಾಡಗಳ ವಿವರಣೆಯಾಗಲಿ, ಜೀವನ ವಿವರವಾಗಲಿ ಹೆಚ್ಚಾಗಿ ಸಿಗದೆ ಕೆಲವೊಂದು ಸ್ಥಳಗಳ, ವ್ಯಕ್ತಿಗಳ ಹೆಸರುಗಳು ಮಾತ್ರ ಇವುಗಳಲ್ಲಿ ಕಂಡುಬರುತ್ತದೆ. ನಾಯಕನಟ್ಟಿ ತಿಪ್ಪೇಸ್ವಾಮಿಗೆ ಸಂಬಂಧಿಸಿದಂತೆ ಎರಡು ಸ್ವರವಚನಗಳು ಕಂಡುಬರುತ್ತವೆ.

ನಿನ್ನ ಮೋಹದ ಭಕ್ತರಾರು ಪ್ರ
ಸನ್ನ ಮೂರುತಿ ತಿಪ್ಪೇರುದ್ರ ದಯಾಳು

(ಎಸ್.ಶಿವಣ್ಣ ಸಂ, ಸಂಪುಟ ೧, ೧೯೯೫, ಪದ್ಯ ೧೪೬)

ಎಂದು ಆರಂಭಗೊಳ್ಳುವ ಸ್ವರವಚನವೊಂದು ತಿಪ್ಪೇರುದ್ರನಿಗೆ ತಲೆಬಾಗುವ ಭಕ್ತನು ತನ್ನನ್ನು ಉದ್ದರಿಸೆಂದು ೪ ಪದ್ಯಗಳಲ್ಲಿ ಬೇಡಿಕೊಂಡಿದ್ದಾನೆ. ಹಾಗೆಯೇ ಇನ್ನೊಂದು ಸ್ವರವಚನದಲ್ಲಿ

ಭಕ್ತನ ಮಾಡಿಕೋ ಎನ್ನ ಹಟ್ಟಿ

ಮುಕ್ತಿದಾಯಕ ತಿಪ್ಪೇರುದ್ರ ಪ್ರಸನ್ನ

(ಅದೇ, ಪದ್ಯ ೧೪೭)

ಎಂದು ಆರಂಭಗೊಂಡಿದೆ ಇದು ಕೊನೆಯಲ್ಲಿ

ದಾರಿಯ ತೋರಿಸೋ ಮುಂದೆ ನಿನ್ನ

ನರ್ಥಿಯಲಿ ಕೊಂಡಾಡುವ ಸಲಹಯ್ಯ ತಂದೆ

ಶಿರಹಟ್ಟಿಯೊಳು ನೀನಿಂದೆ ತಿಪ್ಪೆ

ರುದ್ರನ ಪಾದವು ಗತಿ ನಮಗಂದೆ

ಭಕ್ತನ ಮಾಡಿಕೋ ಎನ್ನ

(ಅದೇ ಪು.೧೪೭)

ಎಂದು ಮುಕ್ತಾಯಗೊಂಡಿದೆ. ಇಲ್ಲಿ ಬರುವ ಶಿರಹಟ್ಟಿ ಎನ್ನುವುದು ನಾಯಕನಟ್ಟಿ ಇರಬಹುದೇ ಹೊರತು ಶಿರಹಟ್ಟಿ ಫಕ್ಕೀರೇಶನಿರುವ ಊರಾಗಿರಲಿಕ್ಕಿಲ್ಲ. ಶಿರ ಎಂದರೆ ತಲೆ, ಉನ್ನತ ಎನ್ನುವ ಅರ್ಥಗಳಿದ್ದು ನಾಯಕ ಎನ್ನುವ ಪದದ ಬದಲಿಗೆ ಇದನ್ನು ಸೇರಿಸಿ ಶಿರಹಟ್ಟಿ ಎಂದು ಕರೆದಿರಬೇಕು.

ಕೊಟ್ಟೂರ ಗುರುಬಸವನಿಗೆ ಸಂಬಂಧಿಸಿದಂತೆ ಹಲವಾರು ಸ್ವರವಚನಗಳು ಶತಕ, ಅಷ್ಟಕಗಳು ಕಂಡುಬರುತ್ತವೆ. ಕರಿಬಸವೇಶ್ವರನ ವಚನಗಳಲ್ಲಿ ಒಂದು ಸ್ವರವಚನ ಗುರುಬಸವನನ್ನು ವೀರವಸಂತ ಎಂದು ಕರೆಯುತ್ತದೆ. ಇದು ಕೊಡೇಕಲ್‌ಬಸವನಿಗೆ ಇದ್ದಂತಹ ಹೆಸರಾಗಿದೆ.

ಹೊಟ್ಟು ಹಾರಿತು ಗಟ್ಟಿ ಉಳಿಯಿತೆಂಬ ನುಡಿಯ ಕೇಳಿ

ನಷ್ಟವನುಗಳಿಸಿ ಲಾಭವನು ಮರೆದಿರಲ್ಲ

ದಿಟ್ಟರಾಗಿದ್ದವರು ಇಷ್ಟಲಿಂಗವ ನೋಡಿ

ಕೊಟ್ಟೂರಬಸವೇಶ ಪಟ್ಟಕ್ಕೆ ನಿಂದ

ಕಟ್ಟಿ ಕಡೆಯಾಟವಿದು ಕೊಟ್ಟು ಕಲ್ಪನೆ ಬಂದ

ಸೃಷ್ಟಿಯೊಳು ವೀರವಸವಂತನೆನಿಸಿ

ಮುಟ್ಟಿ ಪೂಜಿಸಿದವರೆ ಇಷ್ಟಸಿದ್ಧಿಯ ಕೊಡುವ

ಕಪ್ಪಡಿಯ ಸಂಗಮೇಶ್ವರ ಹೇಳ್ದ ನುಡಿಯ

(ಜಿ.ಜಿ.ಮಂಜುನಾಥ(ಸಂ), ಸಂಪುಟ ೩, ೧೯೫೫, ಪದ್ಯ. ೭)

ಇನ್ನೊಂದು ಸ್ವರವಚನ ಕೊಟ್ಟೂರ ಗುರುಬಸವನನ್ನು ಹರನ ಅಪರಾವತಾರ ಎಂದು ಬಣ್ಣಿಸುತ್ತಾ

ಹಿರಿಯ ಮಠದೊಳಿಪ್ಪವರ ವೀರಭದ್ರನ
ಪರಮಭಕ್ತಿಯೊಳಿಪ್ಪ ಹರನವತಾರನ

(ಎಸ್.ಶಿವಣ್ಣ(ಸಂ), ಸಂಪುಟ ೧, ೧೯೯೪, ಪದ್ಯ ೭೮)

ಎಂದಿರುವುದರಿಂದ ಕೊಟ್ಟೂರಿನಲ್ಲಿರುವ ಹಿರೇಮಠ ಮೊದಲು ವೀರಭದ್ರನ ದೇವಸ್ಥಾನವಾಗಿತ್ತೆಂದು ತಿಳಿದುಬರುತ್ತದೆ. ಈಗಲೂ ಕೂಡ ಕೊಟ್ಟೂರ ಗುರುಬಸವನ ಮೂರ್ತಿಯ ಹಿಂದೆ ವೀರಭದ್ರನ ಶಿಲಾಮೂರ್ತಿ ಇದೆ.

ಇನ್ನು ಹಲವಾರು ಸ್ವರವಚನಗಳು ರಚಿತವಾಗಿದ್ದು, ಅವುಗಳಲ್ಲಿ ಯಾವುದೇ ವೈಶಿಷ್ಟ್ಯತೆ ಇಲ್ಲ. ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು ಇವರು ಪ್ರಕಟಿಸಿರುವ ಸ್ವರವಚನ ಸಂಪುಟಗಳಲ್ಲಿ ಇವುಗಳನ್ನು ಪ್ರಕಟಿಸಲಾಗಿದೆ.

ಕೊಟ್ಟೂರ ಗುರುಬಸವನ ಜೀವನದ ಮೇಲೆ ಒಂದು ಶತಕ ರಚನೆಯಾಗಿದೆ. ದ್ಯಾಂಪುರ ಚೆನ್ನಕವಿಗಳು ತಮ್ಮ ಕುಲದೈವವಾದ ಕೊಟ್ಟೂರ ಬಸವೇಶ್ವರರ ಸ್ತುತಿಯನ್ನೊಳಗೊಂಡ 'ಕೊಟ್ಟೂರೇಶ್ವರ ಶತಕ'ವನ್ನು ೧೯೨೪ರಲ್ಲಿ ರಚಿಸಿದ್ದಾರೆ. 'ಶತಕದಲ್ಲಿರುವ ೧೦೮ ಕಂದಪದ್ಯಗಳಲ್ಲಿ ಸುಮಾರು ೫೪ ಪದ್ಯಗಳವರೆಗೆ ಕೊಟ್ಟೂರೇಶ್ವರರ(ಗುರುಬಸವನ)ನ ಸ್ತುತಿ ಅರ್ಥಾತ್ ಗುರುವಿನ ಮಹತ್ವ, ತನ್ನ ಸ್ಥಿತಿಯ ಬಗೆಗೆ ಪಶ್ಚಾತ್ತಾಪ, ಗುರುವಿಗೆ ಕೃತಜ್ಞನಾಗಿರದ ಬಗೆಗೆ ಜಿಗುಪ್ಸೆ, ಶರಣ ಸೇವೆಯ ಬಯಕೆ, ವ್ಯಕ್ತವಾಗಿರುತ್ತವೆ. ಇಲ್ಲಿಂದ ಮುಂದೆ ಐದು ಭಾಗಗಳಲ್ಲಿ ವಿಷಯ ನಿರೂಪಣೆ ಮುಂದುವರೆದಿದೆ. ಭಕ್ತಿ, ಪ್ರಶಂಸೆ, ಗುರುಲಿಂಗ ಪ್ರಶಂಸೆ, ಶಿವಪೂಜಾ ಪ್ರಾಶಸ್ತ್ಯ, ವಾಗದ್ವೈತ ವಿರಸನ, ಪ್ರಾರ್ಥನೆ ಈ ಭಾಗಗಳಿದ್ದರೂ ಶತಕದ ಎಲ್ಲ ಪದ್ಯಗಳು ಕೊಟ್ಟೂರೇಶ ಎಂಬ ಅಂಕಿತದಿಂದಲೇ ಕೊನೆಗೊಳ್ಳುತ್ತವೆ( ಶಶಿಕಲಾ ಮರಿಬಾಶೆಟ್ಟಿ, ೧೯೯೨, ಪು.೯೬). ಗುರುಬಸವನ ಕುರಿತು ಏಳು ಅಷ್ಟಕಗಳು ಸಿಗುತ್ತವೆ. ಅದರಲ್ಲಿ ಒಂದು ಅಷ್ಟಕವು

ಮೂರುನೇತ್ರನು ಮುನಿವಿರಕ್ತನು ಮೂರುಕಲ್ಲ ಶಿವಾಲ್ಯನು
ಮೂರುಲೋಕಕೆ ಅಧಿಕಪಾಲನು ಮುನಿಪ ಕೊಟ್ಟೂರ ಬಸವನು

(ಡಾ.ಬಿ.ಬಿ.ಬಿರಾದರ(ಸಂ), ಬಸವಪಥ, ಆಗಸ್ಟ್,
೧೯೯೫, ಸಂಪುಟ ೧೬, ಸಂಚಿಕೆ ೫, ಪು.೫೬)

ಮೂರ್ಕಲ್ಲಿ ಮಠದಲ್ಲಿ ಗುರುಬಸವನಿದ್ದ ಬಗ್ಗೆ ಇದು ವಿವರಣೆಯನ್ನು ಕೊಡುತ್ತದೆ. ಮತ್ತೊಂದು ಕೊಟ್ಟೂರ ಬಸವಾಷ್ಟಕವು ೮ ಪದ್ಯಗಳಿಂದ ಕೂಡಿದೆ.

ಬಟ್ಟಂಗಗಳ ಬಾಲೆ ತೋರಮ್ಮ ಭಾನುಜೂಟ ಪ್ರಕಾಶನಾ
ಇಷ್ಟರೊಳಗಿನ ಕೋಟಿ ತೇಜನ ಕೊಟ್ಟೂರ ಬಸವಲಿಂಗೇಶನಾ

(ಅದೇ, ಸಂಪುಟ ೧೭, ಸಂಚಿಕೆ ೯)

ಎಂದು ಆರಂಭವಾಗುವ ಈ ಅಷ್ಟಕದ ಕರ್ತೃ ಯಾರೆಂಬುದು ತಿಳಿದಿಲ್ಲವೆಂದು ಬಿರಾದರ್ ಅವರು ಹೇಳಿದ್ದಾರೆ(ಅದೇ, ಪು.೪೩). ಆದರೆ ಇದು ಗುರುಸಿದ್ದನಂಜೇಶನು ಬರೆದಿರಬೇಕೆಂದು ಸ್ಪಷ್ಟವಾಗುತ್ತದೆ. ತನ್ನ ಕೃತಿ ಗುರುರಾಜ ಚಾರಿತ್ರದಲ್ಲಿ ಅತನು

ಬೆಟ್ಟುಣುಗಿಯಾಣ್ಮ ಶ್ರೀ ಗುರು ಸಿದ್ದನಂಜೇಶ

ಕೊಟ್ಟು ರಕ್ಷಿಸುವನನವರತ ಸಂಶಯವಿಲ್ಲ

ಬಟ್ಟಗಂಗಳ ಬಾಲೆ ಚೆನ್ನವೀರಾಂಬಿಕೆಯಯೆಂದನಾ ಗುರುವಲ್ಲಭಂ

(ಸಂಧಿ ೧೪, ಪದ್ಯ ೫೭)

ಎಂದು ಮುಗಿಸುತ್ತಾನೆ. 'ಕೊಟ್ಟೂರ ಬಸವಾಷ್ಟಕ'ದ ಪಲ್ಲವಿಯಲ್ಲಿ ಬಟ್ಟಗಂಗಳ ಬಾಲೆಗೆ ಬೇಡಿಕೊಳ್ಳುವುದು ಕಂಡುಬಂದರೆ, 'ಗುರುರಾಜ ಚಾರಿತ್ರ'ದಲ್ಲಿಯೂ ಬಟ್ಟಗಂಗಳ ಬಾಲೆ ಚೆನ್ನವೀರಾಂಬೆಯನ್ನು ಉಲ್ಲೇಖಿಸ ಲಾಗಿದೆ. ಇದರ ಆಧಾರದ ಮೇಲೆ ಇದನ್ನು ಸಿದ್ಧನಂಜೀಶನೇ ರಚಿಸಿದ್ದಾನೆಂದು ಹೇಳಬಹುದು.

ಗುರುಬಸವನನ್ನು ಸ್ತುತಿಸಿ ಎರೆಡು ದಂಡಕಗಳು ರಚಿತವಾಗಿವೆ. ಎಸ್.ಶಿವಣ್ಣನವರು ಸಂಪಾದಿಸಿದ್ದಾರೆ. (ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಡಿಸೆಂಬರ್, ೧೯೮೩, ಸಂಪುಟ ೬೮, ಸಂಚಿಕೆ ೨). ಇದರಲ್ಲಿ ಕೊಟ್ಟೂರಿ ನಲ್ಲಿ ಸೋಮಕ್ಕನೆಂಬ ಶಿವಭಕ್ತೆಯು ದಿಗಂಬರನಾಗಿದ್ದ ಗುರುಬಸವನಿಗೆ ತನ್ನ ಸೀರೆಯನ್ನೇ ಬಿಚ್ಚಿಕೊಟ್ಟಿದ್ದನ್ನು ಹಾಗೂ ಮರಳಿ ಅದು ಬಂದ ಪವಾಡವನ್ನು ಹಾಗೂ ಸತ್ತ ಎಮ್ಮೆಯನ್ನು ಬದುಕಿಸಿ ಹಾಲು ಕುಡಿದ ಪವಾಡದ ಬಗೆಗೆ ವಿವರಣೆಯನ್ನು ಹೊಂದಿದೆ.

ಕೊಟ್ಟೂರಯ್ಯನ ಕಂದ ಎನ್ನುವ ಇನ್ನೊಂದು ಪಠ್ಯವನ್ನು ವೈ.ಸಿ.ಭಾನುಮತಿಯವರು ಸಂಪಾದಿಸಿದ 'ಮುಖಬೋಳು ಸಿದ್ದರಾಮವಿರಚಿತ ಷಟ್ಸ್ಥಲ ತಿಲಕ' (೧೯೫೭) ಕೃತಿಯ ಅನುಬಂಧದಲ್ಲಿ (ಪು.೨೨೩-೨೨೫) ನೀಡಿದ್ದಾರೆ. ಈ ಕಂದ ಪದ್ಯದಲ್ಲಿ ಗುರುಬಸವನ ಸ್ತುತಿ, ಹಾಗೂ ಆತನನ್ನು ಹೊಗಳಿ ನನ್ನನ್ನು ರಕ್ಷಿಸೆಂದು ಕೃತಿಕಾರ ಅರ್ತನಾಗಿ ಬೇಡಿಕೊಂಡಿದ್ದಾನೆ.

ಮದ್ದಾನಸ್ವಾಮಿಗೆ ಸಂಬಂಧಿದಂತೆ ನಾಲ್ಕು ಸ್ವರವಚನಗಳು ಮಾತ್ರ ಕಂಡುಬರುತ್ತವೆ. ಇನ್ನಾವ ಚಿಕ್ಕ ರಚನೆಗಳು ಇಲ್ಲ.

ದೇಶಕಧಿಕವಾದಂಥ ಶೀಲದುರ್ಗದಿ

ವಾಸವಾಗಿರುತಿಹನ

ಶ್ರೀ ಷಡುಸ್ಥಲಾಧೀಶನನಾದ ಮದ್ದಾನೀಶ

ಭಾಷೆ ಪಾಲಕದೇವ ಭವರೋಗ ವೈದ್ಯನ

(ಎಸ್.ಶಿವಣ್ಣ ಸಂ, ಸಂಪುಟ ೧, ೧೯೯೫, ಪದ್ಯ ೧೭೮)

ಇಲ್ಲಿ ಬರುವ ಶೀಲದುರ್ಗ ಯಾವುದು ತಿಳಿದುಬಂದಿಲ್ಲ. ಸಾಮಾನ್ಯವಾಗಿ ಇದು ರಾಯದುರ್ಗ ಇರಬೇಕು. ಏಕೆಂದರೆ ರಾಯದುರ್ಗದಿಂದ ೧ ಕಿ.ಮೀ. ದೂರದಲ್ಲಿರುವ ಹುಡೇಗೋಳ್ ಎಂಬಲ್ಲಿ ಮದ್ದಾನಸ್ವಾಮಿ ಮಠವಿದೆ. ಇನ್ನೊಂದು ಸ್ವರವಚನವು ಸಹಿತ ಶೀಲದುರ್ಗದಲ್ಲಿ ಮದ್ದಾನೀಶನಿದ್ದನೆಂದು ಹೇಳುತ್ತದೆ.

ಪೊಡವಿಯೊಳ್ ಶೀಲದುರ್ಗ ಪುರವಾಸ ಶ್ರೀ ಗುರು
ಷಡುಸ್ಥಲದೀಶ, ಮದ್ದಾನೀಶ ಸಾಂಬ
ನಡಿಗಳಿಗೆರಗಿ ನಾಪಿಡಿದೆನಾರತೀಯನು
ಕೊಡುವರಗಳ ನಿಮ್ಮ ಬೇಡುವೆ ನಭವ

ಅದೇ, ಪದ್ಯ ೧೭೬

ಮದ್ದಾನೀಶನಿಗೆ ಸಂಬಂಧಿಸಿದಂತೆ ಸಿಗುವ ಇನ್ನು ಎರೆಡು ಸ್ವರವನಚಗಳನ್ನು ಎಸ್.ಶಿವಣ್ಣವರ ಸ್ವರವಚನ ಸಂಪುಟ ೭ರಲ್ಲಿ ಪ್ರಕಟಿಸಿದ್ದಾರೆ. ಇವು ವೈಶಿಷ್ಟ್ಯಪೂರ್ಣವಾಗೇನು ಇಲ್ಲ. ಮದ್ದಾನೀಶನನ್ನು ಸ್ತುತಿಸಲಾಗಿದೆ.

ಇನ್ನುಳಿದಂತೆ ಕೋಲಶಾಂತನ ಬಗ್ಗೆ ಯಾವುದೇ ಪಠ್ಯಗಳು ರಚನೆಗೊಂಡಿಲ್ಲ. ಕೊಟ್ಟೂರ ಬಸವೇಶ್ವರ ಚಾರಿತ್ರ್ಯ ಕೃತಿಯಲ್ಲಿಯೇ ಅಲ್ಲಲ್ಲಿ ಈತನ ಕುರಿತು ವಿವರಿಸಿದ್ದನ್ನು ಬಿಟ್ಟರೆ ಬೇರೇನೂ ಸಿಗುವುದಿಲ್ಲ. ಕೆಂಪಯ್ಯನಿಗೆ ಸಂಬಂಧಿಸಿದಂತೆ ಲಿಖಿತ ಪರಂಪರೆಯಲ್ಲಿ ಯಾವ ವಿವರಗಳು ದೊರೆಯುವುದಿಲ್ಲ.

ಒಟ್ಟಾರೆ ಇವೆಲ್ಲ ಬಿಡಿ ಬಿಡಿ ರಚನೆಗಳಾಗಿದ್ದು ಪೂರ್ಣ ಪ್ರಮಾಣದಲ್ಲಿ ಸಂತರ ಬಗ್ಗೆ ವಿವರವನ್ನು ನೀಡದಿದ್ದರೂ ಐತಿಹಾಸಿಕವಾಗಿ ಕೆಲವೊಂದು ಮಾಹಿತಿಗಳನ್ನು ಒದಗಿಸುತ್ತವೆ. ಆದ್ದರಿಂದ ಅಧ್ಯಯನಕಾರರು ಇಂತಹ ಬಿಡಿಪದಗಳ ಕುರಿತು ಗಮನಹರಿಸಬೇಕಿದೆ.

## ೭.೩. ಮೌಖಿಕ ಪರಂಪರೆ

ನಿರಂತರ ಚಲನಶೀಲತೆಯನ್ನು ಹೊಂದಿರುವ ಜನಪದ ಹಾಡು, ನಂಬಿಕೆಗಳು ಶಿಷ್ಟಪಠ್ಯಗಳಿಗಿಂತ ಭಿನ್ನವಾದ ಚರಿತ್ರೆಯನ್ನು ಕಟ್ಟಿಕೊಡುತ್ತವೆ. ಕೊಟ್ಟೂರ ಗುರುಬಸವನು ಲಿಖಿತ ಪರಂಪರೆಗೆ ಹತ್ತಿರದವನಾದರೂ ಆತನನ್ನು ಆರಾಧಿಸುವ ಸಮುದಾಯಗಳು ಮೌಖಿಕ ಪಠ್ಯಗಳನ್ನು ಆಧರಿಸಿಯೆ ಆಚರಣೆಗಳನ್ನು ಕಟ್ಟಿಕೊಂಡಿವೆ. ಭೂತ ವರ್ತಮಾನದ ಎಲ್ಲ ತಲ್ಲಣಗಳನ್ನು ದಾಖಲಿಸುವ ಈ ಮೌಖಿಕ ಪಠ್ಯಗಳು ಸಮುದಾಯದ ಸಾಮಾಜಿಕ ಆರ್ಥಿಕ ಸ್ಥಿತಿಗತಿಯನ್ನು ಸ್ಪಷ್ಟವಾಗಿ ದಾಖಲಿಸುತ್ತವೆ.

ನಾಯಕನಟ್ಟಿ ತಿಪ್ಪೇಸ್ವಾಮಿಗೆ ಸಂಬಂಧಿಸಿದಂತೆ ಕಾಡುಗೊಲ್ಲರು ಹಾಡುವ ತಿಪ್ಪೇಸ್ವಾಮಿ ಕಾವ್ಯ, ಬಾಲಬಸವರು ಹಾಡುವ ಗೋಣೆಬಸವನ ಕಾವ್ಯಗಳು ಮುಖ್ಯವಾದ ಮೌಖಿಕ ಪಠ್ಯಗಳಾಗಿವೆ. ಈಡಿಗರ

ಚಂದ್ರಪ್ಪನೆಂಬ ಅನಕ್ಷರಸ್ತ ಇನ್ನೊಬ್ಬರಿಗೆ ಹೇಳಿ ಬರೆಸಿದ ಗೋಣಿಬಸವೇಶ್ವರ ಚರಿತ್ರೆ ಕೃತಿಯು ಮೌಖಿಕ ಪಠ್ಯದ ಎಲ್ಲ ಲಕ್ಷಣಗಳನ್ನು ಹೊಂದಿದೆ. ಜನಪದ ನಂಬಿಕೆಗಳನ್ನಾಧರಿಸಿಯೆ ಈ ಕೃತಿ ರಚಿತವಾಗಿರುವುದರಿಂದ ಇದನ್ನು ಮುಂದಿನ ಅಧ್ಯಯನಗಳಲ್ಲಿ ಬಳಸಿಕೊಳ್ಳಲಾಗಿದೆ. ಉಳಿದಂತೆ ಕೊಟ್ಟೂರಿಗೆ ಸಂಬಂಧಿಸಿದಂತೆ ಬಿಡಿ ಪದಗಳು, ಕೋಲಾಟ ಪದಗಳು, ಬಾಲಬಸವರು ಸಾರುವ ಕಾಲಜ್ಞಾನ ವಚನಗಳನ್ನು ಪರಿಶೀಲಿಸಿ ವಿಶ್ಲೇಷಣೆಗೊಳಪಡಿಸಲಾಗಿದೆ.

### ೭.೩.೧. ಸೃಷ್ಟಿ ಸ್ಥಿತಿ, ಲಯ

ಸೃಷ್ಟಿ : ಜನಪದ ಮಹಾಕಾವ್ಯಗಳಲ್ಲಿ ನಾಯಕನ ಆಗಮನವೆ ಸೃಷ್ಟಿಯನ್ನು ಉಂಟು ಮಾಡುವುದರ ಮೂಲಕ ಪ್ರಾರಂಭವಾಗುತ್ತದೆ. ಮಹಾಕಾವ್ಯದ ನಾಯಕರೆ ಭೂಮಿಯನ್ನು ಆಕಾಶವನ್ನು, ಆದಿಶಕ್ತಿಯನ್ನು, ಚರಾಚರಗಳ ಸೃಷ್ಟಿಶಕ್ತಿಯಾಗಿ ಪ್ರಕಟಗೊಳ್ಳುತ್ತಾರೆ. ಮಂಟೇಸ್ವಾಮಿ ಮತ್ತು ಮಲೆಮಾದೇಶ್ವರ ಕಾವ್ಯಗಳ ಆರಂಭದ ಪ್ರಸಂಗಗಳನ್ನು ನೋಡಿದರೆ ಇದು ಸ್ಪಷ್ಟವಾಗುತ್ತದೆ.

ಧರೆಗೆ ದೊಡ್ಡವರ ಕತೆಯಲ್ಲಿ ಆಕಾಶಕ್ಕೆ ಆದಿಯಾಗಿ ಭೂಮಿಯನ್ನು ತರಲು ಜಲಜಾಂಬವಂತನನ್ನು ಸೃಷ್ಟಿಸುತ್ತಾರೆ. ಜಾಂಬವಂತನನ್ನು ಒಂದೇಟಿಗೆ ಹೊಡೆದು ರಕ್ತಬರುವಂತೆ ಮಾಡಿ ಆತ ಆಕಾಶ ಆದಿ ಬಂತು ನನ್ಗೆ ಮುಕ್ತಿ ಕೊಡಿ ಅಂತ ಬೇಡಿಕೊಂಡಾಗ ನಿನ್ನ ರಕ್ತಬಿದ್ದ ಜಾಗವೆಲ್ಲ ಕೆಂಪು ಮಣ್ಣಾಗಲಿ, ಈಲಿಬಿದ್ದ ಜಾಗ ಕಪ್ಪುಮಣ್ಣಾಗಿ, ತೊಳ್ಳ ಬಿದ್ದ ಜಾಗ ಮರಳು ಮಣ್ಣಾಗಿ ನಿನ್ನ ಮೂಳೆಗಳು ಬಿದ್ದ ಜಾಗ ಬೆಟ್ಟಗುಡ್ಡಗಳಾಗಲಿ ಎಂದು ನಿನಗೆ ಆದಿ ಪರಾಶಕ್ತಿ ಅಂತ ನಾಮಕರಣವಾಗಲಿ ಎಂದು ಆಶೀರ್ವದಿಸುತ್ತಾರೆ(ವೆಂಕಟೇಶ ಇಂದ್ವಾಡಿ ಸಂ, ೧೯೯೬, ಪು.೧೫). ಹೀಗೆ ಆದಿಶಕ್ತಿಯನ್ನು ಸೃಷ್ಟಿ ಮಾಡುವ ಪ್ರಸಂಗ ಮಲೆಮಾದೇಶ್ವರ ಕಾವ್ಯದಲ್ಲಿಯೂ ಇದೆ. ಜನಪದರು ಹಾಡುವ ಈ ಮೌಖಿಕ ಕಾವ್ಯದಲ್ಲಿ ಕೆಳವರ್ಗದ ಆದಿಜಾಂಬವಂತ ಇಲ್ಲಿ ದೇವಮಾನವರಿಗೂ ಹಿರಿಯನಾಗಿ ಈ ಭೂಮಿಯ ಸೃಷ್ಟಿಗೆ ಕಾರಣೀಭೂತನಾಗುತ್ತಾನೆ.

ನೀಲಗಾರರು ಮತ್ತು ಕಂಸಾಳೆಯವರು ಹಾಡುವ ಈ ಕಾವ್ಯಗಳಲ್ಲಿ ಸೃಷ್ಟಿಯನ್ನು ಕುರಿತು ಕೆಳವರ್ಗದ ಸಂಕೇತವಾಗಿ ಚಿತ್ರಿಸುತ್ತಾರೆ. ಮುಂದೆ ಕಲ್ಯಾಣ ಪ್ರಸಂಗವನ್ನು ಹಾಡುತ್ತಾರೆ. ಆದರೆ ಗೋಣಿಬಸವನ ಕಾವ್ಯ ಹಾಡುವ ಬಾಲಬಸವರು ಕಲ್ಯಾಣ ಪ್ರಸಂಗಕ್ಕಿಂತ ಮುಂಚಿತವಾಗಿ ಸೃಷ್ಟಿಯ ಕುರಿತು ವಿವರವನ್ನು ನೀಡುವುದಿಲ್ಲ(ಅಥವಾ ನಾನು ಸಂಗ್ರಹಿಸಿದ ವಕ್ತೃ ಇದನ್ನು ಮರೆತಿರಬಹುದು). ಬಾಲಬಸವರು ಅಲ್ಲಮನ ಬೆಡಗಿನ ವಚನದ ರೂಪದಲ್ಲಿ ಕಾವ್ಯ ಆರಂಭ ಮಾಡುತ್ತಾರೆ.

ಕೈಲಾಸದ ಶಿವನ ಮ್ಯಾಲೆ ಹೊನ್ನ ಮಡದಿ ಕುಳಿತ ಕುಳಿತ
ಸ್ವಾಮಿ ದೈವಕೆ ಭಗವಂತ

ಹಾವಿಗೆ ಚಂದ ಮಾಡಲು ಬಂದ ಮ್ಯಾಲೆ ಅಂಬಾರಿ
ಹೊಟ್ಟೆ ಮ್ಯಾಲೆ ನಾಗಪ್ಪನ ನಾಗಾರಿ
ನೀರಿಗಂತ ನಾನು ಹೋದೆ ಬಾವಿ ತುಂಬೈತೆ
ಬಾವಿ ತುಂಬೈತೆ ಬಾವ್ಯಾಗಳ ಹಾವು ನಿಂತೈತೆ
ಅದೇ ಹಾವಿಗೆ ತಿನಬೇಕೆಂತ ಗರುಡ ಬಂದೈತೆ
ಎರಡಕೂ ಜಗಳ ಬಿದ್ದೈತೆ
ಮೋಡ ಇಲ್ಲದ ಮುಗಿಲು ಇಲ್ಲದ ಮಳೆಯು ಸುರಿದೈತೆ
ಎಳೆಹೊಳೆ ಮೂರಡಿ ಬರತೈತೆ
ನೀರ ಹೊಳೆಗೆ ದುಮುಕಿದ ಆನೆ ಬಂದು ಹೊಳೆಯ ಮುಳಗೈತೆ
ಮ್ಯಾಲೆ ತೆಪ್ಪಗ ನಿಂತೈತೆ
ಎಡಗಡೆ ಬದಿಗಿಟ್ಟು ಬಲಗಡೆ ಬಗ್ಗಿ
ಅರಿಯ ತಿಂದೈತೆ ಆಗ ಮರಿಯ ಮೂಡೈತೆ
ಶರಣ ಮಾಡುವ ನಿಮಗೆ ಕರುಣಲಾಲಿಸು ನಮಗೇಯ

(ಅನುಬಂಧ ೬, ಗೋಣಿಬಸವನ ಕಾವ್ಯದ ಆಯ್ದ ಭಾಗ, ಕಲ್ಯಾಣ ಪ್ರಸಂಗ)

ಈ ರೀತಿ ಆರಂಭವಾಗುವ ಕಾವ್ಯ ಸೃಷ್ಟಿಯ ಕುರಿತು ಮೌನವಹಿಸಿ ಕಲ್ಯಾಣದ ಪ್ರಸಂಗವನ್ನು ವಿವರಿಸುತ್ತದೆ. ಕಲ್ಯಾಣದ ಪ್ರಸಂಗವು ಮಂಟೇಸ್ವಾಮಿ ಮತ್ತು ಮಲೆಮಾದೇಶ್ವರ ಕಾವ್ಯಗಳಲ್ಲಿರುವಂತೆಯೇ ಚಿತ್ರಿಸಲಾಗಿದೆ. ಬಾಲಬಸವರು ಮತ್ತು ಗೋಣಿಬಸವ ಪ್ರತ್ಯೇಕ ಅಧ್ಯಯನವನ್ನು ಮಾಡಲು ಸಾಧ್ಯವಾಗುವಷ್ಟು ವಿಷಯವನ್ನು, ಗೌಪ್ಯತೆಯನ್ನು ಉಳಿಸಿಕೊಂಡಿದ್ದಾರೆ. ಈ ಬಗ್ಗೆ ಅಧ್ಯಯನ ನಡೆದರೆ ಇವೆಲ್ಲವನ್ನು ಇನ್ನಷ್ಟು ಸ್ಪಷ್ಟವಾಗಿ ಅರ್ಥೈಸಿಕೊಳ್ಳಬಹುದಾಗಿದೆ.

**ಸ್ಥಿತಿ :** ಗೋಣಿಬಸವನ ಕಾವ್ಯವು ಈತನು ಒಕ್ಕಲಾಗಿಸಿಕೊಳ್ಳುವವರ ವಿವರಗಳನ್ನು ಕೊಡುತ್ತದೆ. ಹೀಗೆ ಒಕ್ಕಲಾಗಿಸಿಕೊಳ್ಳುವಾಗ ಆತನು ಎದುರಿಸಿದ ಸ್ಥಿತಿ, ಮಾಡಿದ ಪವಾಡಗಳು ಸಾಕಷ್ಟು, ಕಾಡುಗೊಲ್ಲರು ಹಾಡುವ ತಿಪ್ಪೇಸ್ವಾಮಿ ಕಾವ್ಯ ಕೂಡ ಹಲವಾರು ಪವಾಡಗಳನ್ನು ವಿವರಿಸುತ್ತಾ ಈತ ಮಾಡಿಕೊಂಡ ಒಕ್ಕಲುಗಳ ವಿವರಣೆಯನ್ನು ಒದಗಿಸುತ್ತದೆ. ಚಿಕ್ಕಳ್ಳಿ ಗ್ರಾಮದಲ್ಲಿ ಗೋಣಿಬಸವ ಹುಲಿಸವಾರಿ ಮಾಡಿದ್ದು, ಚಿತ್ರದುರ್ಗದ ರಾಜ ಮದಕರಿನಾಯಕನಿಗೆ ಶಾಪಕೊಟ್ಟಿದ್ದು, ಅಡವಿ ಸೋಮಲಾಪುರದಲ್ಲಿ ವಡ್ಡೆಟ್ಟಪ್ಪನ ಸೋದರರನ್ನು ಒಕ್ಕಲಾಗಿಸಿ ಮದುವೆಯಾಗಲು ಆಕೆಯನ್ನು ಕರೆತಂದಿದ್ದು, ಚಿಗಟೇರಿ ಶಿವನಯ್ಯನ ಮಾತು ಕೇಳಿ ಈತನನ್ನು ಕೊಲ್ಲಲು ಬಂದ ಉಪ್ಪಾರರನ್ನು, ಬೇಡರನ್ನು, ಮಂತ್ರವಾದಿಯನ್ನು ಒಕ್ಕಲಾಗಿಸಿಕೊಂಡಿದ್ದು, ಹೀಲದಳ್ಳಿ (ಕಂಬದಮ್ಮನಹಳ್ಳಿ)ಯ ಹರಿಜನರಿಗೆ ಲಿಂಗದೀಕ್ಷೆ ನೀಡಿ

ಬಾಲಬಸವರನ್ನಾಗಿಸಿಕೊಂಡಿದ್ದು, ಗುಮ್ಮಗೊಳದಲ್ಲಿ ಪವಾಡ ಮಾಡಿ ಮಠ ಕಟ್ಟಿಸಿದ್ದು, ಕೂಲಹಳ್ಳಿಯಲ್ಲಿ ರಥೋತ್ಸವವನ್ನು ಏರ್ಪಡಿಸಿದ್ದು. ಹೀಗೆ ಹಲವಾರು ಪವಾಡಗಳನ್ನು ಮಾಡುತ್ತಾನೆ. ಆ ಮೂಲಕ ವಿವಿಧ ಜನಾಂಗಗಳನ್ನು ಒಕ್ಕಲಾಗಿಸಿಕೊಳ್ಳುವ ಚಿತ್ರಣ ಗೋಣಿಬಸವ ಕಾವ್ಯದಲ್ಲಿದೆ. ಇದು ಗೋಣಿಬಸವನಿದ್ದ ಸದ್ಯದ ಸ್ಥಿತಿಯನ್ನು ವಿವರಿಸುತ್ತದೆ. ವರ್ತಮಾನದಲ್ಲಿ ಎದುರಾದ ಎಲ್ಲ ಸಂಕಷ್ಟಗಳನ್ನು ಎದುರಿಸಿ ಸುತ್ತಲಿನ ಸಮುದಾಯವನ್ನೆಲ್ಲಾ ತನ್ನ ಒಕ್ಕಲಾಗಿಸಿಕೊಳ್ಳುತ್ತಾನೆ. ಈತನಿಗೆ ಒಕ್ಕಲಾದವರು ಮಠಕ್ಕೆ ನಡೆದುಕೊಳ್ಳುತ್ತಿದ್ದ ರೀತಿಯನ್ನು ಬಾಲಬಸವರು ಈ ರೀತಿ ಚಿತ್ರಸುತ್ತಾರೆ.

ಹರಹರಾ ಭಗವಂತ ತಾನಿ ತಂದಾನಿ ತಾನು
ಕುರುಬರ ಮನಿಯಿಂದ ತಾನಿ ತಂದಾನಿ ತಾನು
ಕುರಿಹಿಂಡು ಬರುತಾವೆ ತಾನಿ ತಂದಾನಿ ತಾನು
ಒಕ್ಕಲಿಗರ ಮನಿಯಿಂದ ತಾನಿ ತಂದಾನಿ ತಾನು
ಎತ್ತು ಎಮ್ಮೆ ಬರುತಾವು ತಾನಿ ತಂದಾನಿ ತಾನು
ಉಪ್ಪಾರ ಮನಿಯಿಂದ ತಾನಿ ತಂದಾನಿ ತಾನು
ಸೊಪ್ಪುಕಾಯಿ ಬರುತಾವು ತಾನಿ ತಂದಾನಿ ತಾನು
ಮೇವಾರ ಮನಿಯಿಂದ ತಾನಿ ತಂದಾನಿ ತಾನು
ಜವಳಿ ಪೆಂಡಿ ಬರುತ್ತೈತಿ ತಾನಿ ತಂದಾನಿ ತಾನು
ಕುಂಬಾರ ಮನಿಯಿಂದ ತಾನಿ ತಂದಾನಿ ತಾನು
ಸೋರೆ ಮಡಿಕೆ ಬರತೈತೆ ತಾನಿ ತಂದಾನಿ ತಾನು
ಮಾದಿಗರ ಮನಿಯಿಂದ ತಾನಿ ತಂದಾನಿ ತಾನು
ಮಿನಿಕಣ್ಣಿ ಬರುತ್ತೈತಿ ತಾನಿ ತಂದಾನಿ ತಾನು

(ಒಟ್ಟು ಕಾವ್ಯ ತುಂಬ ದೀರ್ಘವಾಗಿರುವುದರಿಂದ ಅನುಬಂಧದಲ್ಲಿ ಎಲ್ಲವನ್ನೂ ನೀಡಲಾಗಿಲ್ಲ.
ನನ್ನಲ್ಲಿರುವ ಧ್ವನಿಮುದ್ರಣ ಮಾಡಿಕೊಂಡಿರುವ ಕ್ಯಾಸೆಟ್‌ನಲ್ಲಿ ಈ ಭಾಗವಿದೆ.)

ತಿಪ್ಪೇಸ್ವಾಮಿ ಕಾವ್ಯವು ಕೂಡ ಆತ ಮಾಡಿದ ಹಲವಾರು ಪವಾಡಗಳನ್ನು ವಿವರಿಸುತ್ತದೆ. ಮೊದಲಿಗೆ ಫಣಿಯಪ್ಪನನ್ನು ಅಕ್ಷಯಬುತ್ತಿ ಪವಾಡದ ಮೂಲಕ ತನ್ನ ಭಕ್ತನನ್ನಾಗಿಸಿಕೊಳ್ಳುತ್ತಾನೆ. ಆತನೊಂದಿಗೆ ತಿಪ್ಪೇಸ್ವಾಮಿ ಜೀವನವನ್ನು ಮಾಡುತ್ತಾನೆ.

ಫಣಿಯಪ್ಪನ ಬಡತಾನ ಬಯಲಾಗಿ ಹೋದಾತು
ಫಣಿಯಪ್ಪನ ನಿನ್ನಲ್ಲಿ ಇರುತೀನಿ
ನೀನು ಮಾಡೀದ ಬದುಕೆ ಕೈಗೂಡಿ ಬರಲೆಂದು
ಆಶೀರ್ವಾದವ ಕೊಡುತಾನೆ ತಿಪ್ಪಯ್ಯ ನೋಡಪ್ಪ
ನಿನ್ನ ಬಿಟ್ಟು ಜಂಗುಮನೇ ಹೋಗಲ್ಲ

(ಅನುಬಂಧ ೨, ತಿಪ್ಪೇಸ್ವಾಮಿ ಕಾವ್ಯ)

ಈತನ ಒಕ್ಕಲಾದ ಫಣಿಯಪ್ಪನ ವಂಶಸ್ಥರು ಈಗಲೂ ಒಳಮಠದ ಪೂಜಾರಿಕೆಯನ್ನು ಮಾಡುತ್ತಾರೆ. ನಾಯಕನಟ್ಟಿಯ ದೊರೆ ಬೋಡಿಮಲ್ಲಪ್ಪನಾಯಕನಿಗೆ ಕೆರೆಕಟ್ಟಲು ಸಹಾಯ ಮಾಡಿ ಆತನನ್ನು ತನ್ನಡಿಯಾಳಾಗಿಸಿಕೊಳ್ಳುತ್ತಾರೆ. ತಿಪ್ಪೇಸ್ವಾಮಿಗೆ ತನ್ನ ೭೭ ಬಿರುದಾವಳಿಗಳನ್ನು ಬೋಡಿಮಲ್ಲಪ್ಪನಾಯಕ ಅರ್ಪಿಸುತ್ತಾನೆ. ನಿಡುಗಲ್ಲು ದೊರೆಗೆ ಮಕ್ಕಳ ಭಾಗ್ಯವನ್ನು ಕರುಣಿಸಿ ಆತನನ್ನು ಒಕ್ಕಲಾಗಿಸಿಕೊಳ್ಳುತ್ತಾನೆ (ವಿವರಗಳಿಗೆ ಗಮನಿಸಿ ಅಧ್ಯಾಯ ೫.೧).

ಗುರುಬಸವನನ್ನು ಕುರಿತ ಶಿಷ್ಟಕಾವ್ಯದಲ್ಲೂ ಆತ ಹಲವಾರು ಅರಸರನ್ನು ತನ್ನ ಅಡಿಯಾಳಾಗಿಸಿಕೊಳ್ಳುವ ಚಿತ್ರಣವಿದೆ. ಈ ರೀತಿ ಗೋಣಿಬಸವ, ತಿಪ್ಪೇಸ್ವಾಮಿಯು ಒಕ್ಕಲಾಗಿಸಿಕೊಳ್ಳುವ ಚಿತ್ರಣವನ್ನು ನೀಡುತ್ತಿರುವ ಮೌಖಿಕ ಪರಂಪರೆಯ ಗಾಯಕರು ಇವನ್ನು ಉತ್ಸಾಹದಿಂದ ವಿವರಿಸುತ್ತಾರೆ. ಸಂತರು ಹೀಗೆ ಒಕ್ಕಲಾಗಿಸಿಕೊಳ್ಳುವ ಪವಾಡಗಳ ಮೂಲಕ ಸದ್ಯದ ಸ್ಥಿತಿಯನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಪರಿವರ್ತಿಸಿಕೊಳ್ಳುತ್ತಾರೆ. ಒಕ್ಕಲಾದವರು ಸಂತನ ಶಕ್ತಿಯನ್ನು ಮೆಚ್ಚಿ ಕಪ್ಪಕಾಣಿಕೆಗಳನ್ನು, ಮಠಗಳಿಗೆ ಸೇವೆಯನ್ನು ಅರ್ಪಿಸುತ್ತಾರೆ. ಸಂತನೊಬ್ಬ ಸಮುದಾಯದ ಬದುಕಿನಲ್ಲಿ ರಾಜ ಪ್ರಭುತ್ವದಷ್ಟೇ ಹಿಡಿತವನ್ನು ಪ್ರಭಾವವನ್ನು ಒಕ್ಕಲಾಗಿಸಿಕೊಳ್ಳುವ ಮೂಲಕ ಪಡೆದುಕೊಳ್ಳುತ್ತಿದ್ದನು.

ಲಯ : ಲಯ ಎಂದರೆ ನಿಯಮಬದ್ದವಾದ ಗತಿ ಎಂದರ್ಥ. ಸಾಂಸ್ಕೃತಿಕ ನಾಯಕರು ತಮ್ಮ ಆಚರಣೆಗಳ ಮೂಲಕ ಒಂದು ಕ್ರಿಯಬದ್ಧವಾದ ಸಂಪ್ರದಾಯವನ್ನು ರೂಢಿಸುತ್ತಾರೆ. ಮೌಖಿಕ ಪರಂಪರೆಯ ನಾಯಕರು ತಮ್ಮ ಹಲವಾರು ಪವಾಡಗಳ ಮೂಲಕ ವಿವಿಧ ಜನಾಂಗಗಳನ್ನು ತಮ್ಮ ಒಕ್ಕಲಾಗಿಸಿಕೊಳ್ಳುತ್ತಾರೆ. ಹಾಗೆ ಒಕ್ಕಲಾಗಿಸಿಕೊಂಡ ಸಮುದಾಯಗಳಿಗೆ ಕೆಲವಾರು ಸೇವೆಗಳನ್ನು ಅವರು ನಿಯಮಿಸುತ್ತಾರೆ. ಈಗಲೂ ಅವು ಆಚರಣೆಗಳ ಮೂಲಕ ನಿಯಮಿತವಾಗಿ ನಡೆದುಕೊಂಡು ಬರುತ್ತಿವೆ.

ಪಂಚಗಣಾಧೀಶ್ವರರಲ್ಲಿ ತಿಪ್ಪೇಸ್ವಾಮಿ, ಗುರುಬಸವ, ಮದ್ದಾನಸ್ವಾಮಿ ಮತ್ತು ಗೋಣಿಬಸವ ತಾವು ಬದುಕಿರುವಾಗಲೇ ಹಲವಾರು ಆಚರಣೆಗಳಿಗೆ ವಿವಿಧ ಸಮುದಾಯಗಳನ್ನು ನಿಯಮಿಸುತ್ತಾರೆ. ತಿಪ್ಪೇಸ್ವಾಮಿ ಒಳಮಠದ ಪೂಜಾರಿಕೆಯನ್ನು ಫಣಿಯಪ್ಪನ ವಂಶಸ್ಥರಿಗೆ ವಹಿಸಿದರೆ ಹೊರಮಠದ ಆಚರಣೆಯನ್ನು ಬೇಡ ಜನಾಂಗಕ್ಕೆ ವಹಿಸಿಕೊಡುತ್ತಾರೆ. ಗುರುಬಸವ ಹರಿಜನ ಕೇರಿಯ ಹೆಂಗಸಿಗೆ ತನ್ನ ಜಾತ್ರೆಯ ಸಂದರ್ಭದಲ್ಲಿ ಮೊದಲ ಆರತಿ ನೀನೇ ಬೆಳಗಬೇಕೆಂದು ಹೇಳುತ್ತಾನೆ. ಬಸವಲಿಂಗ ಕವಿ ಈ ರೀತಿಯ ಆಚರಣೆಗಳ ಬಗೆಗೆ ಏನನ್ನೂ ಹೇಳುವುದಿಲ್ಲ. ಮದ್ದಾನಸ್ವಾಮಿ ಮತ್ತು ಗೋಣಿಬಸವ ಉಪ್ಪಾರ, ಹರಪನಹಳ್ಳಿ ಬೇಡರು, ಚಿಕ್ಕಳಿ ಬಣಕಾರ, ಸೋಮಲಾಪುರದ ಕುರುಬರು, ಹಮ್ಮಿಗಿ ದೇಸಾಯಿ, ಹಾವನೂರು ಗ್ರಾಮದವರಿಗೆ, ಕಂಬದಮ್ಮನಹಳ್ಳಿ ಹರಿಜನರಿಗೆ ಹೀಗೆ ವಿವಿಧ ಜನಾಂಗಗಳಿಗೆ ತಾನು ಒಕ್ಕಲಾಗಿಸಿಕೊಳ್ಳುವಾಗಲೆ ಅವರಿಗೆ ವಿವಿಧ ಆಚರಣೆಗಳನ್ನು ನಿಗದಿಪಡಿಸುವುದನ್ನು ಗೋಣಿಬಸವೇಶ್ವರ ಚರಿತ್ರೆ ಮತ್ತು ಬಾಲಬಸವರ ಕಾವ್ಯ ವಿವರಿಸುತ್ತದೆ.

ಈ ಆಚರಣೆಗಳು ಸಾಂಸ್ಕೃತಿಕ ನಾಯಕರ ಸಾಧನೆಗಳ ಪ್ರತೀಕವಾಗಿಯೂ, ಸಮುದಾಯಗಳ ಅನನ್ಯತೆಯ ಭಾಗವಾಗಿಯೂ ಮೌಖಿಕ ಕಾವ್ಯಗಳಲ್ಲಿ ಚಿತ್ರಿತವಾಗಿವೆ. ಒಟ್ಟಾರೆ ಮೌಕಿಕ ಪರಂಪರೆಯ ಸಾಂಸ್ಕೃತಿಕ ನಾಯಕರು ಸೃಷ್ಟಿಯನ್ನು ಉಂಟು ಮಾಡುವುದರ ಮೂಲಕ ಪ್ರಕಟಗೊಂಡು, ತಮ್ಮ ವರ್ತಮಾನದ ಸ್ಥಿತಿಯನ್ನು ಗೆಲ್ಲುತ್ತಾ ಹಲವಾರು ಜನರನ್ನು ಒಕ್ಕಲಾಗಿಸಿಕೊಳ್ಳುತ್ತಾ ಲಯಬದ್ಧವಾದ ಆಚರಣೆಗಳಿಗೆ ಕಾರಣರಾಗಿ ಆ ಮೂಲಕ ಸಮುದಾಯದಲ್ಲಿ ಯಾವತ್ತೂ ಜೀವಂತವಾಗಿದ್ದಾರೆ.

### ೭.೩.೨. ಬುಡಕಟ್ಟು ಜನಾಂಗಗಳ ನೆಲೆಗೊಳ್ಳುವಿಕೆ

ಪಂಚಗಣಾಧೀಶ್ವರರಲ್ಲಿ ಬರುವ ಮದ್ದಾನಸ್ವಾಮಿ, ಗೋಣಿಬಸವ ಮತ್ತು ತಿಪ್ಪೇಸ್ವಾಮಿಯ ಬುಡಕಟ್ಟು ಜನಾಂಗಗಳ ಪರಿವರ್ತನೆಗೆ ಕಾರಣರಾದವರು. ಬೇಟೆ ಸಂಸ್ಕೃತಿಯನ್ನು ಮತ್ತು ಪಶುಪಾಲನ ಸಂಸ್ಕೃತಿಯನ್ನು ಹೊಂದಿದ್ದ ಬೇಡ ಹಾಗೂ ಕುರುಬ ಜನಾಂಗಗಳು ಈ ಸಂತರಿಂದಾಗಿ ಮಧ್ಯಕಾಲದಲ್ಲಿ ಒಂದೆಡೆ ನೆಲೆನಿಲ್ಲುವಂತಾಗಿದೆ. ಜನಪದ ಕಾವ್ಯಗಳು ಈ ಪರಿವರ್ತನೆಯನ್ನು ತಮ್ಮ ಕಾವ್ಯಗಳಲ್ಲಿ ದಾಖಲಿಸಿವೆ.

ತಿಪ್ಪೇಸ್ವಾಮಿ ಅಲೆಮಾರಿ ಬುಡಕಟ್ಟು ಜನಾಂಗಗಳ ನೆಲೆಗೊಳ್ಳುವಿಕೆಯನ್ನೇ ತನ್ನ ಮುಖ್ಯಧ್ಯೇಯವನ್ನಾಗಿ ಹೊಂದಿರುವಂತೆ ಕಾರ್ಯಪ್ರವೃತ್ತನಾಗಿದ್ದಾನೆ. ಒಂದು ಜನಾಂಗ ಸ್ಥಿರವಾಗಿ ನೆಲೆಗೊಳ್ಳುವುದರ ಸಂಕೇತವೆಂದರೆ ಅದು ಕೃಷಿಯನ್ನು ಮಾಡುವುದಾಗಿದೆ. ಕೃಷಿಯನ್ನು ದುಡಿಮೆಯ ಮಾರ್ಗವನ್ನಾಗಿಸಿಕೊಂಡ ಜನಾಂಗಗಳು ಯಾವತ್ತೂ ಅಲೆಮಾರಿಗಳಾಗಿರುವುದಿಲ್ಲ.

ಬೇಡ ಜನಾಂಗಗಳನ್ನು ಒಂದೆಡೆ ನೆಲೆ ನಿಲ್ಲುವಂತೆ ಮಾಡಲು ತಿಪ್ಪೇಸ್ವಾಮಿ ೭ ಕೆರೆ, ೭ ಪುರಗಳನ್ನು ಕಟ್ಟಿಸಿದನೆಂದು ಪವಾಡಗಳು ಹೇಳುತ್ತವೆ. ರಾಯದುರ್ಗದಿಂದ ಫಣಿಯಪ್ಪನ ಜೊತೆಯಲ್ಲಿ ಬರುವ ತಿಪ್ಪೇಸ್ವಾಮಿ ತನ್ನ ನೆಲೆಯನ್ನು ಕಂಡುಕೊಳ್ಳಲು ಊರಿನ ದೇವತೆಯಾದ ಮಾರಮ್ಮನಿಗೆ ಜೋಳಿಗೆ ಬೆತ್ತಗಳ ಪವಾಡವನ್ನು ಮಾಡಿ ಅವಳನ್ನು ಅಲ್ಲಿಂದ ವಡ್ನಳ್ಳಿಗೆ ತೆರಳುವಂತೆ ಮಾಡುತ್ತಾನೆ. ಮಂಟೇಸ್ವಾಮಿ ಇದೇ ರೀತಿ ಬೊಪ್ಪೆಗೌಡನಪುರದಲ್ಲಿ ಉತ್ತರದಿಂದ ಬಂದು ಮೊದಲು ತನ್ನ ನೆಲೆಯನ್ನು ಕಂಡುಕೊಳ್ಳುತ್ತಾನೆ. ತಿಪ್ಪೇಸ್ವಾಮಿ ಮೊದಲು ತನ್ನ ನೆಲೆಯನ್ನು ಭದ್ರಪಡಿಸಿಕೊಳ್ಳುತ್ತಾನೆ.

ನುಗ್ಗಿಕಾಯಿ ಚೆಂದ ನುಗ್ಗಿ ಪೂ ಚೆಂದ
ಮಾರೀಯ ಗುಡಿಚೆಂದ ಅಟ್ಯಾಗ ತಿಪ್ಪೇಸ್ವಾಮಿ
ತಾವೊಳ್ಳೇದೆಂದು ನೆಲೆನಿಂತ
ಆವುಕಾವಾರಿಂದ ತಾ ಬಂದ ತಿಪ್ಪಣ್ಣ
ಇತ್ತಾಳೆ ಚೆಂಬು ಬಲಗೈಲಿ ಇಡಕೊಂಡು
ತಾವೊಳ್ಳೇದೆಂದು ನೆಲೆಗೊಂಡ

(ಡಾ.ಕೃಷ್ಣಮೂರ್ತಿ ಹನೂರು, ೧೯೯೩, ಪು.೨೮೦-೨೮೨)

ತಿಪ್ಪೇಸ್ವಾಮಿ ಬಂದು ಉಳಿದುಕೊಂಡ ಮಾರಿಗುಡಿಯೆ ಈಗ ಒಳಮಠವೆಂದು ಪ್ರಸಿದ್ಧಿಯಾಗಿದೆ. ಹೀಗೆ ನಾಯಕನಟ್ಟಿಯಲ್ಲಿ ನೆಲೆಯೂರಿದ ತಿಪ್ಪೇಸ್ವಾಮಿ ಅಲ್ಲಿನ ಪಾಳೇಗಾರ ಬೋಡಿಮಲ್ಲಪ್ಪನಾಯಕ ಕಟ್ಟಿಸುತ್ತಿದ್ದ ಕೆರೆಗೆ ಸಹಾಯವನ್ನು ಮಾಡುತ್ತಾನೆ. ಸ್ಥಳೀಯ ಜನರನ್ನೆಲ್ಲಾ ಸಂಘಟಿಸಿ ಕೆರೆಯನ್ನು ಕಟ್ಟುವುದನ್ನು ಕಾಡುಗೊಲ್ಲರು ವಿವರಿಸುತ್ತಾರೆ.

ದನವೂನ ಕಾಯರನು ಕುರಿಯಲ್ಲಿ ಕಾಯರನು
ಆಡಾ ಮಕ್ಕಳನು ಹಿಂಡಕಂಡು ತಿಪ್ಪಯ್ಯ
ಕೆರಿಯಾ ಕಟ್ಟಾಕೆ ನೆಡುದಾನೆ ಹೊಸಗುಡ್ಡಾದ
ಬಸುವಣ್ಣಾನಲ್ಲಿ ಕಡಿಸೀದ
ಆಡಾ ಮಕ್ಕಳಿಗೆ ಏನಂಬೂತ ಹೇಳೀದ
ಕೆರಿಯ ಕಟ್ಟಾನಿ ಬರಿರಪ್ಪ
ಹಂಗಂಬೂತ ಕೆರಿಯಾ ಸಾದೂಸಿ ನೆಡಸೀದ
ಕೆರಿಯಾನೆ ಕಟ್ಯಾನೆ ತೂಬು ಇಕ್ಕಿಸಿದಾನೆ
ತುರುನೂರೀಗವನು ಹೋದಾನೋ ತಿಪ್ಪಯ್ಯ
ತುರುನೂರ ಹಳ್ಳ ತಿರಿವಿದನೊ ನಾಯಕನಟ್ಟಿ
ಕೆರಿಯಾನೆ ಕೋಡಿ ಹರಿಯಾಲೆ

(ಅನುಬಂಧ ೨, ತಿಪ್ಪೇಸ್ವಾಮಿ ಕಾವ್ಯ)

ಕೆರಿಯನ್ನು ಕಟ್ಟಲು ಸ್ವತಃ ಕೆಲಸ ಮಾಡಲು ಹೋಗುವ ತಿಪ್ಪೇಸ್ವಾಮಿ ಆ ಮೂಲಕ ನಾಯಕನಟ್ಟಿ ಭಾಗದ ಭಂಜರು ಭೂಮಿಯನ್ನು ಸಾಗುವಳಿ ಭೂಮಿಯನ್ನಾಗಿ ಮಾರ್ಪಡಿಸುತ್ತಾನೆ. ಆ ಮೂಲಕ ಅಲೆಮಾರಿ ಜನಾಂಗಗಳನ್ನು ಕೃಷಿ ಮಾಡುವಂತೆ ಪ್ರೋತ್ಸಾಹಿಸುತ್ತಾನೆ. ಸ್ವತಃ ತಿಪ್ಪೇಸ್ವಾಮಿಯೆ ವ್ಯವಸಾಯದಲ್ಲಿ ತೊಡಗಿರುವ ಚಿತ್ರಣವನ್ನು ಕಾವ್ಯ ಕಟ್ಟಿ ಕೊಡುತ್ತದೆ.

ಫಣಿಯಪ್ಪ ತಿಪ್ಪಯ್ಯ ಇಬ್ಬಾರು ಅವರೀಗ
ಇಬ್ಬಾರು ಕಪ್ಲೆಯ ಹೊಡೆದಾರು ಅವರೀಗ
ಬಾನಿ ಹರಿದೀತು ಗಳಿಗೇಲಿ

(ಅದೇ, ತಿಪ್ಪೇಸ್ವಾಮಿ ಕಾವ್ಯ)

ಎತ್ತುಗಳ ಸಹಾಯದಿಂದ ಬಾವಿಯ ನೀರನ್ನು ಎತ್ತಿ ಹಾಕುವ (ಕಪ್ಲೆ ಹೊಡೆದಾರು) ಈ ಚಿತ್ರಣ ತಿಪ್ಪೇಸ್ವಾಮಿಯು ಕೃಷಿ ಕಾರ್ಯದಲ್ಲಿ ನಿರತನಾಗಿದ್ದುದನ್ನು ತಿಳಿಸುತ್ತದೆ. ಒಂದು ಜನಾಂಗ ನೆಲೆಗೊಳ್ಳಲು ನೀರವಾರಿ ಸೌಲಭ್ಯ ಮತ್ತು ಸಾಗುವಳಿ ಭೂಮಿಯ ಅವಶ್ಯಕತೆಯನ್ನು ಮನಗಂಡಿದ್ದ ತಿಪ್ಪೇಸ್ವಾಮಿ ೭ ಕೆರೆ ೭ಪುರಗಳನ್ನು ಕಟ್ಟಿಸಿದನೆಂದು ಹೇಳಲಾಗುತ್ತದೆ. ಆ ಏಳು ಕೆರೆಗಳೆಂದರೆ ರಾಯನಕೆರೆ, ಭೀಮನಕೆರೆ,

ಹೊಸಕೆರೆ, ನೇರಿಕೆರೆ, ವರದಿನಕೆರೆ ಮತ್ತು ಹಿರೇಕೆರೆ. ಈ ಕೆರೆಗಳನ್ನಲ್ಲದೆ ಬೇಡ ಜನಾಂಗವು ನೆಲೆಗೊಳ್ಳಲು ಸಹಾಯಕವಾಗುವಂತೆ ಗೌರಿಪುರ, ಕುಂದಾಪುರ, ಮಹದೇವಪುರ, ಕಾಶೀಪುರ, ಗಿಡ್ಡಾಪುರ, ಗಂಗ್ಗಾಪುರ, ಬಸಾಪುರಗಳೆಂಬ ೭ ಪುರುಗಳನ್ನು ಕಟ್ಟಿಸಿದನು. ಇವು ಬೋಡಿಮಲ್ಲಪ್ಪನ ಕಾಲದಲ್ಲಿ(೧೬೬೧-೧೬೭೧) ಕಟ್ಟಲ್ಪಟ್ಟಿವೆ(ಅನುಬಂಧ ೧, ನಾಯಕನಟ್ಟಿ ಬಖೈರು).

ಬೇಡ ಜನಾಂಗದ ಆರಾಧ್ಯದೈವವಾದ ತಿಪ್ಪೇಸ್ವಾಮಿ ಕೆರೆ ಕಟ್ಟಿಸುವುದು, ಕೃಷಿ ಮಾಡುವುದು, ಊರುಗಳನ್ನು ನಿರ್ಮಿಸುವುದು ಇವೆಲ್ಲವು ತನ್ನ ನಂಬಿದ ಜನಾಂಗವನ್ನು ನೆಲೆಗೊಳ್ಳುವಂತೆ ಮಾಡುವುದಾಗಿದೆ. ಅಲ್ಲದೆ ಹೊರಮಠದ ಮ್ಯಾಸಬೇಡರ ಸಂಗಕ್ಕೆ ಹೋಗುವುದು ಕೂಡ ಆ ಜನಾಂಗಗಳ ಒಲವುಗಳಿಸಿಕೊಳ್ಳುವ ಪ್ರಯತ್ನವಾಗಿದೆ.

ಬ್ಯಾಡಾರ ಸಂಗಾಕೆ ಹೋದಾನೆ ತಿಪ್ಪಯ್ಯ
ಮದ್ದು ಮಾಂಸಗಳ ಮಾಡಂದ ಹೊರಮಠಕೆ
ಎಡಿಯೇ ತಿಪ್ಪಯ್ಯಗ ಇರುಲೆಂದ

(ಅನುಬಂಧ ೨, ತಿಪ್ಪೇಸ್ವಾಮಿ ಕಾವ್ಯ)

ಮದ್ದುಮಾಂಸಗಳ ಆಹಾರವನ್ನು ಸ್ವೀಕರಿಸಿ ಬೇಡ ಜನಾಂಗದ ಒಲವನ್ನುಗಳಿಸಿ ಅವರು ಇಲ್ಲಿಯೇ ನೆಲೆನಿಂತು ಬದುಕುವಂತೆ ಮಾಡಿದ್ದಾನೆ. ಅಂದಿನಿಂದಲೂ ಮ್ಯಾಸಬೇಡ ಜನಾಂಗದ ಪೂಜಾರಿ ಹೊರಮಠವನ್ನು ಪೂಜಿಸುವ ಪದ್ಧತಿ ರೂಢಿಯಲ್ಲಿದೆ.

ಕುರುಬರ ಆರಾಧ್ಯ ದೈವವಾದ ಗೋಣಿಬಸವನು ಸಹಿತ ಅಲೆಮಾರಿ ಜನಾಂಗಗಳು ನೆಲೆಗೊಳ್ಳಲಿಕ್ಕೆ ಸಹಾಯಕವಾಗುವ ಕೃಷಿ ಸಂಸ್ಕೃತಿಯನ್ನು ಪ್ರೋತ್ಸಾಹಿಸಿದ್ದಾನೆ. ಗೋಣಿಬಸವ ಕೃಷಿಗೆ ಬಳಸುತ್ತಿದ್ದ ಕುಡುಗೋಲನ್ನು, ಮದ್ದಾನಸ್ವಾಮಿ ಮಠದಲ್ಲಿ ಜನ ಈಗಲೂ ತೋರಿಸುತ್ತಾರೆ. ಚಿಕ್ಕಹಳ್ಳಿ ಬಣಕಾರನ ಹೊಲದಲ್ಲಿ ಈತ ಕೃಷಿ ಕೆಲಸದಲ್ಲಿ ತೊಡಗಿದ್ದನೆಂದು ಗೋಣಿಬಸವೇಶ್ವರ ಚರಿತ್ರೆ ತಿಳಿಸುತ್ತದೆ(ಈಡಿಗರ ಚಂದ್ರಪ್ಪ, ೧೯೯೦, ಪು.೩೧). ಗೋಣಿಬಸವನ ಕಾವ್ಯ ಕೂಡ ಈತನ ಕೃಷಿ ಕೆಲಸವನ್ನು ವಿವರಿಸುತ್ತದೆ.

ಸೋಮವಾರ ಗೋಣಿಬಸವ ಉರಿಯನೇಗಿಲ ಹೊಡೆಯುತನಿಂತ
ನೂಲಿನ ಹಾವು ಮಿಣಿಯ ಮಾಡಿ ನಾಗರಹಾವು ಬಾರಿಕೋಲು ಮಾಡಿ
ಚಿಗಟೇರಿ ಶಿವನಯ್ಯ ನಿನ್ನ ಪರಿಪರಿ ಕಾಡಿದನಲ್ಲಾ
ಮೋಡಿಕಾರ ಗೋಣಿಬಸವ ಸಿದ್ಧರ ಕೂಟಾಡಿ
ಸಿದ್ಧವಿದ್ಯ ಕಲಿತಾನಲ್ಲ
ಕಲ್ಲುಗಾಣಕೆ ಹಾಕಿದನಲ್ಲಾ, ಮುಳ್ಳುಗಾಣಕೆ ಹಾಕಿದನಲ್ಲಾ
ವರವಿನ ಪಿಂಡಾಂಡ ಎದ್ದು ಎದ್ದು ಬಂದು ಶರಣ

ಸೋಮವಾರ ಗೋಣಿಬಸವ ಉರಿಯ ನೇಗಿಲ ಹೊಡೆಯುತ ನಿಂತ
ನೂಲಿನ ಹಾವು ಮಿಣೆಯ ಮಾಡಿ ನಾಗರಹಾವು ಬಾರಿಕೋಲು ಮಾಡಿ

(ಅನುಬಂಧ ೬, ಗೋಣಿಬಸವನ ಕಾವ್ಯದ ಆಯ್ದಭಾಗ,
ಹುಲಿಯಿಂದ ವ್ಯವಸಾಯ ಮಾಡಿದ ಪ್ರಸಂಗ)

ಈಗಲೂ ಗುಮ್ಮಗೋಳಮಠದಲ್ಲಿ ಹುಲಿಯವಾಹನವೇರಿ ಗೋಣಿಬಸವ ಕೈಯಲ್ಲಿ ಚಾಟಿ ಹಿಡಿದು ಕೃಷಿ ಮಾಡುತ್ತಿರುವ ಶಿಲ್ಪವನ್ನು ಗೋಡೆಯಲ್ಲಿ ಕಾಣಬಹುದಾಗಿದೆ (ಅನುಬಂಧ ೭, ಛಾಯಾಚಿತ್ರಗಳು, ಚಿತ್ರ ಸಂ.೨೨)

ವಿಜಯನಗರ ಸಾಮ್ರಾಜ್ಯದಲ್ಲಿ ಮಧ್ಯಕರ್ನಾಟಕ ಭಾಗದಲ್ಲಿ ಕೆರೆಗಳ ನಿರ್ಮಾಣದಿಂದಾಗಿ ಬಂಜರು ಭೂಮಿಯನ್ನು ಸಾಗುವಳಿ ಭೂಮಿಯನ್ನಾಗಿ ಮಾಡಲಾಯಿತು. ಸಾಗುವಳಿ ಭೂಮಿಯಲ್ಲಿ ಕೃಷಿ ಕೈಗೊಳ್ಳಲು ವಿವಿಧ ಅಲೆಮಾರಿ ಜನಾಂಗಗಳನ್ನು ಪ್ರೋತ್ಸಾಹಿಸುವ ಕೆಲವನ್ನು ಈ ಧಾರ್ಮಿಕ ಸಂತರು ಮಾಡಿದರು. ಆ ಮೂಲಕ ಈ ಜನಾಂಗಗಳು ಒಂದೆಡೆ ನೆಲೆನಿಲ್ಲುವಂತೆ ಮಾಡಿದರು. ವಿವಿಧ ಜನಾಂಗಗಳ ಮೌಖಿಕ ಕಾವ್ಯಗಳು ಈ ಪರಿವರ್ತನೆಯನ್ನು ತಮ್ಮ ಕಾವ್ಯಗಳಲ್ಲಿ ಹಿಡಿದಿಟ್ಟಿರು ವುದನ್ನು ಕಾಣಬಹುದು.

## ೭.೪. ಶಿಷ್ಟ ಮತ್ತು ಮೌಖಿಕ ಪರಂಪರೆಯಲ್ಲಿ ಕಲ್ಯಾಣ

ಕಲ್ಯಾಣ ಎನ್ನುವುದು ಬರೀ ಒಂದು ಸ್ಥಳವಾಗಿ ತನ್ನನ್ನು ಗುರುತಿಸಿಕೊಳ್ಳುವುದಕ್ಕಿಂತ ಹೆಚ್ಚಾಗಿ ಕರ್ನಾಟಕದ ಸಾಂಸ್ಕೃತಿಕ ಒಡನಾಟದ ಕೇಂದ್ರಬಿಂದುವಾಗಿ ಚರಿತ್ರೆಯುದ್ದಕ್ಕೂ ಗುರುತಿಸಿಕೊಂಡಿದೆ. ೧೨ನೇ ಶತಮಾನದ ವಚನಗಳ ಆಶಯಗಳು, ಶರಣರ ವ್ಯಕ್ತಿತ್ವ ನಂತರದ ಕಾಲದಲ್ಲಿ ಹಲವಾರು ಬಗೆಯ ಅನುಸಂಧಾನಗಳಿಗೆ ಒಳಗಾಗುತ್ತಾ ಕಲ್ಯಾಣವೆನ್ನುವುದನ್ನು ಸ್ಥಳವಾಗಿ ನೋಡದೆ ಒಂದು ಪರಿಕಲ್ಪನೆಯಾಗಿ ಗ್ರಹಿಸುವಂತೆ ಮಾಡಿದೆ.

ಕಲ್ಯಾಣವೆನ್ನುವುದು ಬರೀ ೧೨ನೇ ಶತಮಾನಕ್ಕೆ ಸೇರದೆ ಹಲವಾರು ಕಲ್ಯಾಣಗಳ ನಿರ್ಮಿತಿಗೆ ಕಾರಣವಾಗಿದೆ. ಪ್ರೌಢದೇವರಾಯನ ಕಾಲದಲ್ಲಿ 'ವಿಜಯ ಕಲ್ಯಾಣ' ಪರಿಕಲ್ಪನೆ ಹುಟ್ಟಿಕೊಂಡರೆ ನಂತರದಲ್ಲಿ ಕೊಡೇಕಲ್ ಬಸವಣ್ಣನ ನೇತೃತ್ವದಲ್ಲಿ 'ಅಮರ ಕಲ್ಯಾಣ', ನಾಗಾವಿಯ ಗುರುಗುಂಡ ಬಸವನನ್ನು ಕೇಂದ್ರವಾಗಿರಿಸಿಕೊಂಡು 'ಧರ್ಮಕಲ್ಯಾಣ' ಹುಟ್ಟಿಕೊಂಡಿದೆ.

ವಿಜಯಕಲ್ಯಾಣವು ೧೨ನೇ ಶತಮಾನದ ವಚನಗಳ ಸಂಕಲನ ಟೀಕು, ವ್ಯಾಖ್ಯಾನ, ಸ್ಥಲಕಟ್ಟು ನಿಯೋಜಿತ, ಸಂಪಾದನೆ, ತಾತ್ವಿಕ ವಿಶ್ಲೇಷಣೆಯಿಂದ ಶರಣ ಚಳುವಳಿಗೆ ಸಾಂಸ್ಥಿಕ ರೂಪವನ್ನು ನೀಡಲು ಪ್ರಯತ್ನಿಸಿತು. ಇದಕ್ಕೆ ಹಂಪೆ ಕೇಂದ್ರ ಸ್ಥಳವಾಯಿತು. ಅಮರ ಕಲ್ಯಾಣವು ಕೊಡೇಕಲ್ ಬಸವಣ್ಣ, ರಾಚಪ್ಪಯ್ಯ, ಮಂಟೇಸ್ವಾಮಿ, ತಿಂಥಿಣಿ ಮೋನಪ್ಪಯ್ಯ ಮುಂತಾದವರ ನೇತೃತ್ವದಲ್ಲಿ ವೀರಶೈವ ಧರ್ಮ

೧೫ನೇ ಶತಮಾನದ ಹೊತ್ತಿಗೆ ರೂಢಿಸಿಕೊಂಡಿದ್ದ ಸಾಂಸ್ಥಿಕತೆಗೆ ವಿರುದ್ಧವಾಗಿ ರೂಪುಗೊಂಡಿತು. ಧರ್ಮಕಲ್ಯಾಣವು ಅಮರಕಲ್ಯಾಣದ ಮುಂದುವರಿಕೆಯೇ ಆಗಿ ಗುರುಗುಂಡ ಬಸವನು ಮತ್ತು ಈತನ ಶಿಷ್ಯನಾದ ತಿಪ್ಪಣ್ಣಯ್ಯನ ನೇತೃತ್ವದಲ್ಲಿ ರೂಪುಗೊಂಡಿತು.

ಶಿಷ್ಟ ಸಾಹಿತ್ಯ ಕೃತಿಗಳು ಕಲ್ಯಾಣದಲ್ಲಿ ಶರಣರ ನೇತೃತ್ವದಲ್ಲಿ ಮೂಡಿದ ಆಶಯಗಳಿಗಿಂತ ಶರಣರ ವ್ಯಕ್ತಿತ್ವವನ್ನು ಮುಖ್ಯವಾಗಿಸಿಕೊಂಡು ಪವಾಡಗಳನ್ನು ಸೇರಿಸಿ ಕೃತಿ ರಚನೆ ಮಾಡಿದರು. ಇವರ ದೃಷ್ಟಿಯಲ್ಲಿ ಕಲ್ಯಾಣವೆನ್ನುವುದು ಧರ್ಮಸ್ಥಾಪನೆಗೆ ಕಾರಣವಾದ ಸ್ಥಳ. ಆದರೆ ಇದಕ್ಕಿಂತ ಭಿನ್ನವಾಗಿ ಗ್ರಹಿಸಿದ ಮಂಟೇಸ್ವಾಮಿ, ಮಲೆಮಾದೇಶ್ವರ, ಗೋಣಿಬಸವರ ಪರಂಪರೆಗಳು ಕಲ್ಯಾಣದ ೧೨ನೇ ಶತಮಾನದ ಶರಣರ ಆಶಯಗಳನ್ನು ಮುಖ್ಯವಾಗಿಸಿಕೊಂಡು ಪವಾಡಗಳನ್ನು ಸೇರಿಸಿ ಕಾವ್ಯಗಳನ್ನು ಕಟ್ಟಿದರು. ಇವರ ದೃಷ್ಟಿಯಲ್ಲಿ ಕಲ್ಯಾಣವೆನ್ನುವುದು ತಮ್ಮ ಸದ್ಯದ ಬದುಕಿಗೆ ಬೇಕಾದ ಚೇತನ್ಯವನ್ನು ನೀಡುವ ಹಾಗೂ ವರ್ತಮಾದಲ್ಲಿ ಸಾಂಸ್ಥೀಕರಣವನ್ನು ವಿಮರ್ಶೆಗೊಳಪಡಿಸುವ ಸ್ಥಳವಾಗಿ ಗೋಚರಿಸಿತು.

ಬಾಲಬಸವರು ಹಾಡುವ ಗೋಣಿಬಸವ ಕಾವ್ಯದ ಆರಂಭದಲ್ಲಿ ಕಲ್ಯಾಣದ ಪ್ರಸಂಗವಿದೆ. ಕಲ್ಯಾಣದಲ್ಲಿ ದಾಸೋಹ ಮನೆಯಲ್ಲಿ ಸಹಸ್ರಕೋಟಿ ಜಂಗಮರು ಊಟಕ್ಕೆ ಕೂತಿದ್ದಾರೆ. ಆದರೆ ಬಸವಣ್ಣ ಪರಮಾತ್ಮನಿಗೆ ಊಟ ನೀಡವುದನ್ನು ಮರೆತಿದ್ದಾನೆ. 'ಸಹಸ್ರ ಕೋಟಿ ಜಂಗಮರು, ಕಲ್ಲಿನ ಕೋಟಿ ಶರಣರು ಎಲ್ರು ಕಲ್ತುಬಿಟ್ಟಾರು', ಊಟ ನೀಡ್ತಾರು, ಆಗ ತಾನೆ ಬಸವಣ್ಣಾವ್ರು, ಜಂಗಮರು, ಶರಣರು, ಊಟಕ್ಕೆ ಕುಂತಾರು. ಆದ್ರೆ ಪರಮಾತ್ಮ ಅಂತಾನ್ರಿ, 'ಅಹಾ ಬಸವಣ್ಣ ನನಗೆ ಮರ್ತೇನಪ್ಪ? ಆದರೆ ನೀನ್ ಮರ್ತಿಲ್ಲ, ನಾನು ನಿನಗೆ ಮರವು ಕೊಟ್ಟೇನಿ, ಅದಕ್ಕೆ ಮರ್ತಿ, ನನಗೆ ಬಿಡಗದೆ ಇಲ್ಲ. ನಾನೇ ಬರ್ತೀನೆಂದ' (ಅನುಬಂಧ ೬, ಗೋಣಿಬಸವನ ಕಾವ್ಯದ ಆಯ್ದಭಾಗ, ಕಲ್ಯಾಣದ ಪ್ರಸಂಗ) ನೇರವಾಗಿ ಪರಮಾತ್ಮ ಹರಳಯ್ಯನ ಮನೆಗೆ ಬಂದ ಹರಳಯ್ಯ ಊಟ ಇಲ್ದೆ ಸತ್ತ ಕರದ ಮುಂದೆ ಕುಂತಿದ್ದ. ಪರಮಾತ್ಮ ಆತನಿಗೆ ಭಿಕ್ಷೆ ಬೇಡಿದಾಗ ಊರ ಹೊರಗ ಹೋಗಿ ಅದನ್ನ ಚಿಗ್ದು, ಅದ್ರ ಹೇಸಿಗೆ ತಕ್ಕೊಂಡು ಮೈತುಂಬ ಬಳ್ಕೊಂಡ. ಕರುಳ ತಕ್ಕೊಂಡು ಮುಂದೆ ಎದ್ದು ಗಾಂವೆಗಬ್ಬು ನಾರ್ತಾನೆ. ಅಂಥ ವೇಸ್ದಾರಿಯಾಗಿ ಬಸವಣ್ಣನ ದ್ವಾರಬಾಗಿಲಿಗೆ ಬರ್ತಾನೆ' (ಅನುಬಂಧ ೬, ಅದೇ). ಅಲ್ಲಿ ದ್ವಾರಪಾಲಕ ಪರಮಾತ್ಮನನ್ನು ಒಳಗೆ ಬಿಡದೆ ಹೊಡೆದು ಕಳಿಸುತ್ತಾನೆ. ಆತ ಹೊಡೆದ ಏಟುಗಳು ನೀಲಮ್ಮ ಮತ್ತು ಬಸವಣ್ಣನಿಗೆ ಬೀಳುತ್ತದೆ. ಅವರು ವಿಷಯ ತಿಳಿದು ಪರಮಾತ್ಮನನ್ನು ಹುಡುಕಿಕೊಂಡು ಬರುತ್ತಾರೆ. ಆದ್ರೆ ಒಂದು ಹಗೇವಿನಲ್ಲಿ (ಭತ್ತ ಇನ್ನಿತರ ಕಾಳುಗಳನ್ನು ಸಂಗ್ರಹಿಸುವ ನೆಲದೊಳಗೆ ಮಾಡಿದ ದೊಡ್ಡ ಕಂದಕ) ಆತ ಕೂತಿರುತ್ತಾನೆ. ಇದನ್ನು ತಿಳಿದ ಬಸವ ನೀಲಮ್ಮ ಕ್ಷಮೆ ಬೇಡಿ ಕರೆದುಕೊಂಡು ಹೋಗಲು ಪ್ರಯತ್ನಿಸುತ್ತಾರೆ. ಆದರೆ ಪರಮಾತ್ಮ ಬರುವುದಿಲ್ಲ. ಕೊನೆಗೆ ಆತನನ್ನು ಕೈಹಿಡಿದು ಕರೆದುಕೊಂಡು ಹೋಗಲು ಪ್ರಯತ್ನಿಸುತ್ತಾರೆ. ಆ ಹಗೇವೆಲ್ಲ ಪರಮಾತ್ಮ ರಕ್ತಕೀಯವಾಗಿ ಮಾರ್ಪಾಡುತ್ತಾನೆ. ಅದನ್ನೇ

ಒಂದು ಚೀಲದಲ್ಲಿ ಕಟ್ಕೊಂಡು ಕಲ್ಯಾಣದ ದಾಸೋಹ ಮನೆಗೆ ತರುತ್ತಾರೆ. ಇವರು ರಕ್ತ ಕೀವನ್ನು ತಂದಿದ್ದು ನೋಡಿ ಅಲ್ಲಿದ್ದ ಜಂಗಮರೆಲ್ಲ ಹೊರಟು ಹೋಗಿ ತ್ರಿಪುರಂಜಿ ಕೆರೆಗೆ ಮೈಲಿಗೆ ಕಳೆದುಕೊಳ್ಳಲು ಮುಳುಗುತ್ತಾರೆ. ಕೆರೆಯಲ್ಲಾ ರಕ್ತ ಕೀವಾಗುತ್ತದೆ. ಆಗ ಕೆರೆಯಿಂದ ಮೇಲೆದ್ದು ಬಂದು ನೋಡಿದರೆ ಅವರ ಲಿಂಗಗಳೆಲ್ಲಾ ಮಾಯವಾಗಿ ವಸ್ತ್ರ ಮಾತ್ರ ಉಳಿದಿರುತ್ತದೆ.

ಇದು ಬಾಲಬಸವರು ಹಾಡುವ ಕಲ್ಯಾಣ ಪ್ರಸಂಗದ ಕಥೆಯಾಗಿದೆ. ಈ ಪ್ರಸಂಗದ ಮೂಲಕ ಬಾಲಸವರು ಏನನ್ನು ಹೇಳುತ್ತಿದ್ದಾರೆ? ಕಲ್ಯಾಣದ ಕ್ರಾಂತಿಯ ನಂತರದಲ್ಲಿ ಶರಣರ ಆಶಯಗಳು ಸಾಂಸ್ಥಿಕ ರೂಪವನ್ನು ಪಡೆದುಕೊಂಡವು. ಶರಣಕ್ರಾಂತಿಗೊಂದು ಧಾರ್ಮಿಕ ಚೌಕಟ್ಟು ಪ್ರಾಪ್ತಿಯಾಯಿತು. ಇದನ್ನು ಬಾಲಬಸವರು ಪ್ರತಿಭಟಿಸುತ್ತಿದ್ದಾರೆ. ವೀರಶೈವ ಧರ್ಮದ ಕೇಂದ್ರ ವ್ಯಕ್ತಿಗಳಾದ ಜಂಗಮರನ್ನು ಬಾಲಬಸವರ ಕಾವ್ಯ ನಿರಾಕರಿಸುತ್ತಿದೆ.

ಇಷ್ಟ ಕಾವ್ಯದಲ್ಲಿನ ಪರಮಾತ್ಮನಿಗಿಂತ ಭಿನ್ನವಾಗಿ ಇಲ್ಲಿ ಪರಮಾತ್ಮ ಗೋಚರವಾಗುತ್ತಾನೆ. ಪ್ರತಿಷ್ಠಿತ ರೂಪನ್ನು ಒಡೆದು ಹಾಕಿ ಅಪ್ರತಿಷ್ಠಿತ ಎನ್ನುವ ವಿಕಾರ ರೂಪದಲ್ಲಿ ಪರಮಾತ್ಮ ಕಾಣಿಸಿಕೊಳ್ಳುತ್ತಾನೆ. ಮಂಟೇಸ್ವಾಮಿ ಕಾವ್ಯದಲ್ಲಿಯೂ ಕಲ್ಯಾಣಕ್ಕೆ ಅಲ್ಲಮನಾಗಿ ಪ್ರವೇಶಿಸುವ ಮಂಟೇಸ್ವಾಮಿ ಚಿತ್ರಣ ಹಾಗೂ ಇಲ್ಲಿಯ ಪರಮಾತ್ಮನ ಚಿತ್ರಣ ಒಂದೇ ಇದೆ. ಮಂಟೇಸ್ವಾಮಿಯು ಸತ್ತೆಮ್ಮೆ ಚಕ್ಕಳವಾ| ಹೆಗಲಮೇಲ ಹೊತ್ಕಂಡು| ಆರುಖಂಡುಗ ಕಜ್ಜಿ| ಕೀವು ರಸಿಕ ಒಳಗ| ಏಳುಗಣ್ಣಿನ ಬೆತ್ತ ಕೈಯಲ್ಲಿ ಹಿಡಕಂಡು| ತುಂಬಿದ ಸೋಮಾರದಿವ್ಸ| ಹನ್ನೆರಡ್ಗಂಟಾ ಒಳಾಗ| ಆದಿಯ ಕಲ್ಯಾಣ ತಂದೆ| ಅಲ್ಲಮನಾಗಿ ಬಂದರಂತಾ|(ವೆಂಕಟೇಶ ಇಂದ್ವಾಡಿ(ಸಂ), ೧೯೯೬, ಪು.೧೫) ಎಂದು ಈತನ ಆಗಮನವನ್ನು ವಿರಿಸಲಾಗಿದೆ. ಮಲೆಮಾದೇಶ್ವರನೂ ಇದೇ ರೀತಿಯಲ್ಲಿಯೇ ಬರುವುದನ್ನು ಕಂಸಾಳೆಯವರು ವಿವರಿಸುತ್ತಾರೆ.

ಕೀವುರಸಿಕಾರನಾಗಿ ಬರುವ ಪರಮಾತ್ಮನನ್ನು ನಿರಾಕರಿಸುವ ಜಂಗಮರ ಲಿಂಗಗಳೆಲ್ಲ ಮಾಯವಾಗು ವುದನ್ನು ಚಿತ್ರಿಸುವ ಬಾಲಬಸವರು ವೀರಶೈವವು ಸಾಂಸ್ಥಿಕವಾಗುವುದನ್ನು ವಿರೋಧಿಸುವ, ಸ್ಥಾವರ ಕಲ್ಪನೆಯನ್ನು ಒಡೆದು ಜಂಗಮಕಲ್ಪನೆಯನ್ನು ಸಾರುವುದರ ಸಂಕೇತವಾಗಿದೆ.

೧೫ನೇ ಶತಮಾನದ ವೀರಶೈವ ಕವಿಗಳು ತಮ್ಮ ಅಭಿವ್ಯಕ್ತಿಗೆ ಲಿಖಿತ ಧಾರೆಯನ್ನು ಅವಲಂಬಿಸಿದರೆ, ಈಗಾಗಲೇ ತಮ್ಮ ನಾಯಕರನ್ನು ಗುರುತಿಸಿಕೊಂಡು ವೀರಶೈವ ಧರ್ಮದಿಂದ ಹೊರಗುಳಿದ ಸಮುದಾಯಗಳು ಮೌಖಿಕ ಧಾರೆಯನ್ನು ತಮ್ಮ ಅಭಿವ್ಯಕ್ತಿಯ ವಾಹಕಗಳಾಗಿಸಿಕೊಂಡವು. ತಮ್ಮ ಸಾಂಸ್ಕೃತಿಕ ನಾಯಕನ ಜೀವನ ಘಟನೆಗಳನ್ನು ಕೊಂಡಾಡುವುದರ ಜೊತೆಯಲ್ಲಿ ಶಿಷ್ಟ ಕಾವ್ಯಗಳಿಗೆ ಬೇರೆ ರೀತಿಯಾದ ಪ್ರತಿಕ್ರಿಯೆಯನ್ನು ತೋರಿಸಿದವು(ವೆಂಕಟೇಶ ಇಂದ್ವಾಡಿ, ೧೯೯೯, ಪು.೫). ಇದಕ್ಕೆ ಮುಖ್ಯವಾಗಿ ದುಡಿಯುವ ವರ್ಗಗಳನ್ನು ಸಾಂಸ್ಥಿಕ ಪ್ರಕ್ರಿಯೆಯಿಂದ ಹೊರಗಿಟ್ಟು ಅವರನ್ನು ಶೋಷಣೆಗೆ ಒಳಪಡಿಸಿದುದು

ಕಾರಣವಾಗಿದೆ. ಬಸವಣ್ಣನ ನೇತೃತ್ವದಲ್ಲಿ ಕೆಳವರ್ಗಗಳಿಗೆ ಸಿಕ್ಕ ಸಮಾನತೆ, ಗೌರವ ನಂತರದಲ್ಲಿ ಮರೆಯಾಗಿ ಹೊಯಿತು. ಮತ್ತೆ ಇದನ್ನು ಮರಳಿ ತರಬೇಕೆನ್ನುವ ಹಂಬಲದಿಂದ ಜನಪದ ಕಾವ್ಯಗಳು ಇಂತಹ ಪ್ರಸಂಗವನ್ನು ಸೃಷ್ಟಿ ಮಾಡಿವೆ.

## ೭.೫. ಕಾಲಜ್ಞಾನ ಸಾಹಿತ್ಯ

ಪಂಚಗಣಾಧೀಶ್ವರರಲ್ಲಿ ಕಾಲಜ್ಞಾನ ಸಾಹಿತ್ಯ ರಚಿಸಲು ಕಾರಣವಾದವನೆಂದರೆ ಕೂಲಹಳ್ಳಿ ಗೋಣಿಬಸವ. ಈತನು ಹರಿಜನರಿಗೆ ಲಿಂಗದೀಕ್ಷೆಯನ್ನು ನೀಡಿ ಬಾಲಬಸವರನ್ನಾಗಿಸಿದನು. ಇವರಿಗೆ ಕರ್ಣಕುಂಡಲಗಳನ್ನು, ಉಳುವಿನ ಬೆತ್ತವನ್ನು ಕೊಟ್ಟು ನಿಮಗೆ ಮುಂದಿನ ಆಗಮನವು ಅರಿವಾಗಲಿ ಎಂದು ಆಶೀರ್ವದಿಸಿದನೆಂದು ಗೋಣಿಬಸವೇಶ್ವರ ಚರಿತ್ರೆ ಹೇಳುತ್ತದೆ(ಈಡಿಗರ ಚಂದ್ರಪ್ಪ, ೧೯೯೦, ಪು.೧೫೨). ಅಂದಿನಿಂದ ಬಾಲಬಸವರು ಕಾಲಜ್ಞಾನವನ್ನು ಸಾರುತ್ತಾ ಬದುಕುತ್ತಿದ್ದಾರೆ.

ಕಾಲಜ್ಞಾನವೆಂದರೆ ಮುಂದಿನದನ್ನು ಇಂದೇ ನಿಖರವಾಗಿ ಹೇಳುವುದು ಎಂದರ್ಥವಲ್ಲ ಕಾಲಜ್ಞಾನ ರಚನೆಗಳನ್ನು ಕಣ್ಣಲ್ಲಿ ಕಣ್ಣಿಟ್ಟು ಪರೀಕ್ಷಿಸಿದರೆ ಅದರಲ್ಲಿ ಜನಸಮುದಾಯಕ್ಕೆ ಒದಗಿದ ದುಷ್ಕಾಲ, ಸಾಂಸ್ಕೃತಿಕ ಏಳುಬೀಳುಗಳ ಜೀವಂತ ಅಥವಾ ದುರಂತ ಚಿತ್ರವಿರುತ್ತದೆ. ಈ ದುರಂತವನ್ನು ಸಾಮಾಜಿಕ ಕಳಕಳಿಯ ಅಂದಂದಿನ ಕವಿಗಳು ಬರೆದು, ಹಾಗೆ ಬರೆಯುತ್ತಾ ಆ ದುರಂತವನ್ನು ದಾಟಲು ಜನತೆಗೆ ಧೈರ್ಯ ಹಾಗೂ ಎಚ್ಚರಗಳನ್ನು ನೀಡಿದ್ದಾರೆ (ಬಸವಲಿಂಗ ಸೊಪ್ಪಿಮಠ, ೧೯೯೫, ಪು.೧೨೪).

ಕಾಲಜ್ಞಾನವನ್ನು ಮೊದಲು ರಚಿಸಿದವರು ೧೨ನೇ ಶತಮಾನದ ಶರಣರು ಎನ್ನಲಾಗುತ್ತಾದರೂ ಅದಕ್ಕೆ ಸ್ಪಷ್ಟ ಆಧಾರಗಳಿಲ್ಲ. ಕೊಡೇಕಲ್ ಬಸವಣ್ಣನ ಕಾಲದಲ್ಲಿಯೂ ನೀಲಮ್ಮ, ಗುಹೇಶ್ವರ, ಚೆನ್ನಬಸವ ಎನ್ನುವ ಹೆಸರುಗಳು ಕಂಡುಬರುವುದರಿಂದ ೧೨ನೇ ಶತಮಾನದ ಇವರೇ ಕಾಲಜ್ಞಾನಗಳನ್ನು ರಚಿಸಿದ್ದಾರೆಂದು ತಪ್ಪಾಗಿ ಅರ್ಥೈಸಲಾಗಿದೆ. ಕಾಲಜ್ಞಾನ ವಚನಗಳ ಛಂದಸ್ಸು 'ಸಾಂಗತ್ಯ' ರೂಪವಾಗಿರುವುದು. ಕೊಡೇಕಲ್ ಬಸವಣ್ಣನ ಮಗ ರಾಚಪ್ಪಯ್ಯನು ತನ್ನ ಬಹುತೇಕ ಕೃತಿಗಳನ್ನು 'ಸಾಂಗತ್ಯ'ದಲ್ಲಿಯೇ ಬರೆದಿರುವುದರಿಂದ ಕಾಲಜ್ಞಾನ ಸಾಹಿತ್ಯ ೧೫ನೇ ಶತಮಾನದ ಸೃಷ್ಟಿ ಎಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಕೊಡೇಕಲ್ ಬಸವ ಕನ್ನಡದ ಮೊದಲ ವೀರಶೈವ ಕಾಲಜ್ಞಾನ ಕರ್ತೃವಾಗುತ್ತಾನಲ್ಲದೆ ಅದನ್ನು ಸಾರುವ ಪರಂಪರೆಯ ನೇತಾರನೂ ಆಗಿರುತ್ತಾನೆ. ಇವನ ಈ ಪರಂಪರೆ ಇವನ ಮಕ್ಕಳು, ಶಿಷ್ಯ ಪ್ರಶಿಷ್ಯರ ಮೂಲಕ ಹಾಗೆಯೇ ಬೆಳೆದುಕೊಂಡುಬಂದಿದೆ. ಇವತ್ತು ಕರ್ನಾಟಕದಲ್ಲಿ ಅದರಲ್ಲೂ ಉತ್ತರ ಕರ್ನಾಟಕದಲ್ಲಿ ಕಾಲಜ್ಞಾನವೆಂದರೆ ಕೊಡೇಕಲ್ ಕಾಲಜ್ಞಾನ, ಸಾರುವ ಅಯ್ಯಗಳು ಅರ್ಥಾತ್ ಜಂಗಮರೆಂದರೆ ಕೊಡೇಕಲ್ ಜಂಗಮರೆಂದೆ ಖ್ಯಾತಿ'(ಅದೇ ಪು.೧೨೬).

ಎಮ್ಮೆಬಸವ, ಕೊಡೇಕಲ್ ಬಸವಣ್ಣ, ಮಂಟೇಸ್ವಾಮಿ, ತಿಂಥಿಣಿಮೋನಪ್ಪಯ್ಯ, ಗುರುಗುಂಡ ಬಸವ ಮುಂತಾದ ವ್ಯಕ್ತಿಗಳು, ಹಂಪಿ, ಕೊಡೇಕಲ್ಲು, ತಿಂಥಿಣಿ ಮುಂತಾದ ಸ್ಥಳಗಳು ಕಾಲಜ್ಞಾನಕ್ಕೆ ಸಂಬಂಧಿಸಿದಂತೆ

ಪ್ರಮುಖ ಹೆಸರುಗಳಾಗಿವೆ. ಮಧ್ಯಕರ್ನಾಟಕ ಭಾಗದಲ್ಲಿ ಕಾಲಜ್ಞಾನ ಸಾರುವ ಬಾಲಬಸವರು ಕೊಡೇಕಲ್ ಕಾಲಜ್ಞಾನಗಳನ್ನೇ ಹೇಳುತ್ತಾರೆ.

ಕಾಲಜ್ಞಾನ ಸಾರುವ ಬಾಲಬಸವರು ಬಸವಣ್ಣನವರ ಸ್ತುತಿಯನ್ನು ಮಾಡುತ್ತಾರೆ. ಬಸವನೇ ಅಜ್ಜ, ಬಸವನೇ ಅಜ್ಜಿ, ಬಸವನೇ ತಾಯಿ, ಬಸವನೇ ತಂದೆ, ಬಸವನೇ ಬಂಧು, ಬಸವನೇ ಬಳಗ, ಅಣ್ಣನು ಬಸವ, ತಮ್ಮನು ಬಸವ'(ಅನುಬಂಧ ೫, ಬಾಲಬಸವರ ಕಾಲಜ್ಞಾನ ಹಸ್ತಪ್ರತಿ) ಎಂದು ಆರಂಭವಾಗುವ ಈ ಸ್ತುತಿ ಗೋಣಿಬಸವ ಇಲ್ಲವೆ ಕೊಡೇಕಲ್ಲಬಸವನನ್ನು ಸ್ತುತಿಸುತ್ತಿರಬೇಕು. ಇದೇ ಸ್ತುತಿಯಲ್ಲಿ ಅವರು ಗೋಣಿಬಸವನನ್ನು ನೆನಪಿಸಿಕೊಳ್ಳುತ್ತಾರೆ. 'ಮುಪ್ಪಿನ ಮುದಿಗೋಣಿ ಅಪ್ಪಾ ಸಂಗನಬಸವ ಅರವತ್ತು ಗಾವುದದಲ್ಲಿದ್ದರೆ ಅರಿವಿನ ಗೋಣಿಯಯ್ಯ-ಮೂವತ್ತು ಗಾವುದರಲ್ಲಿದ್ದರೆ ಮುಪ್ಪಿನ ಗೋಣಿಯಯ್ಯ ಅಪ್ಪಾ ಸಂಗನ ಬಸವ ಕೂಲಿಹಳ್ಳಿ ಲೋಲಚೆನ್ನಿಗ, ಚೌಡಿಕಾರರ ಗಂದ ಚಾವುದಿಗೆ ಹೆಬ್ಬುಲಿ'(ಅನುಬಂಧ ೫, ಅದೇ) ಎಂದು ತನಗೆ ದೀಕ್ಷೆ ನೀಡಿದ ಗೋಣಿಬಸವನನ್ನು ಬಾಲಬಸವರು ಸ್ತುತಿಸುತ್ತಾರೆ.

ಕೊಡೇಕಲ್ ಪರಂಪರೆಯಲ್ಲಿ ಹಿಂದೂ ಮುಸ್ಲಿಂ ಎರಡೂ ಧರ್ಮಗಳು ಕೂಡಿ ಸಹಬಾಳ್ವೆ ನಡೆಸಿರುವುದು ಕಂಡುಬರುತ್ತದೆ. ಅವರ ಕಾಲಜ್ಞಾನ, ಆಚರಣೆ, ವಾಸ್ತುಶೈಲಿಗಳಲ್ಲಿ ಇದು ಕಂಡುಬರುತ್ತದೆ. ಕೊಡೇಕಲ್ ಪರಂಪರೆಯ ಭಾಗವಾಗಿರಬಹುದಾದ ಬಾಲಬಸವರ ಕಾಲಜ್ಞಾನ ಹಸ್ತಪ್ರತಿಯಲ್ಲಿಯೂ ಹಿಂದೂ-ಮುಸ್ಲಿಂ ಒಂದೇ ಎನ್ನುವ ಭಾವನೆ ಕಂಡುಬರುತ್ತದೆ.

ಅಲ್ಲಲ್ಲಾ ಮಹಮದ್ ರಸುಲುಲ್ಲಾ ಎಲ್ಲಿ ನೋಡಿದರು ನರಹುಳಕೆ ಸಿಕ್ಕ ದೇವನಲ್ಲ. ಅಲ್ಲಾ ಎಂಬುನು ಬಸವಣ್ಣ ಕುದಾ ಎಂಬುನು ಸಾಕ್ಷಾತ್ ಶಿವ, ಪಾತ್ಮಬೀಬಿ ಎಂಬುವವಳು ಪಾವರ್ತಿ, ಎಲ್ಲೆ ದೇವನಪ್ಪಾ ಬಲ್ಲದ ಶರ್ವಾಣಿ ಸೊಲ್ಲು ಸೊಲ್ಲಿಗೆ ಸಾರ್ಥವಾಗಪ್ಪಾ ನಡೆತಪ್ಪ-ನುಡಿತಪ್ಪ-ನುಡಿಯುವ ನಾಲಿಗೆ ತಪ್ಪು- ಸರ್ವ ತಪ್ಪು ಪಾದದೊಳಗೆ ಇಟ್ಟುಕೊಳ್ಳಪ್ಪಾ(ಅನುಬಂಧ ೫, ಅದೇ).

ಬಸವಣ್ಣ-ಅಲ್ಲಾ, ಕುದಾ-ಶಿವ, ಪಾತ್ಮಬೀಬಿ-ಪಾರ್ವತಿ, ಹೀಗೆ ಹಿಂದೂ ಮುಸ್ಲಿಂ ದೈವಗಳನ್ನು ಒಂದುಗೂಡಿಸಿ ಹೇಳಲಾಗಿದೆ. ಬಾಲಬಸವರು ಕಾಲಜ್ಞಾನದೊಂದಿಗೆ ಕರಪಲ್ಲವನ್ನೂ ಮಾಡುತ್ತಾರೆ. ಕರಪಲ್ಲವು ಕೈಗಳ ಬೆರಳುಗಳ ಮೂಲಕ ಸಂಕೇತವನ್ನು ತಿಳಿಸಲಾಗುತ್ತದೆ. ಕರಪಲ್ಲದಲ್ಲಿ 'ಸುವ್ವಿಬಾ ಸಂಗಯ್ಯ, ಸುವ್ವಿ ಬಾ ಲಿಂಗಯ್ಯ, ಸುವ್ವಿ ಬಾ ಚೆನ್ನಬಸವಯ್ಯ' ಎಂಬ ಪಲ್ಲವಿಯು ಆರಂಭಗೊಳ್ಳುತ್ತದೆ ಬಾಲಬಸವರು ಸಾರುವ ಕರಪಲ್ಲವು ಇದೇ ರೀತಿ ಆರಂಭವಾಗಿ

ಮೂರೇಳು| ದಿನಾವು ಮುಳುಗುವುದು ಮರ್ತ್ಯಕ್ಕೆ| ವೀರವಸಂತ ಬರುವಾಗ<br>
ಹುಟ್ಟಿದೇಳುದಿವಸಕೆ| ಬೆಟ್ಟಗಳು ನಡುಗ್ಯಾವು| ಬೆಟ್ಟಗುಂಡು ಉರುಳ್ಯಾವು ||ಸು||<br>
ಬೆಟ್ಟದಾಗುಂಡು ಉರುಳ್ಯಾವು| ಚೆನ್ನಬಸವಾ| ಸೃಷ್ಟಿಪಾಲಕ ಬರುವಾಗ ||ಸು||

(ಅನುಬಂಧ ೫, ಅದೇ)

ಎಂದು ವೀರವಸಂತ ಬರುವುದನ್ನು ವಿವರಿಸುತ್ತಿದೆ. ಕಾಲಜ್ಞಾನ ಮತ್ತು ಕರಪಲ್ಲಗಳೆರೆಡೂ ಕೊಡೇಕಲ್ ಪರಂಪರೆಯಿಂದಲೆ ಹುಟ್ಟಿವೆ. ಕರವಿನ್ಯಾಸ, ಗಾಯನ, ನೃತ್ಯಗಳನ್ನು ಮೈಗೂಡಿಸಿಕೊಂಡು ಉತ್ತರ ಕರ್ನಾಟಕ ಭಾಗದಲ್ಲಿ ಕರಪಲ್ಲವು ಕರಪಾಲವಾಗಿ ಬೆಳೆದಿದೆ.

ಕೊಟ್ಟೂರ ಗುರುಬಸವನಿಗೆ ಮತ್ತು ಕೊಡೇಕಲ್ ಪರಂಪರೆಗೆ ಇರಬಹುದಾದ ಸಂಬಂಧವನ್ನು ಈಗಾಗಲೇ ವಿವರಿಸಲಾಗಿದೆ(ಅಧ್ಯಾಯ ೩.೨). ಕೊಡೇಕಲ್ ಪರಂಪರೆಯವರಂತೆ ಕಾಲಜ್ಞಾನ ಸಾರುತ್ತ ಬದುಕಿದವನೆಂದರೆ ಎಮ್ಮೆಬಸವ. ಈತನು 'ವಿಜನಯಗರದ ಅರಸರಾದ ವೀರನರಸಿಂಹ, ಕೃಷ್ಣದೇವರಾಯ, ಅಚ್ಯುತರಾಯ, ಸಾದಾಶಿವರಾಯರ ಆಳ್ವಿಕೆಯ ಸಮಯದಲ್ಲಿದ್ದು, ೧೬ನೇ ಶತಮಾನದ ಪ್ರಾರಂಭದಿಂದ ಕೊನೆಯ ಭಾಗದವರೆಗೂ ಇದ್ದನೆಂದು ಹೇಳಬೇಕಾಗುತ್ತದೆ(ಎಫ್.ಟಿ.ಹಳ್ಳಿಕೇರಿ(ಸಂ), ೧೯೯೯, ಪ್ರಸ್ತಾವನೆ). ಈತನು ರಚಿಸಿದ ಹುಯ್ಯಲೋ ಡಂಗುರವ ಎನ್ನುವ ಕಾಲಜ್ಞಾನದಲ್ಲಿ

ಬೇಡ ಭಕ್ತಿಯ ತಾಳಿ ಪಡುವಲ ದೇಶದಿ ಹುಯ್ಯಲೋ ಡಂಗುರವ| ಅಯ್ಯ
ಪೂಜೆಯ ಮಾಡ್ಯಾನು ಕೊಟ್ಟೂರ ಬಸವನ ಹುಯ್ಯಲೋ ಡಂಗುರವ||

(ಅದೇ, ಪು.೩)

ಎಂದು ಪಡುವಲದ ಬೇಡ ದೊರೆಯು ಗುರುಬಸವನನ್ನು ಪೂಜಿಸುತ್ತಿದ್ದ ಬಗ್ಗೆ ವಿವರಿಸಿದ್ದಾನೆ. ಈ ಬೇಡ ದೊರೆ ಹರಪನಹಳ್ಳಿ ಪಾಳೇಗಾರ ಇರಬೇಕು. ಏಕೆಂದರೆ ಹರಪನಹಳ್ಳಿ ಪಾಳೇಗಾರರು ತಮ್ಮ ಅಧಿದೇವತೆಯನ್ನಾಗಿ ಕೊಟ್ಟೂರ ಗುರುಬಸವನಿಗೆ ನಡೆದುಕೊಳ್ಳುತ್ತಿದ್ದರು. ಪಂಚಗಣಾಧೀಶ್ವರರಲ್ಲಿ ಇವರಿಬ್ಬರ ಬಗ್ಗೆ ಬಿಟ್ಟರೆ ಮತ್ತಾರ ಬಗ್ಗೆಯೂ ಕಾಲಜ್ಞಾನ ಸಾಹಿತ್ಯದಲ್ಲಿ ಉಲ್ಲೇಖ ಕಂಡುಬರುವುದಿಲ್ಲ.

## ೭.೬. ಸಾಂಸ್ಕೃತಿಕ ನಾಯಕರ ಪಯಣ

ಶಿಷ್ಟ ಮತ್ತು ಮೌಖಿಕ ಪಠ್ಯಗಳಲ್ಲಿ ಪಂಚಗಣಾಧೀಶ್ವರರು ಸಂಚರಿಸಿದ ಸ್ಥಳಗಳನ್ನು ನಮೂದಿಸಲಾಗಿದೆ. ಶಿಷ್ಟ ಪಠ್ಯಗಳಲ್ಲಿ ಬಸವಲಿಂಗ ಕವಿಯು ಕೊಟ್ಟೂರಬಸವೇಶ್ವರ ಚಾರಿತ್ರ್ಯ ಮಾತ್ರ ಇರುವುದರಿಂದ ಅದು ಗುರುಬಸವನ ಕುರಿತು ಮಾತ್ರ ಹೇಳುತ್ತದೆ. ಅದನ್ನು ಉಳಿದಂತೆ ಹಲವಾರು ಕೃತಿಗಳು ಗುರುಬಸವನ ಬಗ್ಗೆ ಉಲ್ಲೇಖಿಸಿದರೂ ಅವು ಯಾವುವು ಪೂರ್ಣ ಜೀವನನ್ನು ಚಿತ್ರಿಸುವುದಿಲ್ಲ. ಇನ್ನುಳಿದಂತೆ ಬಾಲಬಸವರ ಗೋಣಿ ಬಸವನಕಾವ್ಯ, ಕಾಡುಗೊಲ್ಲರ ತಿಪ್ಪೇಸ್ವಾಮಿ ಕಾವ್ಯ ಪ್ರಮುಖವಾದವುಗಳಾಗಿವೆ. ಈ ಎಲ್ಲ ಪಠ್ಯಗಳು ನಮೂದಿಸುವ ಸ್ಥಳಗಳು ಮುಖ್ಯವಾಗಿ ಬೇಡ ಮತ್ತು ಕುರುಬ ಜನಾಂಗಗಳ ನೆಲೆಬೀಡುಗಳಾಗಿವೆ. ಕೊಟ್ಟೂರ ಗುರುಬಸವನು ಪಯಣಿಸಿದ ಸ್ಥಳಗಳು ಮಾತ್ರ ಲಿಂಗಾಯತ ಸಮುದಾಯದ ಕೇಂದ್ರಸ್ಥಳಗಳಾಗಿವೆ.

ಬಸವಲಿಂಗ ಕವಿಯು ಕೊಟ್ಟೂರು ಬಸವೇಶ್ವರ ಚಾರಿತ್ರ್ಯದಲ್ಲಿ ಗುರುಬಸವನು ಭೂಲೋಕಕ್ಕೆ ಬಂದಿದ್ದು ಮೊದಲು ಸರಸೀಪುರ ಎನ್ನುವಲ್ಲಿ ಎಂದು ವಿವರಿಸುತ್ತಾನೆ (ಸಂಧಿ ೨, ಪದ್ಯ ೯). ಇದು ಈಗಿನ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಹೊಸೂರು ಎನ್ನುವುದಾಗಿದೆ. ಅಲ್ಲಿಂದ ಕೊಟೂರು ಬಸಾಪುರ(ಕೋಲಾರ ಜಿಲ್ಲೆ), ಎಡೆಯೂರು(ತುಮಕೂರು), ನುಗ್ಗೆಹಳ್ಳಿ(ಹಾಸನ), ಹಂಪಿ(ಬಳ್ಳಾರಿ), ಕೊಟ್ಟೂರಿಗೆ(ಬಳ್ಳಾರಿ) ಬಂದಿರುವುದು ಆಧಾರಗಳ ಸಮೇತ ತಿಳಿದುಬರುತ್ತದೆ(ಈ ಬಗ್ಗೆ ಅಧ್ಯಾಯ ೫.೧.೧.ರಲ್ಲಿ ವಿವರಿಸಲಾಗಿದೆ). ಇದಲ್ಲದೆ ಗುರುಬಸವ ಸಂಚರಿಸಿರಲಿಕ್ಕೆ ಸಾಕ್ಷಿಯೆನ್ನುವಂತೆ ಅರಸೀಕೆರೆ, ಬಾಗಲಕೋಟೆ, ಕೂಲಹಳ್ಳಿ, ಸಿರುಗುಪ್ಪ, ಬಂಡ್ರಿ ಸ್ಥಳಗಳಲ್ಲಿಯೂ ಗದ್ದುಗೆ ಮಠಗಳಿವೆ. ಗುರುಬಸವ ಪಯಣ ಮಾಡಿದ ಈ ಸ್ಥಳಗಳೆಲ್ಲಾ ಲಿಂಗಾಯತ ಸಮುದಾಯದ ಕೇಂದ್ರಸ್ಥಳಗಳಾಗಿವೆ. ಇದಲ್ಲದೆ 'ಕೊಟ್ಟೂರು ಬಸವೇಶ್ವರ ಚಾರಿತ್ರ್ಯ' ಕೃತಿಯು ಕಾಶ್ಮೀರ, ಸೌರಾಷ್ಟ್ರ, ಕೇದಾರ, ಕಾಳಹಸ್ತಿ, ಕ್ಷೇತ್ರಗಳಿಗೆ ಗುರುಬಸವ ಪಯಣಿಸಿದ್ದಾಗಿ(ಸಂಧಿ ೭, ಪದ್ಯ ೯-೨೦) ಹೇಳುತ್ತದೆ. ಇದರ ಬಗ್ಗೆ ಹೆಚ್ಚಿನ ಆಧಾರಗಳು ಸಿಗುವುದಿಲ್ಲ. ಆದರೆ ಈ ಎಲ್ಲ ಸ್ಥಳಗಳು ಪ್ರಾಚೀನ ಕಾಲದಿಂದಲೂ ಶೈವಪಂಥದ ಕೇಂದ್ರಗಳಾಗಿವೆ.

ಇನ್ನುಳಿದಂತೆ ಎಲ್ಲ ಸಂತರು ತಿರುಗಾಡಿದ ಸ್ಥಳಗಳ ಕುರಿತು ಮೌಖಿಕ ಕಾವ್ಯಗಳನ್ನು ಗದ್ದುಗೆ ಮಠಗಳನ್ನು ಆಧರಿಸಿಯೇ ನಿರ್ಧರಿಸಬೇಕಾಗುತ್ತದೆ. ತಿಪ್ಪೇಸ್ವಾಮಿಯ ಗದ್ದುಗೆಗಳಿರುವ ನಾಯಕನಟ್ಟಿ ಎರಡುಕೆರೆ, ಗೋಣೂರು, ಕೊಂಡ್ಲಹಳ್ಳಿ, ನಿಡಗಲ್ಲು, ರಂಗಸಮುದ್ರ, ವದನಕಲ್ಲು, ಮಾರಮ್ಮನಹಳ್ಳಿ, ರಾಯದುರ್ಗ ಈ ಎಲ್ಲ ಸ್ಥಳಗಳು ನಾಯಕ ಬೇಡ ಜನಾಂಗದ ಪ್ರಮುಖ ಕೇಂದ್ರಗಳಾಗಿವೆ. ಇವಲ್ಲದೆ ಮದ್ದಾನಸ್ವಾಮಿ ಮತ್ತು ಗೋಣಿಬಸವನ ಗದ್ದುಗೆಗಳಿರುವ ರಾಯದುರ್ಗ, ಹುಡೇಗೋಳ್, ಹರಪನಹಳ್ಳಿ, ಹೊಳಲು ಸ್ಥಳಗಳು ಬೇಡ ಜನಾಂಗದ ಊರುಗಳಾಗಿವೆ. ಕೂಲಹಳ್ಳಿ, ಕುರುವಿನ ಕೋಟೆ, ಹಡಗಲಿ, ಹಾವನೂರು, ಕೊಂಡೇನಳ್ಳಿ, ಗುಮ್ಮಗೋಳ, ಎಳವತ್ತಿ, ಐನಾಪುರ ಅಡವಿಸೋಮಲಾಪುರ, ಅಳವಂಡಿ ಸಿಪ್ಪಿ, ಹೀಲದಳ್ಳಿ ಸ್ಥಳಗಳು ಕುರುಬ ಕೇಂದ್ರವಾಗಿವೆ. ಕೆಂಪಯ್ಯನ ಗದ್ದುಗೆ ಇರುವ ಹರಪನಹಳ್ಳಿ ರಾಯದುರ್ಗ ಬೇಡ ಜನಾಂಗ ಹಾಗೂ ಕೂಲಹಳ್ಳಿಯಲ್ಲಿ ಕುರುಬಜನಾಂಗ ಹೆಚ್ಚಿದ್ದಾರೆ. ಕೋಲಶಾಂತನ ಗದ್ದುಗೆ ಇರುವ ಅರಸೀಕೆರೆ, ಕೊಟ್ಟೂರು, ಭಸ್ಮಾಂಗಿ ಸ್ಥಳಗಳು ಲಿಂಗಾಯತ ಕೇಂದ್ರಗಳಾಗಿವೆ.

ಪಂಚಗಣಾಧೀಶ್ವರರು ಪ್ರಯಾಣ ಮಾಡಿರಬಹುದಾದ ಈ ಗದ್ದುಗೆಮಠಗಳಿರುವ ಸ್ಥಳಗಳು ಮುಖ್ಯವಾಗಿ ಕುರುಬ ಬೇಡ ಜನಾಂಗವಾಗಿವೆ. ಇದು ಏನನ್ನು ಸೂಚಿಸುತ್ತದೆ? ಮಧ್ಯಕಾಲೀನ ಮೌಖಿಕ ಪರಂಪರೆಯ ಸಂತರು ಕುರುಬರು ಮತ್ತು ಬೇಡರನ್ನು ಹುಡುಕಿಕೊಂಡು ಹೋಗಲು ಪ್ರಬಲವಾದ ಕಾರಣವಿದೆ. ಮುಖ್ಯವಾಗಿ ಪ್ರಾಚೀನ ಕಾಲದಿಂದಲೂ ಈ ಎರಡು ಪಂಗಡದವರು ಶೈವನಾಥ ಪರಂಪರೆಯ ಅನುಯಾಯಿಗಳಾಗಿದ್ದರು ಎನ್ನುವುದಾಗಿದೆ. ಮತ್ತೊಂದು ಕಾರಣ ಮಧ್ಯಕಾಲೀನ ರಾಜಕೀಯ ಸ್ಥಿತಿಗೆ ಸಂಬಂಧಿಸಿದ್ದು. ಮಧ್ಯಕಾಲದಲ್ಲಿ ನಿರಂತರ ಯುದ್ಧಗಳಿಂದ ರಾಜಕೀಯ ಅಸ್ಥಿರತೆ ಉಂಟಾಗಿತ್ತು. ಇಂತಹ

ಸಂದರ್ಭದಲ್ಲಿ ಯುದ್ಧ ನಿಪುಣತೆ ಮತ್ತು ಕಬ್ಬಿಣ ಉತ್ಪಾದನೆಯಲ್ಲಿ ಬೇಡ ಮತ್ತು ಕುರುಬ ಜನಾಂಗಗಳು ಹೆಸರಾಗಿದ್ದವು. ಇವರನ್ನು ತಮ್ಮ ಒಕ್ಕಲಾಗಿಸಿಕೊಳ್ಳಲು ಈ ಸಂತರು ಪ್ರಯತ್ನಿಸಿದಂತಿದೆ. ಇವೆಲ್ಲವನ್ನು ಮೌಖಿಕ ಮತ್ತು ಶಿಷ್ಟ ಸಾಹಿತ್ಯದಲ್ಲಿ ಹಾಗೂ ಗದ್ದುಗೆ ಮಠಗಳು ಇರುವ ಸ್ಥಳಗಳ ಆಧಾರದ ಮೇಲೆ ತಿಳಿಯಬಹುದಾಗಿದೆ.

## ೭.೭. ಪಠ್ಯಕ್ಕೂ ಆಚರಣೆಗೂ ಇರುವ ವೈರುಧ್ಯ

ಪಂಚಗಣಾಧೀಶ್ವರರನ್ನು ಕುರಿತು ಇರುವ ಪಠ್ಯಗಳು ಸಂತರ ಸಾಧನೆ ಜೀವನವನ್ನು ವಿವರಿಸುತ್ತಾ ಅವರು ನಂಬಿದ ಆದರ್ಶಗಳನ್ನು ಮೌಲ್ಯಗಳನ್ನು ವಿವರಿಸುತ್ತೇವೆ. ಆದರೆ ಆ ಸಂತರನ್ನು ಆರಾಧಿಸುವ ಸಮುದಾಯಗಳು ಆ ರೀತಿಯಲ್ಲಿ ಬದುಕುತ್ತಿವೆಯೆ? ಅವರು ಸಮುದಾಯದ ಬದುಕಿನಲ್ಲಿ ಅಳವಡಿಸಲೆತ್ನಿಸಿದ ಮೌಲ್ಯಗಳು ಉಳಿದಿವೆಯೆ? ಈಗ ಆಚರಣೆಗಳಲ್ಲಿಯೇನಾದರೂ ಕಂಡುಬರುತ್ತವೆಯೆ? ಪಠ್ಯ ಮತ್ತು ಆಚರಣೆಯ ಮಧ್ಯ ವೈರುಧ್ಯ ಉಂಟಾಗಲು ಯಾವ ಒತ್ತಡಗಳು ಕಾರಣವಾಗಿವೆ? ವರ್ತಮಾನದಲ್ಲಿ ಪಂಚಗಣಾಧೀಶ್ವರರು ಪಡೆದುಕೊಂಡಿರುವ ರೂಪಾಂತರ ಯಾವ ದಿಕ್ಕಿನತ್ತ ಸಾಗಿದೆ? ಈ ಬಗ್ಗೆ ಚರ್ಚಿಸದಿದ್ದರೆ 'ಸಂಸ್ಕೃತಿ ಅಧ್ಯಯನ'ವೆನ್ನುವುದು ಬರಿ ಗತಕಾಲದ ಹುಡುಕಾಟ ಮಾತ್ರವಾಗಿ ಬಿಡುತ್ತದೆ. ವರ್ತಮಾನದಲ್ಲಿಯೂ ಈ ಪಂಥ ರೂಪುಗೊಳ್ಳುತ್ತಿರುವುದು ಗಮನಕ್ಕೆ ಬರದಂತಾಗುತ್ತದೆ.

ಸಾಹಿತ್ಯಿಕ ಪಠ್ಯಕ್ಕೂ ಮತ್ತು ಆಚರಣೆಗೂ ವೈರುಧ್ಯ ಉಂಟಾಗಲು ಹಲವಾರು ಕಾರಣಗಳಿವೆ. ಖುದ್ದು ಸಾಂಸ್ಕೃತಿಕ ನಾಯಕರೇ ಪಠ್ಯಗಳಿಗೆ ವಿರುದ್ಧವೆನ್ನುವಂತೆ ಬದುಕಿರುವ ಬಗ್ಗೆ ಪಠ್ಯಗಳಲ್ಲಿಯೇ ಆಧಾರಗಳು ಸಿಗುತ್ತವೆ. ಬಾಲಬಸವರು ಗೋಣಿಬಸವನಕಾವ್ಯ ಹಾಡುತ್ತಾರೆ. ಆ ಹಾಡಿನಲ್ಲಿ ಅವರು ಆರಂಭದಲ್ಲಿಯೆ ಕಲ್ಯಾಣ ಪ್ರಸಂಗದಲ್ಲಿ ಲಿಂಗದೀಕ್ಷೆಯನ್ನು, ವೀರಶೈವಧರ್ಮದ ಸಾಂಸ್ಥಿಕತೆಯನ್ನು ತೀವ್ರವಾಗಿ ವಿಮರ್ಶೆ ಮಾಡುತ್ತಾರೆ ಎನ್ನುವುದಾದರೆ ಗೋಣಿಬಸವನೆ ಈ ಬಾಲಬಸವರಿಗೆ ಲಿಂಗದೀಕ್ಷೆ ನೀಡುವುದನ್ನು, ನೂರಾರು ಮಠಗಳನ್ನು ಸ್ಥಾಪಿಸುವುದನ್ನು ಹೇಗೆ ವಿವರಿಸುವುದು? ಪಂಚಗಣಾಧೀಶ್ವರರು ಕುಪ್ಪಿನಕೇರಿ ಹನುಮಂತನಿಗೆ ಲಿಂಗದೀಕ್ಷೆ ನೀಡಿದರು ಎನ್ನುವುದನ್ನು ಹೇಗೆ ಅರ್ಥೈಸಿಕೊಳ್ಳುವುದು?

ಮೌಖಿಕ ಪಠ್ಯಗಳು ಮತ್ತು ಸಮುದಾಯದ ಆಚರಣೆಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತವೆ. ಆದರೆ ಯಾವತ್ತಿಗೂ ಇವೆರಡರ ಮಧ್ಯ ವೈರುಧ್ಯ ಉಳಿದುಕೊಂಡು ಬಂದಿದೆ. ಮಂಟೇಸ್ವಾಮಿ ಕಾವ್ಯದಲ್ಲೂ ಮಂಟೇಸ್ವಾಮಿ ಲಿಂಗದೀಕ್ಷೆಯನ್ನು ಸಾಂಸ್ಥಿಕತೆಯನ್ನು ವಿಮರ್ಶೆ ಮಾಡುತ್ತಾನೆ. ಆದರೆ ಬೊಪ್ಪೆಗೌಡನಪುರದಲ್ಲಿ ಮಠ ಮನೆ ಕಟ್ಟಲಿಕ್ಕೆ ಸಂಘರ್ಷಕ್ಕೆ ಇಳಿಯುತ್ತಾನೆ. ಮಾದಪ್ಪ ಸುತ್ತೂರು ಮಠ, ಕುಂತೂರು ಮಠ, ಎಲ್ಲಿಯೂ ನೆಲಸದೆ ನಡುಮಲೆಯಲ್ಲಿ ಬದುಕಲಿಚ್ಛಿಸುತ್ತಾನೆ. ಅದೇ ಮಾದಪ್ಪ ತನಗೆ ಮಠ ಕಟ್ಟಿಸಿಕೊಳ್ಳುವುದಕ್ಕಾಗಿ ಜುಂಜೇಗೌಡನ ಜೊತೆ ಸಂಘರ್ಷಕ್ಕಿಳಿಯುತ್ತಾನೆ.

ವಾಸ್ತವದಲ್ಲಿ ಮೌಖಿಕ ಪರಂಪರೆಯಲ್ಲಿ ಬರುವ ಕಲ್ಯಾಣದ ಪ್ರಸಂಗ ಕಲ್ಪನೆಯಿಂದ ಕೂಡಿದ್ದು. ತಮ್ಮ ನಾಯಕನನ್ನು ೧೨ನೇ ಶತಮಾನದ ಕಲ್ಯಾಣದಲ್ಲಿ ಪವಾಡ ಮಾಡುವಂತೆ ಚಿತ್ರಿಸುವ ಮೂಲಕ ತಮ್ಮ ಸದ್ಯದ ಸ್ಥಿತಿಯಲ್ಲಿ ೧೫-೧೬ನೇ ಶತಮಾನದ ವೀರಶೈವದ ಸಾಂಸ್ಥಿಕತೆಗೆ ಪ್ರತಿಕ್ರಿಯೆ ನೀಡುತ್ತಿರುತ್ತಾರೆ. ಅದೇ ಹೊತ್ತಲ್ಲಿ ತಮ್ಮ ಕಾವ್ಯದ ನಾಯಕನ ಪವಾಡಗಳನ್ನು ವಿವರಿಸುವಾಗ ವರ್ತಮಾನದ ಭಾಗವಾಗಿ ಹಲವಾರು ಮಠಗಳನ್ನು ಕಟ್ಟುವುದನ್ನು ವಿವರಿಸುತ್ತಾರೆ.

ಪಂಚಗಣಾಧೀಶ್ವರರಿಗೆ ಕಾಲದ ಒತ್ತಡದಲ್ಲಿ ತಮ್ಮದೇ ಆದ ಪಂಥವನ್ನು ಕಟ್ಟಿಕೊಳ್ಳಬೇಕಾಗಿದೆ. ಅದಕ್ಕಾಗಿ ಶಿಷ್ಯರನ್ನು, ಭಕ್ತರನ್ನು ಪಡೆಯುತ್ತಾ, ಮಠಗಳನ್ನು ಸ್ಥಾಪಿಸುತ್ತಾ ತಮ್ಮ ಆಲೋಚನೆಗಳನ್ನು ಅರಿವಿನ ಬಗೆಯಾಗಿ ಪರಿವರ್ತಿಸುತ್ತಾ ವರ್ತಮಾನದಲ್ಲಿ ಪ್ರಬಲವಾದ ಅಸ್ತಿತ್ವವನ್ನು ಮೂಡಿಸಬೇಕಾಗುತ್ತದೆ. ಅದಕ್ಕಾಗಿ ಅವರು ಹಲವಾರು ಆಚರಣೆಗಳನ್ನು ರೂಢಿಸುತ್ತಾರೆ. ಈ ಆಚರಣೆ ನಿಯಮಗಳನ್ನೇ ನಂಬಿ ಬದುಕುವ ಸಮುದಾಯಗಳೂ ತಮ್ಮ ವರ್ತಮಾನದ ಒತ್ತಡಗಳಿಗೆ ಒಳಗಾಗಿ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳಲು ಆಚರಣೆಗಳನ್ನು ಆಗಾಗ ಬದಲಿಸುವುದನ್ನು, ಹೊಸ ಆಚರಣೆಗಳನ್ನು ಸೇರಿಸಿಕೊಳ್ಳುವುದನ್ನು ಮಾಡುತ್ತಾರೆ.

ಪಠ್ಯಗಳಲ್ಲಿ ಇಲ್ಲದೆ ಇರುವ ಮಾಲೆಧರಿಸುವ ಆಚರಣೆ ಜಾತ್ರೆ, ಉತ್ಸವಗಳಲ್ಲಿ ಕಂಡುಬರುವ ವೈಭವ ನಾಯಕನಟ್ಟಿ ಹೊರಮಠದಲ್ಲಿ ಮಾಂಸ ಎಡೆ ಕೊಡುವ ಪದ್ಧತಿ ಬದಲಾಗಿರುವುದು, ಕೂಲಹಳ್ಳಿ ಮಠದ ಸ್ವಾಮಿಗಳು ಜಂಗಮರು ಎಂದು ಹೇಳಿಕೊಳ್ಳುತ್ತಿರುವುದು ಇತ್ಯಾದಿಗಳಲ್ಲಿ ಸಮುದಾಯ ತನ್ನ ಅಸ್ತಿತ್ವನ್ನು ಕಂಡುಕೊಳ್ಳಲು ಹೆಣಗಾಡುತ್ತಿರುವುದಕ್ಕೆ ಸಾಕ್ಷಿಯಾಗಿದೆ. ಈ ಐಡೆಂಟಿಟಿಯ ಪ್ರಶ್ನೆ ಆಧುನಿಕ ಕಾಲದಲ್ಲಿ ಮಾತ್ರ ಹುಟ್ಟಿಕೊಂಡಿಲ್ಲ. ಚಾರಿತ್ರಿಕವಾಗಿಯೂ ಇಂಥದೇ ತಾಕಲಾಟದ ಪರಿಸ್ಥಿತಿ ಇತ್ತು. ಕೊಟ್ಟೂರು ಬಸವೇಶ್ವರ ಚಾರಿತ್ರ್ಯದಲ್ಲಿ ಎಲ್ಲಿಯೂ ಹರಿಜನ ಮಹಿಳೆಯ ಮನೆಯಲ್ಲಿ ಊಟ ಮಾಡುವ ಪ್ರಸಂಗವಿಲ್ಲ. ಆದರೆ ಇವತ್ತಿನ ರಥೋತ್ಸವದ ಸಂದರ್ಭದಲ್ಲಿ ಇದೊಂದು ಪ್ರಮುಖ ಆಚರಣೆಯಾಗಿದೆ. ಕೆಳ ವರ್ಗದ ಸಮುದಾಯವು ತನ್ನನ್ನು ಗುರುತಿಸಿಕೊಳ್ಳುವ ಹಂಬಲದಲ್ಲಿ ಇಂತಹುದೊಂದು ಆಚರಣೆ ಜಾರಿಗೆ ಬಂದಿರಬಹುದು ಇಲ್ಲವೆ ಗುರುಬಸವನು ಜಾತ್ಯಾತೀತ ಎನ್ನುವುದನ್ನು ಸ್ಥಾಪಿಸಲು ಈ ಆಚರಣೆ ಹುಟ್ಟಿಕೊಂಡಿಬಹುದು. ಇದಕ್ಕೆ ಇನ್ನೂ ಒಂದು ಕಾರಣವನ್ನು ಊಹಿಸಬಹುದಾಗಿದೆ. ಬಸವಲಿಂಗಕವಿಯೇ ಗುರುಬಸವನು ಹರಿಜನ ಹೆಂಗಸಿನ ಮನೆಯಲ್ಲಿ ಊಟ ಮಾಡಿದ ಪ್ರಸಂಗವನ್ನು ಕೈಬಿಟ್ಟು ಕೃತಿ ರಚಿಸಿರಬಹುದು.

ಒಬ್ಬ ವ್ಯಕ್ತಿಯ ವೈಯಕ್ತಿಕ ನೆಲೆಯಲ್ಲಿ ಪಠ್ಯ ರೂಪುಗೊಂಡರೆ ಆಚರಣೆಗಳು ವಾಸ್ತವ ಸಮಾಜದ ವಿವಿಧ ವರ್ಗದ ಎಲ್ಲ ಸಂಬಂಧಗಳ ಮೂಲಕ ರೂಪುಗೊಳ್ಳುತ್ತಿರುತ್ತವೆ. ಕೆಳವರ್ಗಗಳು ತಮ್ಮ

ಸಮುದಾಯದ ಆದರ್ಶ ಕನಸುಗಳನ್ನು ಪಠ್ಯದ ಮೂಲಕ ಹೇಳುತ್ತಿದ್ದರೂ ವಾಸ್ತವದಲ್ಲಿ ಪಠ್ಯದ ನಾಯಕನಾಗಲಿ ಅಥವಾ ಆ ನಾಯಕನನ್ನು ಆರಾಧಿಸುವ ಸಮುದಾಯಗಳಾಗಲಿ ಸಮಾಜದ ಎಲ್ಲ ಕಟ್ಟುಪಾಡುಗಳ ಮಧ್ಯನೇ ಬದುಕಬೇಕಾಗುತ್ತದೆ. ಹಾಗಾಗಿ ಪಠ್ಯದಲ್ಲಿ ಹೇಳುವ ತತ್ವಗಳು ವಾಸ್ತವದ ಹಲವಾರು ಸಮುದಾಯಗಳ ಒತ್ತಡಗಳ, ಗೊಂದಲಗಳ ಮಧ್ಯದಲ್ಲಿ ರೂಪುಗೊಂಡ ಆಚರಣೆಗಳಲ್ಲಿ ಕಾಣದಾಗುತ್ತವೆ.

# ಸಮಾರೋಪ

ಪಂಚಗಣಾಧೀಶ್ವರರು ಸಾಂಸ್ಕೃತಿಕ ಅಧ್ಯಯನ ಎನ್ನುವ ಪ್ರಸ್ತುತ ಅಧ್ಯಯನವು ಮಧ್ಯಕರ್ನಾಟಕ ಭಾಗದಲ್ಲಿರುವ ಸಮುದಾಯ ರಾಜಕೀಯಾರ್ಥಿಕ, ಸಾಮಾಜಿಕ ಹಿನ್ನೆಲೆಯನ್ನು ಇಟ್ಟುಕೊಂಡು ಶಿಷ್ಟ ಹಾಗೂ ಮೌಖಿಕ ಪಠ್ಯಗಳನ್ನು, ಆಚರಣೆ, ನಂಬಿಕೆಗಳನ್ನು ಆಧರಿಸಿ ರಚಿತವಾದುದಾಗಿದೆ. ಪಂಚಗಣಾಧೀಶ್ವರರು ಪೂರ್ಣಪ್ರಮಾಣದಲ್ಲಿ ಲಿಖಿತ ಪರಂಪರೆಯೊಂದಿಗೆ ಗುರುತಿಸಿಕೊಳ್ಳದೆ ಆದರೆ ಆಚರಣಾತ್ಮಕವಾಗಿ ಮೌಖಿಕ ಪರಂಪರೆಯೊಂದಿಗೆ ಗುರುತಿಸಿಕೊಂಡಿರುವ ವಿಶಿಷ್ಟ ಪಂಥವಾಗಿದೆ. ನೂರೊಂದು ವಿರಕ್ತರ ಕಾಲದ ನಂತರ ನಡೆದ ವೈಷ್ಣವ ಧರ್ಮದ ಪ್ರಾಬಲ್ಯ, ವಿಜಯನಗರದ ಪತನ, ಮುಸ್ಲಿಂ ಪ್ರಭಾವ, ಪಾಳೇಗಾರರ ನಿರಂತರ ಯುದ್ಧಗಳಿಂದುಂಟಾದ ರಾಜಕೀಯ ಅಸ್ಥಿರತೆ ಇತ್ಯಾದಿ ಅಂಶಗಳಿಂದ ರೂಪಿತವಾಗಿರುವ ಈ ಪಂಥದ ಕುರಿತು ಇದುವರೆಗೂ ನಡೆದ ಅಧ್ಯಯನಗಳು ಕಡಿಮೆ. ಮೊಟ್ಟಮೊದಲ ಬಾರಿಗೆ ಇಲ್ಲಿ ಸಮಗ್ರವಾಗಿ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಹೀಗೆ ಕೈಗೊಂಡ ಅಧ್ಯಯನದ ಮೂಲಕ ಕಂಡುಕೊಂಡ ಫಲಿತಗಳು ಈ ಕೆಳಗಿನಂತಿವೆ.

ಮಧ್ಯಕಾಲೀನ ಚರಿತ್ರೆಯ ಸಂದರ್ಭದಲ್ಲಿ ಉತ್ತರ ಮತ್ತು ದಕ್ಷಿಣ ಕರ್ನಾಟಕವನ್ನು ಕೇಂದ್ರವಾಗಿಸಿಕೊಂಡು ಹಲವಾರು ಪಂಥ, ಪರಂಪರೆಗಳು ಕಾರ್ಯನಿರ್ವಹಿಸಿದಂತೆ ಮಧ್ಯಕರ್ನಾಟಕವನ್ನು ಕೇಂದ್ರವಾಗಿಸಿಕೊಂಡು ಕಾರ್ಯನಿರ್ವಹಿಸಿದ ಪಂಥವೆಂದರೆ ಪಂಚಗಣಾಧೀಶ್ವರರ ಪಂಥವಾಗಿದೆ. ಇದುವರೆಗೂ ಈ ಪಂಥದ ಕೆಲವು ಸಂತರನ್ನು ಕುರಿತು ಮಾತ್ರ ಅಧ್ಯಯನಗಳು ನಡೆದಿವೆ. ಆದರೆ ಒಟ್ಟಾರೆಯಾಗಿ ಈ ಪಂಥದ ಕುರಿತು ಇದೇ ಮೊದಲಬಾರಿಗೆ ಅಧ್ಯಯನ ಮಾಡಲಾಗಿದೆ. ಆ ಮೂಲಕ ಮಧ್ಯಕರ್ನಾಟಕವನ್ನು ಯಾವುದೇ ಪಂಥ ಪರಂಪರೆಗಳು ಕೇಂದ್ರವಾಗಿಸಿಕೊಂಡು ಕಾರ್ಯನಿರ್ವಹಿಸಿಲ್ಲ ಎಂದು ತಿಳಿದ ಸಂಶೋಧಕರಿಗೆ ಈ ಪಂಥದ ಬಗ್ಗೆ ಇದು ನಿರ್ವಹಿಸಿದ ಕಾರ್ಯದ ಬಗ್ಗೆ ವಿಶ್ಲೇಷಿಸಿ ತಿಳಿಸಲಾಗಿದೆ.

ಈ ಪಂಥವು ೧೨ನೇ ಶತಮಾನದ ಶರಣರ ಆಶಯ, ನೂರೊಂದು ವಿರಕ್ತರ ಕಾಲಘಟ್ಟ, ತೋಂಟದ ಸಿದ್ಧಲಿಂಗಯತಿಗಳ ಪರಂಪರೆಯ ತತ್ವಗಳೊಂದಿಗೆ ಮಾಡಿದ ಅನುಸಂಧಾನವನ್ನು ವಿವರಿಸಲಾಗಿದ್ದು, ಪಂಚಗಣಾಧೀಶ್ವರರ ಪಂಥ ರೂಪುಗೊಳ್ಳಲು ಈ ಕಾಲಘಟ್ಟಗಳು ಹೇಗೆ ಕಾರಣವಾದವು ಎನ್ನುವುದನ್ನು ಕಂಡುಕೊಳ್ಳಲಾಗಿದೆ.

ಪ್ರಾಚೀನ ಕಾಲದಿಂದಲೂ ಕರ್ನಾಟಕವು ಶೈವನಾಥ ಸಿದ್ಧರ ಪ್ರಮುಖ ಕೇಂದ್ರವಾಗಿದೆ. ಇಲ್ಲಿನ ಹಲವಾರು ಪಂಥಗಳು ಶೈವನಾಥಸಿದ್ಧರ ಪ್ರಭಾವದಲ್ಲಿ ರೂಪುಗೊಂಡಿವೆ. ಪಂಚಗಣಾಧೀಶ್ವರರ ಜೀವನವನ್ನು

ಪವಾಡಗಳನ್ನು ವಿಶ್ಲೇಷಿಸಿ ಇವರು ಶೈವನಾಥ ಸಿದ್ಧರಾಗಿದ್ದರೆಂಬುದನ್ನು ಆಧಾರ ಸಮೇತ ತಿಳಿಸಲಾಗಿದೆ. ಅಲ್ಲದೆ ಕಂಡಾಯ ಪೂಜೆ, ಬಾಲಬಸವರ ಕಾಲಜ್ಞಾನಗಳಲ್ಲಿನ ಮುಸ್ಲಿಂರ ಪ್ರಭಾವ ಕಟ್ಟಡಗಳ ವಿನ್ಯಾಸ ದಲ್ಲಿನ ಮುಸ್ಲಿಂ ಪ್ರಭಾವವನ್ನು ಆಧರಿಸಿ ಮೊದಲಬಾರಿಗೆ ಪಂಚಗಣಾಧೀಶ್ವರರಿಗೆ ಇರುವ ಸೂಫಿ ಪ್ರಭಾವನ್ನು ಕಂಡುಕೊಳ್ಳಲಾಗಿದೆ. ಇದಕ್ಕಾಗಿ ಇದುವರೆಗೂ ಅಕ್ಷರ ಪರಂಪರೆಗೆ ಬಾರದೇ ಇರುವ ಬಾಲ ಬಸವರ ಗೋಣಿಬಸವ ಕಾವ್ಯವನ್ನು, ಬಿಡಿಪದಗಳನ್ನು, ಕೋಲಾಟಪದಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

ಪ್ರಾಚೀನ ಕಾಲದಲ್ಲಿ ಜನಜೀವನವು ಗಣಪದ್ಧತಿಯನ್ನು ಆಧರಿಸಿತ್ತು. ಇಲ್ಲಿ 'ಸಾಮೂಹಿಕ ಶ್ರಮ-ಸಾಮೂಹಿಕ ಅನುಭೋಗ' ಪದ್ಧತಿಯನ್ನು ಅಳವಡಿಸಿಕೊಂಡು ಬದುಕುತ್ತಿದ್ದರು. 'ಗಣದಲ್ಲಿರುವವರೆಲ್ಲರ ಗಣಚಿಹ್ನೆಗೆ ನಿಷ್ಠೆಯನ್ನು ಹೊಂದಿದ್ದರು. ಈ ಪದ್ಧತಿಯನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳಲೆತ್ನಿಸಿದ ಪ್ರಾಚೀನ ಶೈವಪಂಥಗಳು, ಪ್ರಮಥಗಣ, ತೇರಸಗಣ, ವೃಷಭಗಣ ಇತ್ಯಾದಿ ಗಣಗಳನ್ನು ಹೊಂದಿದ್ದರು. ೧೨ನೇ ಶತಮಾನದಲ್ಲಿ ಬದಲಾದ ಕಾಲಮಾನಕ್ಕನುಗುಣವಾಗಿ ಪ್ರಾಚೀನ ಗಣ ಪದ್ಧತಿಯನ್ನು ಅನುಸರಿಸಲು ಪ್ರಯತ್ನಿಸಿದ ಶರಣರು ಕಾಯಕ, ದಾಸೋಹ, ಸ್ತ್ರೀಸಮಾನತೆ ಮುಂತಾದ ತತ್ವಗಳನ್ನು ಜಾರಿಗೆ ತಂದರು. ಈ ಎಲ್ಲ ಇತಿಹಾಸವನ್ನು ವಿಶ್ಲೇಷಿಸಿ 'ಪಂಚಗಣಾಧೀಶ್ವರರು' ಎನ್ನುವ ಪರಿಕಲ್ಪನೆ ಮೂಡಿಬರಲು ಕಾರಣಗಳೇನು ಎನ್ನುವುದನ್ನು ಕಂಡುಕೊಳ್ಳಲಾಗಿದೆ.

ಪ್ರಾಚೀನ ಕಾಲದಿಂದಲೂ ಬೇಡ ಮತ್ತು ಕುರುಬ ಜನಾಂಗಗಳು ಶೈವಪಂಥಗಳಿಗೆ ನಡೆದುಕೊಳ್ಳುತ್ತಾ ಬಂದಿವೆ. ಮಧ್ಯಕರ್ನಾಟಕವು 'ಕುರುಂಬನಾಡು' ಎನಿಸಿಕೊಂಡಿರುವುದಲ್ಲದೆ ಹಲವಾರು ಬೇಡ ಪಾಳೇಗಾರರ ಆಳ್ವಿಕೆಗೆ ಒಳಪಟ್ಟಿದೆ. ಈ ಬೇಡ ಮತ್ತು ಕುರುಬ ಜನಾಂಗಗಳು ಮಧ್ಯಕಾಲದಲ್ಲಿ ಬೇಟೆ ಸಂಸ್ಕೃತಿ ಮತ್ತು ಪಶುಪಾಲನಾ ಸಂಸ್ಕೃತಿಯಿಂದ ಕೃಷಿ ಸಂಸ್ಕೃತಿಗೆ ಪರಿವರ್ತನೆ ಹೊಂದುತ್ತಿದ್ದವು. ಇಂತಹ ಪರಿಸರದಲ್ಲಿ ಬದುಕುತ್ತಿದ್ದ ಪಂಚಗಣಾಧೀಶ್ವರರು ಕೆರೆಗಳನ್ನು, ಪುರಗಳನ್ನು ನಿರ್ಮಾಣ ಮಾಡುವ ಮೂಲಕ, ಸ್ವತಃ ಕೃಷಿ ಕೆಲಸದಲ್ಲಿ ತೊಡಗುವ ಮೂಲಕ ಬೇಡ-ಕುರುಬ ಜನಾಂಗಗಳ ಪರಿವರ್ತನೆಗೆ ಪ್ರೋತ್ಸಾಹಿಸಿದರು. ಮಧ್ಯಕಾಲದಲ್ಲಿ ನಡೆಯುತ್ತಿದ್ದ ನಿರಂತರ ಯುದ್ಧಗಳಿಂದ ಜನಜೀವನದಲ್ಲಿ ಅಸ್ಥಿರತೆ ಮೂಡಿತ್ತು. ಈ ಸಂದರ್ಭದಲ್ಲಿ ಪಂಚಗಣಾಧೀಶ್ವರರು ಮಾಡಿದ ಪವಾಡಗಳ ಹಿಂದಿರುವ ತಾತ್ವಿಕತೆಯನ್ನು, ಒಟ್ಟು ಜೀವನದ ವಿವರನ್ನು ಆಧಾರಸಹಿತ ತಿಳಿದುಕೊಳ್ಳಲಾಗಿದೆ.

ಪಂಚಗಣಾಧೀಶ್ವರರಲೊಬ್ಬನಾದ ಗುರುಬಸವನು ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಹೊಸೂರಿನಿಂದ ಬಂದಿದ್ದಾನೆ. ಪಯಣದ ಹಾದಿಯಲ್ಲಿ ಈತ ಇದ್ದ ಸ್ಥಳಗಳನ್ನು ಆ ಮಾರ್ಗವನ್ನು ಆಧಾರ ಸಮೇತ ಈ ಅಧ್ಯಯನದಲ್ಲಿ ವಿವರಿಸಲಾಗಿದೆ. ತಿಪ್ಪೇಸ್ವಾಮಿಯ ಬಗೆಗಿರುವ ಚಾರಿತ್ರಿಕ ಗೊಂದಲಗಳನ್ನು ಸ್ಪಷ್ಟಪಡಿಸಿದೆ. 'ಪುಣ್ಯಾರಣ್ಯದಹನ ಭೀಮೇಶ್ವರ ನಿರಂಗಸಂಗ' ಎನ್ನುವ ಅಂಕಿತದಲ್ಲಿ ವಚನ ಬರೆದ ಕೋಲಶಾಂತನು, ಪಂಚಗಣಾಧೀಶ್ವರರಲ್ಲಿ ಬರುವ ಅರಸೀಕೆರೆ ಕೋಲಶಾಂತನು ಬೇರೆ ಬೇರೆ ಎಂಬುದನ್ನು

ಆಧಾರಸಹಿತ ನಿರೂಪಿಸಲಾಗಿದೆ. ಇದುವರೆಗೂ ಅರಸೀಕೆರೆ ಕೋಲಶಾಂತನು ವಚನಗಳನ್ನು ಬರೆದಿದ್ದಾನೆಂದು ತಿಳಿಯಲಾಗಿದೆ. ಮೊದಲ ಬಾರಿಗೆ ಈ ಬಗ್ಗೆ ಸ್ಪಷ್ಟ ಆಧಾರಗಳನ್ನು ಕೊಟ್ಟು ಈ ಹೇಳಿಕೆಯನ್ನು ನಿರಾಕರಿಸಲಾಗಿದೆ. ಕೂಲಹಳ್ಳಿ ಗೋಣಿಬಸವ ಮತ್ತು ಮದ್ದಾನಸ್ವಾಮಿ ವಿವಾಹವಾಗುವುದರ ಹಿಂದಿನ ತಾತ್ವಿಕತೆಯನ್ನು ವಿವರಿಸಲಾಗಿದೆ. ಅಲ್ಲದೆ ಕೂಲಹಳ್ಳಿ ಗೋಣಿಬಸವನು ಕಾಲಜ್ಞಾನ ರಚನೆಗೆ, ಬಾಲಬಸವರ ಲಿಂಗದೀಕ್ಷೆಗೆ ಕಾರಣನಾಗಿದ್ದು ಈತನ ಮಠ ಗುಮ್ಮಗೋಳ ಮುಸ್ಲಿಂ ಶೈಲಿಯಲ್ಲಿರುವುದನ್ನು ಆಧರಿಸಿ ಈತನು ಕೊಡೇಕಲ್ ಪರಂಪರೆಯವನಿರಬೇಕೆಂದು ನಿರ್ಧರಿಸಲಾಗಿದೆ. ಈ ಬಗ್ಗೆ ಪ್ರತ್ಯೇಕ ಅಧ್ಯಯನ ಕೈಗೊಳ್ಳುವವರಿಗೆ ಮಾಹಿತಿಗಳನ್ನು ಒದಗಿಸಲಾಗಿದೆ. ಕೆಂಪಯ್ಯನ ಬಗ್ಗೆ ಯಾವುದೇ ಬರಹಗಳು ಬಂದಿಲ್ಲ. ಕ್ಷೇತ್ರಕಾರ್ಯದ ಮೂಲಕ ಕೆಂಪಯ್ಯನ ಬಗ್ಗೆ ಚಾರಿತ್ರಿಕ ವಿವರಗಳನ್ನು, ಜೀವನವನ್ನು ಕಟ್ಟಿಕೊಡಲಾಗಿದೆ.

ನೂರೊಂದು ವಿರಕ್ತರ ನಂತರದ ಕಾಲದಲ್ಲಿನ ವೈಷ್ಣವ ಧರ್ಮದ ಪ್ರಾಬಲ್ಯಕ್ಕೆ ಪಂಚಗಣಾಧೀಶ್ವರರು ತಮ್ಮದೇ ಆದ ರೀತಿಯಲ್ಲಿ ಪ್ರತಿಕ್ರಿಯೆ ನೀಡಿದ್ದಾರೆ. ಈ ಹಿನ್ನೆಲೆಯಲ್ಲಿ ಕುಪ್ಪಿನಕೇರಿ ಹನುಮಂತನಿಗೆ ಲಿಂಗದೀಕ್ಷೆ ಪ್ರಸಂಗವನ್ನು ವಿವರಿಸಲಾಗಿದೆ. ಈಗಲೂ ಆಚರಣೆಯಲ್ಲಿರುವ ಕೊಬ್ಬರಿ ಸುಡುವುದು, ನಾಯಕನಟ್ಟಿಯ ಹೊರಮಠದಲ್ಲಿನ ಮಾಂಸ ಎಡೆಕೊಡುವುದು, ಗೋಣಿಬಸವನ ಜಾತ್ರೆಯಲ್ಲಿನ ಮದುವೆ ಆಚರಣೆಗಳು ಕಾರ್ತಿಕೋತ್ಸವ ಜಾತ್ರೆಗಳನ್ನು ವಿವರಿಸಲಾಗಿದೆ. ಪಂಚಗಣಾಧೀಶ್ವರ ಪಂಥದಲ್ಲಿ ಕೆಳವರ್ಗದವರ ಭಾಗವಹಿಸುವಿಕೆ ಪ್ರಮುಖವಾದುದು. ಕೆಳವರ್ಗದವರು ಭಾಗವಹಿಸುವಿಕೆಯ ಹಿಂದಿನ ತಾತ್ವಿಕತೆಯನ್ನು ಇಂದು ಆಚರಣೆಗಳಲ್ಲಿ ಇದು ಉಳಿದುಕೊಂಡಿರುವ ಬಗೆಯನ್ನು ವಿವರಿಸಲಾಗಿದೆ. ಹಾಗೂ ಪಂಚಗಣಾಧೀಶ್ವರರ ಮಠಗಳು ವೈಶಿಷ್ಟ್ಯಪೂರ್ಣ ವಾಸ್ತುಶಿಲ್ಪದಿಂದ ಕೂಡಿದ್ದು ಅದರ ಹಿಂದಿನ ತಾತ್ವಿಕತೆಯನ್ನು ವಿವರಿಸಲಾಗಿದೆ.

ಪಂಚಗಣಾಧೀಶ್ವರರ ಬಗ್ಗೆ ಬಂದಿರುವ ಎಲ್ಲ ಮೌಖಿಕ ಮತ್ತು ಶಿಷ್ಟ ಪಠ್ಯಗಳನ್ನು ಮೊದಲಬಾರಿಗೆ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಅದರಲ್ಲೂ ಇದೇ ಮೊದಲಬಾರಿಗೆ ಬಾಲಬಸವರು ಹಾಡುವ ಗೋಣಿಬಸವ ಕಾವ್ಯವನ್ನು ಸಂಗ್ರಹಿಸಿ ಅದರಲ್ಲಿನ ತಾತ್ವಿಕತೆ, ಸಂಘರ್ಷ, ಪಂಚಗಣಾಧೀಶ್ವರರ ಬಗ್ಗೆ ಇದು ನೀಡುವ ವೈಶಿಷ್ಟ್ಯಪೂರ್ಣವಾದ ವಿವರಗಳನ್ನು ಕೊಡಲಾಗಿದೆ. ಬಾಲಬಸವಪಂಥ ರೂಪುಗೊಂಡ ಬಗ್ಗೆ ಅವರ ಆಚಾರ ವಿಚಾರ ಸದ್ಯದ ಪರಿಸ್ಥಿತಿಯಲ್ಲಿ ಅವರು ಎದುರಿಸುತ್ತಿರುವ ಸಂದಿಗ್ಧ ಸ್ಥಿತಿಯನ್ನು ಇಲ್ಲಿ ವಿಶ್ಲೇಷಣೆಗೊಳಪಡಿಸಲಾಗಿದೆ ಬಸವಲಿಂಗ ಕವಿ ರಚಿಸಿದ ಶ್ರೀ ಕೊಟ್ಟೂರು ಬಸವೇಶ್ವರ ಚಾರಿತ್ರ್ಯ ಕೃತಿಯನ್ನು, ಕಾಡುಗೊಳ್ಳರ ತಿಪ್ಪೇಸ್ವಾಮಿ ಕಾವ್ಯವನ್ನು, ಬಾಲಬಸವರ ಕಾಲಜ್ಞಾನವನ್ನು ಬಿಡಿಪದಗಳನ್ನು, ಕೋಲಾಟ ಪದಗಳ ಆಧಾರದ ಮೇಲೆ ಹಾಗೂ ಕ್ಷೇತ್ರಕಾರ್ಯದ ಮೂಲಕ ಇವರ ಗದ್ದುಗೆ ಮಠಗಳ ಬಗ್ಗೆ ಇವರು ಸಂಚರಿಸಿದ ಸ್ಥಳಗಳ ಬಗ್ಗೆ ವಿವರಣೆ ನೀಡಲಾಗಿದೆ.

ಇದೇ ಮೊದಲಬಾರಿಗೆ ಬಾಲಬಸವರ ಗೋಣಿಬಸವ ಕಾವ್ಯವನ್ನು ಸಂಗ್ರಹಿಸಿ ಅನುಬಂಧದಲ್ಲಿ ನೀಡಲಾಗಿದೆ. ಅಲ್ಲದೆ ಬಾಲಬಸವರ ಕಾಲಜ್ಞಾನ, ಗುರು ಬಸವನ ಬಗೆಗಿನ ಬಿಡಿಪದಗಳು, ಕೋಲಾಟ ಪದಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

ಒಟ್ಟಾರೆ ಪಂಚಗಣಾಧೀಶ್ವರರು ಮಧ್ಯ ಕರ್ನಾಟಕವನ್ನು ಕೇಂದ್ರವಾಗಿಸಿಕೊಂಡು ಶೈವನಾಥಸಿದ್ಧ, ಸೂಫಿಸಿದ್ದರ ಪ್ರಭಾವ ಹೊಂದಿ ಪ್ರಮುಖವಾಗಿ ಈ ಭಾಗದ ಬೇಡ ಮತ್ತು ಕುರುಬ ಜನಾಂಗದ ಸ್ಥಿತ್ಯಂತರಕ್ಕೆ ಹೇಗೆ ಕಾರಣರಾದರೆಂದು ಇದೇ ಹೊತ್ತಲ್ಲಿ ಲಿಂಗಾಯತ ಸಮುದಾಯವನ್ನೊಳಗೊಂಡಂತೆ ವಿವಿಧ ಕೆಳವರ್ಗದೊಂದಿಗೆ ಇರಿಸಿಕೊಂಡಿದ್ದ ಸಂಬಂಧವನ್ನು ಆಚರಣೆ, ಮೌಖಿಕ ಶಿಷ್ಟ ಪಠ್ಯಗಳ ಮೂಲಕ ಹಾಗೂ ಕ್ಷೇತ್ರಕಾರ್ಯದ ಮೂಲಕ ಕಂಡುಕೊಳ್ಳಲಾಗಿದೆ.

# ಅನುಬಂಧಗಳು

ಅನುಬಂಧ ೧

## ನಾಯಕನಹಟ್ಟಿ ಬಖೈರು

(ಚಂದ್ರವಳ್ಳಿ ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ)

### ಶ್ರೀಶೈಲ ಮಲ್ಲೇಶ್ವರ

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರುಷಂಗಳು ೧೨೬೨ಗೆ ವಿರೋಧಿ ನಾಮ ಸಂ ವೈಶಾಖ ಶು ೧೦ ಗುರುವಾರದಲ್ಲು ಶ್ರೀಶೈಲ ಪರ್ವತಕ್ಕೆ ಪ್ರಾಗ್ಭಾದಲ್ಲೂ ಕರ್ರೆಮಲೇ ಬಿಳೀಮಲೆ ಯಂಜುವ ಶ್ರೀರಂಣ್ಯದಲ್ಲೂ ಒಂಣಕೇ ಲಕ್ಷ ಕಂಪಳೆ ಯಿಟ್ಟುಕೊಂಡು ೧ ೧ ಕಾಟಮಲ್ಲನಾಯ್ಕ ಯೀತನ ತಂಮ್ಮಂದಿರು ೬ ಅಂತ್ತು ೭ಯಿವರ ಪರಿವಾರ ಜನರು ವೆಂಸರು ೫೦೦ ಜನರು ಸಹಾ ಆ ಸ್ಥಳದಲ್ಲಿ ಸುಖವೃತ್ತಿ ಯಿಂದ್ದಾರು ಯಿಲ್ಲಿ ಅಷ್ಟರಲ್ಲೆ ದೈವಯೋಗದಿಂದ್ದಾ ದ್ವಾದಶ ವರ್ಷ ಅನಾವೃಷ್ಟಿಯಾಗಿ ಕ್ಷಾಮಡಾಂಮ್ರ ಯೀ ದೇಶಕ್ಕೆ ತಟ್ಟಿದ ಪ್ರಯಮುಕ್ತ ಯೀ ಕಂಪಳ ಯೀಜನರು ಯಿರುವದಕ್ಕೆ ನಿರ್ವಹಿಸಲಾರದೆ ಯಿದಕ್ಕೆ ಯೆನು ಯೊಚನೆಯಂದೂ ಯೀ ಜನಗಳ ಕಾಟೇಮಲ್ಲನಾಯ್ಕನ ಕೇಳಿದರು ಅವರು ಯೆಳು ೭ ಮಂದ್ದಿ ಯೊಚನೆ ಮಾಡಿ ಪಶ್ಚಿಮ ದೇಶದಲ್ಲೂ ಹುಲ್ಲು ನೀರೂ ಜನರು ಸೌಖ್ಯದಲ್ಲು ಯಾರಾರೆಲ್ಲಿಲ್ಲಿಗೆ ಹೋಗತಕ್ಕದ್ದು ಯೆಂದ್ದೂ ನಿಶ್ಚಯಿಸಿ ಯೀ ದೇಶದಲ್ಲೂ ಗುರು ಗುಹೇಶ್ವರನ ಬೆಟ್ಟಕ್ಕೆ ಪೂರ್ವಭಾಗ ಯೆಳು ಜಂಬ್ವೀಜನ್ನಿಗೆ ಹಳ್ಳಿ ಯಿವಗಳ ಮಧ್ಯದಲ್ಲೂ ಯೀ ಕಂಪಳಕ್ಕೆ ಹಟ್ಟಿಯಿಟ್ಟುಕೊಂಡೂ ೧೨ ಪೆಟ್ಟಿಗೆ ದೇವರಗಳ ಸಹಯಿದ್ದರು. ಯೀಷ್ಟರಲ್ಲೆ ಶ್ರೀವಿದ್ಯಾನಗರ ಸಂಸ್ಥಾನದ ಯಿಂದ್ದಾ ವಬ್ಬಾ ೧ ಭವ್ಯ ಮೂತಿರ ದೇಶ ಸಂಚಾರಾರ್ಥವಾಗಿ ಬಂದಥ್ಥಾವ ಯೀ ಕಂಪಳದ ಸಮೀಪಕ್ಕೆ ಬಂದ್ದೂ ಯೀ ಕಾಟನಾಯ್ಕರ ಮಲ್ಲಯನ್ನು ಕಂಡು ಅನೇಕ ಪ್ರಕಾರ್ರ ಹೊಗಳಿದನೂ ಅದು ಕೇಳಿ ಬಹಳ ಸಂತ್ತೊಷ ಬಟ್ಟು ಅನೇಕ ಪ್ರಕಾರವಾಗಿ ನಿನಗೆ ಯೆನು ಯೆನು ಬೆಕೆಂದು ಕೇಳಿದನೂ ಅದಕ್ಕೆ ಆ ಭವ್ಯ ಮೂರ್ತಿ ಅಂದದ್ದು ನೀನು ಸೂರ್ಯ್ಯವರ ಪ್ರಸಾದದಿಂದ್ದಾ ಬಂದಂದ್ದಾ ಶರಣ. ನೀನಲಿನಾದ... ಕೊಡಬೇಕೂಯಂದ್ದೂ ಕೆಳಿದನೂ ಅದಕ್ಕೆ ವಜ್ರ ವೈಡೂರ್ಯ್ಯ ಗೋವೆಂಧಿಕ ಪುಷ್ಯರಾಗ, ನೀಲ ಹವಳಾದಿ ಸುವರ್ನ ವಿಕಾರವಾದ ಆಭರಣಂಗಳು ಅನೇಕ ಮೂಲ್ಯ ಮುಂತ್ತಾದಂನ್ನೂ ಕೊಟ್ಟು ಯಿದ್ದು ಸಾಗುವುದಕ್ಕೆ ಸಾಧುಗಳಾದಂದ್ದಾ ಬಸನರಾಜರ್ರಂನ್ನೂ ಕೊಟ್ಟು ನಿಂನ್ನ ರ್ರಾಯರಿಗೆ ಹೆಳು ಯಂದು ಕಳುಯ್ಸಿದನೂ ಅವನು ಯೀ ಯಾವ ದ್ವಿಶಿಷ್ಟ ವೃತ್ತಾಂತ್ತವಂನ್ನೂ ರಾಯರ್ರ ಮುಂದೆ ತಿಳಿಶಿದನೂ ಯೀ ಭವ್ಯಮೂರ್ತಿ ಅಂದ ಮಾತ್ತುಗಳು ಕೇಳಿ ರಾಯರ್ರ ದಿವ್ಯ ಚಿತ್ರಕ್ಕೆ ಕೋಪಬಂದ್ದೂ ನಂಮ್ಮ ಮಧ್ಯರಾಷ್ಟ್ರದಲ್ಲಿ ಬಂದ್ದೂ ಯೀ ಪ್ರಕಾರ್ರ

ಕಂಪಳ ಯೀ ದ್ರವ್ಯಯಿಟ್ಟುಕೊಂಡು ಯಕದಾ.... ಯಿಂದ್ದಾ ಯಿರುವದಕೆ ಯಾರ ಹುಕುಮಿನ ಮೆಲೆ ಯಿರ್ತಾನೆ ಅವನ್ನ ಯೀಕ್ಷಣ ಯಿಲ್ಲಿಗೆ ಯಿಡುಕೊಂಡು ಬಂನ್ನಿ ಯಂಬದಾಗಿ ಖುದ್ದು ರಾಯರು ಚತುರಂಗ ಬಲಕ್ಕೆ ಹುಕುಂ ಚಲಾಯ್ಸಿದರೀ ಆ ಚತುರಂಗ ಬಲಬಂದ್ದೂ ಯೀ ಮಧ್ಯೆರಾಷ್ಟ್ರ ಸ್ಥಿತವಾದಂದ್ಧಾ ಶ್ರೀಗುರುಗುಹೇಶ್ವರ ಯನ ಬೆಟದ ಗುರ್ತು ನೋಡಿಕೊಂಡು ಬಂದ್ದೂ ಘೇರ್ರಾಯ್ಸಿದರು ೯ ಯೀ ಚತುರಂಗ ಬಲವನ್ನೂ ಯೀ ಕಾಟನಾಯ್ಕ ಮಲ್ಲಯ್ಯ ಕಂಡು ಮಸ್ಸಿನಲ್ಲಿ ಬಹಳ ಚಿಂತ್ತೆಯಂನ್ನೂ ಹೊಂದಿದವನ್ನೂ ಆತಿ ತಂಮ್ಮ ದೇವರು ಸೂರ್ಯ ನಾರಾಯಣ ಸ್ಮರಣೆ ಪರ್ವತ ಮಲ್ಲೇಶ್ವರನ ಸ್ಮರಣೆ ಶ್ರೀ ಗುರು ಗುಹೇಶ್ವರಯ್ಯನ ಸ್ಮರಣೆಯಲ್ಲು ಧ್ಯಾನಸೀನೀತನಾಗಿ ಯಿದನೂ ಆತನ ಪರಿವಾರದ ಜನರ್ರು ೫೦೦ ಮೆಸರು ಯೆನು ದೇವರು ಯಿಂದ್ಧಾ ಸಮಯದಲ್ಲೂ ಸುಂಮ್ಮನೆ ಕುತ್ತಿರಿ ಅಪ್ಪಣೆ ನಂಮ್ಮಗಾದರೂ ಕೊಡಿ. ಆಯುಧ ಮುಸ್ಸೆದೆಗಳು ತ್ತೆಗದು ಕೊಂಡದ್ದೂ ಬಿಲ್ಲು ೧ ಬಿದರು ಕೋಲು ೧ ಕೊಡ್ಲಿ ೧ ಪೆಟ್ಟು ಕಟಾರಿ ೧ ಅಂತ್ತೂ ಜನ ವಂದಕ್ಕೆ ನಾಲ್ಕು ೪ ಆಯುಧ ಪ್ರಕಾರಕ್ಕೆ ತ್ತೆಗೆದುಕೊಂಡು ಯೀ ಕಂಪಳ ಸುತ್ತ ಅಷ್ಟದಿಕ್ಕುಗಳಿಗೂ ಹಂಚ್ಚಿಗೇ ಮೆರೆಗೆ ನಿಂತ್ತು ಯುದ್ಧಾ ಮಾಡುತ್ತೆವೆಂದು ಕಾಟನಾಯ್ಕನ ಮಲ್ಲಯ್ಯನ ಸಂಗಡ ಹೆಳಿದರು. ಅಷ್ಟರಲ್ಲೆ ರಾಯರ ಫಉಜಿನಾಗಳಿಂದ್ದಾ ಸೊಂನ್ನೆ ಬಾಣ ಬಿಟ್ಟರು ೯ ಆ ಬಾಣದ ರಭಸ ಕೇಳಿ ಭೀಜದ ಹೋರಿಗಳು ಕಾಲುಕೆದರಡಿರಕೆ ಹಾಕಿ ರಾಯರ್ರಾ ದಂಡಿನ ಮೇಲೆ ಮುಶಿರದೀ ಯಿವಗಳ ರಭಸವಂನ್ನು ನೋಡಿ ಸೈರಿಸದೆ ರಾಯರ ದಂಡು ಶ್ರೀವಿದ್ಯಾನಗರ ವಂನ್ನೇ ಹೊಂದಿದರ್ವೂ ಸದರಿ ಸೇನಾನಾಯ್ಕರು ರ್ರಾಯರ್ರಿಗೆ ಯೀ ವೃತ್ತಾಂತವೆಲ್ಲಾ ಅರಿಕೆ ಮಾಡಿದರೂ ಯೀ ಮಾತು ಕೆಳದ ಕ್ಷಣಕ್ಕೆ ಜ್ವಾಜ್ವಲ್ಯಮಾನಸರಾಗಿ ನಂಮ್ಮ ಸಂಸ್ಥಾನದಲ್ಲು ಕುಲ ಹದಿನೆಂಟು ಜಾತ್ತಿ ವಳಿಗೇ ಯಾರು ಹೋಗಿ ಯಿಡುಕೊಂಡು ಬತ್ತಾ್ರರೊ ಅವರಿಗೆ ಗ್ರಾ X X X X X ಮೀವುಂಮ್ಮಳಿಗೆ ಅನೇಕ ಬಹಮಾನಾ ಸನ್ಮಾನಾ ಕೊಡುತ್ತೇವೆಂದೂ ೧೨ ಬಾಜಾರಲ್ಲೂ ದಂಡೋರ ಹಾಕಿ ಸಾರಿಶಿದರ್ರು. ಯೀ ದಂಡೋರ ಸಾರಿದ ವರ್ತಮಾನ ಕೇಳಿ ಕೊಲಿಪ ಸೂಳೆರ್ರೂ ೩೨ ಜನರ್ರೂ ಬಂದ್ರೂ ರಾಯರ್ರ ಯದಿರಿಗೆ ನಿಂತು ನಂಮ್ಮಗೆ ಅಪ್ಪನೆ ದಯಪಾಲಿಶಿದಲ್ಲಿ ಅವಂನ್ನ ತರುವದೂ ನಂಮ್ಮಗೆ ಲಕ್ಷ್ಯವಿಲ್ಲಾ ನಂಮ್ಮ ಕುಲವಿದ್ಯಾಪ್ರವುಢಿಕೆಯಿಂದ್ದಾಲು ಚತುರೋಪಾಯದಿಂದ್ದಾಲು ಅವನ್ನ ತಂದು ದೇವರ ಪಾದಕೆ ತಂದ್ದು ಸಲ್ಲುತ್ತೇವೆ. ವಿಳೆಕೆ ಅಪ್ಪಣೆ ಆಗಬೇಕೆಂದ್ದೂ ಮುವತ್ತು ೩೨ ಸೂಳೆರ್ರೂ ಯಿಡದು ಯೀ ಗುಡ್ಡದ ಸಮೀಪಕ್ಕೆ ಬಂದ್ದೂ ಯೀ ಕಂಪಳ ನೋಡಿದರೂ ಅಲ್ಲಿಂದ್ದಾ ಯೀ ಕಾಟನಾಯ್ಕ ಮಲ್ಲಯ್ಯನ ಸಮೀಪಕ್ಕೆ ಬಂದ್ದೂ ತಮ್ಮ ನರ್ತವಿದ್ಯಾ ಗಾನವಿದ್ಯಾ ಪ್ರವುಢಿಕೆಯನ್ನು ತೊರಿಶಿದರು. ಯಿದಕ್ಕೆ ಅವನು ಯಿವರ ಕಡೆಗೆ ಕಂಣ್ಣು ಎರಳಿ ನೋಡಿದವನೂ ಆಗಲಿಲ್ಲಾ ಯಿದಕ್ಕೆ ಯೆನು ಮಾಡೋನು ಯಿವನು ನಂಮ್ಮಗೆ ಹೇಗೆ ವಶವಾದನು ಯಂದ್ದೂ ಯೋಚನೆ ಮಾಡಿ ಯಿದಕ್ಕೆ ವಂದ್ದೂ ಸಯುಮ ಬಂದ್ದಾ ಮಾಡಬೇಕೆಂದೂ ಯೋಚನೆ ಮಾಡಿದರ್ರೀ ಯಿದಕ್ಕೆ ಕಾಟನಾಯ್ಕನ ಮಲ್ಲಯ್ಯ ಅಂದದೂ ನಾನು

ಪರನಾರಿ..... ಸಂಭಾಷಣೆ ಮಾಡುವನು ಅಲ್ಲಾ ಯಂದ್ದೂ ಅಂದ್ದನೋ ಯಿದಕ್ಕೆ ಆ ಸೂಳೆರು ಹೇಗಾದರೂ ಮೆಲೆ ಬಿದ್ದಾದರೂ ಮಾತನಾಡಬೇಕೆಂದ್ದೂ ಯೋಚಿಶಿದರು. ಯಿಷ್ಟರವಳಗೆ ೯ ಆತನು ತನ್ನ ದೇವರ ಕಾಸುಮೀಸಲು ತೆಗೆದುಕೊಂಡು ಗುಡ್ಡಾಹತ್ತಿ ಗುಡ್ಡಾಹತ್ತಿ ಹೋಗುತ್ತಯಿದ್ದ ವನ್ನ ಯಿವರು ಶರಗು ಯಿಡಿದು ನಿಂದ್ರಸ ಬೇಕೆಂದ್ದೂ ಸಮೀಪಕ್ಕೆ ಹೋಗಿ ಮಾರ್ಗ ತಡದರು. ಅಷ್ಟು ಹೊತ್ತಿಗೆ ಅಂತುಳಿ ಮಾತನಾಡಿದರೂ ಯೇನೆಂದ್ದರೆ ನಂಮ್ಮ ದೇವರು ವಳ್ಳೆದಲ್ಲಾ ನಿಂಮನ್ನ ನೋಡಬಾರದು ಯಂದಲ್ಲಿ ಆ ಸೂಳೆರು ಅಂದರೂ ಚಿಂತೆಯಿಲ್ಲಾ ನಾವು ಬಂದ್ದಾದಕ್ಕೆ ನಿಂನ್ನ ಕಂಪಳ ಕಂಪಳಾದರ್ರೂ.... ಮೆಲಕ್ಕೆ ಕರಕೊಂಡು ಹೋಗು ನೊಡೊನು ಯೆಂದರ್ರೂ ಆತ ಅಂದದ್ದೂ ನಂನ್ನ ಕಂಪಳ ಯಿ ಬೆಟದ ಮೇಲಕ್ಕೆ ಕರದರೆ ನೀವು ೩೦ ಮಂದ್ದಿಯೂ ಕಂಪಳದೊಳಗೆ ಸಗಣಿ ಕಸ ಬಳಕೊಂಡು ಯಿರಬೇಕೆಂದ್ದನ್ನು ೯ ಯಿದಕ್ಕೆ ಅವರಡಂದ್ದು ಯೀ ಕಂಪಳ ಸದರಿ ಬೆಟದ ಮೇಲೆಕ್ಕೆ ಬರದೆ ಹೋದರ್ರೆ ನೀನು ನಂಮ್ಮ ಸ್ವಾಧೀನಲಾಗಬೆಕೆಂದು ಹೆಳಿದರು. ಹಾಗೆ ಸರಿಯೆಂದ್ದ ಆ ಮಾತಿಗೆ ಸಂಮ್ಮತಿ ಬಟ್ಟುತ್ತಾನೆ. ಈ ಬೆಟ್ಟವಂನ್ನೂ ಯೆರಿ ಯಾವತ್ತೂ ಕಂಪಳವನ್ನು ಕರದನೋ ಯೀ ತನ ಧ್ವನಿ ಕೇಳಿ ಯೆಲ್ಲಾ ಕಂಪಳವೂ ದೆಹಾಭಿಮಾನ ಬಿಟ್ಟು.... ಕರಕೊಳ್ಳುತ್ತಾ ಮೆಲಕ್ಕೆ ಹತ್ತಿ ಯೀತನ ಪತ್ರಕ್ಕೆ ಬಂದವೂ. ಯೀ ಸದರಿ ಮೂವತ್ತು ೩೨ ಜನ ಸೂಳೆರು ಕೂಡೆ ಶಗಣೆ ಹೊರಿಶಿ ೩ ದಿನದ ಮೆಲೆ ಆ X Xಗೆ ಬೆಕಾದ ಪದಾರ್ಥ ಕೊಟ್ಟು ಕಳಯ್ಸಿದನು. ಆ ಸೂಳೆರು ಯಥಾಪ್ರಕಾರಕ್ಕೆ ಶ್ರೀ ವಿದ್ಯಾನಗರಕ್ಕೆ ಬಂದ್ದರೋ ರ್ರಾಯರಿಗೆ ಮೊರ್ರೆ ತೋರಿಸುವದಕ್ಕೆ ಭಯಸ್ತರಾಗಿ ಯಿದ್ದರು. ಯಿಷ್ಟರಲ್ಲೇ ರ್ರಾಯರ್ರು ಪರ್ರಾಂಬರಿಶಿದರು ನಿಂಮ್ಮ ಗೊತ್ತು ಮಾತ್ತಿನ ವಿಳೆಯ ವಿಡಿದು ಹೊದವರ್ರು ಯಾತಕ್ಕೆ ಆತನ ತರಲಿಲ್ಲಾ ಯಂದು ಕೆಳಿದಲ್ಲು ಆ ಸೂಳೆರ್ರು ರಾಯರಿಗೆ ಬಿಂನ್ಯೆಶಿದ್ದು ಆತ ಮಾನವನಲ್ಲಾ ಶರಣ ಸಂತತ್ತಿ. ಅವನೂ ವಬ್ಬರಿಗೂ ವಶವಾಗೊನು ಅಲ್ಲಾ ಮಾಯಾ ಪಾಶಕ್ಕೆ ಶಿಲ್ಕುದವನು ಅಲ್ಲಾ ಯಿದರಿಂದ್ದಾ ಬಿಟ್ಟು ಬಂದೆವೂ ಆತನ ಮೇಲೆ ಯಾರ್ರು ಕೈ ಮಾಡುತ್ತಾರೋ ಅವರು ಜಯಿಸಲಿಕ್ಕೆ ಯಿಲ್ಲಾ ಯಂದ್ದೂ ನಾನಾಪ್ರಕಾರ ಅವರ್ರು ಹೇಳಿದ್ದಂನ್ನು ರ್ರಾಯರ್ರು ಮನಶಿಗೆ ತಂದ್ದೂ ಆತಂನ ನಾವು ನೋಡಬೇಕೆಂದ್ದೂ ಅಪೇಕ್ಷಿಸಿದರ್ರೂ ಅಷ್ಟರಲ್ಲಿ ಆ ಭವ್ಯಮೂರ್ತಿ ಯಾವತ್ತು ಯಿತನ ಪೂರ್ವ ವೃತ್ತಾಂತವೆಲ್ಲಾ ಹೆಳಿದನು ಅಂತ್ತ ಸಾಕ್ಷಾತ್ ಶರಣ ಪುರುಷ ಅನೇಕ ಗೋವು ಸಂರಕ್ಷಣೆ ಮಾಡಿಕೊಂಡು ಯಿರ್ತಾನೆಯಂದು ಹೆಳಿದ ವರ್ತಮಾನ ಕೇಳಿ ಆತಂನ್ನ ನೋಡಬೆಕೆಂದೂ ಬಹಳ ಸಂತ್ತೋಷ ಬಂದು ನೀನೆ ಹೋಗಿ..... ಭರವಸೆ ಕಟ್ಟು ಕರಕೊಂಡು ಕಂಪಳಾನು ತ್ತೆಗದುಕೊಂಡು ಆತ್ತನ ಪರಿವಾರ ಸಹಿತವಾಗಿ ಬರಲಿಯಂದ್ದೂ ಸದರಿ ಭವ್ಯಮೂರ್ತಿಗೆ ರ್ರಾಯರಪ್ಪಣೆಯಿಂದರಿಂದ್ದಾ ಆ ಭವ್ಯಮೂರ್ತಿಯಲ್ಲಿಗೆ..... ಮಲ್ಲನಾಯಕನ ಸಮುದಾಯವಂನ್ನೂ ಕರಕೊಂಡು ಶ್ರೀ ವಿದ್ಯಾನಗರಕ್ಕೆ ಕರಕೊಂಡು ಹೊಗಿ ರ್ರಾಯರ ಬೆಟ್ಟ ಕೊಡ್ಸಿದನು. ಯೀತಂನ್ನ ಕಂಡ ರ್ರಾಯರು ಬಹಳ ಸಂತೋಷಪಟ್ಟರು ನೀನು.... ಯಿಟ್ಟು ಗೊಸಂರಕ್ಷಣೆ ಮಾಡುತ್ತಾ

ಯಿಧಿಯ್ಯ ಅದರಿಂ.... ನಾ ನೊಡಲೀಕಾಗಿ ನಂಮ್ಮ ಮನಶಿಗೆ ಬಹಳಲಾಶ್ಚರ್ಯ ಕಾಣುತ್ತಾಯಿದೇ ಆದ್ದರಿಂದ್ದಾ ನೀನು ಸಂಸ್ಥಾನಕ್ಕೆ ಮುಖ್ಯ ಮಗನಿಂ ನಗೆ ಸಲಕ್ಕದು ಕೆಲವು ಬಿರೂದು ಬಾವಳೀ ಕೊಡುತ್ತೇವೆ. ಯಿರಲೀ ಯಂದ್ದು ಹೆಳಿ ಆ ಕಂಪಳಕ್ಕೆ ಬಹಳ ವುತ್ಸಾಹ ಗಾರೆ ಕಾಲಿವೆ ಮಾಡ್ಸಿ ಕಾಲಿವೆ ಮಾಡ್ಸಿ ಕಾಲಿವೆವಳಿಗೆ ಯೀ ಪದಾರ್ಥಗಳೆಲ್ಲಾ ನೀಡ್ಸಿ ೧೨ ಯೀ ಹಂನ್ನೆರಡು ಕಂಪಳಕ್ಕೆ ಬೆಲ್ಲದ ಪಾನಕ ಕೊಡ್ಸಿ ಅರಿಶಿನ ಕುಂಕು(ಮ) ಹೂವು ಗಂಧದಿಂದ್ದಾ ಅಂಮ್ಮನವರು ರ್ರಾಯರು ಸಹಾ ಪೂಜೆ ಮಾಡಿ ಮುಂದೇ ಪೂಜೆ ನಡೆಯೊ ಶ್ರಾದ್ಧಾ X X X ನಿರ್ಣಯ ಮಾಡಿಸಿಕೊಟ್ಟದ್ದು ಯೀ ಕಂಪಳದ ಪೂಜೆಗೆ ಯೀ ಹಂಗೆ ವಿರೂಪಾಕ್ಷನ ಡಬಿ ವಳಗೆ ಪಾಲು ಪಾಲು ಹಿಸೆ ನಡೆಯೊ ವಪ್ಪಂದ ಮಾಡ್ಸಿ ಕೊಟ್ಟ ಕಲಮು ೧ ಕಾಟನಾಯ್ಕ ಮಲ್ಲಯ್ಯಗೆ ಯೀ ಮಧ್ಯ ರಾಷ್ಟ್ರದಲ್ಲಿ ಸಾರೋದ್ಧಾರ ಮರ್ಯಾದೆ ನಡೆಯೋಪ್ರಕಾರ್ರ ಗೊತ್ತು ಮಾಡ್ಸಿ ಕೊಟ್ಟದ್ದು ೯ ಹಂದ್ರ ಹಾಲು ಕೂಬ್ಸಾ(?) ಹಾಕಿ ಲಗ್ನ ಮಾಡಿದವರ್ರೂ ಲಗ್ನ ತೇಗಿ ೪ ಅಕಿ ಅದಕ್ಕೆ ತಕ್ಕ ಲವಾಜಮೆ ನಗದು ೬೨ ವ್ಯವಸಾಯ ಮಾಡಿದವರ್ರೂ ಮೇಲೆ ವಂದ ೧ ಕ್ಕೆ ೮೧ ಗುಜಾಡರ್ರೂ (?) ಮಗ್ಗ.... ೧ಕ್ಕೆ ಮಗ್ಗಾ ೧ಕ್ಕೆ ವಂದ್ದೂ ೬೧ ಬೇಡರೂ ಲಗ್ನ ೧ ತೇಗಿ ೪ ಅಕಿತಕ್ಕೆ ಲವಾಜಮೆ ಬಗ್ಗೆ ೧ ಹೆಣ(?) ಕುರಿ (ಹೆಣ್ಣು ಕುರಿ) ವಟ್ಟು ೧ ಯೀ ೧೨ ಪ್ರಕಾರ ತಮ್ಮ ರಾಜ್ಯದಲ್ಲಿ ಗೊತ್ತು X X X X X X ದೊರ್ರೆಯಂದ್ದು X X X ಕೊಟ್ಟು ಯೀ ೧೨ ಹಟಿ ದೇವರೂ ಯೀ ಕಂಪಳ ಸಹಾ ನಂಮ್ಮ ದೇಶದ ವಳಗಾಗಿಯಲ್ಲಿ ಹುಲ್ಲು ನೀರೂ ಸವುಖ್ಯವಾಗಿ ಯಿರುತ್ತ ಯಿದೆಯೋ ಅಲ್ಲಿ ಯೀ ದೇವರುಗಳು ಯೀ ಕಂಪಳ ಸಹಾ ಹೋಗುವ ಮಾರ್ಗಗಳಲ್ಲಿ ಯಾವ ಯಾವ ಗ್ರಾಮಗಳಸ್ವಾಮಿ.... ಆ ಗ್ರಾಮದ ಜನಗಳು ಯೀ ದೇವರುಗಳಿಗೆ.... ವಪ್ಪಳೆ ಯೀ ಸಮೂಹಕ್ಕೆಲ್ಲಾ ದಾಸೋಗ ನೀಡ್ಸಿ ಯೀ ಗ್ರಾಮದ ಹಿಂದೆ ಮುಂದಣ ಗ್ರಾಮಕ್ಕೆ ತಿಳಿಯ್ಸಿ ಕೊಡವುದ ತಂಮ್ಮ ದೇಶದ ಜನಗಳಿಗೆ ಹುಕುಂ ಕೊಟ್ಟರೂೀ ಕಾಟನಾಯ್ಕನ ಮಲ್ಲಯ್ಯಗೆ..... ಯೀ ಸದರಿ ಹಂನ್ನೆರಡು ಪೆಟ್ಟಿಗೆ ದೇವರೂ ಯೀ ಕಂಪಳ ಸಹವಾಗಿ ಕರಕೊಂಡು ಬಂದ್ದು ನಂಮ್ಮಗೇ ದರ್ಶನ ಮಾಡ್ಸಿ ನಮ್ಮ ಯಿಂದೂ ದಾಸೋಗ...... ಮಾಡಿಕೊಂಡು ನಂಮ್ಮ ಅಪ್ಪಣೆ ತ್ತೆಗದುಕೊಂಡು.... ವಾದಿಗಳು ತ್ತೆಗದುಕೊಂಡು ಹೊಗುವುದು ಯಂಬುದಾಗಿ ಅಪ್ಪಣೆಕೊಟ್ಟು ಹಿಂದಕ್ಕೆ ಯೀ ಕಂಪಳ ಕಳುಯ್ಸಿದರು. ಯೀ ಕಂಪಳ ತ್ತಗೆದುಕೊಂಡು ಯೀ ರ್ರಾಯರ್ರು ಕೊಟ್ಟು ಬಹುಮಾನ ಸನ್ಮಾಣಾ ತ್ತೆಗೆದು ಕೊಂಡು ತನ್ನ ಪರಿವಾರ್ರ ಕರಕೊಂಡು ಬರುವ ವೇಳ್ಯದಲ್ಲಿ ಪುನಃ ರಾಯರು ಅಪ್ಪಣೆ ಕೊಟ್ಟುದ್ದು ಯೀ ಚೌಪಂನಾರು ದೇಶಗಳಲ್ಲಿ ಯಿರ್ರು ವಾಲ್ಮೀಕ ವಂಶಸ್ಥ ಜನರಗಳಲ್ಲಿ ಲಗ್ನ ಮುಹೂರ್ತ ಮುಂಜಿ ಪ್ರಸ್ತಾ ಪ್ರಯೋಜನ ಆಚಾರ್ರಾ ವಿಚಾರ್ರಾ ಪ್ರಾಯಶ್ಚಿತ್ತಾ ಶಿಕ್ಷೆರಕ್ಷೆ ಮುಂತಾದ್ದು ನೀನೇ ನೋಡಿಕೊಂಡು ವಂಶಪಾರಂಪರ್ಯದಲ್ಲು ಭೂಮಿ ಆಕಾಶ ಚಂದ್ರಸೂರ್ಯ ಇರೊ ಪರಿಯಂತ ಯೀ ಕುಲಕ್ಕೆ ನೀನೆ ದೊರೆಯಾಗಿ ಅನುಭವಿಶಿಕೊಂಡು ಸದರಿ ಕಂಪಳದೆವರು ಯಾವತ್ತೂ ನಿಂನ್ನ ಸ್ವಾಧೀನದಲ್ಲು ಯಿಟ್ಟುಕೊಂಡು

ನಿಂನ್ನ ಜನರು ಮರ್ಯಾದೆ ಮೆರೆ ಬೆರಶಿಕೊಂಡು ನಂಮ್ಮ ಬೇಟನು ತ್ತೆಗದುಕೊಂಡು ಸವುಖ್ಯದಲ್ಲೂ ಯಿರ್ರುವದೂ ಯಂದೂ ರ್ರಾಯರ್ರಾ ಖುದ್ದು ಅಪ್ಪಣೆಕೊಟ್ಟು ಪೂರ್ವಕುಂತೆ ಹೆಚ್ಚಾಗಿ ಬಹುಳ ಬಹುಮಾನ ಸನ್ಮಾನದಿಂದ ಕುಲದ ಮರ್ಯಾದೆ ನಡೆಸಿಕೊಂಡು ಬಂದ್ದರು. ಅವರ್ರು ಅಪ್ಪಣೆ ತ್ತೆಗದುಕೊಂಡ ಸದರಿ ಕಾಟನಾಯ್ಕನ ಮಲ್ಲಯ್ಯನು ಯೀ ಕಂಪಳ ದೇವರು ಯಾವತ್ತು ತ್ತೆಗದುಕೊಂಡು ಶ್ರೀವಿದ್ಯಾನಗರದ ದಕ್ಷಿಣ ಭಾಗಕ್ಕೆ ಕುಂದುರ್ಪೆ ಗುಡ್ಡದ ಸಮೀಪದಲ್ಲಿ ಹಟ್ಟಿ ಹಾಕಿ ನಿಂತ್ತನೂ ಸದರಿ ಕಾಟನಾಯ್ಕನ ಮಲ್ಲಯ್ಯನ ತಂಮ್ಮಂದ್ರು ೬ ಆರು ಮಂದಿ ರತ್ನಗಿರಿ ಮಿಡಿಗೇಶಿ ಹೊರ್ಕೊಟ್ಟ(?) ನಿಡಗಲ್ಲು ಶಂಕರಕಲ್ಲು ಕುಂದುರ್ಪೆ ಮುಂತ್ತಾದ ಸ್ಥಳಗಳಲ್ಲಿ ನಿಂತ್ತಾರೂ ಸದರಿ ಕಾಟನಾಯ್ಕ ಮಲ್ಲಯ್ಯ ಸಕಲ ದೇಶಗಳ್ಲಲಿ ಯೀ ಜನರುಗಳು ಮೆಲೆ ಸಂಚಾರ್ರಾ ಮಾಡಿಕೊಂಡು ಆಚಾರ್ರಾ ವಿಚಾರ್ರಾ ರಕ್ಷೆ ಶಿಕ್ಷೆಗಳು ಮಾಡಿಕೊಂಡು ಯಿರುತ್ತಾ ಯಿದ್ದಾನು. ಅಷ್ಟರಲ್ಲೆ ಗೋಶಿಕೆರೆಗೆ ಯೀ ಕಂಪಳದ ಹಟ್ಟಿಯಿಟ್ಟನು ಯೀತಗೆ ಮಕ್ಕಳು ೩ ಜನಾ. ಸೂರದೆವಿನ ಪಾಪನಾಯ್ಕ ೧ ತೊರ್ರೆಲ ಮಲ್ಲನಾಯ್ಕ ೧ ಗಾದರ ಪಾಲನಾಯ್ಕ ೧ ಅಂತೂ ೩ ಜನ. ತೊರ್ರೆಲ ಮಲ್ಲನಾಯ್ಕನ ಮಗ ಜಗಲೂರು ಪಾಪನಾಯ್ಕ ೧ ಆತ ಶರಣ ಸಂತತ್ತಿಯಲ್ಲಾಂ ೀ ಜಗಲೂರುಲ್ಲು ನಿಂತ್ತು ಗಾದರ ಪಾಲನಾಯ್ಕ ಗಾದರ ಗುಡ್ಡದಲ್ಲು ನಿಂತ್ತಾೀ ಆತ ಶರಣ ಸಂತತ್ತಿಯಲ್ಲಾೀ ಸೂರದೆವಿನ ಪಾಪನಾಯ್ಕ ಚಿಂತಾಗುಟ್ಟು ಭೈರೆ ದೇವರಲ್ಲಿ ಯೆಳು ದಿವ್ಸ ೭ ಪರುಷೆ ಮಾಡುಸುವಾಗ್ಗೆ ನಿಡಗಲು ಹೊಟೆಳನಾಯ್ದು ಬಂದು ಯೀ ಕಂಪಳ ೧೨ ಯೀ ಹಂನ್ನೆರಡು ಪೆಟ್ಟಿಗೆ ದೇವರು..... ನಾನಗೆ ಬರಬೇಕೆಂದೂ ಲಡಾಯ್ಸಿ ಮೊಕ್ದುಮೆ... ಬಲಮುರಿ ಶಿಂಕಾ(?)...ೀ ಭಂಗಾರ್ರದ ಸಂಣಕುಂಬಾ ಮುಂತ್ತಾದ ನಗಗಳು ಯಿರಿಸೂದಕ್ಕೆ ಕೊಡಬಾರದ್ದೂ ಯಂದ್ದೂ ಸಂಣ ಕುಂಭದ ದಿನ್ನೆಯಲ್ಲು ನೆಲಮಾಳಿಗೆತ್ತೆ ಗಶಿ ಮೂರುಖಂಡುಗ ಸಾಂಬ್ರಾಣಿ ಹಾಕ್ಸಿ ನಗಗಳನ್ನು ಯೀ ದಿನ್ನೆಯಲ್ಲೂ ಮಂನ್ನಿಶಿದನು(?) ಸೂರದೆವಿನ ಪಾಪನಾಯ್ಕನೂ ೀ ಹೊಟೆಳನಾಯ್ಕನು ಎಂದು ಪಂಥವಾಯಿತ್ತು ಯೆನಂದರೆ ಹೊಟೆಳನಾಯ್ಕ ಮೂರು ೩ ಶೂಲದಮರ ನೆಡ್ಸಿ ಯೆಳು ದಿವ್ಸ ಪರುಷೆ ಆಗುವದೊರಳಗೆ ಸದರಿ ಯೀ ಶೂಲದ ಮರ ಚಿಗುರು ಹುಟ್ಟಿ ಕೊಂಬೆಗಳು ಅರಗಳು ಬೆಳೆದರೆ ಯೀ ದೆವರು ಯೀ ಕಂಪಳ ಸಹಾ ನಿಂನ್ನದೇ ಸರಿಯಿಲ್ಲ ವಾಯಿತ್ತೆ ಯೀ ಶೂಲದ ಮರಕ್ಕೆ ನಿಂಮ್ಮನ್ನ ಹಾಕಿ ಬಿಟ್ಟು ಯೀ ದೇವರುಗಳು ಯೀ ಕಂಪಳ ಸಹಾ ತ್ತೆಗದುಕೊಂಡು ಹೋಗುತ್ತೇವೆಂದು ಕರಾರ್ರಿಗೆ ನಿಂತರ್ರು ಯೇಳು ೭ ದಿವ್ಸದೊಳಗೆ ಚಿಗಿರಿದವೂ ಪರುಷೆ ಕಡೆಯೆಯಿತ್ತು ಹೊಟೆಳನಾಯ್ಕ ಸೊತ್ತು(ಸೋತು) ತಂನ್ನ ಸ್ಥಳಕ್ಕೆ ಹೋದನು. ಸದರಿ ಸೂರದೆವಿನ ಪಾಪನಾಯ್ಕನ ಮಗ ಕಾಕಳನಾಯ್ಕ ಯೀತನೇ ಹಟ್ಟಿ ಸ್ಥಳದಲ್ಲಿ ಗಿಡಗಾಟೀವನಾಂತ್ರ ಕಡಿದು ೧೨ ಪೆಟ್ಟಿಗೆ ದೇವರು ಕಂಪಳ ಸಹಾ ಬಂದು ಹಟ್ಟಿಗೆ ನಿಂತನು. ಯೀತನ ಮಗ ದೊಡ್ಡೆರಪ ನಾಯ್ಕ ೧ ಯೀತನ ಮಗ ಗಿಡ್ಡೆರ್ರಲನಾಯ್ಕ ಯೀತನೆ ಕಂಪಳ ದೇವರಿಗೆ ಮುತ್ತಿನ ಕಾಲುವೆಂಡೆ ವಪ್ಸಿದನೂ. ಯೀತನ ಮಗ ದೊಡ್ಡೆಮಲ್ಲಪ್ಪನಾಯ್ಕ ಯೀತನ ಮಕ್ಕಳು ೨

ಬಸವಮಲ್ಲಪ್ಪನಾಯ್ಕ ೧ ಬೋಡಿಮಲ್ಲಪ್ಪನಾಯ್ಕ ೧ ಅಂತು ೨ ರು ಬೋಡಿ ಮಲ್ಲಪ್ಪನಾಯ್ಕನ ಹೆಂಡತಿ ಚಿತ್ರದುಗರದ ಚಿಕ್ಕಲೂ ನಾಯ್ಕನ ತಂಗಿ ಗಿರ್ಜಮ್ಮ ನಾಗತ್ತಿ ಯೀತನೆ ಯೆಳು ೭ ಕೆರ್ರೆ ೭ ಪುರ್ರಾ ಹಾಕ್ಸಿ ದೊರ್ರೆತನಾ ಮಾಡಿ ದಾತನೂ ಆನೆಗೊಂದಿಗೆ ಕಾಶಿ ಮಾರ್ಗವಾಗಿ ಹೋಗುತ್ತಾ ಯಿರುವಲ್ಲಿ ಆನೆಗೊಂದಿ ವಳಗೇ ಭೀಮಾಜಟ್ಟಿ ಯುಂಭುವನಿಗೆ ಯೀ ದೇಶದವಳಗೇ ಯದುರು ಯಾರು ಯಿಲ್ಲಾದೆ ತಾನೆ ಶ್ರೇಷ್ಠ ಯಂದು ತಿಳಿದು ಆನೆಗೊಂದಿ ವೂರು ಬಾಗಲಿಗೆ ಯಿಜಾರ್ರ ಕಟ್ಟಿಯಿದ್ದಾನಂತೆ ರ್ರಾಯರ್ರ ಬೆಟಿ ಮಾಡಕೊಂಡು ಕಾಶಿಗೆ ಹೋಗಬೇಕೆಂದ್ದು ವೂರ್ರು ಬಾಗಲಿಗೆ ಬಂದಲ್ಲಿ ಮೆಲಕ್ಕೆ ನೊಡುವಾಗ್ಯೆ ಯಿಜಾರ್ರ ಕಂಡಿತು ಕೂತಿತ್ತು ಯಾರೆನೆಂದು ಜನರು ಕೆಳಿದನು. ಆ ಜೆಟ್ಟಿ ವಾಚ್ಛಲ(?) ಹೆಳಿದರು. ಯೀ ವೃತ್ತಾಂತವೆಲ್ಲಾ ಕೆಳಿ ವೂರ್ರು ಹೊರ್ರಗೆ ತಂನ್ನ ಡೇರ್ರೆ ಹಾಕಿಶಿಕೊಂಡು ತಂನ್ನ ಮಂದ್ದಿ ಸನ್ನಾಹವೆಲ್ಲ ಹೊರಗೆ ಯಿಳುಕೊಂಡು ತಂಮ್ಮ ಕಡೆಯವರನ್ನು ರಾಯ ಸಂನ್ನಿಧಾನಕ್ಕೆ ಹೊರಗೆ ಯಿಳುಕೊಂಡ ತಂಮ್ಮ ಕಡೆಯವರನ್ನು ರಾಯರ ಸಂನ್ನಿಧಾನಕ್ಕೆ ಹೆತಳಕ್ಕ ಮಾತ್ತುಗಳು ಹೇಳಿ ಕಳುಯ್ಸಿಕೊಟ್ಟರ್ರು. ಯೀ ಜನರು ಹೊಗಿ ರ್ರಾಯರ್ರಿಗೆ ಯಿವರು ಹೇಳಿದ ಪ್ರಕಾರ್ರಯಲ್ಲಾನು ತಿಳಿಶಿದರ್ರೂ.

ಯೀ ವೃತ್ತಾಂತವೆಲ್ಲಾ ರ್ರಾಯರು ಕೆಳಿ ಅವೂರ್ರು ಬಾಗಲಿಗೇ ಕಟ್ಟಿದ್ದ ಯಿಜಾರ್ರ ಬಿಚ್ಚಿಶಿ ತಮ್ಮ ಬೆಟಿಗೆ ಕರಶಿ ಬೆಟಿ ಮಾಡಿಕೊಂಡ ಅಂಕದಕಣ ಮಾಡ್ಸಿ ಯೀ ಬೊಡಿ ಮಲ್ಲಪ್ಪನಾಯ್ಕನ ಮನಶಿನಂತ್ತೇ ಅವಂನ್ನ ಕರಶಿ ವುಭಯತ್ರಗ್ಗೂ ಯುದ್ಧ ಪ್ರಯತ್ನ ಮಾಡಿಶಿದರು. ಆ ಜೆಟಿನ ಹೊಡೆದು ಬಿಟನೂ. ಯೀ ಸಾಹಸ ನೋಡಿ ರ್ರಾಯರ್ರು ಆಶ್ಚರ್ಯ್ಯ ಪಟ್ಟು ಬೊಡಿ ಮಲ್ಲಪ್ಪನಾಯ್ಕರಿಗೆ ೩ ಮೂರು ಗ್ರಾಮ ೩ ಖಂಡುಗ ಸ್ಥಳ ಬೀಜಾವರಿ ಭೂಮಿಯಂನ್ನು ಕೊಟ್ಟು ಯಿಂನ್ನು ಭೀಮಾ ಅನುವ ಹೆಸರು ಕರ್ರವರು. ಯಿಂನ್ನೂ ಅನೇಕ ಕಿಲ್ಲತ್ತು ಕೊಟ್ಟು ವಕ್ಕಿರಣೆ ಕಿತ್ತಾಪು(ಕಿಕ್ತಾಪು?) ಕೊಟ್ಟಾರು. ಯಿದೆಲ್ಲಾ ತ್ತೆಗದುಕೊಂಡು ಕಾಶಿಗೆ ಹೋಗಿ ಕಾಶಿ ಬಾಣ ತ್ತೆಗದುಕೊಂಡು ಬಂದ್ದೂ ತಂಮ್ಮ ಸ್ಥಳ ನಾಯ್ಕನ ಹಟ್ಟಿ ಸ್ಥಳದಲ್ಲು ಪ್ರತಿಷ್ಠ ಮಾಡ್ಸಿದರು. ರಾಮಲಿಂಗ್ಗಾ ತಂದ್ದೂ ರಾಮದುರ್ಗದಲ್ಲು ಪ್ರತಿಷ್ಠೆ ಮಾಡಿ ನಾಯ್ಕನ ಹಟ್ಟಿಗೆ ದಕ್ಷಿಣ ಭಾಗದಲ್ಲೂ ಗುಡ್ಡ ಪ್ರಶಸ್ತವಿದ್ದ ಪ್ರಯುಕ್ತ ಕಿಲ್ಲೆ ರಾಮ ದುರ್ಗಾ ನಿರ್ಮಾಣ ಮಾಡಿದರ್ರು ಮೆಲೆ ಬರೆದ ಯೆಳು ಕೆರೆ ವಿವರ್ರ ೯ ರ್ರಾಯರ್ರು ಭೀಮಾ ಯಂದ್ದೂ ಕರ್ರದರ್ರೂ ಆ ಹೆಸರ್ರು ಹೊಗಬಾರದು ಯಂದ್ದೂ ಭೀಮನ ಕೆರ್ರೆಕಟ್ಟಿ X X X ರ್ರಾಯರ್ರು. ಕೊಟ್ಟ ಗ್ರಾಮಗಳ ಪೈಕಿ ಕೆಲವು ದ್ರವ್ಯ ಆ ಭೂಮಿಲಿ ಶಿಕ್ಕಿದ ಕಾರಣ ರ್ರಾಯರ ಹೆಸರಿನಿಂದ್ದಾ ರ್ರಾಮಸಾಗರದ ಕೆರೆ ಯಂಬವದು ೧ ಹಿರ್ರೆ ಕೆರ್ರೆ ವಂದ್ದೂ ೧ ಚಿಕ್ಕೆರೆ ವಂದ್ದೂ ೧ ಹೊಸಕೆರೆ ವಂದ್ದೂ ೧ ವರದಿನ ಕೆರೆ ೧ ನಾಯ್ಕನ ಕೆರ್ರೆ ವಂದ್ದೂ ೧ ಯೇಳುಕೆರೆ ೭ ಅಂತ್ತು ಯೆಳು ಪುರದ ಹೆಸರ್ರ ವಿವಿರ್ರ ೧ ಕಾಶಿಪುರ ೧ ಕೊದಾಪುರ ೧ ಮಹಾದೇವಪುರ ೧ ಯೀ ಪ್ರಕಾರ್ರ ಗ್ರಾಮ ಭೂಮಿ ಕೆರ್ರೆ ದೇವಸ್ಥಾನ ಮುಂತ್ತಾದಂನ್ನೂ ರ್ರಾಯರ ಹೆಸರು ಮೆಲೆ ಮಾಡ್ಸಿ ರಾಜ್ಯಭಾರ್ರಯಿದ್ದರು ಜೊಡಿ ಮಲ್ಲಪ್ಪ ನಾಯ್ಕರಿಗೆ ಮಕ್ಕಳು ಯಿಲ್ಲಾ ಶರಣ

ಸಂತತಿಂ ಯೀತನ ಅಂಣ ಬಸವಮಲ್ಲಪ್ಪನಾಯ್ಕ ಯೀತನ ಹೆಂಡತ್ತಿ ರ್ರಾಯದುರ್ಗ ಯರಿಬೊಂಮ್ಮಳ್ನಾಯ್ಕನ ಮಗಳು ಬೊಂಮ್ಮವ್ವ ನಾಗತ್ತಿ. ಯರಿಬಂಮ್ಮಳನಾಯ್ಕಗೆ ೭೦೦ ಕುರಿ ೭೦೦ ಆಕಳು ಕೊಟ್ಟ ಕಾರಣ ಮೊಳಕಾಲು ಮುರುವು ಶೀಮೆಕೊಟ್ಟರು ಯಿವರ ಮಕ್ಕಳು ಮೀಶೆ ಮಲ್ಲಪ್ಪನಾಯ್ಕ ೧ ಚಿನ್ನೆಯರಾಜು ೧ ಬಂಗಾರನಾಯ್ಕ ಅಂತ್ತು ೩ ಮಕ್ಕಳು ಬಂಗಾರನಾಯಕು ಜರ್ರಿಮಲೆಯಲ್ಲಿ ನಿಂತನು ಯಿತಗೆ ಮಕ್ಕಳು ಯಿಲ್ಲಾ ೯ ಮೀಶೆ ಮಲ್ಲಪ್ಪನಾಯ್ಕನ ಮಗ ಕಸ್ತೂರಿ ನಾಯ್ಕಕ ಮಕ್ಕಳು ಯಿಲ್ಲಾ೯ ಚಿನ್ನೆಯ್ಯರಾಜುನ ಹೆಂಡತ್ತಿ ಜರ್ರಿಮಲೆ ಅರಸರ ಮಗಳು ಲಿಂಗ್ಗಂಮ್ಮ ನಾಗತ್ತಿಯಿವರಿಗೆ ಮಕ್ಕಳು ನಾಲ್ಕು ಜನಾ ೪ ೯ ಗಿರಿಯಂಮ್ಮನ ಹಳ್ಳಿ ರಡ್ಡೆರ ಪಾಲಯ್ಯನ ಮಗಳು ಲಕ್ಷ್ಮವ್ವನ ಅರಮನಿಗೆ ಹಾಕಿಕೊಂಡು ಯಿದ್ದರು ಯೀಕಿ ಮಗ ಚಿಕ್ಕಮಲ್ಲಪ್ಪ ಅಂತ್ತಲೂ ಚಿನ್ನೆಯ ರಾಜಿಗೆ ಮಕ್ಕಳು ೫ ಜನಾ ಚಿತ್ರದುರ್ಗದ ಭರಮಣ್ಣನಾಯಕರು ಹಟ್ಟಿ ಸಂಸ್ಥಾನಕ್ಕೆ ಕೆಲವು ಕಂಡನೆ ಮಾಡಿ ಪವುದಿ ತ್ತೆಗದುಕೊಂಡುರು ಪುನಃ ಮೊಣಕಾಲು ಮುರುವು ಗುಪ್ಪಾ ಕಡೆ ಗಡಿ ಚಲೊದು ಯಂದ್ದೂ ಯೀ ಖಂಡನೆ ಪವುದಿ ಬಗ್ಗೆ ತ್ತೆಗದುಕೊಂಡರು. ಅದಕ್ಕೆ ಬದಲು ಕಸಬೆ ಚಿತ್ರದುರ್ಗದ ದಡ್ಕೇ ತಾಲ್ಲೊಕು ಪೈಕಿ ಕೆಲವು ಹಾಕಿ ಕೊಟ್ಟು ಯಿದ್ದರು ಹೀಗೆ ಕೆಲವು ದಿವಸ ಅನುಭವಿಶಿಕೊಳ್ಳುತ್ತಾ ವಿರುವಲ್ಲಿ ದಿನೆ ದಿನೆ ಭರಮೆಣ್ನಾಯ್ಕರು ದವಲತ್ತು ಭಡಾಯ್ಸಿದ್ದರಿಂದ್ದಾಲು ನಾಯ್ಕನಹಟಿ, ಪಾಳ್ಯ ಮುರಿಯಬೆಕೆಂದು ಯೊಚಿಶಿದ್ದಾರಿಂದ್ದಾಲು ಯೀ ೫ ಮಂದಿ ಮಕ್ಕಳನ್ನು ಕರಕೊಂಡು ಯಿವರ ಕೈಯ್ಯ ಕೆಳಗೆ ಯರಬಾರದೆಂದು ಶ್ರೀ ವಿದ್ಯಾನಗರಕ್ಕೆ ಹೋದರು ಅಲ್ಲಿ ಪೂರ್ವದಲ್ಲಿ ಕೊಟ್ಟ ಜಹಗೀರು ಮಾನ್ಯಗಳು ಅನುಭವಿಶಿಕೊಂಡು ರ್ರಾಯರ್ರು ಸಂನ್ನಿಧಾನದಲ್ಲಿ ಯಿರುತ್ತಾ ಯಿರಲಾಗಿ ಚಿಕ್ಕಮಲ್ಲಪ್ಪನಾಯ್ಕ ರ್ರಾಯರ್ರು ಯಿಟ್ಟುಕೊಂಡು ಯಿದ್ದಂದ್ದಾ ಸೂಳೆಯಂನ್ನು ತಾನು ಹೊತ್ತು ಹೊರಟ ಕಾರಣ ಯೀ ಸುದ್ದಿ ರ್ರಾಯರ್ರಿಗೆ ತಿಳಿದು ಯೀತನ ತಲೆ ಹೊಯಿಸ ಬೆಕೆಂದ್ದೂ ಹುಕುಂ ಚಲಾಯ್ಸಿದಲ್ಲಿ ಯೀ ಸುದ್ಧಿ ಯಿವರ ತಂದೆಯಾದಂದ್ದಾ ಚಿನ್ನೆಯರಾಜು ಕೆಳಿ ಯಿ ಯಿಂದ್ದಾ ರಾಜದ್ರೋಹ ಮಾಡಿದ. ಮುಂಡೆ ಗಂಡನ ಮೊರ್ರೆ ನೊಡಬಾರದೆಂದ್ದು ರಾತ್ರೋರಾತ್ರಿ ಯೀ ದುರ್ಗದ ಶೀಮೆಗೆ ಕಳಿಯ್ಸಿದನು. ಅಷ್ಟರಲ್ಲೆ ಯೀ ಚಿಕ್ಕ ಮಲ್ಲಪ್ಪನು ದುರ್ಗದ ವಳಕ್ಕೆ ಹೋಗಿ ನಾನು ದೊರ್ರೆ ಮಗನೆಂದ್ದೂ ಹೇಳಿದ್ದರಿಂದ್ದಾ ಅವರು ಪಂಕ್ತಿವೂಟ ಯಿಟ್ಟು ಮಾನಮಂನ್ನಣೆ ಯಿಟ್ಟುಕೊಂಡು ಯಿದ್ದರು ದುರ್ಗದ ಸಂಸ್ಥಾನದಲ್ಲಿ ವಂದು ಕುದುರ್ರೆ..... ಕೊಟ್ಟು ಯಿದ್ದಂದ್ದಾದ್ದು..... ಸಂಸ್ಥಾನಕಾರರ್ರ(?) ಕೊಂದದ್ದಾದ್ದು....ಡಿಗೆ ಹಾಕಿ ಯಿದ್ದರು ಯೀ ಕುದುರೆ ಪ್ರಸ್ತಾಪ ಸಭೆಯಲ್ಲಿ ಬಂದದರಿಂದ್ದಾ ಯೀ ಕುದುರ್ರೆ ಯಾರ್ರು ಹತ್ತುತ್ತಾರೋ ಅವರಿಗೆ ನಂಮ್ಮನೆ ಹೆಣ್ಣುಕೊಟ್ಟು ಲಗ್ನ ಮಾಡಿ ಗ್ರಾಮ ಭೂಮಿಗಳು ಕೊಟ್ಟು ಮೆರವಣೀಗೇ ಮಾಡುತ್ತೇವೆಂದು ಹೆಳಿದ್ದರಿಂದ್ದಾ ಯೀ ಚಿಕ್ಕಮಲ್ಲಪ್ಪನು ಕೇಳಿ ಆ ಕುದುರ್ರೆ ಕರಶಿ ನಾನು ಹತ್ತುತ್ತೆನೆಂದ್ದು ಹೆಳಿ ತಾವು ಕೊಟ್ಟಾ ಮಾತ್ತು ತಪ್ಪಬಾರದ್ದೂ ಯಂದ್ದೂ ಅವರ ಮಾತ್ತು ತ್ತೆಗದುಕೊಂಡು ಆ ಕುದುರ್ರೆಯಂನ್ನು ಹತ್ತಿದನು. ಅದು ನೋಡಿ ೩೨ ಹಳ್ಳಿಗ್ರಾಮ ಕಸಬೆ ನಾಯ್ಕನಹಟ್ಟಿ

ಪಾಳ್ಯನೆ..... ತಮ್ಮ ಮಗಳು ದೇಮವ್ವ ನಾಗತ್ತಿನು ಕೊಟ್ಟು ಲಗ್ನಮಾಡಿ ಅನೇಕ ಬಹುಮಾನ ಕೊಟ್ಟು ಕಳುಯ್ಸಿದರು. ಸದರಿ ಚಿನ್ನೆಯ ರಾಜಿನ ಪಟ್ಟದ ಮಕ್ಕಳು ನಾವು ಯಿದ್ದ ಹಾಗೆ ಅವನಿಗೆ ಸಂಮ್ಮಂಧವೆನೆಂದು ರ್ರಾಯರಿಂದ್ದಾ... ಕೊಂಡು ದುರ್ಗಕ್ಕೆ ಬಂದ್ದೂ ಅವನಿಗೆ....ವಿಲ್ಲಾಯೆನು ಕೊಟ್ಟಾಗ್ಯೂ ಸಂಸ್ಥಾನ ಪಾಳ್ಯದ ವಿಚಾರ್ರ ನಂಮ್ಮಗೆ ಸಲತಕ್ಕದೆ ಹೊರ್ತು ಅವನಿಗೆ ಯಷ್ಟು ಮಾತ್ರ ಕೆಲಸವಿಲ್ಲಾ ಯಂದ್ದೂ ಯಿವರು ಹೆಳಿದ್ದರಿಂದ್ದಾ ಯೀ ಮಾತ್ತುಗಳು ಯಾವತ್ತೂ ಭರಮಣಾಯ್ಕರು ಕೆಳುವಾಗ್ಗೆ ವಿಚಾರ್ರ ಮಾಡುವಲ್ಲಿ ನಿಂಮ್ಮಗೆ ಸಲತಕ್ಕುದು ಸಲತಕ್ಕುದು ಸರಿ. ಆದರೂ ನಾವು ಸಭೆವಳಗೆ ಮಾಡುಕೊಟ್ಟ ಪ್ರಯುಕ್ತ ತಪ್ಪಬಾರದೂ ಯಂದ್ದೂ ಅವನು ನಿಂಮ್ಮವನು ನಿಂಮ್ಮಮಗ ಕೈಯ ಬಿಡದೆ ನೀವೆ ನೋಡಿಕೊಂಡು ನಾಯ್ಕನಹಟ್ಟಿ ಪಾಳ್ಯಕ್ಕೆ ಹಕಮು-ಹುಕುಮು ನಿಂಮದೆ ಸರಿ ಕುಲದೊರ್ರೆತನಕ್ಕೆ ನೀತಿಭಾಧ್ಯತೈಹೊರ್ತಾಗಿ ಯಿವಗೆ ಸಲತಕ್ಕದು ಯಿಲ್ಲಾ ಸುಂಮ್ಮನೆ ಯಿತನ್ನ ನೀವು ಬಿಡುಬಾರದು ನಿಂಮ್ಮ ಮಗನಾಗಿಯಿರಲಿ ಯಂದ್ದೂ ಹೆಳಿ ಗೊತ್ತು ಮಾಡಿಕೊಟ್ಟರು. ಯೀ ಅರ್ಥಕ್ಕೆ ಸದರಿ ನಾಲ್ಕು ಜನರು ಪಟ್ಟಣದ ಹೆಂಡತಿ ಮಕ್ಕಳು ಬಸವ ಮಲ್ಲಪ್ಪನಾಯ್ಕ ದೊಡ್ಡಿ ಮಲ್ಲಪ್ಪನಾಯ್ಕ ಯರ್ರಮಲ್ಲಪ್ಪನಾಯ್ಕ ಬಂಗಾರ ಮಲ್ಲಪ್ಪನಾಯ್ಕರು ಮುಂತ್ತಾಗಿ ಸಂಮ್ಮತಿ ಬಟ್ಟು ನಾಲ್ಕು ವರುಷ ಯೆಕು ಮಧ್ಯವಾಗಿ ಯೀ ಪಾಳ್ಯ ದೊರ್ರೆತನ ಮಾಡಿಕೊಂಡು ಯಿದ್ದಲ್ಲದೆ ಕುಲದ ದೊರ್ರೆತನ ವಿಚಾರ್ರ ಮಾಡಿಕೊಂಡು ಯಿರುತ್ತಿರುವಲ್ಲಿ ಯೀ ನಾಲ್ಕು ವರುಷದಲ್ಲಿ ಚಿಕ್ಕಮಲ್ಲಪ್ಪ(ನ) ಮೀಚಾಚು(?) ಹೆಚ್ಚಿಯಿವರ ಸತ್ತು(ಸೊತ್ತು) ಬೀಕರಿಶಿದ್ದ(?)ರಿಂದ್ದಾ ಹಿರ್ರೇ ಮೆದಿಕೆರ್ರಿನಾಯ್ಕರಿಗೇ ಹಿಂದಲ ವೃತ್ತಾಂತ್ತವೆಲ್ಲಾ ತಿಳಿದಲ್ಲಿ ಸದರಿ ಮೆದಿಕೆರ್ರಿನಾಯ್ಕರು ದೊಡೆರಿಯಲ್ಲಿ ಶೆರೆಮನೆಗೆ ಹಾಕಿ ಕೊಂದ್ದರು ಯೀ ಚಿಕ್ಕಮಲ್ಲಪ್ಪನ ಮಗ ಪೆದಯ್ಯಾ ಯೀತನ(ಗೆ) ದುರ್ಗದವರು ವಂದೂ ಹೆಣ್ಣು ಕೊಟ್ಟು ಲಗ್ನ ಮಾಡಿ ಅಡಿರೆ(ತೆ) ಲಗೇ(?) ಗಾಡಿಗನ ಹಳ್ಳಿಯಂಬ ಗ್ರಾಮವಂನ್ನು ಕೊಟ್ಟರು ಯೀ ....... ಮಕ್ಕಳೇಯಿಲ್ಲಾ ಚಿಕ್ಕ ಹೆಂಡತ್ತಿ ಕುಂಚಿಗೊಮೆಲಿಗ ಸೊಮೇ(?) ಉತ್ತಂಗಿ ಅಕ್ಕಮ್ಮಂಗೆ ಯೀ ಬೊಡಿಮಲ್ಲಪ್ಪಯಂಬುವ ಮಗ ಯೀತಗ ಮಕ್ಕಳು ೩ ಜನಾ ದೊ X ತಿಪ್ಪೈಯ್ಯಾ ೧ ಸಂಣತಿಪ್ಪೈಯ್ಯಾ ೧ ರುದ್ರಯ್ಯಾ ೧ ಅಂತ್ತೂ ೩ ಮಂದ್ದಿ ಚಿಕ್ಕಮಲ್ಲಪ್ಪನ ಸಂತತಿಯವರು ರಡ್ಡೆರ ಲಕ್ಷ್ಮವ್ವನ ಮಕ್ಕಳು ಸಂತ್ತತ್ತಿಯವರು ಯಿವರು ಪಟ್ಟದ ಹೆಂಡತಿ ಲಿಂಗಮ್ಮ ನಾಗತಿ ಜರ್ರಿ ಮಲೆ ಅರಸರ ಮಗಳು ಯೀಕಿಗೇ ಮಕ್ಕಳು ನಾಲ್ಕು ಜನಕ್ಕೆ ಸಂತ್ತತ್ತಿ ನಿಂತಿರುವದು. ಬಸವ ಮಲ್ಲಪ್ಪನಾಯ್ಕಗೇ ಯಿಬರ್ರು ಹೆಂಡರು. ಹಿರ್ರೇ ಹೆಂಡತ್ತಿಗೆ ಸಂತ್ತಿ ನಿಂದ್ರಲಿಲ್ಲಾ ೀ ಚಿಕ್ಕ ಹೆಂಡತ್ತಿಗೆ ಬಂಗಾರಮಲ್ಲಪ್ಪ ಯೀತಗೆ ದೊಡ್ಡಮಲ್ಲಪ್ಪ ವಬ್ಬಾ ೧ ಹೆಂಣುಮಗಳು ವಬ್ಬಾಕಿ ಚಿತ್ರದುರ್ಗದ ಚಿಕ್ಕಮೆದಿಕೆರ್ರಿನಾಯ್ಕಗೆ ಕೊಟ್ಟಿದ್ದು ಸದರಿ ದೊಡ್ಡಮಲ್ಲಪ್ಪನಿಗೆ ೨ ಮಕ್ಕಳು ತ್ತಿಪ್ಪೈಯ್ಯಾ ೧ ಬಂಗಾರನಾಯ್ಕ ೧ ಅಂತ್ತೂ ೨ ಯಿವರು ಬಸವಮಲ್ಲಪ್ಪನಾಯ್ಕನ ಸಂತ್ತತ್ತಿಯವರು - ದೊಡ್ಡಿಮಲ್ಲಪ್ಪನಾಯ್ಕನ ಮಗ ದೊಡ್ಡಮಲ್ಲಪ್ಪನಾಯ್ಕ ಯೀತನ ಮಗ ಬಂಗಾರನಾಯ್ಕ - ಯರ್ರಿ

ಮಲ್ಲಪ್ಪನಾಯ್ಕಗೆ ಮಕ್ಕಳು ೨ ಗಿರ್ರೆಮಲ್ಲನಾಯ್ಕ ೧ ಕುಮಾರ ಚಿಂನೈಯ್ಯ ಅಂತ್ತೂ ೨ ಗಿರ್ರೆಮಲ್ಲಪ್ಪನಾಯ್ಕಗೆ ಸಂತತ್ತಿಯಿಲ್ಲಾ ಕುಮಾರ ಚಿಂನೈಯ್ಯಗೆ ಹೊ X X X ಬಂಗಾರನಾಯ್ಕ ಯಿತರ ಮಗ ವಬ್ಲಾಯಿಧಾನೆ ಯಿದು ಯರ್ರಿ ಮಲ್ಲಪ್ಪನಾಯ್ಕನ ಸಂತ್ತತ್ತಿ-ಬಂಗಾರನಾಯ್ಕಗೆ ದುರ್ಗದ ದೊಡಿ ಮೆದಿಕೆರ್ರಿನಾಯ್ಕ ಗವುಡಗೆರೆ ಯಂಬುವ ಗ್ರಾಮವಂನ್ನೂ ತ್ತಿಂಗಳು ೧ಕ್ಕೆ ಮುವತ್ತು ವರಹಾ ೩ಂನ್ನು ಯೀ ಪ್ರಕಾರ್ರ ನಡಶಿಕೊಂಡು ಬಂದರ್ರು ಯೀ ಬಂಗಾರನಾಯ್ಕನ ಮಕ್ಕಳು ೩(?) ಅವರ ಹೆಸರು ೧ ತ್ತಿಪ್ಪನಾಯ್ಕ ೧ ಮಲ್ಲಪ್ಪನಾಯ್ಕ ಕಸ್ತೂರಿನಾಯ್ಕ ಹೊರಮಟದ....ತ್ತಂಗಿ ಅಕ್ಕಂಮ್ಮನ ಮಕ್ಕಳು ೩ ಚಿಕ್ಕಹೆಂಡತ್ತಿ ಜರ್ರಿಮಲೆ ಯಿಂಮ್ಮಡ(ಡಿ) ನಾಯ್ಕರ ತಂಗಿ ಪಾಪಮ್ಮ ನಾಗತ್ತಿ ಮಗ ಬಂಗಾರಮಲ್ಲಪ್ಪನಾಯ್ಕ ಕಳ್ಳಿಕೋಟೆ(ತಾಳೀಕೋಟೆ?) ಲಡಾಯಿಗೆ ಮೆದಿಕೆರ್ರಿ ನಾಯ್ಕ ಯೀತನು ಕೂಡಾ ದಂಡುದಳ ಯಾವತ್ತೂ ತ್ತೆಗದುಕೊಂಡು ಹೋಗಿ ಕಳ್ಳಿಕೋಟೆ(ತಾಳೀ ಕೋಟೆ) ಹಿಂದ್ದೆ ಮುಂದೆ ಅನಂತ್ತ ಶಯನ....ರ್ರಾಮರಾಜಿನ.... ಸದರಿ ಬಂಗಾರ ಮಲ್ಲಪ್ಪನಾಯ್ಕ ಕಳ್ಳಿಕೋಟೆ(ತಾಳೀಕೋಟೆ) ಲಡಾಯದಲ್ಲು ಸ್ವರ್ಗಸ್ತನಾದನು. ಯೀತಗೆ ಸಂತ್ತತಿ ಯಿಲ್ಲಾ ಬಂಗಾರನಾಯ್ಕನ ಹಿರ್ರೆ ಹೆಂಡತ್ತಿ ಅಕ್ಕಮ್ಮಂನ್ನ ಮಗಳು ೩ ಜನಕ್ಕೆ ಮಲ್ಲಪ್ಪನಾಯ್ಕಗೆ ಸಂತ್ತತ್ತಿಯಿಲ್ಲಾಂ..... ಕಸ್ತೂರಿನಾಯ್ಕಗೂ ಸಂತ್ತತ್ತಿಯಿಲ್ಲಾಂ ತ್ತಿಪ್ಪನಾಯ್ಕಗೆ ಕಾಮಗೇತ್ತಲ ಹಳ್ಳಿ ಪೂಜಾರನಾಯ್ಕನ ಮಗಳು ಚಿನ್ನಮ್ಮ ನಾಗತ್ತಿ ಜರ್ರಿಮಲೆ ಪೂಜಾರಿ ಮಾಕನ ಡುವಿನ ಪೊ ಬ ಳಿ ದೇವರು ಮುದ್ದಯ್ಯನ ಮಗಳು ಮುದ್ದವ್ವ, ನಾಗತ್ತಿಗೆ ಮಕ್ಕಳು ೪ ನಾಲ್ಕು ಜನ ಹೆಸರು ಯಿರ್ರೆಮಗ ಕಸ್ತೂರಿನಾಯ್ಕ ೧ ಬಂಗಾರನಾಯ್ಕ ೧ ಬಸಪ್ಪನಾಯ್ಕ ೧ ಬೊಶಿನಾಯ್ಕ ೧ ಅಂತ್ತೂ ೪ ಮಂದ್ದಿ ಬಂಗಾರನಾಯ್ಕ ಸಂತ್ತತ್ತಿ......

## ಅನುಬಂಧ ೨

## ತಿಪ್ಪೇಸ್ವಾಮಿ ಕಾವ್ಯ

(ಎ.ಹಿರಿಯಣ್ಣ ಸಂ, ಕಾಡುಗೊಲ್ಲರ ಜನಪದ ಗೀತೆಗಳು ೧೯೭೮ ಎನ್ನುವ ಪುಸ್ತಕದಿಂದ ಸಂಗ್ರಹಿಸಲಾಗಿದೆ)

ಹಟ್ಟೀ ತಿಪ್ಪಯ್ಯ ಬುತ್ತಿ ಉಂಡುತ್ತಾವ
ಬತ್ತೀದ ಬಾಳೆ ಫಲುವಾಗಿ-ನಾಯಕನ್ಹಟ್ಟಿ
ಹಟ್ಟೀದ ಮಕ್ಕಳಿಗೆ ನೆರಳಾಗಿ

ಸಾಮಿ ತಿಪ್ಪಯ್ಯ ಬಾನ ಉಂಡುತ್ತಾವ
ಬಾಡೀದ ಬಾಳೆ ಫಲುವಾಗಿ-ನಾಯಕನ್ಹಟ್ಟಿ
ಆಡಾ ಮಕ್ಕಳಿಗೆ ನೆರಳಾಗಿ

ರುದ್ರ ನಿಮ್ಮ ತೇರು ಬಗ್ಗೂತ ಬಳಕೂತ
ರುದ್ರಾಕ್ಷಿ ಣಿಯಾ ನುಡುಸೂತ-ನಾಯಕನ್ಹಟ್ಟಿ
ರುದ್ರ ನೀನೇರೊ ರಥುವೀಗ

ಏಗಿ ನಿಮ ತೇರು ಬಾಗೂತ ಬಳಕೂತ
ಯಾಲಕ್ಕಿ ಣಿಯಾ ನುಡುಸೂತ-ನಾಯಕನ್ಹಟ್ಟಿ
ಏಗಿ ಏರ್ಯಾನೆ ರಥುವೀಗ

ಹಟ್ಟಿ ತಿಪ್ಪಯ್ಯಾಗೆ ಸಿತ್ತಾ ನಕ್ಷತ್ರೇನೊ
ಸಿತ್ತಾ ನಕ್ಷತ್ರ(ಬರಲ್ಹೇಳೊ) - ಬಂದಾಗ ತಿಪ್ಪಯ್ಯ
ಮತ್ತೆ ನೀನೇರೊ ರಥುವೀಗ

ಮಗಿಯಾ ನಕ್ಷತ್ರ ಏಗೀಗೆ ಬರುಲೇನೊ
ಮಗಿಯಾ ನಕ್ಷತ್ರ ಬಂದಾರೆ-ತಿಪ್ಪಯ್ಯ
ಮತ್ತೆ ನೀನೇರೊ ರಥುವೀಗ

ತೇರು ಹಸನಾದಾವು ಏಗೀಯ ಬರ ಹೇಳಿರೊ
ಏಗೀಗೆ ನಕ್ಷತ್ರ(ಬರುಬೇಕು)-ಬಂದರೆ ನಾಯಕನ್ಹಟ್ಟಿ
ತೇರು ಏರ್ಯಾನೆ ಅವನೀಗ

ಮಗಿಯಾ ನಕ್ಷತ್ರ ರುದ್ರಾಗೆ ಬಂದಾರೆ
ಮತ್ತೇನೇನು ಹೇಳೋ ರಥುಕೀಗ-ನಾಯಕನ್ಹಟ್ಟಿ
ರುದ್ರಾ ಏರ್ಯಾನೆ ರಥುವಲ್ಲಿ

ಅಪ್ಪಾನ ತೇರು ಮತ್ತೆ ಹಸುನಾದಾವು
ಹನ್ನೆಲ್ಡೆ ಎಲಿಯೆ ಅವನೀಗೆ-ಹಸುನಾದಾವು
ಹರತೀ ಗೌಡರನ ಬರುಹೇಳೊ

ಅಪ್ಪಾಗೆ ಗಾಲೆ ಮತ್ತೆ ಕಡಿಸೈದಾರೆ
ಮತ್ತೆ ಹರತೇರ್ಕ ಬರುಹೇಳೊ-ಹರತೀಕೋಟೆ
ಒಪ್ಪಿದ ಗಾಲೆ ತರುಹೇಳೊ

ಏಗೀನೆ ರುದ್ರಾಗೆ ಬಂದಾವೆ ಆ ಗಾಲೆ
ತೇರಿಗೆ ಗಾಲೆ ಈಗ ಹಸುನಾದಾವು-ಈಗ
ಹರತೀ ಗೌಡರುನ ಬರುಹೇಳೊ-ಅವನೀಗೆ
ನಂದಾದೀವಿಗಿಯ ಉರಿವಿಳೊ

ಸಿತ್ತಾ ನಕ್ಷತ್ರಾಕೆ ಬಂದಾವು ಅವರೆಣ್ಣೆ
ಹರತೀ ಗೌಡರುನ ಬ್ಯಾಗ ಬರುಹೇಳೊ-ನಾಯಕನ್ಹಟ್ಟಿ
ನಂದಾ ದೀವಿಗಿಯ ಉರಿ ಏಳೊ

* * *

ಹಟ್ಟೀನೆ ತಿಪ್ಪಯ್ಯ ಸತ್ತೀನೆ ಉಳ್ಳೋನು
ಮತ್ತೆ ಫಣಿಯಪ್ಪುಗೆ ಒಲುದಾನು - ಆ ಸ್ವಾಮಿ
ಭಿಕ್ಷಾಕೆ ಮನಿ ಮನಿಯ ತಿರುಗ್ಯಾನು

ಸಿವ ಸೀವ ಅಂದಾರೆ ಸಿವನೇನು ಆ ಜಂಗೂಮ
ಸಿವಕೊಟ್ಟ ಜೋಳಿಗೆ ಅವನಲ್ಲಿ-ಹಾಕೀಕೊಂಡು
ಫಣಿಯಪ್ಪಾನಲ್ಲಿ(ಹೋದಾನು) - ಹೋಗಿ ಅವರಿಬ್ಬಾರು
ರಾಯ ದುರ್ಗಾಕೆ ನೆಡುದಾರು

ರಾಯ ದುರುಗದ ಸಂತೆ ಇಬ್ಬಾರು ಮಾಡ್ಯಾರು
ಬಾಳನ್ನ ಬಡುವ ಫಣಿಯಪ್ಪ-ನಲ್ಲೀಗ
ಏಗಿ ಜಂಗೂಮ ಅವನಲ್ಲಿ

ಜಂಗುಮನ ಅವುತಾರ ಇವುನು ತಾಳೀಕೊಂಡು
ಫಣಿಯಪ್ಪಾನಲ್ಲಿ ಇರುವೋನು

ರಾಯಾದುರುಗಾದ ಸಂತೆ ಫಣಿಯಪ್ಪ ಮಾಡಲುವಾಗ
ಏಗಿ ಜಂಗೂಮ ಒದಿಗ್ಯವ್ನೆ

ಮಾಯಕಾರ ಸಿವುನೆ ಏಗೀನೆ ಜಂಗೂಮ
ಫೀಯಪ್ಪ ಹೋದಲ್ಲಿ ಒದಿಗ್ಯವ್ನೆ

ಸಂತೀಗ್ಹೋಗೂವಾಗ ಎದುರೀಗೆ ಬಂದವ್ನೆ
ಫಣಿಯಪ್ಪ ಬುತ್ತೀ ಬಿಚ್ಯಾನು ದಾರ‍್ಯಾಗೆ-ಬಾವೀಲಿ
ಕೈಕಾಲ ಮಕುವಾ(ತೊಳುದಾನೆ) - ತೊಳುದೂ ಗಡ್ಡಿಗೆ ಬಂದು
ಬುತ್ತೀ ಬಿಚ್ಯಾನೆ ಫಣಿಯಪ್ಪ

ಬುತ್ತೀ ಬಿಚಿಕಂಡು ಊಟ ಮಾಡಲುವಾಗ
ಆತ ತಿಪ್ಪಯ್ಯ ಒದಗೀದ-ನೆ ಫಣಿಯಪುಗೆ
ಊಟುಕೆ ನನುಗೆ ಇಡಿರೆಂದ-ತಿಪ್ಪಯ್ಯಾಗೆ
ಬುತ್ತೀ ನೀ ತಕ್ಕ ಉಣ್ಣಪ್ಪ

ಬುತ್ತೀನೆ ತಕ್ಕಂಡು ನೀ ಉಣ್ಣು ಏ ಸ್ವಾಮಿ
ಬಾಳ ಹಸುವಾಗಿ ಬಂದಿದಿಯ

ನಾನೊಬ್ಬಾನೆ ಬುತ್ತೀ ಉಣ್ಣಲ್ಲ ಫಣಿಯಪ್ಪ
ಇಬ್ಬಾರು ಊಟ ಮಾಡಾನೆ

ಇಬ್ಬಾರೆ ಉಂಡಾರೆ ಮುಗಿಯಾದು ಬುತ್ಯಲ್ಲಿ
ಇದ್ದಂತೆ ಬುತ್ತಿ ಇರವೋದು-ತಿಪ್ಪಯ್ಯಾನ
ಸತ್ಯ ಅಲ್ಲೀಗೆ ಒದುಗ್ಯಾವು

ಫಣಿಯಪುನ ಬಡುತಾನ ಬಯಲಾಗಿ ಹೋದಾತು
ಫಣಿಯಪುನೆ ನಿನ್ನಲ್ಲಿ ಇರುತೀನಿ

ನೀನು ಮಾಡೀದ ಬದುಕೆ ಕೈಗೂಡಿ ಬರಲೆಂದು
ಅಶ್ರೀವಾದಾವ ಕೊಡುತಾನೆ ತಿಪ್ಪಯ್ಯ-ನೋಡಪ್ಪ
ನಿನ ಬಿಟ್ಟು ಜಂಗುಮನೇ ಹೋಗಲ್ಲ

ನಿನ ಬಡುತಾನ ಬಯಲಾಗಿ ಮನೆಯಲ್ಲಿ ಇರುತೀನಿ
ನಿನ ಒಕ್ಕೂ ಭೂಮಿಗಳೇ ಬೆಳಿಯಾಲೊ-ಫಣಿಯಪ್ಪ
ಸತ್ಯ ನೀನೀಗ ಬಿಡುಬ್ಯಾಡ-ನಾಯಕನ್ಹಟ್ಟಿ
ಇಬ್ಬಾರು ವರುಮಠುಕೆ ಇರುವೋಣೊ

* * *

ಹಟ್ಟೀ ತಿಪ್ಪಯ್ಯ ಜಗಲೂರು ಪಾಪಯ್ಯ
ಸಿಕ್ಕೇರಿಕೋಡಿ ಬಸುವಯ್ಯ-ಇವ್ರು ಮೂವಾರು
ಲೆತ್ತಾನಾಡ್ಯಾರೆ ಕೆರಿಯಾಗೆ

ಲಿಂಗ ಜಂಗುಮರಿಗೆ ಒಳುಮಠುವೆ ಇರುಲೆಂದು
ಬ್ಯಾಡಾರ ಸಂಗಾಕೆ ಹೋದಾನೆ-ತಿಪ್ಪಯ್ಯ
ಹೊರುಮಠದಲ್ಲವರು ಇರುಲೆಂದು

ಲಿಂಗ ಜಂಗುಮರಿಗೆ ಒಳಮಠುವೆ ಇರುಲೆಂದ
ತುಪ್ಪಾ ಸಕ್ಕರಿಯು ಇರುಲಂದ-ಜಂಗಮರಿಗೆ
ಮತ್ತೆ ಆರಾಜ್ನೆ ಇರುಲೆಂದ

ಬ್ಯಾಡಾರ ಸಂಗಾಕೆ ಹೋದಾನೆ ತಿಪ್ಪಯ್ಯ
ಮದ್ದೂ ಮಾಂಸುಗಳ ಮಾಡಂದ-ಹೊರುಮಠುಕೆ
ಎಡಿಯೇ ತಿಪ್ಪಯ್ಯಗೆ ಇರುಲೆಂದ

ಒಳಮಠುಕೆ ಜಂಗುಮುರು ಹೊರುಮಠುಕೆ ಭಕ್ತಾರು
ಕುಲವನ್ನೆಲ್ಲೇ ಜಾತಿ ಕಲೆಯಾಲಿ-ಹೊರುಮಠುದಾಗೆ
ಮದ್ದೂ ಮಾಂಸುಗಳೇ ಬೇಸಾಲಿ-ಹೊರುಮಠುದಲ್ಲಿ
ಅಪ್ಪಯ್ಗೆ ಈ ಎಡಿಯೇ ಏರಾಲಿ

ಒಪ್ಪೀದ ಕುರಿಗಾಳ ಮತ್ತಲ್ಲಿ ಕಡೀರಣ್ಣ
ಹೊರುಮಠುದಾಗೆ ನೀವು ಮಾಡೀರಣ್ಣ-ನಾಯಕನ್ಹಟ್ಟಿ
ಹೊರುಮಠುದಲ್ಲೀಗ ಎಡಿಯೇ ಏರಾಲಿ

* * *

ದನುವೂನ ಕಾಯರನು ಕುರಿಯಿಲ್ಲಿ ಕಾಯರನು
ಆಡಾ ಮಕ್ಕಳನು ಹಿಡಕಂಡು-ತಿಪ್ಪಯ್ಯ
ಕೆರಿಯಾ ಕಟ್ಟಾಕೆ ನೆಡುದಾನೆ-ಹೊಸು ಗುಡ್ಡಾದ
ಬಸುವಣ್ಣಾನಲ್ಲಿ ಕಡಿಸೀದ

ಆಡಾನೆ ಮಕ್ಕಳಿಗೆ ಏನಂಬೂತ ಹೇಳೀದ
ಕೆರಿಯ ಕಟ್ಟಾನಿ ಬರಿರಪ್ಪ

ಕೈಯಲ್ಲಿ ಮಣ್ಣಕ್ರ ತಲಿಯಲ್ಲಿ ಕಲ್ಲು ಹೊರಿರೊ
ಇಬ್ಬಾರು ಕೆರಿಯಾ ಮಾಡಾನಿ-ಹೊಸು ಗುಡ್ಡಾದ
ದೊಡ್ಡಕೆರೆ ಅಲ್ಲಿ ಆಗಾಲಿ

ನಿಮ್ಮೀಗೆ ನಾನು ಬೇಡೀದ ಭಾಗ್ಯಾವ ಕೊಡುವೆ
ಬೇಕಾದೋಟು ರಾಸಿ ನೀವು ಮಾಡೀರಿ

ಮಣ್ಣೂನೆ ಗುಡ್ಡಿಗಳು ಇನ್ನಾ ಮಾಡೀರಯ್ಯ
ನಿಮ್ಮೀಗೆ ಬೇಡೀದ ಭಾಗ್ಯಾವೆ ಕೊಡುತೀನಿ

ಆಸೇನೆ ಹುಟ್ಯಾತು ರಾಸಿ ಅವ್ರು ಮಾಡ್ಯಾತು
ಬೆತ್ತಾ ಹಿಡಿಕೊಂಡು ಹಟ್ಟೀನೆ-ತಿಪ್ಪಯ್ಯ
ಸುತ್ತಾನೆ ಗೆರಿಯ ಕೊಯ್ದಾನು

ಗೆರಿಯಾನೆ ಕೊಯ್ದಾನೆ ಸಿವ ಸೀವ ಅಂದಾನು
ಮಾಡಿದರಿಗೆ ನೀಡಿ ಭಿಕ್ಷಾ ಆಗಲಿ

ಕಷ್ಟ ಮಾಡಿದಾರೀಗೆ ಎಷ್ಟು ಭಾಗ್ಯಾವೈತೆ
ಕಷ್ಟ ಮಾಡ್ದಂತ ಮಯ್ಯಾಗಳ್ಳರಿಗೆ-ಏ ಸಿವನೆ
ಗುಡ್ಡಾ ಕೆದರಿದರೆ ಬರಿಗೈಯೆ

ಹಂಗಂಬೂತ ಕೆರಿಯಾ ಸಾದೂಸಿ ನೆಡಸೀದ

ಕೆರಿಯಾನೆ ಕಟ್ಯಾನೆ ತೂಬು ಇಕ್ಕಿಸಿದಾನೆ
ತುರುನೂರೀಗವನು ಹೋದಾನೊ-ತಿಪ್ಪಯ್ಯ
ತುರುನೂರ ಹಳ್ಳ ತಿರಿವಿದನೊ-ನಾಯಕನ್ನಟ್ಟಿ
ಕೆರಿಯಾನೆ ಕೋಡಿ ಹರಿಯಾಲೆ

ಕೋಡೀನೆ ಬಿದ್ದಾವು ಈಗಾನೆ ಆ ಕೆರಿಗೆ
ತೆಪ್ಪಾವಿಡಿರಣ್ಣ ಈಗಾಲೆ-ನಾಯಿಕನ್ನಟ್ಟಿ
ಬಂದಾ ಭಕ್ತಾರು(ಹೋಗಲಿ)-ಹೊಸ ಗುಡ್ಡಾಕೆ ಹೋಗಾಲಿ
ಬಸುವಣು ನೋಡಿ ಅವರೀಗ ಬಂದಾರೆ
ಕೆರಿಯಾ ನೋಡಾಕೆ ತಿರುಗವರೆ

ಕೆರಿಯಾನೆ ನೋಪಾಕೆ ಕೆರಿಯಾ ಏರೀಮ್ಯಾಲೆ
ಹತ್ತೂ ಗಾಡಿಗಳು ಬರುವಂತ ಅಡ್ಡಾವೇರೀಮ್ಯಾಲೆ
ತಿಪ್ಪಯ್ಯ ಮಾಡವ್ನೆ ಅವನಲ್ಲಿ

ತುಂಬೀದೇರೀ ಮ್ಯಾಲೆ ಲಿಂಗದವರು ಬರುತಾರೆ
ಜಂಗುಮರೇ ಅಲ್ಲಿ(ಇಳುದವರೆ)-ಅವರು ಇಳುದಾರು ನಾಯಕನ್ನಟ್ಟಿ
ತೆಪ್ಪ ಬಿಡಿರಣ್ಣ ಕೆರಿಗೀಗ

ಕೆರಿಗಾನೆ ತೆಪ್ಪ ಬಿಟ್ಟರು ನಾಯಕನ್ನಟ್ಟಿ
ಹಟ್ಟೀ ಗೌಡಾನ ಬರಿ ಹೇಳೊ-ಗಕ್ಕಾನೆ
ತೆಪ್ಪ ಬಿಡುತಾರೆ ಈ ಕೆರಿಗೆ

* * *

ಫಣಿಯಪ್ಪ ತಿಪ್ಪಯ್ಯ ಇಬ್ಬಾರು ಅವರೀಗ
ಇಬ್ಬಾರು ಕಪ್ಲೆ ಹೊಡುದಾರು-ಅವರೀಗೆ
ಬಾನಿ ಹರಿದೀತು ಗಳಿಗೇಲಿ

ತಿಪ್ಪಯ್ಯ ನೀನು ಊಟಾಕೆ ನಡಿಯಪ್ಪ
ಬಾನೀಯ ಹಾಕಿ ಬರುತೀನಿ
ಬಾನೀಯ ಈಗ ಒಲಿಯಾಕೆ ನಂಜಾನ ಮನಿಗೆ
ಬೇಗಾರ್ರ ಹಟ್ಟಿಗೆ ಹೋಗಿ ಬರುತೀನಿ

ಬಾನಿ ಹೊತ್ತುಕೊಂಡು ಫೀಯಪ್ಪ ಹೋದಾನೆ
ನಂಜಾನ ಮನಿಯಾಗೆ ಸಾಮಿ(ಇರುವೋನೆ)-ಹೋಗ್ಯವ್ನೆ
ಸಿವಪೂಜೆಗಲ್ಲಿ ಕುಂತವ್ನೆ

ನಂಜಯ್ಯ ನೀನು ಬಾರಂದು ಕರುದಾನು
ಬಾನಿ ಹರಿದೈತೆ ಹೊಲಿದೀಗ-ಕೋಡಪ್ಪ
ಕಪ್ಪಿಲಿಯ ಬಿಟ್ಟು ಬಂದಿದಿವಿ

ಸಾಮಿ ಫಣಿಯಪ್ಪನೋರೆ ಸೊಲ್ಪ ತಾಳಿ ನೀವಿರಬೇಕು
ಸಾಮಿ ತಿಪ್ಪಯ್ನೋರು ಸಿವಪೂಜೆಗೆ-ಕುಂತವ್ರೆ
ಬ್ಯಾಗಾನ ನಾನು ಬರುಲಾರೆ

ಹಂಗ್ಯಂದ ಮಾತುಕೇಳಿ ಹಿಂದಾಕೆ ತಿರುಗ್ಯಾನೆ
ಮನಿಗೆ ಜಾಗ್ರತಿ(ಹೋದಾನೆ)-ಹೋಗಿ ಮನಿಯಾಗಿರುವ
ಮಡದೀನ(ಫಣಿಯಪ್ಪ)ಕೇಳ್ಯಾನೆ-ಫಣಿಯಪ್ಪ
ಸಾಮಿ ನಮ್ಮನಿಗೆ ಬಂದಿಲ್ಲುವೆ

ಮಾದೀರ ಮನಿಯಾಗೆ ಸಿವಪೂಜೆ ಮಾಡ್ತಿದ್ದ
ಸಿವು ಪೂಜೆಗೆ ನೀನು ಕರಿಬ್ಯಾಡ-ನಮ್ಮೀಗೆ
ತಕ್ಕಾದ ಸಿವುನಲ್ಲ ಅವನೀಗ

ಮಾದೀರ ಮನಿಯಲ್ಲಿ ಸಿವಪೂಜೆ ಮಾಡ್ತಿದ್ದ
ಭಕ್ತಾನಲ್ಲಾನು ಅವನು ನಮ್ಮೀಗೆ

ಅಯ್ಯೊ ನನು ಸಾಮಿ ಎಂತಾ ಮಾತಾಡುತೀಯ
ಒಳಗೆ ಸಿವಪೂಜೆಗೆ(ಐದಾರೆ)-ಕುಂತವ್ರೆ ಏ ಸಿವನೆ
ಎಂತಾನೆ ನುಡಿಯ ನುಡಿತೀಯೊ

ಹಂಗ್ಯಂದ ಮಾತು ಕೇಳ್ಯಾನೆ ತಿಪ್ಪಯ್ಯ
ಕಿವಿಯ ಕರಣಾಕೆ ಬಿದ್ದಾತು-ಆ ನುಡಿಯೆ
ಕಟ್ಟೀದ ಕಣ್ಯಾಗೆ ಕತಿ ಹೇಳಿ-ಆವೆಮ್ಮೆ
ಸತ್ತೂ ಹೋದಾವು ಆವಾಗ

ಹಿಂಗ್ಯಂದ ಮಾತಿಗೆ ಕೇಳ್ಯಾನೆ ಫಣಿಯಪ್ಪ
ಮಾಯವಾಗೀತು ನಮ್ಮೀಗೆ-ಏ ಸ್ವಾಮಿ ನೀನು
ದಡುವೂನೆ ಕೊಟ್ಟು ಹೋಗಬೇಕು

ಫೇಯಪ್ಪ ಎಂತಾ ಮಾತು ನೀ ಆಡಿದ್ಯೊ
ಎಲ್ಲರಿಗೆ ನಾನು ಮೇಲ್ನಾಕೆ ಬಗುತ-ಫಣಿಯಪ್ಪ
ನಿನ್ನ ಮನಿಯಲ್ಲಿ ಇರುಲಾರೆ

ರುದ್ರಾನೆ ತಿಪ್ಪಯ್ಯ ಈವಾಗ ಅವನಲ್ಲಿ
ಸತ್ತೆಮ್ಮೆ ಹಾಲ ಕರದ-ಪಾಯಸೆ ಮಾಡಿ
ಸುತ್ತೇಳ ಮಠುಕೆ ಎಡಿಮಾಡಿ

ಏಗೀನೆ ಜಂಗೂಮ ಈವಾಗ ಅವನಲ್ಲಿ
ಅವೆಮ್ಮೆ ಹಾಲಾ ಕರುದು-ಪಾಯುಸು ಮಾಡಿ
ದೂರುಲಿ ಜಂಗುಮುರಿಗೆ ಎಡೆಮಾಡಿ

ಫಣಿಯಪ್ಪನ ಹೇಣೂತಿ ಮಾಳಮ್ಮ ನೀನು ಕೇಳೆ
ತುಂಬೀದ ವಡೇವ್ಕೆ ಧಾನ್ಯಾವ ಹೊಯ್ದೀನೆ
ಮೆತ್ತೂ ಹಾಕ್ಯೀನೆ ಧಾನ್ಯಾಕೆ-ಮಾಳಮ್ಮ
ಮೆತ್ತೂ ಎಂದೀಗೆ ಒಡಿಬ್ಯಾಡ-ನೀನೀಗ
ಸೋದಿಸಿಕೊಂಡು ಉಣ್ಣಮ್ಮ

ಎಷ್ಟೂ ಉಂಡಾರು ಮಿಗುವಲ್ಲೊ ಈ ಧಾನ್ಯಾವು
ಇದ್ದಂಗೆ ಧಾನ್ಯವು ಐದಾವೆ

ಎಷ್ಟು ದಿನ ನೋಡಿದರೆ ಅಷ್ಟೇನೆ ಐದಾವೆ
ಎಷ್ಟಂದರು ಇವು(ಮುಗಿಯಾವೆ)-ಮುಗಿವಲುದೆಂದು ಮಾಳಮ್ಮ
ಮೆತ್ತೂ ಒಡುದಾಳೆ(ಆವಾಗ)-ವಡೇವದಿಂದ
ಬುಸ್ಸಂಬೂತ ಹೊಲ್ಟೇ ಹೋದಾತು-ಫಣಿಯಪ್ಪುಗೆ
ಬಂದಾತು ಬಡುತನವೆ ಆಗ

ಹಿಂದಾಲ ದೆಸಿಯೆ ತಿರುಗೀತು ಫಣಿಯಪ್ಪುಗೆ
ಬಾಳನ ಬಡುತನುವೆ ಬಂದಾವೆ
ಆಗಾನೆ ಮಾಳಮ್ಮ ಏನಂಬುತ ಹೇಳುತಾಳೆ
ನೀನಾಡಿದ ಮಾತು ಸರಿಯಲ್ಲ-ಫಣಿಯಪ್ಪ ನಮುಗೆ
ಹಿಂದುಲ ಬಡುತನುವೆ ಒದಿಗ್ಯಾವೆ

ಮಡುದೀ ನಮ್ಮಲ್ಲಿದ್ದಂತ ಆ ಸಿವುನ
ದಿಕ್ಕಾರ ಮಾಡಿ ಕಳಿವೀದೆ-ನಮ್ಮೀಗೆ
ವಕ್ಕುರುಸಿ ಬಂತು ಬಡುತಾನ

ಸ್ವಾಮೀಗೆ ನಮ್ಮಲ್ಲಿ ಸಿವಪೂಜೆ ಮಾಡುವಾಗ
ಬಾಗುಲಾಗೆ ನಿಂತ್ಕಂಡು ನೀನು ಬೊಗುಳೀದಲ್ಲೆ
ಸ್ವಾಮೀ ದಿಕ್ಕಾರ ಅಡೀದ-ದೆಸಿಯಿಂದ
ನಮ್ಮೀಗೆ ಬಡುತನವೇ ಒದಗೀತು

* * *

ರುದ್ರಾನೆ ನಮ್ಮಯ್ಯ ಎದ್ದಾನೆ ಆವಾಗ
ಮುದ್ದೂಗಿನ್ನುಡಿಯ ನುಡಿಸೂತ-ನಾಯಕನ್ನಟ್ಟಿ
ಏಗಿ ಬೀದ್ಯಾಗೆ ನಿಲುನಲ್ಲೊ

ಏಗೀನೆ ನಮ್ಮಯ್ಯ ಎದ್ದಾನೆ ಆವಾಗ
ಬೋರೂಗಿನ್ನುಡಿಯ ನುಡುಸೂತ-ನಾಯಕನ್ನಟ್ಟಿ
ರುದ್ರಾ ಬೀದ್ಯಾಗೆ ನಿಲ್ಲುನಲ್ಲೊ

ಚಿಕ್ಕಾದುರುಗಾದ ಮತ್ತೆ ನಕ್ಷತ್ರಾಕೆ ನಾಯಕನ ಹಟ್ಟೀಗೆ
ತೆರಿಳ್ಯಾರೆ ಅವುರಲ್ಲಿ ಹೊರುಮಠುಕೆ-ನೆಲೆಯಾಗಿ ನಾಯಕನ್ನಟ್ಟಿ
ಕನ್ನ ಬ್ಯಾಡರಿಗೆ ಒದಗೀದ

ಬ್ಯಾಡಾರ ಮನಿಯಲ್ಲಿ ಹೆಂಗಿದ್ದೊ ಏ ಸಿವುನೆ
ಮುದ್ದು ಜಂಗುಮರೆ ಅವರಲ್ಲಿ- ನೀನೀಗ
ಮತ್ತೆ ಬ್ಯಾಡರಿಗೆ ಒಲುದೆಲ್ಲೊ

ಬ್ಯಾಡಾರ ಮನಿಯಲ್ಲಿ ಬೇಡಿದ್ದ ಬಾಗ್ಯೇವ್ಕೆ
ಏಗಿ ತಿಪ್ಪಯ್ಯ ಅವರಲ್ಲಿ-ಇರುವಂಥ
ರುದ್ರಾಕ್ಷಿ ಸರುವೇ ಕೊರುಳಾಗೆ

ರುದ್ರಾಕ್ಷಿ ಸರುವಾ ಹಾಕೊ ಮುದ್ದೂಗಿನ್ನುರಿ ತಗಿಯೊ
ಕಾವಿ ರುದ್ರಾಕ್ಷಿ(ಧರುಸಪ್ಪ)-ಧರಿಸಿ ನಾಯಕನ್ನಟ್ಟಿ
ಏಗಿ ಹೊಲ್ಡಯ್ಯ ಹೊರು ಮಠುಕೆ

ಏಗಿ ನೀನು ಹೊಲ್ಡು ಹೊರ ಮಠುಕೆ ಈವಾಗ
ಮದ್ದೂ ಜಂಗುಮರಿಗಿರುಲೆಂದ-ಒಳುಮಠವೆ
ಪೂಜಾ ಮಾಡಲಿ ನನ್ನೀಗೆ

ರುದ್ರಾ ಹೊರುಟಾನೆ ಹೊರಮಠುಕೆ ಈವಾಗ
ಕನ್ನ ಬ್ಯಾಡರಿಗೆ ಹೊರುಮಠುವೆ ಇರುಲೆಂದ-ತಿಪ್ಪಯ್ಯ
ಪೂಜಾ ಮಾಡಾಲಿ ನನ್ನೀಗೆ

ಆಗ ಫಣಿಯಪ್ಪುಗೆ ಏನಂಬೂತ ಹೇಳೀದ
ಕನ್ನ ಬ್ಯಾಡರ ಸಂಗಾಕೋಗೂತೀನಿ-ಹೊರುಮಠುಕೆ
ನಾನು ನೆಲಿಯಾಗಿ ಇರುತೀನಿ

ಬ್ಯಾಡಾರ ಸಂಗ ನನ್ನೀಗೆ ಇರುಲಯ್ಯ
ಜಂಗುಮರು ನಿನ್ನಲ್ಲಿ ಇರುಬೇಕು-ಒಳುಮಠುದಾಗೆ
ಲಿಂಗಾವಂತುರುನ ಕರಿಬೇಕು

ಲಿಂಗಾವಿಲ್ಲದ ಪೂಜೆ ಜಂಗುಮುಗೆ ಆಗ್ಯಾವಲ್ಲೊ
ಲಿಂಗೈದಾವೆ ಇವನಲ್ಲಿ-ನಾಯಕನ್ನಟ್ಟಿ
ಜಂಗೂಮಗಾಗಾಲೊ ಸಿವುಪೂಜೆ

ರುದ್ರಾಕ್ಷಿ ಇಲ್ಲದೆ ಎದ್ದೂ ಪೂಜಾಗ್ಯಾವೊ
ರುದ್ರಾಕ್ಷಿ ಇವುನಾ ಕೊರುಳಾಗೆ-ನಾಯಕನ್ನಟ್ಟಿ
ರುದ್ರಾಗಾಗಾಲೊ ಸಿವುಪೂಜೆ

ಅಂದವಿಲ್ಲುದ ಪೂಜೆ ಜಂಗುಮುಗೆ ಆಗ್ಯಾವಲ್ಲೊ
ಅಂದ್ವಾದ ಪೂಜೆ ಇವೂನೀಗೆ-ನಾಯಕನ್ನಟ್ಟಿ
ಜಂಗೂಮಗಾಗಾಲೊ ಸಿವುಪೂಜೆ

## ಅನುಬಂಧ ೩

# ಕೊಟ್ಟೂರ ಗುರುಬಸವನ ಕುರಿತ ಬಿಡಿಪದಗಳು

(ಕೊಟ್ಟೂರಿನ ಹರಿಜನಕೇರಿಯ ಹೆಂಗಸರಿಂದ ಸಂಗ್ರಹಿಸಲಾಗಿದೆ)

## ಕೊಟ್ಟೂರೇಶ್ವರ ಮಹಿಮೆ

ಮೂರೇ ಕಲ್ಲಾಗೇ ಮೂಡ್ಯಾನೇ ಬಸುವಣ್ಣ
ನೋಡಾಲು ಜಂಗಾಮರೇ ನೆರುದಾರೆ
ನೋಡಾಲು ಜಂಗಾಮರೇ ನೆರುದಾರೆ
ನೋಡಲು ಜಂಗಮರೇ ನೆರುಕೇ ಕಲ್ಪಿಸಿದಾರೆ
ಸಾದೀನ ಚಡುಗಾ ಮರುಗಾಳು
ಗಚ್ಚಿನ ಮಟುದಾಗೇ ಹುಟ್ಯಾನೇ ಬಸುವಣ್ಣ
ಸುತ್ತಲು ಜಂಗಮರೇ ನೆರುತಾರೆ
ಸುತ್ತಲು ಜಂಗಮರೇ ನೆರುತಾರೆ
ಸುತ್ತಲು ಜಂಗಮರೇ ನೆರುತು ಕಟ್ಟಿಸಿದಾರೆ
ಮುತ್ತೀನ ಚಡುದಾ ಮಠಗಳೂ
ಮುತ್ತೀನ ಚಡುದಾ ಮಠಗಳೂ
ಅಗುಮನೆ ಜಗುಮನೇ | ಜಂಬೇ ಜಾತರು ಮನೆ
ಜಗಮುನೇ ಮ್ಯಾಲೇ ಬಸುವಣ್ಣ ||
ಜಗಮುನೇ ಮ್ಯಾಲೇ ಬಸುವಣ್ಣ ||
ಜಗಮುನೇ ಸಾಲೆ ಬಸುವಣ್ಣಾರುಳ್ಳೈನೋರೇ
ಮಗಳೇ ಹೇಳ್ಯಾಳೇ ಶಿವ ಗತಿಯು
ಮಗನೀಗರುಳ್ಳೈನೊರೆ ಮಗಳೆದ್ದೇ ಬರುವಾಗ
ತೊಗಲೀನ ಚೀಲ ಬಲುಗೈ
ತೋಗಲೀನನೊತ್ತಿಗೀ ಬಲುಗೈ ಅರುಳ್ಳೈನೋರೆ
ಮಗಳು ಹೇಳ್ಯಾಳೇ ಶಿವಗತಿಯು
ಮುಂಚೀಗರುಳ್ಳೆನರೊ ಕೆಂಚೆದ್ದೇ ಬರುವಾಗ
ಕಂಚಿನೊತ್ತೀಗೆ ಬಲುಗೈ

ಕಂಚೀನೊತ್ತಿಗಿ ಬಲುಗೈ ಅರುಳೈನೋರೆ
ಕೆಂಚಿ ಹೇಳ್ಯಾಳೇ ಶಿವಗತಿಯು
ಕಾವೇಧರಿಸಿ ಕೈಲಾಸಾದಾ ಸ್ವಾಮಿ ಬಂದು
ಅವರೀವರೆ ಅಂದ ಏರಿ ನುಡಿಯಲು ಬ್ಯಾಡ
ಅವರಿ ಕಟ್ಟಿಗೀಯ ಬಡುವೋರೆ ನನ್ನಯ್ಯಾನಾ
ಶಿವರಿ ಶೃಂಗಾರ ನೋಡಿ
ಅವರೀನಾ ಕಟ್ಟೀಗಿ ಬಡುವೊನರುಳೈನೋರೆ
ಅವಳಾದಾರತಿಯ ಕರಿಯಾರೆ ನನ್ನಯ್ಯಾನಾ
ಶಿವರಿ ಶೃಂಗಾರಾ ನೋಡಿ
ಪಕ್ಕಬ್ಯಾಡಾರಂದ ಹೆಚ್ಚು ನುಡಿಯ ಬ್ಯಾಡ
ಕಚ್ಚೆ ಕಟ್ಟೀಗೇಯ ಬಡುವೋರೆ
ಕಾವೇಧರಿಸಿ ಕೈಲಾಸಾದ ಸ್ವಾಮಿ ಬಂದು
ಪಕ್ಕಬ್ಯಾಡಾರಂದ ಹೆಚ್ಚು ನುಡಿಯಲಿ ಬ್ಯಾಡ
ಕಚ್ಚೆ ಕಟ್ಟಿಗೇಯ ಬಡುವೋರೆ/ನನ್ನಯ್ಯಾನಾ
ತೆವರಿ ಶೃಂಗಾರವ ನೋಡೆ
ಕಚ್ಚೇನೆ ಕಟ್ಟೀಗಿ ಬಡುವೋರೊಳೈನೋರೆ
ಮುತ್ತೀನಾರುತಿಯ ತರಿಯೋಳೆ/ನನ್ನಯ್ಯಾನ
ಶಿವರಿ ಶೃಂಗಾರವ ನೋಡೆ
-----ಚಿನ್ನಾದ ಗರಿಯ ಮೇಲೆ
(ಕಕ್ಕೇನೆ)ಕಚ್ಚೇನೆ ಕಟ್ಟೀಗಿ ಬಡುವೋರೊಳೈನೋರೆ
ಮುತ್ತೀನಾರುತಿಯ ತರಿಯೋಳೆ/ನಲುದಾಡಿದಾರೆ
ಕ್ಯಾದಿಗಿ ಗರಿಯಮ್ಯಾಲೆ
ಮುತ್ತೀನಾಮರಕೆ ತಂಗಾಳೀ ಬೀಸಿದಂಗೆ
ಜಾಂಡೇವ್‌ಕ ಮುತ್ತ ಬಿಗುದಂಗೇ
ಸೆಂಪೀಗೆ ರಾಯರಂತೆ ಬಣ್ಣೋ
ಹೊಂಗೇ ಕಾಯೆ ಮುತ್ತು ಬಿಗುದಂಗೇ ಬಸುವಣ್ಣ
ಜಂಗಾಮರ ನಡುವೆ ಬರುತಾರೆ
ಸೆಂಪೀಗೆ ರಾಯರಂತೆ ಬಣ್ಣೋ
ಮಾವೀನಾ ಮರಕೆ ಮ್ಯಾಗುಳಿ ಬೀಸೀದಂಗೆ
ಜ್ಯಾವಳಕೆ ಮುತ್ತ ಬಿಗೂದಂಗೆ

ಸೆಂಪೀಗೆ ರಾಯರಂತೆ ಬಣ್ಣೋ
ಜ್ಯಾವಳಕೇ ಮುತ್ತ ಬಿಗುದಂಗ್ಹೇ ಬಸುವಣ್ಣ
ದೇವಾರ ನಡುವೆ ಬರುತಾರೆ
ಸೆಂಪೀಗೆ ರಾಯರಂತೆ ಬಣ್ಣೋ
ಆರಿದ್ದಾ ತಿಂಬ್ಹೋರೆ ಚೂರೀಯ ಮಸುವೋರೆ
ಊರಿಂದ ಹೊರಗೆ ಇರುವೋರೇ
ಸೆಂಪೀಗೆ ರಾಯರಂತೆ ಬಣ್ಣೋ
ಸೆಂಪೀಗೆ ರಾಯರಂತೆ ಬಣ್ಣೋ
ಊರಿಂದಾ ಹೊರಗೆ ಇರುವೋ ಅರುಳೈನೋರೆ
ಬಾವುಕ ಬಸುವಣ್ಣ ಒಲುದಾರೆ
ಸೆಂಪೀಗೆ ರಾಯರಂತೆ ಬಣ್ಣೋ
ಸೆಂಪೀಗೆ ರಾಯರಂತೆ ಬಣ್ಣೋ
ಸತ್ತೀದ್ದಾ ತಿಂಬೋರೆ ಕತ್ತೀಯ ಮಸುವೋರೆ
ಹಟ್ಟೀಂದ ಹೊರಗೆ ಇರುವೋರೆ
ಸೆಂಪೀಗೆ ರಾಯರಂತೆ ಬಣ್ಣೋ
ಸೆಂಪೀಗೆ ರಾಯರಂತೆ ಬಣ್ಣೋ
ಹಟ್ಟೀಂದಾ ಏ ಹೊರಗೆ ಇರುವೋ ಅರುಳೈನೋರೆ
ಚಿತ್ತಕ ಬಸುವಣ್ಣ ಒಲುದಾರೆ
ಸೆಂಪೀಗೆ ರಾಯರಂತೆ ಬಣ್ಣೋ
ಸೆಂಪೀಗೆ ರಾಯರಂತೆ ಬಣ್ಣೋ
..ಮ್ಯಾಲೆ ನೀಲದ ಗದ್ದುಗೆ ಮಾಡಿ
ದೇವರು ಬಸುವಣ್ಣ ಕೊಳಲೂಡಿ ಸೋಗಿನವಲೆ
ಸುವ್ವಯ್ಯೋ...
ದೇವಾರು ಬಸುವಣ್ಣ ಕೊಳಲೂಡಿ ಕರುದಾನೆ
ದೂರಾಲು ನಾಡಾ ಪರಸೀಮೆ ಸೋಗಿನವಲೆ ಸುವ್ವಯ್ಯೋ
ಎತ್ತಿನ ಕೋಡಿನ ಮ್ಯಾಲೆ ಮುತ್ತಿನ ಗದ್ದುಗಿ ಮಾಡಿ
ಅಪ್ಪಾ ಬಸುವಣ್ಣ ಕೊಳಲೂಡಿ ಸೋಗಿನವಲೆ ಸುವ್ವಯ್ಯೋ
ಅಪ್ಪಾನ ಬಸುವಣ್ಣ ಕೊಳಲೂಡಿ ಕರುದಾನೆ
ಸುತ್ತಾಲ ನೋಡೋ ಪರುಸೀಯೆ ಸೋಗಿನವಲೆ ಸುವ್ವಯ್ಯೋ
ಏರೀದ ಎಮ್ಮೇಯ ಪಾದ ಬಡುದೆಬ್ಬೀಸಿ

ಬೇಗನೆ ಮನಿಯಾಲ ಕರದೊಯ್ಯೋ ಸೋಗಿನವಲೆ ಸುವ್ವಯ್ಯೋ
ಬೇಗಾನೆ ಮನಿಯಾಲ ಕರದೊಯ್ಯ ನನ್ನ ಕೊಟ್ಟೂರ
ನೆರವಣಿ ಸತ್ಯೆವ ನಿಗಾ ಮೆರುದೆ ಸೋಗಿನವಲೆ ಸುವ್ವಯ್ಯೋ
ಸತ್ತಿದ್ದ ಎಮ್ಮೇಯ ಪಕ್ಕೆ ಬಡುದೆಬ್ಬೀಸಿ
ಗಕ್ಕನ ಮಗಿಯಾಲ ಕರದೋಯ್ಯೋ ಸೋಗಿ ನವಲೆಸುವ್ವಯ್ಯೋ
ಗಕ್ಕನ ಮಗಿಯಾಲ ಕರದೋಯ್ಯೋ ಸೋಗಿ ನವಲೆಸುವ್ವಯ್ಯೋ
ಗಕ್ಕಾನ ಮಗಿಯಾಲ ಕರದೊಯ್ಯನನ್ನ ಕೊಟ್ಟೂರ
ಹುಚ್ಚಾ ಸತ್ಯೇವಾ ನೀ ಮೆರುದೇ ಸೋಗಿ ನವಲೆ ಸುವ್ವಯ್ಯೋ
ಒಂದೇನೇ ನೆಲಿಗೆ ಬಂದಾ ಕೀಲಾ ಜಡುದೆ
ಒಂದಾ ನೆಲಿಗಾಳೊ ಸ್ಯಾರೆ ಸೋಗಿನವಲೆ ಸುವ್ವಯ್ಯೋ
ಒಂದಾ ನೆಲಿಗಾಳೊ ಸ್ಯಾರೆ ಸೋಗಿನವಲೆ ಸುವ್ವಯ್ಯೋ
ಎರಡೇನೇ ನೆಲಿಗೆ ಎರಡಾ ಕೀಲಾ ಜಡುದೆ
ಎರಡಾ ನೆಲಿಗಾಳೊ ನಿಲಿಸ್ಯಾರ ಸೋಗಿ ನವಲೆ ಸುವ್ವಯ್ಯೋ
ಎರಡಾ ನೆಲಿಗಾಳೊ ನಿಲಿಸ್ಯಾರ ಸೋಗಿ ನವಲೆ ಸುವ್ವಯ್ಯೋ
ಮೂರಾಸೇ ನೆಲಿಗಿ ಮೂರಾ ಕೀಲಾ ಜಡುದೆ
ಮೂರಾ ನೆಲಿಗಾಳಾ ನಿಲಿಸ್ಯಾಕ ಸೋಗಿ ನವಲೆ ಸುವ್ವಯ್ಯೋ
ನಾಕೇನೇ ನೆಲಿಗೆ ನಾಕಾ ಕೀಲಾ ಜಡುದೆ
ನಾಕಾ ನೆಲಿಗಾಳ ನಿಲಿಸ್ಯಾರ ಸೋಗಿ ನವಲೆ ಸುವ್ವಯ್ಯೋ
ನೆಲಿ ಬಂದೆ ನೆಲಿ ಎರಡೆ ನೆಲಿಮೂರೆ ನೆಲಿನಾಕೆ
ನೆಲಿ ಐದೇ ಕಂಚು ಕಳೂಸಾವೆ
ಕಾವೇಧರಿಸಿ ಕೈಲಾಸದ ಸ್ವಾಮಿ ಬಂದು
ನೆಲಿ ಐದೇ ಪಂಚಾಕಳ ಸಾದಾರತಿ ಹೊತ್ತು
ಆರುವಯ್ಯನ ಮಗಳೇ ಬೆಳಿಗ್ಯಾಳೆ | ನನ್ನಯ್ಯೋನ
ತೇರೆ ಶೃಂಗಾರ ನೋಡೆ
ಮುತ್ತೀನಾರತಿ ಹೊತ್ತೇ ಮತ್ತ್ಯಾರಿ ಬರುವೋರೆ
ಮತ್ತೆ ಕೊಟ್ಟೂರ ಬಗುತಾರೆ | ನನ್ನಯ್ಯಾನಾ
ತೇರೆ ಶೃಂಗಾರ ನೋಡೆ
ಮತ್ತೇನೆ ಕೊಟ್ಟೂರ ಬಗುತಾರೆ ಕರಿಯವ್ವ
ಮುತ್ತೀನಾರುತಿಯಾ ಕಳಿವ್ಯಾಳೆ | ನನ್ನಯ್ಯಾನ
ತೇರೆ ಶೃಂಗಾರ ನೋಡೆ

ಅವಳಾದ ರತಿಯೊತ್ತಿ ಅವಳ್ಯಾರೆ ಬರುವೋಳೆ
ಅವರೆ ಕೊಟ್ಟೂರ ಬಗುತಾರೆ
ಕಾವೇಧರಿಸಿ ಕೈಲಾಸಾದ ಸ್ವಾಮಿ ಬಂದು
ಮತ್ತೇನೆ ಕೊಟ್ಟೂರು ಬಗುತಾರೆ ಉಡುಸವ್ವ
ಮುತ್ತೀನಾರುತಿಯಾ ಕಳಿವ್ಯಾಳೆ | ನನ್ನಯ್ಯಾನಾ
ತೇರೆ ಶೃಂಗಾರ ನೋಡೆ
ಅಣ್ಣಾನಿನ ತೇರೀಗೆ ಅನ್ನುಂದ ದೀಪ ಹಚ್ಚಿ
ಬಣ್ಣಾದೊಸ್ತುರುವಾ ಪಟನೇರಿ | ದೇವೂರೇ
ಹರನೇ ಬಣ್ಣಾದೊಸ್ತುರುವಾ ಪಟನೇರಿ |
ಬಣ್ಣಾದ ವಸ್ತುರುವಾ ಪಟನೇರಿ ತೇರಿಗೆ
ಅಣ್ಣಾ ಬಂದೊರೆ ಹೊಸರಥವ ದೇಮಾ | ಹರನೇ
ಅಣ್ಣಾ ಬಂದೇರ ಹೊಸರಥವ ದೇವೂ
ಅತ್ತಾ ನಿನತೇರೀಗೆ ಇಪ್ಪತ್ತ ಮಿಣೆಯಚ್ಚಿ
ಪಟ್ಟೇದೊಸ್ತುರವಾ ಪಟನೇರಿ ದೇವೂ| ಹರನೇ
ಪಟ್ಟೇ ದೋಸ್ತೂರುವಾ ಪಟನೇರಿ ದೇವೂ
ಪಟ್ಟೇದಾ ವಸ್ತುರುವಾ ಪಟನೀಲಿ ತೇರೀಗೆ
ಅಪ್ಪಾಬಂದೇರ ಹೊಸರಥವ ದೇವೂ | ಹರನೆ
ಅಪ್ಪಾ ಬಂದೇರ ಹೊಸರಥವ ದೇವೂ
ಅಣ್ಣಾ ಕೊಟ್ರೇಶಾನ ಬಣ್ಣದ ಗದ್ದುಗಿ ಮ್ಯಾಲೆ
ಹನ್ನೊಂದ ಮಂದಿ ದುರಿಗ್ಯಾರೋ ದೇವೂ | ಹರನೇ
ಹನ್ನೊಂದ ಮಂದಿದುರಿಗ್ಯಾರೋ ದೇವೂ
ಹನ್ನೋದಾ ಮಂದಿ ದುರಿಗ್ಯರೆ ಕೂಡೀ ಕಂಡೆ
ಅಣ್ಣಾನ ರಥವ ಉಳಿಸ್ಯಾರೆ ದೇವೂಯಿ | ಹರನೇ
ಅಣ್ಣಾನ ರಥವ ಉಳಿಸ್ಯಾರೆ ದೇವೂಯಿ
ಅಪ್ಪಾ ಕೊಟ್ರೇಶಾನ ಮುತ್ತಿನ ಗದ್ದುಗಿ ಮ್ಯಾಲೆ
ಇಪ್ಪಾತ್ತು ಮಂದಿ ದುರಿಗ್ಯಾರೆ ದೇವೂಯಿ | ಹರನೇ
ಇಪ್ಪಾತ್ತಾ ಮಂದಿ ದುರಿಗ್ಯಾರೆ ದೇವೂಯಿ
ಇಪ್ಪತ್ತಾ ಮಂದಿ ದುರಿಗ್ಯಾರೆ ಕೂಡಿಕಂಡು
ಅಪ್ಪಾನ ರಥವ ಉಳಿಸ್ಯಾರೆ ದೇವೂಯಿ | ಹರನೇ
ಅಪ್ಪಾನ ರಥವಾ ಎಳಿಸ್ಯಾರೆ ದೇವೂಯಿ

## ಅನುಬಂಧ ೪

# ಗುರುಬಸವನ ಕುರಿತ ಕೋಲಾಟ ಪದಗಳು

(ಕೊಟ್ಟೂರಿನ ಕೆಳಗೇರಿ ಕೋಲಾಟ ತಂಡದವರಿಂದ ಸಂಗ್ರಹಿಸಲಾಗಿದೆ)

### ಕೋಲಾಟದ ಪದ ೧

ಕೋಲು ಕೋಲೆನಾ ಮುದ್ದಿನ ಕೋಲು ಮ್ಯಾಲನಾ
ಏನು ಹೇಳ್ಯಾಲಪ್ಪ ಹುಡುಗರೊಯ್ಯ ಮಾಲನಾ

ಶಹರ ಕೊಟ್ಟೂರು ಅಲ್ಲಿ ಧೀರ ಕೊಟ್ರಯ್ಯ
ನಮ್ಮ ಮ್ಯಾಲ ಕರುಣವಿರಲಿ ಕೈಯ ಮುಗಿದೇವು

ಶಹರ ಉಜ್ಜಿನಿ ಅಲ್ಲಿ ಧೀರ ಮರುಳಸಿದ್ಧ
ನಮ್ಮ ಮ್ಯಾಲ ಕರುಣವಿರಲಿ ಕೈಯ ಮುಗಿದೇವು

ಶಹರ ಕೂಲಹಳ್ಳಿ ಅಲ್ಲಿ ಧೀರ ಗೋಬಸವ
ನಮ್ಮ ಮ್ಯಾಲ ಕರುಣವಿರಲಿ ಕೈಯ ಮುಗಿದೇವು

ಶಹರ ದಾವಣಗೇರಿ ಅಲ್ಲಿ ಧೀರೆ ದುಗ್ಗಮ್ಮ
ನಮ್ಮ ಮ್ಯಾಲ ಕರುಣವಿರಲಿ ಕೈಯ ಮುಗಿದೇವು

ಶಹರ ನಾಯಕನಹಟ್ಟಿ ಅಲ್ಲಿ ಧೀರ ತಿಪ್ಪೇಶ
ನಮ್ಮ ಮ್ಯಾಲ ಕರುಣವಿರಲಿ ಕೈಯ ಮುಗಿದೇವು.

ಶಹರ ಜರಮಲಿ ಅಲ್ಲಿ ಧೀರೆ ದುರಗಮ್ಮ
ನಮ್ಮ ಮ್ಯಾಲ ಕರುಣವಿರಲಿ ಕೈಯ ಮುಗಿದೇವು

ಝಿಂ ಜಾಂ ದಕ ಝಿಂ ಜಾಂ.......

### ಕೋಲಾಟದ ಪದ ೨

ಶಹರಾದಿ ಶಹರ ಇದುದೊಡ್ಡ ಶಹರ ಮೋಜಿನ ಕೊಟ್ಟಾರಾ
ಕೋಟೆ ಪೇಟೆಗೆ ಮೂರುತಿಯಾಗನ ಕೊಟ್ಟೂರೇಶ ದೇವರ : ಪ :

ಗೌಡ ಶಾನುಭೋಗ ಬುದ್ಧಿವಂತ್ರು ಕೂಡಿ ಕರಸ್ಯಾರು ರೈತರುನಾ
ಏಳುನೆಲೆಯಾ ತೇರು ಕಟ್ಟಿಸಿ ನಿಲಿಸ್ಯಾರು ಬುದ್ಧಿವಂತ ಬಡಿಗ್ಯಾರು

ಹೇ ತೇರಿನ ಮ್ಯಾಲೆ ಕಳಸ ನೋಡಿದರು ಥಳಥಳ ಬಂಗಾರ
ತೇರಿನ ಸುತ್ತಮುತ್ತ ಪಟಾಕ್ಷಿನಚ್ಚ್ಯಾರು ಹಸಿರು ಹಳದಿ ಕೆಂಪ

ತೇರಿನ ಒಳಗೆ ಮೂರುತಿಯಾಗನೇ ಕೊಟ್ಟೂರೇಶ ದೇವರ
ಹೊಳಿಯಾ ದಿಕ್ಕಿಗೆ ತೇರು ಸಾಗೆತ್ರಿ ಬಹಳ ಸುಂದಾರಾ

ತೇರಿನ ಸುತ್ತಮುತ್ತ ಶಂಖ ಜಾಗಟಿಗೆ ದಾಸರು ಕಡಿಮಿಲ್ಲಾ
ತೇರಿನ ಸುತ್ತಮುತ್ತ ಶಂಖ ಜಾಗಟಿಗೆ ದಾಸರು ಕಡಿಮಿಲ್ಲಾ

ಶಹರಾದಿ ಶಹರ ಇದು ದೊಡ್ಡ ಶಹರ ಮೋಜಿನ ಕೊಟ್ಟೂರಾ
ಕೋಟೆ ಪೇಟೆಗೆ ಮೂರುತಿಯಾಗನೆ ಕೊಟ್ಟೂರೇಶ ದೇವರ

ಝಿಂಜಾಂತಹ ಝಿಂಜಾಂ......

## ಅನುಬಂಧ ೫

# ಬಾಲಬಸವರ ಕಾಲಜ್ಞಾನ ಸಾಹಿತ್ಯ

(ಜಿ.ಬಿ.ಚಂದ್ರಶೇಖರ, ಶಿಕ್ಷಕರು, ಚಿತ್ರದುರ್ಗ ಇವರ ಮನೆಯಲ್ಲಿನ ಕೋರಿಕಾಗದದಿಂದ ಪ್ರತಿ ಮಾಡಿಕೊಳ್ಳಲಾಗಿದೆ)

## ಬಾಲಭಸವರ ಕಾಲಜ್ಞಾನದ ಹಸ್ತಪ್ರತಿ

### ಬಸವಣ್ಣನವರ ಸ್ತುತಿ

ಬಸವನೇ ಅಜ್ಜ, ಬಸವನೇ ಅಜ್ಜಿ, ಬಸವನೇ ತಾಯಿ, ಬಸವನೇ ತಂದೆ, ಬಸವನೇ ಬಂಧು, ಬಸವನೇ ಬಳಗ, ಅಣ್ಣನು ಬಸವ, ತಮ್ಮನು ಬಸವ || ಬಸವಾದಿ ಬಸವ||

ಬಸವನೇ ಭುಜ ಬಾಲದಂಡ, ಲಂಕೆಗೆ ಲಾಗವನೆಕೊಂಡ, ಉದ್ದಂಡ, ಬಸವ ತೊಟ್ಲಾಗಳ ಬಾಲಶಿಶು ಕಾಣಯ್ಯ - ಗಿರಿಜೆ ಪಾರ್ವತಿ ಕೊಡುಯನಗೆ ಸನ್ಮತಿ, ಬಾ ಪಾರ್ವತಿ ನಡೆ ನಡಿ ಕೈಲಾಸ ಪತಿ ಸಾರುವುದು ನಿಮ್ಮ ಸ್ತುತಿ, ಬಸವ ದಂಡೆ ಸಾಂಪ್ರತಿ-ನಮಸ್ಪತಿ, ನಮೋನ್ನಮೊ |ಬ| ಬಸವನೆಂದರೆ ಬರು ಸಿಡಿಲಿಗೆ ಜ್ಞಾನಾಗತಿರುವುದಯ್ಯಾ - ಸರ್ಪ ಬರುತ್ತಿರುವುದಯ್ಯಾ ಪಾದಕ್ಕೆ ಸಾಷ್ಟಾಂಗ ಎರಗುತ್ತಿರುವುದಯ್ಯಾ ಹದಿನಾರು ಏಳು ತೊಮ್ಮಟ್ಟಿನ ವ್ಯಾಘ್ರಗಳು ಬರುತ್ತಿರುವುದಯ್ಯಾ - ಯಾಯಿಂಬಿಟ್ಟು - ಮೊದಲಾಂಬಿಗೆ ಹೋಗುತ್ತಿರುವುದಯ್ಯಾ ಬಸವನ ಭೀತಿಗಿಂತ ಯಾವ ಭೀತಿ ಇಲ್ಲವಯ್ಯಾ - ಅಲ್ಲಲ್ಲಾ ಮಾಮದ್ ರಸುಲ್ಲಾ ಎಲ್ಲಿ ನೋಡಿದರು ನರಹುಳಕ್ಕೆ ಸಿಕ್ಕ ದೇವನಲ್ಲ - ಅಲ್ಲಾ ಎಂಬುವನು ಬಸವಣ್ಣಕುದ ಎಂಬುವನು ಸಾಕ್ಷಾತ್ ಶಿವ, ಪಾತ್ಮ ಬೀಬಿ ಎಂಬುವಳು ಪಾರ್ವತಿ ಎಲ್ಲೆ ದೇವನಪ್ಪಾ ಬಲ್ಲಿದ ಶರ್ವಾಣಿ ಸೊಲ್ಲು ಸೊಲ್ಲಿಗೆ ಸಾರ್ಥವಾಗಪ್ಪಾ ನಡೆತಪ್ಪ-ನುಡಿತಪ್ಪ-ನುಡಿಯುವ ನಾಲಿಗೆ ತಪ್ಪು - ಸರ್ವತಪ್ಪು ಪಾದದೊಳಗೆ ಇಟ್ಟುಕೊಳ್ಳಪ್ಪಾ - ಮುಪ್ಪಿನ ಮುದಿಗೋಣಿ ಅಪ್ಪಾ ಸಂಗನಬಸವ ಅರವತ್ತು ಗಾವುದದಲ್ಲಿದ್ದರೆ ಅರಿವಿನ ಗೋಣಿಯ್ಯ - ಮೂವತ್ತು ಗಾವುದದಲ್ಲಿದ್ದರೆ ಮುಪ್ಪಿನ ಗೋಣಿಯ್ಯ, ಅಪ್ಪಾ ಸಂಗನಬಸವ ಕೂಲಿಹಳ್ಳಿ ಲೋಲ ಚನ್ನಿಗ, ಚಂಡಿಕಾರರ ಗಂಡ ಚಾವುಡಿಗೆ ಹೆಬ್ಬುಲಿ | ಬ| ಬಸವನೆಂಬುದು ಬಳ್ಳಿ ಅದರ ಹೊತ್ತಿಹೊತ್ತಿಗೆ ಲಿಂಗವಯ್ಯಾ - ಎತ್ತಿ ಎತ್ತಿ ನೋಡಿದರೆ ಲಿಂಗದೊಳು ರಾಶಿ ಯಂಕೆಂಬೊ ತರುಳುಸನೆ. ಕೊರಳಲ್ಲಿ ಧರಿಸಿದ್ದರೈಯ್ಯ ಅಂತೆಗಂತೆ ಹನ್ನೆರಡು ಸಾವಿರ-ಅತೀಥಾಕ್ಕೆ ಬಂದು ಆರು ಸಾವಿರ - ವೀರಕ್ತಕ್ಕೊಂದು ಮೂರು ಸಾವಿರ ಅಂತೂ ಕೂಡಲಾಗಿ ಇಪ್ಪತ್ತೊಂದು ಸಾವಿರ - ಲಕ್ಷದ ಮ್ಯಾಲೆ ತೊಂಬತ್ತಾರು ಸಾವಿರ-ಗಣಂಗಳಿಗೆ ಯಿಚ್ಚೆ - ಯಿಚ್ಚೆ ಬಂದ ಊಟವನಿಚ್ಚೆ ನೀಡು ಮಾಡುವಂಥ - ನಿರಹಂಕಾರಿ ಬಸವಣ್ಣ ||ಬ|| ಯಡಮುರೆ ಶಂಖಗಳು - ಬಲಮುರೆ ನಾಗ ಬೆತ್ತಗಳು - ಪಂಚ ಮುಖದ ರುದ್ರಾಕ್ಷಿಗಳು - ಏಳುಸಾವಿರ ರಂಗ ಮಾಲೆ- ಮತ್ತೇನೋ ಹಿಂದೆ ಕಲ್ಯಾಣದಲ್ಲಿ ಹಿಂದೆ ಬಿಜ್ಜಳರಲ್ಲಿ ಬ್ರಸ್ತಿಯಲ್ಲಿ ಪವಾಡಗೆದ್ದಂತ ನಮ್ಮಪ್ಪಾ - ಬಸಪ್ಪಯ್ಯಾ ಆರುದ್ರ ||ಬ||

# ಕಾಲಜ್ಞಾನ

ಸುವ್ವಿ ಬಾ ಸಂಗಯ್ಯ| ಸುವ್ವಿ ಬಾ ಲಿಂಗಯ್ಯ| ಸುವ್ವಿ ಬಾ ಚನ್ನಬಸವಯ್ಯ ||ಸು||

ಸುವ್ವಿ ಬಾಚನ್ನ| ಬಸವಯ್ಯ ಬರುವಾಗ| ಹುಯ್ಯಾಲೆ ಬೊಬ್ಬೆ ಜಗಕೆಲ್ಲಾ ||ಸು||

ಅಕ್ಕನಾಗಮ್ಮನು| ಚಿಕ್ಕಾ ವನೆಕೆಯ ವಿಡಿದು| ಅಕ್ಕಿವಮ್ಮಾನ ತೊಳೆಸುತ್ತಾ ||ಸು||

ಅಕ್ಕಿವಮ್ಮಾನ| ತೊಳೆಸೂತಾ ಪಾಡಿದರು | ಮುಕ್ಕಣ್ಣ ಶಿವನು ಬರುವಾಗ ||ಸು||

ಕುಟ್ಟುವನ ಬನ್ನಿರಿ | ಪಟ್ಟಣದ ಸತಿಯಾರು | ಹುಟ್ಟು ಕರ್ಮಗಳು ಅಳಿವಂತೆ ||ಸು||

ಹುಟ್ಟು ಕರ್ಮಗಳ | ಹಳಿವಂತೆ ತೊಳೆಸುತ್ತಾ | ಪಟ್ಟಕ್ಕೆ ಶಿವನು ಬರುವಾಗ || ಸು||

ನಮ್ಮಯ್ಯಬರುವಾಗ | ಉಮ್ಮಾಯಾಚರುಣಾರು | ಕರ್ಮದಾ ಲೋಕ ಉಳಿಯಾವು ||ಸು||

ಕರ್ಮದಾಲೋಕ | ಉಳಿಯಾವುಮುಂದಿನ್ನು | ಧರ್ಮದಾಗುರುಬಸವ ಬರುವಾಗ ||ಸು||

ಕಾರ್ತೀಕಾದಿನಗಳು | ಭೋರೆಂದು ಬರುವಾಗ | ಮೂರು ದೈವವು ಮುಳುಗುವವು ||ಸು||

ಏಳೂರೂಗೊಂದೂರು | ಏಳು ಸುತ್ತಿನ ಕೋಟೆ | ಹಾಳಾಗುತ್ತೈತೆ ಜಗವೆಲ್ಲಾ ||ಸು||

ಹಾಳೂಗೂತ್ತೈತೆ | ಜಗವೆಲ್ಲಾ ಮುಂದಿನ್ನು | ಖೂಳರಕ್ಕಸನು | ಬರುವಾಗ ||ಸು||

ಅನುಮಾನ ದುರ್ಗಿಯು | ಅನುವಾಗಿ ಬರುವಾಗ | ಮನುಜನರ ದುಃಖ ವಿಪರೀತ ||ಸು||

ಮನುಜರ ದುಃಖ | ವಿಪರೀತ ಮಮ್ಮಾಯಿ | ಘನದಂಡು ಕೂಡಿ ಬರುವಾಗ ||ಸು||

ಆಗಾರ ಅಳಿದಾವು | ಗೊಗೆಗಾಳಾದವು | ಕಾಗೆಯ ದಂಡು ಬರುವಾಗ || ಸು||

ಕಾಗೆಯ ದಂಡು | ಬರುವಾಗ ಜಗವೆಲ್ಲಾ | ಗೂಗಿ ಬೊಬ್ಬೆಗಳು ಮನಿ ಮನಿಗೆ ||ಸು||

ಅಣ್ಣಾದ ದಿನಗಾಳು | ಹಣ್ಣಾಗಿ ಬರುವಾಗ | ಕಣ್ಣೇತಿ ಕಾಣೆವೆನಬ್ಯಾಡಿ ||ಸು||

ಕಣ್ಣೇಕಾಣೆ | ವೆನಬ್ಯಾಡಿಮುಂದಿನ್ನು | ಮಣ್ಣುವೆಯ್ಯಾ ಕೊಂಬೋದಿನ ಬಂತೋ ||ಸು||

ಅಗ್ಗಾದ ದಿನಗಳು | ಮುಗ್ಗುತಾ ಬರುವಾಗ | ಹುಗ್ಗಿ ಹೋಳಿಗೆ ಕನಸೀಲಿ ||ಸು||

ಹುಗ್ಗಿ ಹೋಳಿಗೆ| ಕನಸೀಲಿ ಕಾಣದೆ | ಬೊಬ್ಬೆ ಉಯ್ಯೊಕೊಂಬೋ ದಿನ ಬಂತು ||ಸು||

ಬೀಸೀತು ಬಿರುಗಾಳಿ| ಈಶಾನ್ಯ ದಿಕ್ಕಿಲಿಂದ ದೇಶಮಂಡಲವ ಮುಸಕೀತು ||ಸು||

ದೇಶ ಮಂಡಲವು | ಮುಸಗೀತು ಮುಂದಿನ್ನು | ಮೋಸಮಾಡುವರು ಬರುತಾರೆ ||ಸು||

ಬಚ್ಚಾಲಾದುಳುಗಾಳು | ಹಸ್ತಾಯ ಚರುಣರಿಗೆ | ಎಚ್ಚರೀಕಿದ ಬೇಕು | ಹೃದಯಕ್ಕೆ ||ಸು||

ಈ ಮಾತು | ಹುಚ್ಚುನುಡಿ ಯೆಂದು | ಎನಬ್ಯಾಡಿ ||

ನಾಲ್ಕು ದಿಕ್ಕಿನ ಮೂಲೆ | ಏಕಾಕಿ ಉರಿದೀತು | ಲೋಕದಾ ಕರ್ಮ ಅಳಿದೀತು ||ಸು||

ಲೋಕದಾ ಕರ್ಮ | ಅಳಿದೀತು ಮಮ್ಮಾಯಿ | ಪಾರು ಮಾಡುವಳು ಧರಣೀಲು ||ಸು||

ಅನುಮಾನ ದುರ್ಗಿಯು | ಕಸವಿಕ್ಕಿ ಗುಡಿಯಿತ್ತಾ | ಅಸನು ಮಾಡುವಳು ಜಗವೆಲ್ಲಾ ||ಸು||

ಕಾಲಾಮೇಘದಿ ಮಳೆಯು | ಸೂರ್ಯನು ನುಂಗುವುದು | ಮೂರೇಳುದಿನಾವು

ಮುಳುಗುವುದು||

ಮೂರೇಳು ದಿನಾವು | ಮುಳುಗುವುದು ಮರ್ತ್ಯಕ್ಕೆ | ವೀರ ವಸಂತ ಬರುವಾಗ ||ಸು||

ಹಟ್ಟಿದೇಳು ದಿವಸಕ್ಕೆ | ಬೆಟ್ಟುಗಳು ನಡುಗ್ಯಾವು | ಬೆಟ್ಟಗುಂಡು ಉರುಳ್ಯಾವು ||ಸು||

ಬೆಟ್ಟಾದಾಗುಂಡು ಉರುಳ್ಯಾವು | ಚನ್ನಬಸವಾ | ಸೃಷ್ಟಿಪಾಲಕ ಬರುವಾಗ ||ಸು||

ಚಂದ್ರಾ- ಸೂರ್ಯಗ್ರಹಣ | ಒಂದೇ ಮಾಸದಿ ಬರಲು | ತಂದೆಯ ಮರುದಿನಕೆ ||ಸು||

ತಂದೆಯಾಕೊಂದು | ಮರುದಿನಕೆ ಮುಂದಿನ್ನು | ನಂದಿ ವಾಹನ ಬಸವ ಬರುವಾಗ ||ಸು||

ಆಡು ಆನೆಯ ನುಂಗಿ | ಗೋಡಾ ಕುದುರೆಯ ನುಂಗಿ | ಕಾಡಾನೆಗೆರೆಡು ಗರಿಮೂಡಿ ||ಸು||

ಈ ಮಾತು | ಮೂಡ ಮನುಜರಿಗೆ | ತಿಳಿಯಾದು ||ಸುವ್ವಿ||

ಬಂದರೂ ಬಂದರೆನ್ನಿರಪ್ಪ ಶಿವಶರಣರೂ ಬಂದರೂ ಬಂದರೆನ್ನಿರೇ|

ಎತ್ತು ಇಲ್ಲದ ಗಾಡಿಗಳು ಬಂದಾವು ಮುಂದಿನ್ನು ಬಂದರೂ ಬಂದರೆನ್ನಿರೇ |

ಎಣ್ಣೆ ಇಲ್ಲದ ದೀಪಗಳು ಉರಿದಾವು ಮುಂದಿನ್ನು ಬಂದರು ಬಂದರೆನ್ನಿರೇ |ಬ|

ಕಿವಿಗಳಿಗೆ ಹರಳುಗಳು ಒತ್ತ್ಯಾರೆ ಮುಂದಿನ್ನು ಬಂದರು, ಬಂದರೆನ್ನಿರೇ|ಬ|

ಎಚ್ಚಾರಿಕೆ ಎಚ್ಚಾರಿಕೆ ಮುಂಗಾರು ಮಳೆ ಬೆಳೆಗಳು ಸಮಗೊಂಡು ನಡೇಸೀತು |ಎ|

ದವಸಾದ ಮಾರಾಟ ಹೆಚ್ಚೀತು ನೋಡಿರಿ|ಎ|

ರಸ ವರ್ಗಗಳ ಮಾರಾಟ ಹೆಚ್ಚೀತು ನೋಡಿರಿ |ಎ|

ಮುಂದಿನ ದಿನ ಮಾನ ಬಲು ಕೆಟ್ಟು ಬರುತ್ತಾವೆ |ಎ|

ಹೊಸಮತಗಳು ಹುಟ್ಟುವುವು ಕದನಗಳು ಆದಾವು |ಎ|

ಕಾಸಿಗೆ ಕೊಡ ನೀರು ಸೋಸಿ ಮಾರಲು ಬೇಕು|ಎ|

ಜಲದುರ್ಗಿ ಬಂದಾಳು ಜಲಗಾಳು ಬತಿಸ್ಯಾಳು |ಎ|

ಪಶುಪಕ್ಷಿಗಳಿಗೆ ದುರ್ಭಿಕ್ಷೆವಾದೀತು |ಎ|

ಆರುವರ ಬಾವಿಯೊಳು | ಜಲವೇ ಬತ್ತಲೇಬೇಕು|

ಜಾಂಬುವರ ಬಾವಿಯೊಳು ಜಲವೇ ಉಕ್ಕಲಬೇಕು |ಎ|

ಅಂಗವಂತರು ಲಿಂಗವಂತರು ಸೀಲಾ ಸಿವ ಭಕ್ತರು

ಜಾಂಬವರ ಬಾವಿಯೊಳು ಜಳಕ ಮಾಡಲಬೇಕು |ಎ|

ಹೋರಾಟ ವಾದೀತು ಕಲಿಯುಗದೊಳಗಿನ್ನು...

ಜೋಳವ ಕಾಣದೆ ಮನೆ ಮನೆ ತಿರುಗುವರು..

ಮುಚ್ಚಿದ ಕದಗಳು ಬಿಚ್ಚದೆ ಸಾಯುವರು

ಮೇಘದ ಮಳೆಯನ್ನು ಮಾಯೆ ನುಂಗುವಳು

ಬಾಲ ಮುರಿವವನಿಗೆ ಪಟ್ಟಾವ ಕಟ್ಟುವರು

ಊರಿಗೆ ಹೋದವರು ದಾರಿಯಲ್ಲಿ ಮಡಿದಾರು...

ಶರಣರ ಈ ಮಾತು ತಪ್ಪಿದರೆ ಬಸವಣ್ಣನ ಆಣೆಯು...

## ಅನುಬಂಧ ೬

# ಗೋಣಿಬಸವನ ಕಾವ್ಯದ ಆಯ್ದ ಭಾಗಗಳು

(ಬಾಲಬಸವರ ತುಮನಪ್ಪ ಮತ್ತು ಕುಟುಂಬದಿಂದ ಸಂಗ್ರಹಿಸಲಾಗಿದೆ)

**ಕಲ್ಯಾಣದ ಪ್ರಸಂಗ - (ಒಂದು)**

ಕೈಲಾಸದ ಶಿವನ ಮೇಲೆ ಹೊನ್ನ ಮಡದಿ ಕುಳಿತ ಕುಳಿತ|
ಸ್ವಾಮಿ ದೈವಕೆ ಭಗವಂತ ||
ಹಾವಿಗೆ ಚಂದ ಮಾಡಲು ಬಂದ ಮ್ಯಾಲೆ ಅಂಬಾರಿ
ಹೊಟ್ಟೆ ಮ್ಯಾಲೆ ನಾಗಪ್ಪನ ನಾಗಾರಿ ||
ನೀರಿಗಂತ ನಾನು ಹೋದೆ ಬಾವಿ ತುಂಬೈತೆ
ಬಾವಿ ತುಂಬೈತೆ ಬಾವ್ಯಾಗಳ ಹಾವು ನಿಂತೈತೆ |
ಅದೇ ಹಾವಿಗೆ ತಿನಬೇಕಂತ ಗರುಡ ಬಂದೈತೆ
ಎರೆಡಕೂ ಜಗಳ ಬಿದ್ದೈತೆ ||
ಮೊಡವಿಲ್ಲದ ಮುಗಿಲು ಇಲ್ಲದ ಮಳೆಯು ಸುರಿದೈತೆ
ಎಳೆಹೊಳೆ ಮೂರಡಿ ಬರತೈತೆ ||
ನೀರ ಹೊಳೆಗೆ ಧುಮುಕಿದ ಆನೆ ಬಂದು ಹೊಳೆಯ ಮುಳುಗೈತೆ
ಮ್ಯಾಲೆ ತೆಪ್ಪಗ ನಿಂತೈತೆ ||
ಎಡಗಡೆ ಬದಿಗಿಟ್ಟು ಬಲಗಡೆ ಬಗ್ಗಿ
ಅರಿಯ ತಿಂದೈತೆ ಆಗ ಮರಿಯ ಮಾಡೈತಿ ||
ಶರಣ ಮಾಡುವೆ ನಿಮಗೆ ಕರುಣ ಲಾಲಿಸು ನಮಗೇಯ
ಕಲ್ಯಾಣ ಪಟ್ಟಣದಾಗೆ ಆದೇವೋ ಶಿವನಾಗೆ ಮಾದೇವೋ
ಕಲ್ಲಿಗೆ ಕೋಟಿ ಶರಣರಯ್ಯೋ ಆದೇವೋ ಶಿವನಾಗೆ ಮಾದೇವೋ |
ಸಹಸಿರ ಕೋಟಿ ಜಂಗಮರಯ್ಯೋ ಅದೇವೋ ಶಿವನಾಗೆ ಮಾದೇವೋ |

ಕಲ್ಯಾಣದಲ್ಲಿ ಸಹಸ್ರ ಜಂಗಮರು ಕಲ್ಲುಕೋಟಿ ಶಿವಶರಣರಿದ್ದಾರೆ. ಕಲ್ಯಾಣದೊಳಗೆ ಮತ್ತು ಅದರೊಳಗೆ ಅದರ ಮೇಲೆ

ಮೂರು ಕೋಡಿನ ಬಸವಣ್ಣೋ | ಆ ಸೂಜೀರ ಮೂವ್ವ ಸಾದಿಗಿ ||
ಅವರಿಗೆ ಮುಪ್ಪಿನ ಕಾಲ ಬಂದವಯ್ಯೋ | ಆ ಸೂಜೀರ ಮೂವ್ವ ಸಾದಿಗಿ |

ಬಸವಣ್ಣನಿಗೆ ಮುಪ್ಪಿನಕಾಲ ಬಂದಾಗ, ಮೂರು ಕೋಡಂದ್ರೆ ಯಾವ್ಯಾವಂತ ಕೇಳಬೌದ್ರಿ, ಬಲಗಡೆ ಒಂದು ಕೋಡು, ಎಡಗಡೆ ಒಂದು ಕೋಡು, ನಡುಮಧ್ಯ ಒಂದು ಕೋಡು

ಮೂರು ಕೋಡಿನ ಬಸವಣ್ಣೋ || ಆ ಸೂಜೀರಮೂವ್ವ ಸಾದಿಗಿ ||
ಮೂರು ಕೋಡಿನ ಬಸವಣ್ಣೋ || ಆ ಸೂಜೀರಮೂವ್ವ ಸಾದಿಗಿ ||

ಆ ಮೂರು ಕೋಡು ಬಿಚ್ಚಿದ ಬಳಿಕ ಬಸವಣ್ಣನಿಗೆ ಮುಪ್ಪಿನ ಕಾಲ ಬಂದ ಬಳಿಕ ಆ ಕೋಡಿನ ಕೊಳ ಬಿಚ್ಚಿ ಹೋದ್ವುರಿ. ಆ ಕೋಡಿನ ಕೋಳ ಬಿಚ್ಚಿದ ಬಳಿಕ ಆ ಕೋಳನ್ನು ಮುಂದಿದಟ್ಟುಕೊಂಡು ಬಸವಣ್ಣನು ಚಿಂತಿ ಮಾಡ್ತಾನ| ಆಹಾ | ಇಲ್ಲಿಗೆ ವೃದ್ಧಕಾಲ ಬಂತಪ್ಪ ನನ್ನ ಕೋಳ ಬಿಚೋದ್ವು ಇನ್ಯಾರಿಗೆ ಕೊಡ್ಲಿ? ಎಲ್ಲಿಡ್ಲಿ? ಏನ್ಮಾಡ್ಲಿ?|ಅಂತ ಚಿಂತಿ ಮಾಡಿ ಬಸವಣ್ಣ ಕೋಡು ಬಿಚ್ಚಿದ. ಕೊಳವಿನ ಯಾರ್ಯರಿಗೆ ಕೊಡ್ತಾನೆ ಕಲ್ಯಾಣದೊಳಗೆ

ಒಂದು ಕೊಳವಿನ ಹರಳಯ್ಯನಿಗೆ ಕೊಟ್ಟನಯ್ಯೋ ಆ ಸೂಜೀರ ಮೂವ್ವಸಾದಿಗೆ
ಒಂದು ಕೊಳವಿನ ಹರಳಯ್ಯನಿಗೆ ಕೊಟ್ಟನಯ್ಯೋ ಆ ಸೂಜೀರ ಮೂವ್ವಸಾದಿಗೆ

ಹರಳಯ್ಯ ಆ ಕೊಳವಿನ ತಗೊಂಡ 'ಆಹಾ | ಪರಮಾತ್ಮ|' ಅಂದು ಅಭ್ಯಂಜನ ಸ್ನಾನ ಮಾಡಿ ನೂರೊಂದು ಪುಷ್ಪ ತಂದು ಆ ಕೊಳವಿ ಪೂಜಿ ಮಾಡಿದ. ಪೂಜಿ ಮಾಡಿ ಅದೇನು ಮಾಡ್ದ? ಆತ ಪಾದರಕ್ಷೆ ಮಾಡಾಕೆ ಅಡಿಗಲ್ಲು ಮಾಡಿಕೊಂಡ ಅದರ ಮೇಲೆ ಹರಳಯ್ಯ

ಪಾದರಕ್ಷೆ ಮಾಡುತಾನೆ ಆ ಸೂಜೀರಮೂವ್ವ ಸಾದಿಗೆ
ಪಾದರಕ್ಷೆ ಮಾಡುತಾನೆ ಆ ಸೂಜೀರಮೂವ್ವ ಸಾದಿಗೆ

ಹರಳಯ್ಯ ಪಾದುರಕ್ಷೆ ಮಾಡುತಾನ್ರಿ ಆ ಕೊಳವಿಯಲ್ಲದೆ ಮತ್ತೊಂದು ಕೊಳಿಕೊಟ್ಟ

ಚಲುವಾದಿ ಚೆನ್ನಯ್ಯನಿಗೆ ಕೊಟ್ಟನಯ್ಯೋ ಆ ಸೂಜೀರ ಮೂವ್ವಸಾದಿಗೆ
ಅವನು ಕಾವಿವುಟ್ಟು ಹೊಂಟಾನಯ್ಯೋ ಆ ಸೂಜೀರ ಮೂವ್ವಸಾದಿಗೆ

ಚಲುವಾದಿ ಚೆನ್ನಯ್ಯ ಕಾವಿ ಉಟ್ಟು ಧ್ಯಾನ ಮಾಡಿದ್ನಂತ್ರಿ, ಕಲ್ಯಾಣದೊಳಗ ಆಗಿನ ಕಾಲಕ್ಕ ಕಲಿ ಹುಟ್ಟಂತ್ರಿ, ಹಿಂದೆ ಇದ್ದಿಲಂತೆ, ಆಗ ಎರಡ್ನೇ ಕೊಳವಿ ಕೊಟ್ಟ, ಇನ್ನೊಂದು ಕೊಳವಿ ಯಾರಿಗೆ ಕೊಟ್ಟ?

ಮಾಸಾಗ ಕೊಟ್ಟನಯ್ಯೋ ಆ ಸೂಜೀರ ಮೂವ್ವಸಾದಿಗಿ
ಅವನು ಕಾವಿ ಉಟ್ಟು, ಹೊಂಟಾನಯ್ಯೋ ಆ ಸೂಜೀರಮೂವ್ವ ಸಾದಿಗಿ
ಮೂರು ಕೊಳವಿ ಕೊಟ್ಟಾನಯ್ಯೋ ಆ ಸೂಜೀರಮೂವ್ವ ಸಾದಿಗಿ

ಮೂವರಿಗೆ ಮೂರು ಕೊಳವಿಕೊಟ್ಟು, ಆ ಬಸವಣ್ಣವು ಆತನ ನಿತ್ಯ ಕರ್ಮಗಳು ಮಾಡ್ಕಣಕೆ ಸಕಲರಿಗೂ ಊಟ ಹಾಕ್ದ ಕಲ್ಯಾಣದೊಳಗೆ. ಸಹಸ್ರ ಕೋಟಿ ಜಂಗಮರು, ಕಲ್ಲಿನ ಕೋಟಿ ಶರಣರು ಎಲ್ರು ಕಲ್ತಬಿಟ್ಟಾರು. ಊಟ ನೀಡ್ತಾರು ಆಗ ತಾನೆ ಬಸವಣ್ಣವ್ರು, ಜಂಗಮರು, ಶರಣರು ಊಟಕ್ಕೆ ಕುಂತಾರು. ಆದರೆ ಪರಮಾತ್ಮ ಅಂತಾನ್ರಿ, 'ಆಹಾ ಬಸವಣ್ಣ ನನಗೆ ಮರ್ತೇನಪ? ಆದರೆ ನೀನ್ ಮರ್ತಿಲ್ಲ, ನಾನು ನಿನಗೆ ಮರವು ಕೊಟ್ಟೇನಿ ಅದಕ್ಕೆ ಮರ್ತಿ, ನನಗೆ ಬಿಡುಗಡೆ ಇಲ್ಲ. ನಾನೇ ಬರ್ತೀನೆಂದ'. ಕೈಗೊಂದು ಬೆತ್ತ ಹಿಡಿಕೊಂಡು ಮತ್ತೆಲ್ಲಿಗೆ ಬಂದ? ಹರಳೈನ ಗುಡಿಸಲಲ್ಲಿ. ಆಗಿನ ಕಾಲಕ್ಕೆ ಹರಳಯ್ಯ ಬಡವ,

ಈಗಿನ ಕಾಲಕ್ಕೂ ಬಡವನ್ನೇ ಹರಳಯ್ಯ. ಆ ಸಮಯೊದಳಗ ಏನಾತ್ರಿ. ಒಂದು ಕರ ಸತ್ತಿತ್ತು. ಅದರ ಮುಂದಕ್ಕ ಕುಳಿತಿದ್ದ ಹರಳಯ್ಯ. 'ಏನಪ್ಪ ಈ ದಿನ ಊಟ ಆತು, ಜ್ವಾಳಿಲ್ಲ, ಇದ್ರ ಜೊತಿಗೆ ಏನಾರ ಮಾಡ್ಕೊಂಡ ಉಣ್ಲೆ'. ಅಂತ ಬೆಂಕಿ ಮಾಡ್ಕೊಂತ ಮುಂದೆ ಕೂತಿದ್ದ ಸತ್ತಕರುದ ಮುಂದೆ. ಆಗ ಪರಮಾತ್ಮರು ಮುಂದೆ ಬಂದು ಕೂಗಿಕೊಂಡ, ಬೇಡಿಕೊಂಡ 'ಶಿವ ಶಿವಾ ಕೊಡುವಿರಾ ಭಿಕ್ಷಾ' ಅಂದ. ಹರಳಯ್ಯ ನೋಡಿದ, 'ಆಹಾ ದೇವರೇ ಏನಿದು' ಅಂತ ಮೇಲಕ್ಕ ನೋಡಿದ. 'ಹಣ ಇಲ್ಲ, ಜ್ವಾಳಿಲ್ಲ, ನಿನಗೇನು ನೀಡ್ಲಿ ಈಗ? ಇಲ್ಲಾಂತ ಕಳಸ್ಲಿ ನನಗೆ ಪಾಪ ಬರ್ತೈತೆ, ಮುಂದುಕೋಗು ಅಂದ್ರೆ ನನಗೆ ಕರ್ಮ ಬರೆತೈತಿ. ಏನ್ಮಾಡ್ಲಪಾ, ಕೇವಲ ಬಡವ, ಹಂಗ ಕಳಸ್ಬಾರ್ದು' ಅಂದು ಆ ಸತ್ತಕರ ತಗೊಂಡು ನೀಡಕೋದ ಪರಮಾತ್ಮ ಜೋಳಿಗೊಡ್ಡಿದ, ಆ ಜೋಳ್ಯಾಕ ಸತ್ತ ಕರ ಹಾಕಿದ. ಪರಮಾತ್ಮ ತಗೊಂಡು ಊರ ಹೊರಗ ಹೋಗಿ ಅದನ್ನ ಚಿಗ್ದು ಅದ್ರ ಹೇಸಿಗೆ ತಕ್ಕೊಂಡು ಮೈತುಂಬ ಬಳ್ಕೊಂಡ. ಕರುಳ ತಕ್ಕೊಂಡು ಕೊರಳಿಗೆ ಜನಿವಾರ ಹಾಕ್ಕೊಂಡ. ಚರ್ಮ ತಕ್ಕೊಂಡು ಜೋಳಿಗೆ ಕಟ್ಕಂಡು ಮುಂದೆ ಎದ್ದು ಬಂದ. ಗಾಂವ್ ಗಬ್ಬು ನಾರ್ತಾನೆ. ಅಂಥ ವೇಸ್ಧಾರಿಯಾಗಿ ಬಸವಣ್ಣ ದ್ವಾರಬಾಗಿಲಿಗೆ

ಪರಮಾತ್ಮ ಬರ್ತಾನಯ್ಯೋ ಆ ಸೂಜೀರಮೂವ್ವ ಸಾದಿಗೆ
ದ್ವಾರ ಬಾಗಿಲಿಗೆ ಬಂದಾನಯ್ಯೋ ಆ ಸೂಜೀರಮೂವ್ವ ಸಾದಿಗೆ
ದ್ವಾರ ಬಾಗಲಿಗೆ ಬಂದಾನಯ್ಯೋ ಆ ಸೂಜೀರಮೂವ್ವ ಸಾದಿಗೆ

ದ್ವಾರಬಾಗಿಲಿಗೆ ಬಂದಾನು ದ್ವಾರ ಬಾಗಿಲು ಕಾಯೋಕೆ ದ್ವಾರ ಪಾಲಕ ಗುಂಡಾಳುಗಳು. ಅವರಿಗೆ 'ಏನಯ್ಯ ಬಸವಣ್ಣ ಊಟಕ್ಕೆ ನೀಡ್ತಾನಂತೆ ಸ್ವಲ್ಪ ಒಳಗ ಬಿಡ್ರಿ, ಊಟ ಮಾಡಿ ಹೋಗಿ ಬಿಡ್ತೀನಿ.' 'ಏಯ್ ಏನ್ ಗಾಂವ್ ಗಬ್ದು ನಾರ್ತಿ, ಬಸವಣ್ಣವ್ರು ಶರಣರು, ದೊಡ್ಡ ಮಾತ್ಮರು. ಊಟಕ್ಕೆ ಕುಂತಾರ ಅನ್ಕತ ಬಾ ಹೋಗು, ಎಲ್ಲರು ಹೋದಮ್ಯಾಗ ಬಾ ಹೋಗು ಈಗ ಬಿಡೋದಿಲ್ಲಯ್ಯ' ಅಂತ ಅಡ್ಡಿ ಮಾಡಿದ್ರು. 'ಆಗಲ್ರೀ, ನಾನೆಂಗೇ ಇರ್ಲಿ, ಹೊಟ್ಟೆ ಕೆಟ್ಟುದ್ದು ಸ್ವಲ್ಪ ಇಲ್ಲೇ ಹೊರಬಾಗಿಲಲ್ಲೇ ಕೂತ್ಕೊಂಡು ಊಟ ಮಾಡ್ತೀನ್ರಿ ಸ್ವಲ್ಪ ಒಳಗ ಬಿಡ್ರಿ ಹಠ ಮಾಡ್ದ ಪರಮಾತ್ಮ. ಕೇಳ್ಲಿಲ್ಲ ಅವ್ರು, ಅವರಿಗೆ ಪರಮಾತ್ಮ ಅನ್ನೋದು ಗೊತ್ತಿಲ್ಲ ಅಂಗ ವಿಕಾರಿಯಾಗ್ಯಾನ. 'ಅಲ್ಲಲೆ ನಾವಿಷ್ಟೆಲ್ಲಾ ಹೇಳಿದ್ರು ಕೇಳ್ವಲೆಲ್ಲ ಎಂದು ಪರಮಾತ್ಮನ್ನು ಎರೆಡು ಸಲ ಬಡದ್ಬಿಟ್ರು. 'ಆ ಬಡಿಸ್ಕೆಂಡ ಏನಂದ ಪರಮಾತ್ಮ ಬಡಿಸ್ಕೆಂಡು? 'ಬಸವಣ್ಣವ್ರೆ ನಿಮ್ಮ ಕಾಲ್ಬಾಗೆ ಬಡಿಸ್ಕೆಂಡ್ನೆಪ ನನಗೆ ಹೊಡ್ಡೆ ಹೊಡ್ತ ನಿಮಗೊಂದು, ನೀಲಮ್ಮಗೊಂದು' ಅಂದು ಹಿಂದಕೆ ತಿರುಗಿ ಹೋಗುತಾನೆ

ಹಿಂದಕ ತಿರುಗಿ ಹೋಗುತಾನೆ ಆ ಸೂಜೀರಮೂವ್ವ ಸಾದಿಗಿ
ಬಸವಣ್ಣನಿಗೆ ಊಟ ನೀಡುತಾರೆ ಆ ಸೂಜೀರಮೂವ್ವ ಸಾದಿಗಿ

ಆಗ ನೀಲಮ್ಮ 'ಬಸವಣವ್ರೇ ಸ್ವಲ್ಪ ತಡೀರಿ', 'ಏನು? ಏನಾಯ್ತು', 'ಏನಿಲ್ಲ, ನೋಡಿ ನನ್ನ ಒಳ ತೊಡೀವೊಳಗ ಬಾಸಾಳ ಮೂಡ್ತು' 'ಒಳ ತೊಡಿವೊಳಗ ಬಾಸಾಳ, ಹೌದು, ಹೌದು ನನ್ನ ಬೆನ್ನ ಮ್ಯಾಲ

ಬಾಸಾಳಾ ಮೂಪ್ತೆಲ್ಲ, ಏನಿರ್ತಾದು? ಹಾ| ಜಂಗಮರೆ ಸ್ವಲ್ಪ ತಡಿರೆಪ ಊಟ ಮಾಡ್ಬ್ಯಾಡ್ರಿ' ಹೊರಗ ಓಡಿ ಬಂದಾನು. 'ಆ ಗುಂಡಾಳು' 'ಏನ್ಬುದ್ದಿ' 'ಇಲ್ಯಾರ್ನಾನ ನೋಡ್ದೇನು?' 'ಇಲ್ಲ ಬುದ್ದಿ, ಯಾವನೋ ಒಬ್ನು ಬಂದ ಗಾವದಗಬ್ಬುನಾರ್ತಿದ್ದ ಒಳಗ್ಬಿಡು ಅಂದ, ನಾ ಬಿಡೋದಿಲ್ಲ ಅಂದೆ, ಹಠಮಾಡ್ದ, ಎರೆಡುಸಲ ಹೊಡೆದ್ನೊಡ್ರಿ ಅಗೋ ಅಲ್ಲಿ ಹೊಂಟಾನ' ಅಂತತೋರ್ಸಿದ, ಆಗ ಬಸವಣ್ನೋರಿಗೆ ಅರಿವಾತಂತ್ರಿ 'ಅಯ್ಯೋ ಗುರುಗಳೇ, ಗುರುಗಳೇ ನಿನ್ನ ಮಹಿಮಾ ಗೊತ್ತಾಗ್ಲಿಲ್ಲ ಹೋಗಬ್ಯಾಡೋ ನನ್ನ ಗುರುವೇ

ಹೋಗಬ್ಯಾಡೋ ನನ್ನ ಗುರುವೇ ಆ ಸೂಜೀರಮೂವ್ವ ಸಾದಿಗೆ
ಹೋಗಬ್ಯಾಡೋ ನನ್ನ ಗುರುವೇ ಆ ಸೂಜೀರಮೂವ್ವ ಸಾದಿಗೆ
ಬಸವಣ್ಣ ಹಿಂಬಾಲತ್ತ್ಯಾನಯ್ಯೋ ಆ ಸೂಜೀರಮೂವ್ವ ಸಾದಿಗೆ
ಬಸವಣ್ಣ ಹಿಂಬಾಲತ್ತ್ಯಾನಯ್ಯೋ ಆ ಸೂಜೀರಮೂವ್ವ ಸಾದಿಗೆ

ಆಗ ಪರಮಾತ್ಮ ತಿರುಗಿ ನೋಡ್ದ, ಬಸವಣ್ಣ ಗಾಬ್ರಿಯಿಂದ ಬರ್ತಿದ್ದ. ಆs ಈತನ ಮನಿಸಿನೊಳಗ ಭಕ್ತಿಲ್ಲವೆಂದು ಒಂದ್ ಆಳದ ಹಗೇವ್ರಿ ಭತ್ತದ ಹಾಗೇವು ಅದರೊಳಗ ಕುತ್ಕೊಂಡ್ ಬಿಟ್ಟ. ಆಗ ಬಸವಣ್ಣ ಓಡಿ ಬಂದು 'ಗುರುಗಳೇ ಗುರುಗಳೇ ದಯಾಮಾಡಿ ತಪ್ಪಾತ್ರಿ ಕ್ಷಮಿಸಬೇಕ್ರಿ ನೀವ್ ಮರವು ಕೊಟ್ಟೀರ್ರಿ, ದಯಮಾಡಿ ಹೋಗೋನ' ಬೇಡ್ಕಂತಾನ, ಪರಮಾತ್ಮ ಸುಮ್ ಕುಂತಾನು, ಮ್ಯಾಗನೊಡ್ಲಿಲ್ಲ, ಬರ್ತಿನಲ್ಲಿಲ್ಲ, ಇಲ್ಲಪಾನು ಏನಿಲ್ಲ ಸುಮ್ನಕುಂತಾನು, 'ಅಯ್ಯೋ ಗುರುಗಳೆ ದಯಮಾಡ್ರಿ ಕೈಮಿಕ್ಕಿ ಕೆಟ್ಬೊಗ್ತನೆ' ಅಂದ್ರು ಕೂಡ ಕೇಳಾಂಗಿಲ್ಲ, ಆಗ ಬಸವಣ್ಣವ್ರು ಪರಮಾತ್ಮನ ರಟ್ಟೆ ಹಿಡ್ಕೊಂಡು ಮ್ಯಾಕೆತ್ತಿದ, ಎತ್ತಿದಾಗ ಏನಾದ ಪರಮಾತ್ಮ? ಆ ಹಾಗೇವು ತುಂಬ ಕೆಟ್ಬರಗುತ ಕೀವಾಗಿ ನಿತ್ಕೊಂಡಬಿಟ್ಟ. 'ಅಲೆಲೆಲೆ ಇದುನ್ನ ಬಿಡ್ಬಾರ್ದು, ಇದುನ್ನ ಬಿಟ್ಬೋಗ್ಬಾರ್ದು ನನಗೆ ಪಾಪ ಬರ್ತೈತೆ, ಇದು ರಕ್ತ ಕೀವಲ್ಲ, ಶಿವನ ಅಮೃತ' ಅಂದ. ಆತ ತಲೆಗೆ ಸುತ್ತಿದ ಮುಂಡಾಸು ತೆಗೆದು ಅದನ್ನ ಮಡಚಿ ಹಾಸಿ, ರಕ್ತ ಕೀವೆಲ್ಲ ಒರೆಸಿ ಅದನ್ನ ಎಳಕೊಂಡು ಆ ಹಗೇವ್ದಾಗೆ 'ಕತ್ಲು ಮಲಗಿನ' ಗಂಟು ಹಾಕಿದ. ಆ ಕತ್ಲು ಮಲಗಿನ ಗಂಟು ಹಾಕಿದಾಗ ಆ ಗಂಟಿಗೆ ಹೆಸರಿಟ್ಟ ಬಸವಣ್ಣ. ಈ ಕತ್ಲು ಮಲಗಿನ ಗಂಟು ಹಾಕಿನಪ ಇದು ನಂದೆ ಅಲ್ಲ ಹರಳಯ್ಯಂದು.

ಉಬ್ಬುಗಂಟು ಹುಟ್ಟ್ಯಾವಯ್ಯೋ ಆ ಸೂಜೀರ ಮೂವ್ವ ಸಾದಿಗೆ
ಉಬ್ಬುಗಂಟು ಹುಟ್ಟ್ಯಾವಯ್ಯೋ ಆ ಸೂಜೀರ ಮೂವ್ವ ಸಾದಿಗೆ
ಬಸವಣ್ಣ ಕಟ್ಟ್ಯಾನಯ್ಯೋ ಆ ಸೂಜೀರಮೂವ್ವ ಸಾದಿಗೆ
ಉಬ್ಬುಗಂಟು ಹುಟ್ಟ್ಯಾವಯ್ಯೋ ಆ ಸೂಜೀರಮೂವ್ವ ಸಾದಿಗೆ
ಉಬ್ಬಗಂಟು ಹೊತ್ಕೊಂಡು ಬಸವಣ್ಣ ಓಡಿ ಓಡಿ ಬರ್ತಾನಯ್ಯೋ ಆ ಸೂಜೀರಮೂವ್ವ ಸಾದಿಗೆ
ಓಡಿ ಓಡಿ ಬಂದಾನಯ್ಯೋ ಆ ಸೂಜೀರಮೂವ್ವ ಸಾದಿಗೆ

ಶರಣ್ರು ಜಂಗಮರೆಲ್ಲ ಕುಂತಿದ್ರು ಅದರ ನಡು ಮದ್ಯಕ್ಕ ತಂದು ಒಗದುಬಿಟ್ಟ. ರಕ್ತ ಕೀವೆಲ್ಲ ಸಿಡ್ದು ಹೋತ್ರಿ. ಗಬ್ಬು ನಾತ ಇಟ್ಬುಡ್ತು. ಶರಣರು, ಜಂಗಮರು ಆ ನಾತದಲ್ಲಿಯೇ ಊಟ ಮಾಡ್ತಾರ 'ಅಯ್ಯೋ ಬರ‍್ರೆಯ್ಯೆ ಬಸವಣ್ಣ ಊಟುಕ್ ನೀಡಿ ಶಾಂತಿಗೊಂಡಂಗಾತು ರಕ್ತ ಕೀವು ತಂದಾಕ್ಬಿಟ್ಟ, ತ್ರಿಪುರಂಜಿ ಕೆರೆಯೋಗಿ ಸ್ನಾನ ಮಾಡಾನು. ಕೆಡ್ಸಿಬಿಟ್ಟ, ಊಟ ಬ್ಯಾಡ ಬಸವಣ್ಣ' ಅಂದು ಶರಣ್ರು ಜಂಗಮರು ಎದ್ದೆದ್ದು ಹೋಗ್ಬಿಡ್ತಾರ‍್ರಿ. ಊಟ ಮಾಡ್ಲಿಲ್ಲ. ಆ ತ್ರಿಪುರಂಜಿ ಕೆರೆಗೋಗಿ ನೂರೊಂದು ಲಿಂಗ ಸಹಸ್ರ ಕೋಟಿಲಿಂಗ, ಬಿಚ್ಚಿಬಿಟ್ಟು, ವಸ್ತ್ರಬಿಚ್ಚಿಟ್ಟು ಕೆರಿ ಏರಿಮ್ಯಾಕ ನೀರಾಕಿಳಿದ್ರು ಸ್ನಾನ ಮಾಡಾಕ. ನೀರಾಕಿಳಿದ್ರಳಿಗೆ ಏನಾತ್ರಿ ಕೆರಿ ನೀರಾಗ ಆ ಕೆರಿ ತುಂಬ ಕೀವು ರಕ್ತ ನಿಂತ್ಕಳ್ತು, 'ಅಲೆಲೆಲೆ ಬರ‍್ಲೆ ಇಲ್ಲಿ ರಕ್ತ ಕೀವಾತು ಮ್ಯಾಕ ಬರ‍್ರೋ, ಮ್ಯಾಕ ಬರ‍್ರೋ' ಅಂದು ಮ್ಯಾಕ ಬಂದು ನೋಡ್ತಾರೆ ಸಹಸ್ರ ಕೋಟಿ ಲಿಂಗಬಿಟ್ಟಿದ್ರಲ್ರಿ ನೂರೊಂದು ಲಿಂಗ, ಸಹಸ್ರ ಕೋಟಿ ಲಿಂಗ ಮಾಯಾಗಿ ಹೋತ್ರಿ, ಬರೆ ವಸ್ತ್ರ ಇತ್ತು. ಆಹಾ ಏನಾಯ್ಯ ಈಗಿನ ಕಾಲಕ್ಕೆ ಲಿಂಗ ಹೋತು ಬರೆ ವಸ್ತ್ರ ಐತೆ, ಏನ್ಮಾಡಾದು, ಲಿಂಗವಿಲ್ಲದ ಮ್ಯಾಲೆ, ಲಿಂಗ ಹೋದ ಬಳಿಕ ವಸ್ತ್ರದೊಳಗೇನೈತಯ್ಯ ಲಿಂಗ ಹೋತು ನೀರಾಕೆ, ವಸ್ತ್ರ ಐತೆ ಕೈಯಾಕೆ

ಮುಸಲ್ಮಾನ್ರು ಆಗ್ಯಾರಯ್ಯೋ ಆ ಸೂಜೀರ ಮೂವ್ವಸಾದಿಗೆ
ಮುಸಲ್ಮಾನ್ರು ಆಗ್ಯಾರಯ್ಯೋ ಆ ಸೂಜೀರ ಮೂವ್ವಸಾದಿಗೆ
ಅಲ್ಲಿಗೆ ಮುಸಲ್ಮಾನ ಹುಟ್ಯಾನಯ್ಯೋ ಆ ಸೂಜೀರ ಮೂವ್ವಸಾದಿಗೆ
ಅಲ್ಲಿಗೆ ಮುಸಲ್ಮಾನ ಹುಟ್ಯಾನಯ್ಯೋ ಆ ಸೂಜೀರ ಮೂವ್ವಸಾದಿಗೆ

ಆಗ ಬಸವಣ್ಣ ನೀಲಮ್ಮ ಚಿಂತಿ ಮಾಡ್ತಾ ಕುಂತಾರೆ ನಮ್ಮ ಪಾಪ ಕರ್ಮಗಳು ಇವು ನಿವಾರಣೆ ಆಗ್ಲಿಲ್ಲ ಪಾಪ ಕರ್ಮ ಹೋಗ್ಲಿಲ್ಲ. ಉಳಿತಲ್ಲ ಅಂತ ಚಿಂತಿ ಮಾಡ್ತಾ ಕುಂತಾಗ ಪರಮಾತ್ಮನು ಬೆನ್ನ ಹಿಂದೆ ಪ್ರತ್ಯಕ್ಷನಾದ. 'ಆ ಬಸವಣ್ಣಪ್ರೇ ಚಿಂತಿ ಮಾಡ್ಬ್ಯಾಡಪ ನಿನ್ನ ನಿನ್ನ ಪಾಪಕರ್ಮ ನಿವಾರಣೆಯಾತು. ಈ ಕಲ್ಲಿನ ಪಟ್ಟಣಕ್ಕೆ ನೀನೇ ಅಧಿಕಾರಿಯಾಗಿ ರಾಜನಾಗಿ ಈ ಸಿಂಹಾಸನ ಆಳಪಾ, ನೀನೇ ರಾಜನಾಗಪ ಅಂದು ರಾಜಗಟ್ಟಿ ಪರಮಾತ್ಮನು ಹೋದ್ನಂತೆ ಬಸವಣ್ಣ.

ಕಲ್ಯಾಣ ಪಟ್ಟಣ ಆಳತಾನೆ ಆ ಶಿವನ ಸ್ಮರಣೆಯಲ್ಲಿ
ಕಲ್ಯಾಣ ಪಟ್ಟಣ ಆಳತಾನ ಆ ಶಿವನ ಸ್ಮರಣೆಯಲ್ಲಿ
ಆತ ರಾಜ ಆಗ್ಯಾನಯ್ಯೋ ಆ ಶಿವನಸ್ಮರಣೆಯಲ್ಲಿ
ಆತ ರಾಜ ಆಗ್ಯಾನಯ್ಯೋ ಆ ಶಿವನ ಸ್ಮರಣೆಯಲ್ಲಿ

* * *

## ಕುಪ್ಪಿನ ಕೇರಿ ಹನುಮಂತನಿಗೆ ಲಿಂಗದೀಕ್ಷೆ ಪ್ರಸಂಗ - (ಎರೆಡು)

ಕಲ್ಯಾಣ ಪಟ್ಟಣ ಬಿಟ್ಟು ಆ ಕೂಸು(ಗೋಣಿಬಸವ) ತಗೊಂಡು ಶರಣ್ರು ಎಲ್ಲಿಗೆ ಬಂದಾರು?

ಹಂಪಿಗೆ ಇಳದಾರಯ್ಯೋ ಆ ಸೂಜೀರ ಮೂವ್ವಸಾದಿಗೆ
ಕೂಸ ತಗೊಂಡು ಬಂದಾರಯ್ಯೋ ಆ ಸೂಜೀರ ಮೂವ್ವ ಸಾದಿಗೆ
ಹಂಪಿಗೆ ಇಳದಾರಯ್ಯೋ ಆ ಸೂಜೀರ ಮೂವ್ವ ಸಾದಿಗೆ

ಹಂಪಿಗೆ ಇಳುದಾರು ಹಂಪಿ ಸರೋವರದಲ್ಲಿ ಅವ್ರು ಸಾವಿರಾರು ದೇವಾನುದೇವತೆ ಪ್ರತಿಮೆ ಮಾಡಿ ಸರೋವರದಲ್ಲಿಟ್ಟು ಹಂಪಿ ಎಲ್ಲ ಮುಗಿಸಿಕೊಂಡು ಎಲ್ಲಿಗೆ ಬರ್ತಾರೆ?

ಕೂಡ್ಲಿಗ್ಗೆ ಬಂದಾರಯ್ಯೋ ಆ ಸೂಜೀರ ಮೂವ್ವ ಸಾದಿಗೆ
ಕೂಡ್ಲಿಗಿ ಹಿಂದಮಾಡಿ ಆ ಸೂಜೀರ ಮೂವ್ವ ಸಾದಿಗೆ
ಕುಪ್ಪಿನ ಕೇರಿಗೆ ಬಂದಾರಯ್ಯೋ ಆ ಸೂಜೀರ ಮೂವ್ವ ಸಾದಿಗೆ
ಅವ್ರು ಕುಪ್ಪಿನ ಕೇರಿಗೆ ಬಂದಾರಯ್ಯೋ ಆ ಸೂಜೀರ ಮೂವ್ವ ಸಾದಿಗೆ
ಅಲ್ಲಿಗೆ ಸೂರ್ಯ ಮುಳುಗ್ಯಾನಯ್ಯೋ ಆ ಸೂಜೀರ ಮೂವ್ವ ಸಾದಿಗೆ

ಆಃ ಕುಪ್ಪಿನ ಕೇರಿಗೆ ಬಂದಾರು ಆ ಕುಪ್ಪಿನ ಕೇರಿಗೆ ಬಂದಾಗ ವಸ್ತಿ ಎಲ್ಲಿ ಮಾಡ್ಬೇಕು? ಶರಣ್ರು ದೊಡ್ ಮಾತ್ಮರು, ರೈತು, ಮನಿಗೆ ಹೋಗಾಂಗಿಲ್ಲ ಆಗ 'ಎಲ್ಲೂ ಇಲ್ಲದ ಈ ಊರಾಗ ಹನುಮಂತನ ಗುಡಿ ಐತಂತೆ. ಹೋಗಾನು ಬರ್ರಿ ಅಲ್ಲಿಗೆ 'ಅಂದು ಐದು ಮಂದಿ ಶರಣ್ರು ಆ ಕೂಸ ತಗೊಂಡ್ ಬಂದಾರು 'ಆ ಆಂಜನೇಯ ನಾವು ದೊಡ್ ಶರಣ್ರಪ, ಮಹಾತ್ಮರು ಸ್ವಲ್ಪ ವಸ್ತಿ ಆತು. ಸೂರ್ಯ ಮುಣುಗಿದ. ಸ್ವಲ್ಪ ಜಾಗ ಕೊಡಪ, ನಿನ್ನುಡ್ಯಾಗ ವಸ್ತಿ ಮಾಡಿ ಮುಂಜಾನಿ ಹೋಗ್ಬಿಡ್ತೀವಿ' ಆಗ ಕುಪ್ಪಿನ ಕೆರೆ ಹನುಮಂತರಾಯ ಜಾಗಕೊಟ್ನಂತೆ ಅಲ್ಲಿ ವಸ್ತಿ ಮಾಡಿದ್ರಂತೆ ವಸ್ತಿ ಮಾಡಿ ಮುಂಜಾನೆದ್ದು ಹೋಗ್ಬೇಕಲ್ರಿ ಆಗ ಕೊಟ್ರೇಶ ಹೇಳ್ದ 'ಆಯ್ತುಪ ಮಹಾತ್ಮ ನಮಗೆ ಮರ್ಯಾದಿಕೊಟ್ಟು ಜಾಗ ಕೊಟ್ಟಾನ. ವಸ್ತಿ ಮಾಡಾದುಕ್ಕ ಈತುಗ ಲಿಂಗಧಾರಣೆ ಮಾಡಿ ಹೋಗ್ಬೇಕಪ ಹಂಗ ಹೋಗ್ಬಾರ್ದು. ಆಗ ಐದು ಶರಣ್ರು ಸೇರಿ ಕುಪ್ಪಿನ ಕೇರಿ ಹನುಮಂತನಿಗೆ ಲಿಂಗಧಾರಣೆ ಮಾಡಿ 'ಆ ನಾವೆಲ್ಲ್ರೀವಿ ನೀನಲ್ಲೇಯಿರಪ್ಪಾ ಅಂದು ಆತಗ ಆಶೀರ್ವಾದ ಕೊಟ್ಟು ಕುಪ್ಪಿನಕೇರಿ ಬಿಟ್ರರು.

* * *

## ಗೋಣಿಬಸವನ ಜನನ ಪ್ರಸಂಗ-(ಮೂರು)

ಅರ್ಧವಯಸ್ಸೇ ಆಯ್ತುರೀ ಮಕ್ಕಿಲ್ಲ ಬಂಜಿ ಆಗ ಕೂಲಳ್ಳಾಗ ರೈತ್ರಾ ಆವಕ್ಕುಗ ಕೇಳುತ್ತಾರೆ, ಹ್ಹಾಂ ಕನಕವ್ವ 'ನನಗೆ ಮಕ್ಕಿಲ್ಲ ಮಕ್ಕಿಲ್ಲ ಅಂತಿಯಲ್ಲ ಅಳ್ತಿ ಬಾಗಳಿ ಕಲ್ಲೇಶನ ಗುಡಿಯೊಳಗೆ ಐದು ಮಂದಿ ಶರಣ್ರು ಬಂದಾರಂತೆ. ಸಾವು-ಕುರುವು' ಅಂತ್ರ-ಮಂತ್ರ, ಮಕ್ಕಿಲ್ದವ್ರಿಗೆ ಮಕ್ಳು ಫಲ ಕೊಡೋದು, ಅಮಸ್ಯಾಗ ಹೋಗಿ ಕೇಳ್ಕ್ಯ ಕೊಡ್ತಾರ ನಿಂಗೆ, ಯಾಕ ಮಕ್ಳು ಮಕ್ಳು ಅಂತಿ? ಹೇಳ್ಳಿ ಜಾಸ್ತಿ ಆಯ್ತ್ರೀ ರೈತ್ರುದು. ಅವ್ರ್ ಮಾತ್ ಕೇಳಿ ತೇದುಟ್ಟು ತೊಯ್ದೆದ್ದು ಮಾಭಕ್ತೀಲಿ, ಒಂದೇ ಮನ್ಸೀ ಲೀ... ಮಕ್ಳು ಫಲುಕ ಹೊಂಡ್ತಾಳ್ರೀ... ಕೂಲಳ್ಳಾಗ... ಆಯಮ್ಮ ಹೊಂಡೋದು ಐದ್ ಮಂದಿ ಶರಣ್ರೀಗೆ ಅರಿವ ಆತಂತ್ರೀ ಗೋಣಿಬಸವೇಶ್ವರ ಇವತ್ ನನ್ ಬಿಟ್ಟು ಹೋಗ್ತೀಯಪಾ... ನಾವ್ ಬಂದ್ ವಿಷಯ ತಿಳಿದಂಗಾತಯ್ಯೋ...

ನಿಮ್ಮ ತಾಯಿ ಬರ್ತಾಳಯ್ಯೋ... ಆ ಸೂಜಿ ರಾಮೂವ್ವಸಾದಿಗೆ
ನಮ್ಮನ್ ಬಿಟ್ಟು ಹೋಗತೀಯೋ....ಆಸಂಜೀರಮೂವ್ವಸಾದಿಗೆ

ಅಂತಾರೆ ಫಕ ಫಕ ನಗತಾರೆ. ಮಗೂನ ಕೂಡ ಆಡ್ತಾರೆ, ಯಮ್ಮ ಕನಕಮ್ಮ ತೋದುಟ್ಟು... ಒಂದೇ ಮನ್ಸಿಲಿ, ಬಾಗ್ಳಿ ಕಲ್ಲೇಶ್ವರ ಮಠಕ್ಕೆ ಬರ್ತಾಳ್ರೀ.... ಆಗ ಮದ್ದಾನ ಸ್ವಾಮಿಗಳು ಆ ನಾಲಕ್ಕು ಮಾರಿ ಶರಣ್ರ ಬಳಗ ಬಿಟ್ಟು ಹೊರಗೆ ಬಂದ. ಮದ್ದಾನಸ್ವಾಮಿ ಆ ಹೂವಿನ ಆವಾಜ್ ತಗಣಾಕ, ಗಾಳಿ ಹವಕ್ಕ, ಹೂವಿನ ತ್ವಾಟಕ್ಕ ಬಂದ ಆ ತ್ವಾಟ್ದಾಗೆ ಮದ್ದಾನಸ್ವಾಮಿ ಸುಳ್ದಾಡ್‌ತಾನು, ಆ ಹೂವಿನ ಆವಾಜ್ ತಗೊಂತಾನ್ರೀ... ಮದ್ದಾನ ಸ್ವಾಮಿಗಳು ಆಯಮ್ಮ ಕೇರಿ ಹತ್ಯಾಳು. ಕೆರಿಯ ಹತ್ತಿ ಪೂರ್ವಕ್ಕ ಬಂದು ನೋಡ್ರಿ, ಗುಡಿಯಾಕ, ಹಿಂದಕಳಿಯಕಲ್ಲ ಕೆರಿ ಏರಿ ಹಿಂದಕ, ಆ ಪೂರ್ವ ಬಂದ್ ತಿರುಗಿ ಹಿಂಗಿಳಿಯಕರ, ಹಿರಿಗ ತಿರಗಕರಗ ಅಲ್ನೋಡ್ರಿ, ಮದ್ದಾನ ಸ್ವಾಮಿ ಮೇಲೆ ಆಯಮ್ಮನ ದೃಷ್ಟಿ ಬಿತ್ತು. ಆತನ ದೃಷ್ಟಿ ಆಯಮ್ಮನ ಮೇಲೆ ಬಿತ್ತು. ಬರೆ ದೃಷ್ಟಿ ಬಿದ್ದುದ್ದಕ್ಕ ಮದ್ದಾನ ಸ್ವಾಮಿಗೆ

ಇಂದ್ರ ತಾವ ಸುರುದಾವಯ್ಯೋ... ಆ ಸೂಜೀರಾ ಮೂವ್ವಸಾದಿಗೆ
ಮದ್ದಾನಸ್ವಾಮಿ ಕೆಟ್ಟಾನಯ್ಯೋ..... ಆ ಸೂಜೀರಾ ಮೂವ್ವಸಾದಿಗೆ

ಮದ್ದಾನ ಸ್ವಾಮಿಗೆ ಇಂದ್ರನ ತಾವ ಸುರಿದಾವಂತೆ, ಬರೆದೃಷ್ಟಿ ಬಿದ್ದುದ್ದಕ್ಕೆ ಅಂತದ್ಕೆ ಯಾವ ಇಂದ್ರ ಸರಿಯಾಗ್ತದ, ಈ ನಾಲ್ಕು ಮಂದಿ ಮುಂದಿದ್ರಲ್ರೀ ಗೋಣಿ ಬಸವೇಶ್ವರ...

ಮಾಯವಾಗಿ ಹೋಗ್ಯಾನಯ್ಯೋ... ಆ ಸೂಜೀರಾ ಮೂವ್ವ ಸಾದಿ...
ಕನಕಮ್ಮನ ಹೊಟ್ಟೆಗೆ ಸೇರ್ಯಾನಯ್ಯೋ...ಆ ಸೂಜೀರಾ ಮೂವ್ವ ಸಾದಿ...

ಮದ್ದಾನಸ್ವಾಮಿ ಮಾಯವಾದ, ಕನಕಮ್ಮನ ಹೊಟ್ಟಿಗೆ ಸೇರ್ಕಂಡು ಬಿಟ್ಟ. ಆ ನಾಕು ಮಂದಿ ಶರಣ್ರಿಗೆ ಹೇಳ್ದುದ್ದುಲ್ರೀ.... ಅವರಿಗೆ ಅರಿವಿಗೆ ಗೊತ್ತಾತು. ಮದ್ದಾನ ಸ್ವಾಮಿ ಇಲ್ಲಿಂದ ಸರಿದಿದ್ದು, ಕೂಸು ಮಾಯವಾಗಿದ್ದು... ಆ ಕೊಟ್ರೇಶ... ಮದ್ದಾನ ಸ್ವಾಮಿ ಕೆಟ್ಟ. ಫಕ ಫಕ ನಗುತಾನು. ಬಿದ್ದು ಬಿದ್ದು ನಗುತಾನು. ನಾಕು ಮಂದಿ ಶರಣ್ರು ಮದ್ದಾನ ಸ್ವಾಮಿ ಮೈಲಿಗೆಯಾದ ಅಪ್ರತಕ ಬರಂಗುಲ್ಲ ಒಳಕೋಗಾಂಗಿಲ್ಲ. ಅಲ್ಲೆ ನಿಂತುಕೊಂಡು ಬಿಟ್ಟಾನು. ಆ ಸಮಯದೊಳಗೆ ಕನಕಮ್ಮ ಗುಡಿ ಮುಂದೆ ಬಂದಾಳು. ಶರಣ್ರು ಮುಟ್ಟಂಗಿಲ್ಲ, ಅಡಿಗೋಗಂಗಿಲ್ಲ ಕನಕಮ್ಮ, ದೂರ ಮುಂದೆ ನಿತ್ಕಂಡು ನೀರುಗ್ಯಾಳು, ಪುಷ್ಪ ಒಗುದಾಳು, ಕಾಯಿ ಒಡ್ದು, ನಾಕು ಮಂದಿ ಶರಣ್ರಿಗೆ ಬೇಡ್ಕಂಡಾಳು, ಗುರುಗಳೇ... ಗುರುಗಳೇ... ನನಗಿದೇ ಕೇವಲ ಬಡತಾನ ಇಲ್ಲಿ, ಇಲ್ಲಿಗೆ ಅರ್ಧ ವಯಸ್ಸು ಹಿಂದೆ ಮಾಡ್ದೆ ನನಗೆ ಮಕ್ಕಳಿಲ್ಲ.

ಮಕ್ಕಳ ಫಲವಾ ಕೊಡಬೇಕಯ್ಯಾ ಆ ಶಿವರಾಣೆ ಯಾನೆ ದೇವರೇ
ಫಲವ ಕೊಟ್ಟು ಉದ್ದಾರ ಮಾಡೋ ಆ ಶಿವರಾಣೆ ಯಾನೆ ದೇವರೇ
ಬಂಜೆಂಬ ಸಬುದ ತಪ್ಪಲಯ್ಯಾ ಆ ಶಿವರಾಣೆ ಯಾನೆ ದೇವರೇ

ನನಗೆ ಫಲವ ಕೊಡಬೇಕಯ್ಯಾ ಆ ಶಿವರಾಣೆ ಯಾನೆ ದೇವರೇ
ಮಕ್ಕಳಿಲ್ಲ ನನ್ನ ದೈವೇ ಆ ಶಿವರಾಣೆ ಯಾನೆ ದೇವರೇ

ಮಕ್ಕಳ ಫಲ ಕೇಳ್ತಾಳು, ಶರಣ್ರು ಗೊತ್ತಾಗಿತ್ತಲ್ರೀ... ಫಕ ಫಕ ನಗುತಾರು, ಹುಸಿ ನಗು ನಗುತಾರು, ಆ ಕನಕಮ್ಮ... ಆಯ್ತಮ್ಮ ಫಲ ಕೊಡ್ತೀವಿ. ನಿನ್ನ ಹೊಟ್ಟೆ ಒಳಗೆ ದೊಡ್ಡ ಮಾತ್ಮನ್ನ ಇಟಕೊಂಡು ನಮ್ಮುನ್ ಫಲ ಕೇಳ್ತೀಯಲ್ಲಮ್ಮ ಅಂತಾರೆ, ಬಿದ್ ..ಬಿದ್ ..ನಗ್ತಾರೆ. ಆಯ್ತಮ್ಮ ಫಲ ಕೊಟ್ಟೀವಿ, ನಿನ್ ಹೊಟ್ಟೆ ಒಳಗೆ ಗಂಡು ಮಗು ಹುಟ್ಟ್ತಾನು, 'ಗೋಣಿ ಬಸವೇಶ್ವರ' ನಾಮಾಂಕಿತ ಕರಿಯಮ್ಮ. ಹೆಸರು ಮರೀಬ್ಯಾಡ ಆಗ್ಲಿ ಗುರುಗಳೇ.. ಹಾಗ ಆಶೀರ್ವಾದ ತಕ್ಕೊಂಡು ಫಲ ತಕ್ಕೊಂಡು ಕನಕಮ್ಮ ಹೊಂಟಾಳ್ ಹ್ಹಾಂ... ಕನಕಮ್ಮನವರೇ ಸ್ವಲ್ಪ ತಡಿಯಮ್ಮ ಹ್ಹಾಂ ಮದ್ದಾನ ಸ್ವಾಮಿಗಳೇ ಮತ್ತೇನದ? ಏನಿಲ್ಲ.. ಮೈಲಿಗಾಗಿ ಕೆಟ್ಟು ಹೋದೆ, ಆದ್ರೆ ಆಯಮ್ಮ, ಹೆಂಡತಿ ನೀನೇ ಗಂಡ, ಆಂ... ನೀನು ಹೋಗ್ಬಿಡಪಾ ಕೂಲಳ್ಳೀಗೆ, ಮೈಲಿಗಾದೆ, ನಮ್‌ದ್ರಾಗ ಬರಂಗಿಲ್ಲ ನೀ ಮುಟ್ಟಾಂಗಿಲ್ಲ.. ನಮ್ಮನ್ನ ನಡಿ ಅಂದ್ರು... ಆಗ ಆದ್ರೆ ಹೋಗ್ತೀನಿ ಅವ್ರಾದ್ರೆ ಬ್ಯಾಡ್ರು... ನಾನು ಜಂಗಮರು, ಏನಯ್ಯಾ ನಮ್ಮುನ್ನ ಗಂಡ ಹೆಂಡ್ತಿ ಮಾಡಿ ಆಕಿ ಹಿಂದೆ ಹೋಗು ಅಂತೀರಲ್ಲಯ್ಯ... ಅಂದಾಗ ಮದ್ದಾನಸ್ವಾಮಿ ಅಂದ. ಆಗ್ಲೆಪ ನಾನಿನ್ನು ಹೋಗ್ತೀನಿ. ನಿನ್ ಮಾತು ಮೀರದಿಲ್ಲ. ನೀನು ಹಾಂಗ ಹೊಂಟಾಗ ಎಲ್ಲೆರ ಹೊರಗ ಹೊಂಟ್ರೆ ನಿನಗೆ ಹರಿಜನ್ನಾಕಿ ಆರ್ತಿ ಬೆಳಗ್ಲಪ್ಪಾ ಅಂತ ಹೇಳಿದ ಮದ್ದಾನಸ್ವಾಮಿ ಹಿಂದೆ ಹೊಂಟ, ಕನಕಮ್ಮ ಹಿಂದೆ ಮದ್ದಾನ ಸ್ವಾಮಿ ಕಂಕಣ ಫಲ ಪಡಕಂಡು ಕನಕಮ್ಮ...

ಕೂಲಹಳ್ಳೀಗೆ ಬರ್ತಾಳಯ್ಯೋ... ಆ ಸೂಜೀರಾ ಮೂವ್ವ ಸಾದೀಗೆ
ದಯಾ ಮಾಡೋ ನನ್ನ ಗುರುವೇ.. ಆ ಸೂಜೀರಾ ಮೂವ್ವ ಸಾದಿಗೆ
ಇಲ್ಲಿಗೆ ಧನ್ಯಳಾದೆನಯ್ಯೋ.. ಆ ಸೂಜೀರಾಮೂವ್ವ ಸಾದಿಗೆ

**ಹುಲಿಯಿಂದ ವ್ಯವಸಾಯ ಮಾಡಿದ ಪ್ರಸಂಗ - (ನಾಲ್ಕು)**

'ಮಗುಕಲ್ಯಾಣದಾಗ ಸಕ್ರಿಚೀಲದಾಗ ಹುಟ್ಟಿದೆಪ ನರಕದಲ್ಲಿ ಕನಕವ್ವನ ಹೊಟ್ಯಾಗ ಹುಡಿದೆಪ, ಮಗು ಎರಡು ವಿಧದಾಗೆ ಹುಟ್ಟಿ, ನಾವು ಹೆಂಗೆ ವರವು ಕುರುವು ನೆಡಿಸಿದ್ವೋ ನಿಂದು ಹಂಗೆ ನೆಡಿಲಪ್ಪಾ' ಎಂದು ಮದ್ದಾನಸ್ವಾಮಿ ಆಶೀರ್ವಾದ ಕೊಟ್ಟನಂತೆ. ಅದನ್ನ ತೆಗೆದುಕೊಂಡು ಬಂದು ಗೋಣಿಬಸವೇಶ್ವರನ್ನ ಕನಕಮ್ಮ ಕೊಲಳ್ಯಾಗ ಜ್ಞಾಪಾನಮಾಡಿದ್ಲಂತ್ರು. ಇಲ್ಲಿಗೆ ಗೋಣಿಬಸವೇಶ್ವರ ಹುಟ್ಟಿದ, ಹುಟ್ಟಿದಮ್ಯಾಲ ಏನಾಯ್ತು ಅಂದ್ರೆ, ಆಗ ಹರಹರಿ ಎರಡು ಸರಿದೂಗಿದವು. ಶಿವನ ಮುಖ ಇದ್ದಿಲಾಂತೆ ಹರಹರಿ ಎರಡೇ ಇದ್ವಂತೆ. ಗೋಣಿಬಸವರು ಹುಟ್ಟಿದಾಗ ಶಿವನ ಶಬ್ದ ಬಂತು.

ಗೋಣಿ ಬಸವಣ್ಣ ಬಂದ ಶಿವ ಶಿವ ಶಬ್ದವ ತಂದ
ಕನಕವ್ವನ ಹೊಟ್ಯಾಗ ಹುಟ್ಟಿ ಬಂದ ಕಾಲಿಡಬ್ಬ ಬರೆಸಿಕೊಂಡ
ಮದ್ದಾನಸ್ವಾಮಿ ಮಠದ ಮುಂದೆ ಉಪ್ಪರಿಗೆ ಬಲು ಚೆಂದ

ಗೋಣಿಬಸವಣ್ಣ ಬಂದ ಶಿವ ಶಿವ ಶಬ್ದವ ತಂದ
ಮೋಡಿಕಾರ ಗೋಣಿಬಸವ ಮಾಯಕಾರ ಗೋಣಿ ಬಸವ
ಸಿದ್ಧರ ಕೂಡಾಡಿ ಸಿದ್ದವಿದ್ಯ ಕಲಿತಾನಲ್ಲ.
ಸೋಮವಾರ ಗೋಣಿಬಸವ ಉರಿಯ ನೇಗಿಲ ಹೊಡೆಯುತ ನಿಂತ
ನೂಲಿನ ಹಾವು ಮಿಣಿಯ ಮಾಡಿ ನಾಗರಹಾವು ಬಾರಿಕೋಲು ಮಾಡಿ
ಚಿಗಟೇರಿ ಶಿವನಯ್ಯ ನಿನ್ನ ಪರಿಪರಿ ಕಾಡಿದನಲ್ಲಾ
ಮೊಡಿಕಾರ ಗೋಣಿಬಸವ ಸಿದ್ಧರ ಕೂಟಾಡಿ
ಸಿದ್ದವಿದ್ಯ ಕಲಿತಾನಲ್ಲ
ಕಲ್ಲು ಗಾಣಕೆ ಹಾಕಿದನಲ್ಲಾ, ಮುಳ್ಳುಗಾಣಕೆ ಹಾಕಿದನಲ್ಲಾ
ವರವಿನ ಪಿಂಡಾಂಡ ಎದ್ದು ಎದ್ದು ಬಂದು ಶರಣ
ಸೋಮವಾರ ಗೋಣಿಬಸವ ಉರಿಯ ನೇಗಿಲ ಹೊಡೆಯುತ ನಿಂತ
ನೂಲಿನ ಹಾವು ಮಿಣಿಯ ಮಾಡಿ ನಾಗರ ಹಾವು ಬಾರಿ ಕೋಲು ಮಾಡಿ
ಅಳಲಿಗೊಂದು ಗದ್ದುಗೆ ಮಾಡಿ ದಾಟ್ಯಾನು ಹಮ್ಮಿಗಿ ಹೊಳೆಯ
ಗುಮ್ಮಗೋಳಕೆ ಹೋದಾನಲ್ಲ ಶಿಲಾಮೂರ್ತಿ ಆಗ್ಯಾನಲ್ಲ
ಗೋಣಿಬಸವ ಬಂದ ಶಿವಶಿವ ಶಬ್ದವಾ ತಂದ |



೧. ತಿಪ್ಪೇಸ್ವಾಮಿ ಒಳಮಠ, ನಾಯಕನಟ್ಟಿ



೨. ತಿಪ್ಪೇಸ್ವಾಮಿ ಒಳಮಠದ ಮುಂಭಾಗ, ನಾಯಕನಟ್ಟಿ



೩. ತಿಪ್ಪೇಸ್ವಾಮಿ ಹೊರಮಠ, ನಾಯಕನಟ್ಟಿ



೪. ಅಕ್ಬರ್ ಕೊಟ್ಟನೆನ್ನಲಾದ ಮಂಚ, ಕೊಟ್ಟೂರು



೫. ಗುರುಬಸವನ ಗಚ್ಚಿನಮಠ (ಸಮಾಧಿಮಠ), ಕೊಟ್ಟೂರು



೬. ಗುರುಬಸವನ ಹೀರೇಮಠ, ಕೊಟ್ಟೂರು



೭. ಗುರುಬಸವನ ಕಾರ್ತಿಕೋತ್ಸವದ ಪಲ್ಲಕ್ಕಿ, ಕೊಟ್ಟೂರು



೮. ಗುರುಬಸವನ ಮೂರ್ಕಲ್ಲಮಠ, ಕೊಟ್ಟೂರು



೯. ಗುರುಬಸವನ ತೊಟ್ಟಿಲುಮಠ, ಕೊಟ್ಟೂರು



೧೦. ಗುರುಬಸವನ ಬೆಳ್ಳಿರಥ, ಕೊಟ್ಟೂರು



೧೧. ಮದ್ದಾನಸ್ವಾಮಿ ಮಠದ ಮುಂಭಾಗ, ಕೂಲಹಳ್ಳಿ



೧೨. ಮದ್ದಾನಸ್ವಾಮಿ ಮಠದ ಹಿಂಭಾಗ, ಕೂಲಹಳ್ಳಿ



೧೩. ಹರಿಜನಕೇರಿಯಲ್ಲಿರುವ ಗುರುಬಸವನ ಮಠ, ಕೂಲಹಳ್ಳಿ



೧೪. ಗೋಣಿಬಸವನ ಮಠ, ಕೂಲಹಳ್ಳಿ



೧೫. ತಿಪ್ಪೇಸ್ವಾಮಿ ಒಳಮಠದ ಹತ್ತಿರವಿರುವ
ನಾಗರಕಲ್ಲುಗಳು, ನಾಯಕನಹಟ್ಟಿ



೧೬. ಗೋಣಿಬಸವನ ಮಠ, ಗುಮ್ಮಗೋಳ



೧೭. ಕೋಲಶಾಂತನ ಒಳಮಠ, ಅರಸೀಕೆರೆ



೧೮. ಕೋಲಶಾಂತ ಹೊರಮಠ, ಅರಸೀಕೆರೆ



೧೯. ಕೆಂಪಯ್ಯನ ಕಾರ್ತಿಕೋತ್ಸವ, ಹರಪನಹಳ್ಳಿ



೨೦. ಗೋಣಿಬಸವನಿಗೆ ಬಾಗಿ ಕಾಯಕೊಡುತ್ತಿರುವ
ತೆಂಗಿನ್ನಮರ, ಗುಮ್ಮಗೋಳ



೨೧. ಕೆಂಪಯ್ಯನ ಮಠ, ಹರಪನಹಳ್ಳಿ



೨೨. ಗೋಣೆಬಸವನ ಹುಲಿವ್ಯವಸಾಯ, ಗುಮ್ಮಗೋಳ



೨೩. ಗುರುಬಸವನ ರಥೋತ್ಸವ, ಕೊಟ್ಟೂರು



೨೪. ತಿಪ್ಪೇಸ್ವಾಮಿ ಚಿಕ್ಕರಥೋತ್ಸವ, ನಾಯಕನಹಟ್ಟಿ



೨೫. ತೆಪ್ಪೋತ್ಸವಕ್ಕೆ ಸಿದ್ಧವಾಗಿರುವ ತೆಪ್ಪ, ನಾಯಕನಟ್ಟಿ



೨೬. ತಿಪ್ಪೇಸ್ವಾಮಿ ದೊಡ್ಡರಥೋತ್ಸವ, ನಾಯಕನಟ್ಟಿ



೨೭. ಕಾರ್ತಿಕೋತ್ಸವದಲ್ಲಿ ಕೊಬ್ಬರಿಸುಡುವ
ಆಚರಣೆ, ಕೊಟ್ಟೂರು



೨೮. ಜಾತ್ರೆಯಲ್ಲಿ ಕೊಬ್ಬರಿ ಸುಡುವುದು, ನಾಯಕನಟ್ಟಿ



೨೯. ಗುರುಬಸವನ ಜಾತ್ರೆಯಲ್ಲಿ ಆರತಿ ಬೆಳಗುವ
ದಲಿತ ಹೆಂಗಸರು, ಕೊಟ್ಟೂರು



೩೦. ತಿಪ್ಪೇಸ್ವಾಮಿ ಜಾತ್ರೆಗೆ ಬಂದ ಸಿದ್ದರು-ಜೋಗಿಗಳು
(ಹೊರಮಠ), ನಾಯಕನಟ್ಟಿ



೩೧. ಗೋಣಿಬಸವ ಕಾವ್ಯ ಹಾಡಿದ ಬಾಲಬಸವರ ತುಮನೆಪ್ಪ ಮತ್ತು ಕುಟುಂಬ, ಗೊಲ್ಲರಹಳ್ಳಿ



೩೨. ಕಾಲಜ್ಞಾನ ಸಾರುತ್ತಿರುವ ಬಾಲಬಸವರು, ರಾಯಪುರ

ಅನುಬಂಧ-೮ , ಆಹ್ವಾನ ಪತ್ರಿಕೆಗಳು.





॥ ಶ್ರೀ ಗೋಣಿಬಸವೇಶ್ವರ ಪ್ರಸನ್ನಃ ॥

ದಾವಣಗೆರೆ ಜಿಲ್ಲಾ, ಹರಪನಹಳ್ಳಿ ತಾಲೂಕು

**ಕೂಲಹಳ್ಳಿ ಗ್ರಾಮದ**





## ಶ್ರೀ ಗೋಣಿಬಸವೇಶ್ವರ ಮಹಾಸ್ವಾಮಿಯ ರಥೋತ್ಸವದ



# ಆಹ್ವಾನ ಪತ್ರಿಕೆ



ಪ್ರತಿ ವರ್ಷದ ಪದ್ಧತಿಯಂತೆ ಶ್ರೀ ಶಕೆ 1924 ನೇ ಚಿತ್ರಭಾನು ನಾಮ ಸಂವತ್ಸರ ಫಾಲ್ಗುಣ ಶುದ್ಧ ಏಕಾದಶಿ ದಿವಸ ದಿನಾಂಕ **14-3-2003** ನೇ **ಶುಕ್ರವಾರ** ಸಾಯಂಕಾಲ ಸರಿಯಾಗಿ 4-30 ಕ್ಕೆ ಸಕಲ ಬಿರುದಾವಳಿಗಳಿಂದ ಬಹು ವಿಜೃಂಭಣೆಯಿಂದ



**" ರ ಥೋ ೀ ತ್ಸ ವ "** ವು ಜರುಗುವುದು.



ಜರುಗುವ ಮುನ್ನ ಸ್ವಾಮಿಯ ಬಾವುಟ ಹರಾಜು ಮಾಡಲಾಗುವುದು. ಭಕ್ತಿ ಇದ್ದಂತೆ ಭಕ್ತಾದಿಗಳು ಹರಾಜಿನಲ್ಲಿ ಕೂಗಿ ತೆಗೆದುಕೊಂಡು ಹೋಗಬೇಕು. ಪುನಃ ರಥೋತ್ಸವ ಜರುಗುವ ಮುನ್ನ ಬಾವುಟ ಮತ್ತು ಹಣವನ್ನು ತಂದು ಕಮಿಟಿ ಕಾರ್ಯದರ್ಶಿಯವರ ಕಡೆಗೆ ತಂದು ಒಪ್ಪಿಸಿ ರಸೀದಿ ಪಡೆಯತಕ್ಕದ್ದು. ಹರಾಜಿನ ಹಣವನ್ನು ತಂದು ಕಟ್ಟದಿದ್ದಲ್ಲಿ ಕಮಿಟಿಯವರು ಸೂಕ್ತ ಕ್ರಮ ತೆಗೆದುಕೊಳ್ಳಲಾಗುವುದು.

## ಕಾರ್ಯಕ್ರಮಗಳು :

| ದಿನಾಂಕ | | | |
|---|---|---|---|
| ದಿನಾಂಕ 13-3-2003 ನೇ | ಗುರುವಾರ | ಸಾಯಂಕಾಲ | ಬಸವ ಉತ್ಸವ |
| ದಿನಾಂಕ 14-3-2003 ನೇ | ಶುಕ್ರವಾರ | | ರಥೋತ್ಸವ. |
| ದಿನಾಂಕ 15-3-2003 ನೇ | ಶನಿವಾರ | | ಓಕಳಿ. |
| ದಿನಾಂಕ 16-3-2003 ನೇ | ಭಾನುವಾರ | | ಕಡುಬಿನ ಕಾಳಗ. |
| ದಿನಾಂಕ 17-3-2003 ನೇ | ಸೋಮವಾರ | | ಬಗರಿನ ಕಾಳಗ |

ಇನ್ನೂ ಅನೇಕ ಕಾರ್ಯಕ್ರಮಗಳು

**ಶ್ರೀ ಪಟ್ಟದ ಚಿನ್ಮಯ ಸ್ವಾಮಿಗಳ ಅಮೃತ ಹಸ್ತದಿಂದ ನಡೆಯುವವು.**

ಮತ್ತು ಸಂಸ್ಥಾನದ ಸ್ವಾಮಿಗಳ ಸಮ್ಮುಖದಲ್ಲಿ ನಡೆಯುವವು. ರಥೋತ್ಸವದ ಕೆಲಸ ಕಾರ್ಯಗಳು ಗ್ರಾಮದ ದೈವಸ್ಥರ ಮತ್ತು ಗ್ರಾಮ ಪಂಚಾಯಿತಿಯವರ ಹಾಗೂ ಸಕಲ ಸದ್ಭಕ್ತ ಮಂಡಳಿಯವರು, ಸಮಿತಿ ಅಧ್ಯಕ್ಷರು, ಕಾರ್ಯದರ್ಶಿಗಳು ಮತ್ತು ಸಮಿತಿ ಸದಸ್ಯರುಗಳ ಮುಖಾಂತರ ನಡೆಯುವವು.

ವಿಶೇಷ ಸೂಚನೆ : ಸ್ವಾಮಿಗೆ ಹರಕೆ, ಮುಡುಪು, ಧನ - ಧಾನ್ಯ, ಸಾಮಾನುಗಳನ್ನು ಮತ್ತು ಜನಿಗಿಗಳನ್ನು ಕೊಡುವವರು ಕಮಿಟಿಯವರ ಕೈಗೆ ಕೊಟ್ಟು ರಸೀದಿ ಪಡೆಯತಕ್ಕದ್ದು. ರಥೋತ್ಸವಕ್ಕೆ ಬರುವ ಭಕ್ತಾದಿಗಳಿಗೆ (ಯಾತ್ರಿಕರಿಗೆ) ಬಸ್ಸು, ವಾಹನಗಳ ವ್ಯವಸ್ಥೆ, ನೀರಿನ ಸೌಲಭ್ಯ, ಪ್ರಥಮ ಚಿಕಿತ್ಸೆ, ಸುರಕ್ಷಿತ ವ್ಯವಸ್ಥೆ ಮಾಡಲಾಗುವುದು.

ಶ್ರೀ ಮಠದ ಕಾಶೀನಾಥ ಸ್ವಾಮಿಗಳು,
ಅಧ್ಯಕ್ಷರು,
ಶ್ರೀ ಗೋಣಿಬಸವೇಶ್ವರ ಸೇವಾ ಸಮಿತಿ, ಕೂಲಹಳ್ಳಿ.
ದೂರವಾಣಿ : ಮನೆ 08398-861011.



ಶ್ರೀ ಬಣಕಾರ ಕೋರಿ ಕೊಟ್ರಪ್ಪ,
ಆಡಳಿತ ಮೊಕ್ತೇಸರರು,
ಶ್ರೀ ಗೋಣಿಬಸವೇಶ್ವರ ಸೇವಾ ಸಮಿತಿ, ಕೂಲಹಳ್ಳಿ.
ದೂರವಾಣಿ : ಮನೆ 08398-861020.

**ಸಕಲ ಭಕ್ತಾದಿಗಳು ಹಾಗೂ ಊರಿನ ಗ್ರಾಮಸ್ಥರು, ಕೂಲಹಳ್ಳಿ.**

ಕೃಪ ಪ್ರಿಂಟರ್ಸ್, ಕೊಟ್ಟೂರು ರೋಡ್, ಹರಪನಹಳ್ಳಿ. ದೂ: 820703

॥ ಶ್ರೀ ಗುರುತಿಪ್ಪೇರುದ್ರಸ್ವಾಮಿ ಪ್ರಸನ್ನ ॥



# ಶ್ರೀ ಗುರು ತಿಪ್ಪೇರುದ್ರಸ್ವಾಮಿಯ ರುದ್ರಾಕ್ಷಿಮಾಲೆ ಮತ್ತು ಅಕ್ಷಯ ಬುತ್ತಿಯ

.... ಕಾರ್ಯಕ್ರಮದ ....



## ಆಹ್ವಾನ ಪತ್ರಿಕೆ



ನಾಯಕನಹಟ್ಟಿ ಪುಣ್ಯ ಕ್ಷೇತ್ರ ; : ಚಳ್ಳಕೆರೆ ತಾಲ್ಲೂಕು

ಸ್ವಸ್ತಿಶ್ರೀ ೧೯೨೪ನೇ ಚಿತ್ರಭಾನು ಸಂವತ್ಸರದ ಕಾರ್ತೀಕ ಶುದ್ಧ ದಿನಾಂಕ 15-12-2002 ಭಾನುವಾರದಿಂದ ಧನುರ್ಮಾಸದ ಪವಿತ್ರ ದಿನದಂದು "ರುದ್ರಾಕ್ಷಿಮಾಲೆ' ಗುರುವಿನಿಂದ ಧರಿಸುವುದು. ಮಕರ ಸಂಕ್ರಾಂತಿಯ ದಿನವಾದ 14—1—2003 ಮಂಗಳವಾರ ಅಕ್ಷಯ ಬುತ್ತಿಯೊಂದಿಗೆ ದಾಸೋಹಕ್ಕೆ ಸಲ್ಲಿಸುವುದು. ಈ ಕಾರ್ಯಕ್ರಮಕ್ಕೆ ಸದ್ಭಕ್ತರಾದ ತಾವುಗಳು ಆಗಮಿಸಿ, ಭಾಗವಹಿಸಿ, ಶ್ರೀ ಸ್ವಾಮಿಯ ಕೃಪೆಗೆ ಪಾತ್ರರಾಗಲು ಕೋರಿದೆ.

### ಶ್ರೀ ಗುರು ತಿಪ್ಪೇರುದ್ರಸ್ವಾಮಿಯ

## ರುದ್ರಾಕ್ಷಿ ಮಾಲೆ ಮತ್ತು ಅಕ್ಷಯ ಬುತ್ತಿ

, ಭ್ರಮರ ಸಂಪಿಗೆ ಹೂವಿನ ಸುಗಂಧವನ್ನು ಮೂಸುತ್ತಾ ಮೂಸುತ್ತಾ ಅಸುನೀಗಿಸುತ್ತದೆ. ಪಾತರಗಿತ್ತಿ ದೀಪದ ರೂಪವನ್ನು ನೋಡುತ್ತಾ ನೋಡುತ್ತಾ ಅದರಲ್ಲಿಯೇ ಬಿದ್ದು ಸತ್ತುಹೋಗುತ್ತದೆ
ಆನೆಯು ತನ್ನ ಮೈಚರ್ಮಕ್ಕೆ ತಗಲುವ ತಂಪಾದ ಕೋಮಲವಾದ ಸ್ಪರ್ಶ ಸುಖವನ್ನು ಬಯಸುತ್ತಾ ಕೃತಕ ಬಲೆಯಲ್ಲಿ ಬೀಳುತ್ತದೆ. ಜಿಂಕೆ ಕಿವಿಗೆ ಇಂಪಾದ ಶಬ್ದ ಶ್ರವಣ ಸುಖಬಯಸಿ ಬೇಟೆಗಾರನ ಬಾಣಕ್ಕೆ ಬಲಿಯಾಗುತ್ತದೆ.
ಮೀನು ನಾಲಿಗೆ ರುಚಿಗೆ ಮರುಳಾಗಿ ಜಾಲಗಾರನ ಬಲೆಯಲ್ಲಿ ಸಿಕ್ಕಿಹಾಕಿಕೊಳ್ಳುತ್ತದೆ. ......................ಹೀಗೆ

ಪಶು, ಪಕ್ಷಿ. ಕ್ರಿಮಿ ಕೀಟಗಳೂ ಸಹಿತ ವಿಷಯವಾಸನೆಯ ಸೆಳೆತಕ್ಕೆ ಬೀಳುತ್ತವೆ. ಅವು ಒಂದೊಂದೇ ಇಂದ್ರಿಯದ ವ್ಯಾಮೋಹದಲ್ಲಿ ಸಿಲುಕಿ ಸಾಯುವುದನ್ನು ನಮ್ಮ ಶರಣರು ಮನನೀಯವಾಗಿ ವಿವರಿಸಿದ್ದಾರೆ. ಅಷ್ಟೇ ಅಲ್ಲ ಮಾನವ ಐದು ವಿಷಯಗಳ ವ್ಯಾಮೋಹದಲ್ಲಿ (ಗಂಧ, ರಸ, ರೂಪ, ಸ್ಪರ್ಶ, ಶಬ್ದ) ರೂಪಗೊಂಡು ಅನುಭವಿಸುತ್ತಿರುವ ಪರಿಯ ಬಗ್ಗೆ ಚಿಂತನೆಗೈಯಲು ಹಚ್ಚಿದ್ದಾರೆ. ಈ ಒಂದು ವಿಷಯ ವೃತ್ತದಿಂದ ಮಾನವನನ್ನು ಹೊರಗೆಳೆಯಲು ಹಲವಾರು ಮಾರ್ಗಗಳನ್ನು ಸೂಚಿಸಿದ್ದಾರೆ.

ಧ್ಯಾನ, ಮೌನ ಪ್ರಾರ್ಥನೆ ಯೋಗ ಇತ್ಯಾದಿಗಳ ಮೂಲಕ ಪಂಚವಿಷಯ ವ್ಯಾಮೋಹದ ಸುಳಿಯಲ್ಲಿ ದಿಕ್ಕು ದೆಸೆ ಇಲ್ಲದೆ ಸುತ್ತುತ್ತಿರುವ ಮಾನವನಲ್ಲಿಯ ಸ್ವಭಾವತಃ ಬಹಿರ್ಮುಖವಾದ ಪಂಚವಿಷಯಗಳನ್ನು ಅಂತರಮುಖಗೊಳಿಸಿ, ಅಂತರಾತ್ಮನಲ್ಲಿ ಬೆರೆತು ಧೀರನಾಗಬೇಕೆಂದು ಆಧ್ಯಾತ್ಮಿಕ ತತ್ವವನ್ನು ಬೀರಿ ಜೀವನಕ್ಕೆ ನಿತ್ಯ ಹಾಗೂ ಶಾಂತಿಯನ್ನು ನೆಲೆಗೊಳಿಸುವುದಕ್ಕಾಗಿಯೇ ಶ್ರೀ ಗುರುತಿಪ್ಪೇರುದ್ರಸ್ವಾಮಿ ರುದ್ರಾಕ್ಷಿ ಮಾಲೆ ಮತ್ತು ಅಕ್ಷಯ ಬುತ್ತಿ" ಎಂಬ ಧಾರ್ಮಿಕ ಆಚರಣೆಯ ಸಂಪ್ರದಾಯವನ್ನು 2000ನೇ ಇಸವಿಯಿಂದ ಶ್ರೀ ಕ್ಷೇತ್ರ ನಾಯಕನಹಟ್ಟಿಯಲ್ಲಿ ಭಕ್ತಾದಿಗಳ ಒಡಲಾಳದಿಂದ ಮೂಡಿ ಪ್ರತಿ ವರ್ಷ ಧನುರ್ಮಾಸದಲ್ಲಿ ಪ್ರಾರಂಭವಾಗಿ ಸಂಕ್ರಾಂತಿಯ ದಿನ ಅಕ್ಷಯಬುತ್ತಿಯನ್ನು ಭಕ್ತಾಶ್ರದ್ಧೆಯಿಂದ ಅರ್ಪಿಸುವುದರೊಂದಿಗೆ ಈ ಆಚರಣೆ ಮುಕ್ತಾಯವಾಗುತ್ತದೆ.

## ಅನುಬಂಧ ೯

# ಪಂಚಗಣಾಧೀಶ್ವರರ ಹೆಸರಿನಲ್ಲಿರುವ ಗದ್ದುಗೆ-ಮಠಗಳ ಪಟ್ಟಿ

| | | |
|---|---|---|
| ತಿಪ್ಪೇಸ್ವಾಮಿ : | ನಾಯಕನಟ್ಟಿ(ಹೊರಮಠ, ಒಳಮಠ) ಚಳ್ಳಕೆರೆ ತಾ.(ಚಿತ್ರದುರ್ಗ ಜಿಲ್ಲೆ) | |
| | ಎರಡುಕೆರೆ | : ಚಳ್ಳಕೆರೆ ತಾ. (ಚಿತ್ರದುರ್ಗ ಜಿಲ್ಲೆ) |
| | ಗೋಣೂರು | : ಚಳ್ಳಕೆರೆ ತಾ. (ಚಿತ್ರದುರ್ಗ ಜಿಲ್ಲೆ) |
| | ಕೊಂಡ್ಲಹಳ್ಳಿ | : ಮೊಳಕಾಲ್ಮೂರು ತಾ. (ಚಿತ್ರದುರ್ಗ ಜಿಲ್ಲೆ) |
| | ನಿಡುಗಲ್ಲು | : ಪಾವಗಡ ತಾ. (ತುಮಕೂರು ಜಿಲ್ಲೆ) |
| | ರಂಗಸಮುದ್ರ | : ಪಾವಗಡ ತಾ. (ತುಮಕೂರು ಜಿಲ್ಲೆ) |
| | ವದನಕಲ್ಲು | : ಪಾವಗಡ ತಾ. (ತುಮಕೂರು ಜಿಲ್ಲೆ) |
| | ಮಾರಮ್ಮನಹಳ್ಳಿ | : ಪಾವಗಡ ತಾ. (ತುಮಕೂರು ಜಿಲ್ಲೆ) |
| | ರಾಯದುರ್ಗ | : ಅನಂತಪುರ ಜಿಲ್ಲೆ (ಆಂಧ್ರ ಪ್ರದೇಶ) |
| ಗುರುಬಸವ : | ಕೊಟ್ಟೂರು (ಹಿರೇಮಠ, ಗಚ್ಚಿನಮಠ, ತೊಟ್ಟಿಲುಮಠ, ಮೂರ್ಕಲ್ ಮಠ, ಮರಿಕೊಟ್ಟೂರೇಶ್ವರ ಮಠ) : ಕೂಡ್ಲಿಗಿ ತಾ.(ಬಳ್ಳಾರಿ ಜಿಲ್ಲೆ) | |
| | ಸಿರುಗುಪ್ಪ | : ಸಿರುಗುಪ್ಪ ತಾ. (ಬಳ್ಳಾರಿ ಜಿಲ್ಲೆ) |
| | ಕೂಲಹಳ್ಳಿ | : ಹರಪನಳ್ಳಿ ತಾ. (ದಾವಣಗೆರೆ ಜಿಲ್ಲೆ) |
| | ಅರಸೀಕೆರೆ | : ಹರಪನಳ್ಳಿ ತಾ. (ದಾವಣಗೆರೆ ಜಿಲ್ಲೆ) |
| | ಬಂಡ್ರಿ | : ಹರಪನಳ್ಳಿ ತಾ. (ದಾವಣಗೆರೆ ಜಿಲ್ಲೆ) |
| | ರುಕ್ಮಾಂಪುರ | : ಸುರಪುರ ತಾ. (ರಾಯಚೂರು ಜಿಲ್ಲೆ) |
| | ಕೊಟೂರು ಬಸಾಪುರ | : (ಕೋಲಾರ ಜಿಲ್ಲೆ) |
| | ಬಾಗಲಕೋಟೆ | : (ಬಾಗಲಕೋಟೆ ಜಿಲ್ಲೆ) |
| ಮದ್ದಾನಸ್ವಾಮಿ : | ಕೂಲಹಳ್ಳಿ | : ಹರಪನಳ್ಳಿ ತಾ. (ದಾವಣಗೆರೆ ಜಿಲ್ಲೆ) |
| | ಬಳ್ಳಾರಿ | : (ಬಳ್ಳಾರಿ ಜಿಲ್ಲೆ) |
| | ಕುಷ್ಟಗಿ | : (ಕೊಪ್ಪಳ ಜಿಲ್ಲೆ) |
| | ರಾಯದುರ್ಗ | : (ಅನಂತಪುರ ಜಿಲ್ಲೆ, ಆಂಧ್ರ ಪ್ರದೇಶ) |
| | ಹುಡೇಗೋಳ್ | : ರಾಯದುರ್ಗ ತಾ. (ಅನಂತಪುರ ಜಿಲ್ಲೆ) |

| | | | |
|---|---|---|---|
| ಗೋಣಿಬಸವ | : | ಕೂಲಹಳ್ಳಿ | : ಹರಪನಳ್ಳಿ ತಾ. (ದಾವಣಗೆರೆ ಜಿಲ್ಲೆ) |
| | | ಹರಪನಳ್ಳಿ | : ಹರಪನಳ್ಳಿ ತಾ. (ದಾವಣಗೆರೆ ಜಿಲ್ಲೆ) |
| | | ಕಂದಗಲ್ಲು | : ಹರಪನಳ್ಳಿ ತಾ. (ದಾವಣಗೆರೆ ಜಿಲ್ಲೆ) |
| | | ಬಂಡ್ರಿ | : ಹರಪನಳ್ಳಿ ತಾ. (ದಾವಣಗೆರೆ ಜಿಲ್ಲೆ) |
| | | ಕುರುವಿನ ಕೋಟೆ | : ರಾಣೆಬೆನ್ನೂರು ತಾ. (ಹಾವೇರಿ ಜಿಲ್ಲೆ) |
| | | ಹಾವನೂರು | : ರಾಣೆಬೆನ್ನೂರು ತಾ. (ಹಾವೇರಿ ಜಿಲ್ಲೆ) |
| | | ಹಡಗಲಿ | : ಹಡಗಲಿ ತಾ. (ಬಳ್ಳಾರಿ ಜಿಲ್ಲೆ) |
| | | ಕೊಂಡೇನಹಳ್ಳಿ | : ಹಡಗಲಿ ತಾ. (ಬಳ್ಳಾರಿ ಜಿಲ್ಲೆ) |
| | | ಹೀಲದಳ್ಳಿ(ಕಂಬದಮ್ಮನಳ್ಳಿ) | : ಹಡಗಲಿ ತಾ. (ಬಳ್ಳಾರಿ ಜಿಲ್ಲೆ) |
| | | ಹೊಳಲು | : ಹರಪನಳ್ಳಿ ತಾ. (ದಾವಣೆಗೆರೆ ಜಿಲ್ಲೆ) |
| | | ಗುಮ್ಮಗೋಳ | : ಮುಂಡರಗಿ ತಾ. (ಗದಗ ಜಿಲ್ಲೆ) |
| | | ಅಡವಿ ಸೋಮಲಾಪುರ | : ಮುಂಡರಗಿ ತಾ. (ಗದಗ ಜಿಲ್ಲೆ) |
| | | ಅಳವಂಡಿ | : ಮುಂಡರಗಿ ತಾ. (ಗದಗ ಜಿಲ್ಲೆ) |
| | | ಎಳವತ್ತಿ | : ಹಡಗಲಿ ತಾಲ್ಲೂಕು (ಬಳ್ಳಾರಿ ಜಿಲ್ಲೆ) |
| | | ನಿಂಬಳಗಿ | : ಹರಪನಹಳ್ಳಿ ತಾಲ್ಲೂಕು (ದಾವಣಗೆರೆ ಜಿಲ್ಲೆ) |
| | | ಸಿಪ್ಪಿ(ಶಿರ್ಸಿ) | : ಹಡಗಲಿ ತಾಲ್ಲೂಕು (ಬಳ್ಳಾರಿ ಜಿಲ್ಲೆ) |
| | | ಆಲೇಕಲ್ಲು | : ಚಿತ್ರದುರ್ಗ ತಾ. (ಚಿತ್ರದುರ್ಗ ಜಿಲ್ಲೆ) |
| | | ಶಿಖಾರಿಪುರ | : ಶಿವಮೊಗ್ಗ ಜಿಲ್ಲೆ |
| | | ಐನಾಪುರ | : ಸೊಲ್ಲಾಪುರ ಜಿಲ್ಲೆ (ಮಹಾರಾಷ್ಟ್ರ) |
| ಕೋಲಶಾಂತಯ್ಯ | : | ಅರಸೀಕೆರೆ | : ಹರಪನಳ್ಳಿ ತಾ. (ದಾವಣಗೆರೆ ಜಿಲ್ಲೆ) |
| | | ಕೊಟ್ಟೂರು | : ಕೂಡ್ಲಿಗಿ ತಾ. (ದಾವಣಗೆರೆ ಜಿಲ್ಲೆ) |
| | | ಭಸ್ಮಾಂಗಿ | : ಮಧುಗಿರಿ ತಾ. (ತುಮಕೂರು) |
| ಕೆಂಪಯ್ಯ | : | ಹರಪನಳ್ಳಿ | : ಹರಪನಳ್ಳಿ ತಾ. (ದಾವಣಗೆರೆ ಜಿಲ್ಲೆ) |
| | | ಕೂಲಹಳ್ಳಿ | : ಹರಪನಳ್ಳಿ ತಾ. (ದಾವಣಗೆರೆ ಜಿಲ್ಲೆ) |
| | | ರಾಯದುರ್ಗ | : ಅನಂತಪುರ ಜಿಲ್ಲೆ (ಆಂಧ್ರ ಪ್ರದೇಶ) |

# ಅನುಬಂಧ ೧೦

## ವಕ್ತೃಗಳ ವಿವರ

(ವ್ಯಕ್ತಿಗಳ ಹೆಸರು, ವಯಸ್ಸು, ವೃತ್ತಿ, ಊರು ಈ ಕ್ರಮದಲ್ಲಿ ಬರೆಯಲಾಗಿದೆ)

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಊರು |
|---|---|---|---|---|
| ೧. | ತುಮನೆಪ್ಪ | ೬೫ | ಕಾಲಜ್ಞಾನ ಸಾರುವುದು | ಗೊಲ್ಲರಹಳ್ಳಿ, ಕೂಡ್ಲಿಗಿ ತಾ. |
| ೨ | ಹನುಮಕ್ಕ | ೫೫ | ಕಾಲಜ್ಞಾನ ಸಾರುವುದು | ಗೊಲ್ಲರಹಳ್ಳಿ, ಕೂಡ್ಲಿಗಿ ತಾ. |
| ೩ | ಬಸವರಾಜಪ್ಪ | ೩೬ | ಕಾಲಜ್ಞಾನ ಸಾರುವುದು | ಗೊಲ್ಲರಹಳ್ಳಿ, ಕೂಡ್ಲಿಗಿ ತಾ. |
| ೪ | ಜೋತೆಮ್ಮ | ೨೧ | ಕಾಲಜ್ಞಾನ ಸಾರುವುದು | ಗೊಲ್ಲರಹಳ್ಳಿ, ಕೂಡ್ಲಿಗಿ ತಾ. |
| ೫ | ಕೊಟ್ರಮ್ಮ | ೪೬ | ಗೃಹಿಣಿ | ಕೊಟ್ಟೂರು, ಕೂಡ್ಲಿಗಿ ತಾ. |
| ೬ | ದುರ್ಗಮ್ಮ | ೫೪ | ಗೃಹಿಣಿ | ಕೊಟ್ಟೂರು, ಕೂಡ್ಲಿಗಿ ತಾ. |
| ೭. | ಕೆಂಚವ್ವ | ೩೭ | ಗೃಹಿಣಿ | ಕೊಟ್ಟೂರು, ಕೂಡ್ಲಿಗಿ ತಾ. |
| ೮ | ಈರಮ್ಮ | ೬೮ | ಗೃಹಿಣಿ | ಕೊಟ್ಟೂರು, ಕೂಡ್ಲಿಗಿ ತಾ. |
| ೯ | ಶಾಂತಮ್ಮ | ೩೦ | ಗೃಹಿಣಿ | ಕೊಟ್ಟೂರು, ಕೂಡ್ಲಿಗಿ ತಾ. |
| ೧೦ | ಮಲ್ಲಿಕಾರ್ಜುನಸ್ವಾಮಿಗಳು | ೫೦ | ಅರ್ಚಕ | ಕೂಲಹಳ್ಳಿ, ಹರಪನಳ್ಳಿ ತಾ. |
| ೧೧ | ಚಿನ್ಮಯಾನಂದಸ್ವಾಮಿ | ೨೩ | ಅರ್ಚಕ | ಕೂಲಹಳ್ಳಿ, ಹರಪನಳ್ಳಿ ತಾ. |
| ೧೨ | ಈಡಿಗರ ಚಂದ್ರಪ್ಪ | ೫೦ | ಕೃಷಿಕ | ಕೂಲಹಳ್ಳಿ, ಹರಪನಳ್ಳಿ ತಾ. |
| ೧೩ | ದಿವಾಕರ್ | ೨೮ | ಅರ್ಚಕ | ಗುಮ್ಮಗೋಳ, ಮುಂಡರಗಿ ತಾ. |
| ೧೪ | ಪ್ರಭಾಕರ | ೨೬ | ಅರ್ಚಕ | ಗುಮ್ಮಗೋಳ, ಮುಂಡರಗಿ ತಾ. |
| ೧೫ | ಮಹೇಶ್ವರಯ್ಯ | ೬೩ | ಅರ್ಚಕ | ಗುಮ್ಮಗೋಳ, ಮುಂಡರಗಿ ತಾ. |
| ೧೬ | ಕಾಶಿನಾಥಸ್ವಾಮಿ | ೫೫ | ಅರ್ಚಕ | ಅರಸೀಕೆರೆ, ಹರಪನಳ್ಳಿ ತಾ. |
| ೧೭ | ಜಿ.ಶಾಂತವೀರಪ್ಪ | ೫೪ | ಧರ್ಮಕರ್ತರು | ಹುಡೇಗೋಳ, ರಾಯದುರ್ಗ ತಾ. |
| ೧೮ | ಚನ್ನವೀರಸ್ವಾಮಿ | ೧೯ | ಅರ್ಚಕ | ರಾಯದುರ್ಗ, ರಾಯದುರ್ಗ ತಾ. |
| ೧೯ | ಮಂಜುನಾಥಪ್ಪ | ೬೨ | ಶಿಕ್ಷಕ | ಹರಪನಹಳ್ಳಿ |
| ೨೦ | ಸಿದ್ಧಲಿಂಗಸ್ವಾಮಿಗಳು | ೫೦ | ಉಪನ್ಯಾಸಕರು | ಕೊಟ್ಟೂರು, ಕೂಡ್ಲಿಗಿ ತಾ. |
| ೨೧ | ಜಿ.ವಿ.ಚಂದ್ರಶೇಖರ | ೫೩ | ಶಿಕ್ಷಕ | ಚಿತ್ರದುರ್ಗ |
| ೨೨ | ಕೆ.ಜಾತಪ್ಪ | ೨೯ | ಕೃಷಿಕ | ಕೊಟ್ಟೂರು, ಕೂಡ್ಲಿಗಿ ತಾ. |
| ೨೩ | ರಾಮಪ್ಪ | ೩೪ | ಕೃಷಿಕ | ಕೊಟ್ಟೂರು, ಕೂಡ್ಲಿಗಿ ತಾ. |
| ೨೪ | ಸಿದ್ದಣ್ಣ | ೫೧ | ಪಶುಪಾಲನೆ | ಬಾಗಳಿ, ಹರಪನಳ್ಳಿ ತಾ. |

## ಅನುಬಂಧ ೧೧

# ಗ್ರಂಥಋಣ

ಅನಂತಕೃಷ್ಣ ಹೆಬ್ಬಾರ್, ರಾಮಚಂದ್ರ ಉಡುಪ(ಅನು), ಡಾಂಗೆ ಎಸ್.ಎ(ಮೂಲ), ೧೯೮೩, **ಭಾರತ ಸಂಘ ಜೀವನದಿಂದ ಗುಲಾಮಗಿರಿಯೆಡೆಗೆ,** ಅಭಿವ್ಯಕ್ತಿ ಪ್ರಕಾಶನ, ಮಂಗಳೂರು

ಅಂಬಳಿಕೆ ಹಿರಿಯಣ್ಣ(ಸಂ), ೧೯೭೮, **ಕಾಡುಗೊಲ್ಲರ ಜನಪದ ಗೀತೆಗಳು,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು

ಅಬ್ದುಲ್ ಹಮೀದ್ ೧೯೯೮, **ಸೂಫಿಪಥ ಮತ್ತು ಶರಣ ಪಥಗಳ ತೌಲನಿಕ ಅಧ್ಯಯನ,** ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು

ಅಮರೇಶ್ ನುಗುಡೋಣಿ, ೨೦೦೩, **ಹೈದರಾಬಾದ್ ಕರ್ನಾಟಕದ ಹಾಡು-ಪಾಡು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಆನಂದನಾಥ್ ಜೋಗಿ, ೨೦೦೩, **ನಾಥಪಂಥ ಕ್ಷೇತ್ರ ಮಹಿಮೆ,** ಮಂಗಳೂರು.

ಈಡಿಗರ ಚಂದ್ರಪ್ಪ, ೧೯೯೦, **ಶ್ರೀ ಗೋಣಿಬಸವೇಶ್ವರ ಚರಿತ್ರೆ,** ಕೂಲಹಳ್ಳಿ.

ಈಶ್ವರಪ್ಪ ಎಂ.ಜಿ., ೧೯೦೫, **ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ,** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು

ಒಡೆಯರ್ ಡಿ.ಹೆಗ್ಗಡೆ, ೨೦೦೩, **ಹಕ್ಕ-ಬುಕ್ಕ,** ತನು-ಮನ ಪ್ರಕಾಶನ, ಮೈಸೂರು.

ಕಪಟರಾಳ ಕೃಷ್ಣರಾವ್, ೧೯೫೫, **ಲಾಕುಳಶೈವರ ಇತಿಹಾಸ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಕಪಟರಾಳ್ ಕೃಷ್ಣರಾವ್, ೧೯೭೦, **ಕರ್ನಾಟಕ ಸಂಸ್ಕೃತಿ ಸಂಶೋಧನೆ,** ಉಷಾ ಸಾಹಿತ್ಯ ಮಾಲೆ, ಮೈಸೂರು.

ಕಪಟರಾಳ ಕೃಷ್ಣರಾವ್, ೧೯೭೭, **ಸುರಪುರ ಸಂಸ್ಥಾನ ಇತಿಹಾಸ,** ಮಂಜುನಾಥ ಪ್ರಕಾಶನ, ಬೆಂಗಳೂರು

ಕಲ್ಬುರ್ಗಿ ಎಂ.ಎಂ., ೧೯೭೮, **ಶಾಸನಗಳಲ್ಲಿ ಶಿವಶರಣರು,** ವೀರಶೈವ ಅಧ್ಯಯನ ಸಂಸ್ಥೆ, ಗದಗ

ಕಲ್ಬುರ್ಗಿ ಎಂ.ಎಂ., ೧೯೯೧, **ಐತಿಹಾಸಿಕ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

ಕಲ್ಬುರ್ಗಿ ಎಂ.ಎಂ., ಡಾ.ಸಿ.ಪಿ.ಕೃಷ್ಣಕುಮಾರ್ (ಸಂ), ೧೯೯೦, **ಷಟ್ಸ್ಥಲ ಶಿವಾಯಣ**, ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯ ಮಠ, ಗದಗ.

ಕಲ್ಬುರ್ಗಿ ಎಂ.ಎಂ., ೧೯೯೫, **ಮಾರ್ಗ ೧ ಮತ್ತು ೨**(ದ್ವಿತೀಯ ಮುದ್ರಣ), ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು

ಕಲ್ಬುರ್ಗಿ ಎಂ.ಎಂ., ೧೯೯೮, **ಮಾರ್ಗ ೩** (ದ್ವಿತೀಯ ಮುದ್ರಣ), ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು

ಕಲ್ಬುರ್ಗಿ ಎಂ.ಎಂ(ಸಂ)., ೧೯೯೪, **ಕರ್ನಾಟಕದ ಕೈಫಿಯತ್ತುಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕಲ್ಬುರ್ಗಿ ಎಂ.ಎಂ.(ಸಂ), ೨೦೦೧, **ಬಸವಣ್ಣನವರ ವಚನಗಳು** (ಪರಿಷ್ಕೃತ ಆವೃತ್ತಿ), ಸಂಪುಟ ೧, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

ಕರಿಯಪ್ಪ ಎಂ., ೨೦೦೩, **ಹಾಲತೊರೆ**, ನಗರ ಕುರುಬ ಸಂಘ, ದಾವಣಗೆರೆ

ಕುಂ.ಬಾ.ಸ, ೧೯೯೮, **ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ**, ಮಾಲತೇಶ್ ಪ್ರಕಾಶನ, ಕುಂಚೂರು.

ಕುಂ.ಬಾ.ಸ., ೧೯೯೬, **ಹರಪನಹಳ್ಳಿ ಪಾಳೇಗಾರರು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಕೃಷ್ಣಮೂರ್ತಿ ಮ.ಸು., ೧೯೮೨, **ಸಿದ್ಧಸಾಹಿತ್ಯ**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಕೃಷ್ಣಮೂರ್ತಿ ಹನೂರು, ೧೯೯೩, **ಮ್ಯಾಸಬೇಡರ ಸಂಸ್ಕೃತಿ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಕೇಶವನ್ ಪ್ರಸಾದ್(ಸಂ), ೧೯೯೭, **ಮಲೆಮಾದೇಶ್ವರ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕೊಟ್ರಪ್ಪಯ್ಯ ಶಾಸ್ತ್ರಿಗಳು ಎಂ.ವಿ.ಎಸ್., ೧೯೯೫, **ನಾಯಕನಟ್ಟಿ ಶ್ರೀ ಗುರು ತಿಪ್ಪೇರುದ್ರಸ್ವಾಮಿ ಚರಿತ್ರೆ(೧೦೮ ನಾಮಾವಳಿ)**, ಕೊಟ್ಟೂರು.

ಕೊಟ್ರಯ್ಯ ಸಿ.ಟಿ.ಎಂ., ೧೯೯೭, **ಹಂಪೆ : ವೀರಶೈವ ಮಠಗಳು ಮತ್ತು ಸಾಹಿತ್ಯ ಪರಂಪರೆ**, ಶರಣರ ಸುವಾಸಿನ ಬಳಗ, ಹೊಸಪೇಟೆ

ಗಿರಿಜಾ ಟಿ., ೨೦೦೧, **ದಾವಣಗೆರೆ : ಇದು ನಮ್ಮ ಜಿಲ್ಲೆ**, ನಿಹಾರಿಕಾ ಪ್ರಕಾಶನ, ದಾವಣೆಗೆರೆ

ಗುರುಲಿಂಗ ಕಾಪಸೆ(ಸಂ), ೧೯೯, **ಮಧುರ ಚೆನ್ನರ ಲೇಖನಗಳು**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಗುರುಪಾದ ಮರಿಗುದ್ದಿ, ೧೯೯೩, **ಬಸವೋತ್ತರ ಯುಗದ ವಚನ ಸಾಹಿತ್ಯ**, ಶ್ರೀ ನಿಜಲಿಂಗೇಶ್ವರ ಗ್ರಂಥಮಾಲೆ, ನಿಡಸೋಸಿ

ಚಂದ್ರಶೇಖರ್ ಟಿ.ಆರ್.(ಅನು), ಜಾನ್ ಪೀಟರ್ ಶೌಟನ್ (ಮೂಲ), ೨೦೦೦, **ಅನುಭಾವಿಗಳ ಕ್ರಾಂತಿ**, ವೀರಶೈವ ಅಧ್ಯಾಯನ ಸಂಸ್ಥೆ, ತೋಂಟದಾರ್ಯ ಮಠ, ಗದಗ.

ಚಂದ್ರಶೇಖರ್ ವಿ. ಡಾವಣಗೇರಿ, ೨೦೦೧, **ಕಾಯಕಯೋಗಿ ಶ್ರೀ ಗುರು ತಿಪ್ಪೇರುದ್ರಸ್ವಾಮಿ**, ಶ್ರೀ ಗುರು ತಿಪ್ಪೇರುದ್ರ ದೇವಸ್ಥಾನ ಸಮಿತಿ, ನಾಯಕನಟ್ಟಿ.

ಚಂದ್ರಶೇಖರ ನಾರಣಾಪುರ(ಸಂ), ೨೦೦೨, **ಕರ್ನಾಟಕದ ವೀರಶೈವ ಮಠಗಳು**, ಗೆಳೆಯ ಪ್ರಕಾಶನ, ಚಿಕ್ಕಮಗಳೂರು

ಚಿದಾನಂದಮೂರ್ತಿ ಎಂ. ೧೯೭೯, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**(ದ್ವಿತೀಯ ಮುದ್ರಣ), ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಚಿದಾನಂದಮೂರ್ತಿ.ಎಂ, ೧೯೬೭, **ಸಂಶೋಧನೆ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

ಚಿದಾನಂದಮೂರ್ತಿ. ಎಂ, ೧೯೮೫, **ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಚಿದಾನಂದಮೂರ್ತಿ ಎಂ., ೧೯೯೩, **ಹೊಸತು ಹೊಸತು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಿದಾನಂದಮೂರ್ತಿ ಎಂ., ೨೦೦೦, **ವೀರಶೈವ ಧರ್ಮ : ಭಾರತೀಯ ಸಂಸ್ಕೃತಿ**, ಮಿಂಚು ಪ್ರಕಾಶನ, ವಿಜಯನಗರ, ಬೆಂಗಳೂರು

ಜಯಸುಮನ್, ೧೯೮೭, **ರಾಯದುರ್ಗ ಚರಿತ್ರ-ಸಂಸ್ಕೃತಿ** (ತೆಲುಗು), ಶ್ರೀಮತಿ ಇರುವೆ ಸುಮಾಭಾಯಿ, ರಾಯದುರ್ಗ.

ಜೀವಣ್ಣ ಮಸಳಿ(ಸಂ), ೧೯೮೭, **ಶ್ರೀ ಮೌನೇಶ್ವರ ವಚನ ಸಂಗ್ರಹ**, ವಿಶ್ವದರ್ಶನ ಪ್ರಕಾಶನ, ಬಾಗಲಕೋಟೆ.

ಜೋಶಿ ಶಂ.ಬಾ., ೧೯೬೭, **ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ ಭಾಗ ೧ ಮತ್ತು ೨**, ಸಮಾಜ ಬುಕ್‌ಡಿಪೋ, ಧಾರವಾಡ

ಜೋಶಿ ಶಂ.ಬಾ, ೧೯೯೭, **ಹಾಲುಮತದರ್ಶನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಧ್ರುವನಾರಾಯಣ ಎಂ.(ಅನು), ಕೊಟ್ರಯ್ಯ ಸಿ.ಟಿ.ಎಂ.(ಮೂಲ),೨೦೦೧, **ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದೇಶಪಾಂಡೆ ಎಂ.ಎಸ್.(ಅನು), ರಾನಡೆ ಆರ್.ಡಿ.(ಮೂಲ), **ಕನ್ನಡ ಸಂತರ ಪರಮಾರ್ಥ ಪಥ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ದೇವರಕೊಂಡಾರೆಡ್ಡಿ(ಸಂ), ೧೯೯೯, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧, ಬಳ್ಳಾರಿ ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨, ಕೊಪ್ಪಳ ಜಿಲ್ಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ನರಸಿಂಹಾಚಾರ್ಯ ಆರ್ .(ಸಂ), ೧೯೭೪, **ಕರ್ನಾಟಕ ಕವಿಚರಿತೆ, ಸಂಪುಟ-೧**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ನಾಗೇಗೌಡ ಎಚ್ .ಎಲ್ .(ಸಂ), ೧೯೬೪, **ಪ್ರವಾಸಿಕಂಡ ಇಂಡಿಯಾ(ಸಂ.೧)**, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ನಾಗಯ್ಯ ಜೆ.ಎಂ., ೨೦೦೨, **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ**, ಲೋಹಿಯಾ ಪ್ರಕಾಶನ, ಬಳ್ಳಾರಿ

ನಾಗರಾಜ ಡಿ.ಆರ್., ೧೯೯೯, **ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ**, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ

ಪಡಶೆಟ್ಟಿ ಎಂ.ಎಂ., ೧೯೯೨, **ತಿಂಥಿಣಿ ಮೋನಪ್ಪಯ್ಯ : ಒಂದು ಅಧ್ಯಯನ**, ವೀರಶೈವ ಅಧ್ಯಯನ ಸಂಸ್ಥೆ, ಗದಗ

ಪರಮಶಿವಯ್ಯ ಜೀ.ಶಂ., ೧೯೭೯, **ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಪ್ರಭಾಕರ ಎ.ಎಸ್., ೨೦೦೦, **ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಪ್ರಭುಸ್ವಾಮಿ ಮಠ, ಸಿ.ಪಿ., ೧೯೯೬, **ಬಸವಣ್ಣನವರ ವಚನಗಳ ಸಾಹಿತ್ಯಿಕ ಅಧ್ಯಯನ**, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ

ಪಾಟೀಲ್ ಎ.ಎಸ್., ೨೦೦೦, **ಬಸವ ಚಳುವಳಿಯ ಭೌತಿಕವಾದಿ ಅಧ್ಯಯನ**, ದಿ.ಬಂಥನಾಳ ಶ್ರೀ ವೃಷಭಲಿಂಗೇಶ್ವರ ವಿದ್ಯಾವರ್ಧಕ ಟ್ರಸ್ಟ್, ವಿಜಾಪುರ.

ಪುರಾಣಂ ಸುಬ್ರಹ್ಮಣ್ಯ ಶರ್ಮಾ(ಅನು), ದೇವಿಪ್ರಸಾದ ಚಟ್ಟೋಪಾಧ್ಯಾಯ, **ಲೋಕಾಯತ ಆಧಾರಿತ ಗಣಪತಿ**, ೨೦೦೦, ನವಕರ್ನಾಟಕ ಪ್ರಕಾಶನ, ಬೆಂಗಳೂರು

ಪೂಜಾರ್ ವಿ.ಜಿ., ೧೯೯೧, **ವೀರಶೈವ ಸಾಹಿತ್ಯದಲ್ಲಿ ಪವಾಡ ಕತೆಗಳು**, ಪುಸ್ತಕ ಅಕಾಡೆಮಿ, ಗುಲಬರ್ಗಾ

ಬಂಜಗೆರೆ ಜಯಪ್ರಕಾಶ್, ೨೦೦೦, **ಕನ್ನಡ ರಾಷ್ಟ್ರೀಯತೆ**, ಕ್ರಾಂತಿಕಾರಿ ಪ್ರಕಾಶನ, ಬೆಂಗಳೂರು.

ಬಸಪ್ಪ ಎಸ್.(ಸಂ), ೧೯೬೦, **ಶಿವತತ್ವ ಚಿಂತಾಮಣಿ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಬಸವರಾಜು ಎಲ್.(ಸಂ), ೧೯೬೩, **ಶಿವದಾಸ ಗೀತಾಂಜಲಿ**, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು.

ಬಸವರಾಜ ಕಲ್ಗುಡಿ, ೨೦೦೧(ಮೂರನೇ ಮುದ್ರಣ), **ಅನುಭವ : ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

ಬಸವರಾಜಪ್ಪ ಎಚ್.ಇ., ೨೦೦೦, **ಚಿತ್ರದುರ್ಗ ಪ್ರದೇಶದ ಭೂ ಹಿಡುವಳಿಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಪಿಎಚ್.ಡಿ.ಪ್ರಬಂಧ)**, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಬಸವಲಿಂಗ ಸೊಪ್ಪಿಮಠ, ೧೯೯೫, **ಕೊಡೆಕಲ್ ಬಸವಣ್ಣ ಒಂದು ಅಧ್ಯಯನ**, ಕೊಡೇಕಲ್ ಬಸವಣ್ಣ ಅಧ್ಯಯನ ಸಂಸ್ಥೆ, ಕೊಡೇಕಲ್.

ಬಸವಲಿಂಗ ಸೊಪ್ಪಿಮಠ, ೧೯೯೮, **ಕೊಡೇಕಲ್ ವಚನವಾಕ್ಯ, ಸಂಪುಟ-೧**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಭೂಸನೂರ ಮಠ ಸಂ.ಶಿ.(ಸಂ), ೧೯೫೦, **ಸಿದ್ದನಂಜೇಶ ಕವಿಯ ಗುರುರಾಜ ಚಾರಿತ್ರ**, ಮುರುಘಾಮಠ, ಧಾರವಾಡ.

ಭೂಸನೂರ ಮಠ ಸಂ.ಶಿ.(ಸಂ), ೧೯೮೮, **ವಿಜಯ ಕಲ್ಯಾಣ**, ಕೊಟ್ಟೂರುಸ್ವಾಮಿ ಮಠ, ಹಂಪಿ

ಬೋರಲಿಂಗಯ್ಯ ಹಿ.ಚಿ.(ಸಂ), ೧೯೯೭, **ಮಂಟೇಸ್ವಾಮಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮಂಜುನಾಥ ಜಿ.ಜಿ.(ಸಂ), ೧೯೮೫, **ಗುರುಲಿಂಗ ಜಂಗಮ ಚಾರಿತ್ರ(ಮರುಳಸಿದ್ದೇಶ)**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

ಮಂಜುನಾಥ ಜಿ.ಜಿ., ೧೯೯೫, **ಸ್ವರವಚನ ಸಂಪುಟ-೩**, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು.

ಮಂಜುನಾಥಶಾಸ್ತ್ರಿ ಎ.ಎಂ., ೧೯೮೫, **ಕೊಟ್ಟೂರೇಶ್ವರರ ಮುತ್ತಿಗೆ ಪದ್ಯಾವಳಿಗಳು**, ಕೊಟ್ಟೂರು.

ಮಲ್ಲೇಪುರಂ ಜಿ.ವೆಂಕಟೇಶ ಸಂ, ೧೯೯೯, **ಶಂಬಾ ಕೃತಿ ಸಂಪುಟ ೧ ರಿಂದ ೬ರವರೆಗೆ**(ಪರಿಷ್ಕತ ಪ್ರಕಟಣೆ) ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜ ಪೇಟೆ, ಬೆಂಗಳೂರು

ಮಹದೇವ ಶಂಕನಪುರ, ೨೦೦೧, **ಮಾರಿಹಬ್ಬಗಳು,** ಡಿ.ಎಂ.ಎಸ್.ಆರ್.ಸಂಸ್ಥೆ, ಕೊಳ್ಳೇಗಾಲ

ಮಹದೇವ ಶಂಕನಪುರ, ೨೦೦೨, **ಮಂಟೇಸ್ವಾಮಿ ಮೂಮೆಂಟ್ : ಚಿಕ್ಕಲೂರು ಜಾತ್ರೆ,** ಡಿ.ಎಂ.ಎಸ್. ಆರ್.ಸಂಸ್ಥೆ, ಕೊಳ್ಳೆಗಾಲ.

ಮಹಮದ್ ಇಬ್ರಾಹಿಂ ಜುಬೇರಿ, ೧೯೯೯, **ಬುಸಾತಿನೆ ಸಾಲಾತಿನ,** ಕೃಷ್ಣಕೋಲ್ಹಾರ ಕುಲ್ಕಣಿ(ಅನು) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮಹಾಬಲೇಶ್ ಕಾಟ್ರಹಳ್ಳಿ, ೧೯೯೩, **ಬಾಗಿಳಿಯೆ ಬಾಗಳಿಗೆ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಮಹೇಶ ತಿಪ್ಪಶೆಟ್ಟಿ(ಸಂ), ೨೦೦೩, **ಬಸವತತ್ವ ಸಾಮಾಜಿಕ ಬದಲಾವಣೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮೀರಸಾಬಿಹಳ್ಳಿ ಶಿವಣ್ಣ, ೧೯೯೯, **ದುರುಗ ಜಾನಪದ,** ಶಕ್ತಿ ಮುದ್ರಣ, ಬೆಂಗಳೂರು

ಮೀರಸಾಬಿಹಳ್ಳಿ ಶಿವಣ್ಣ, ೧೯೯೯, ಗೊಲ್ಲಕಡಗ, ಸಿ.ವಿ.ಜಿ.ಪ್ರಕಾಶನ, ಬೆಂಗಳೂರು

ರಮೇಶ್ ಕೆ., ೨೦೦೨, **ಉಜ್ಜಿನಿ ಗ್ರಾಮಾಧ್ಯಯನ(ಅಪ್ರಕಟಿತ ಎಂ.ಫಿಲ್.ಪ್ರಬಂಧ),** ಕನ್ನಡ ವಿಶ್ವವಿದ್ಯಾಲಯ, ಹಂಪಿ

ರವಿಕುಮಾರ್ ಎನ್.ಎಂ., ವೃಷಬೇಂದ್ರಚಾರ್ ಎಂ.(ಸಂ), **ಮುನ್ನಡೆಯ ಕೂಡ್ಲಿಗಿ,** ಹೇಮಂತ ಪ್ರಕಾಶನ, ಎಂ.ಬಿ.ಐಯ್ಯನಹಳ್ಳಿ, ಕೂಡ್ಲಿಗಿ ತಾಲ್ಲೂಕು

ರಹಮತ್ ತರೀಕೆರೆ, **ಮರದೊಳಗಣ ಕಿಚ್ಚು** (ದ್ವಿತೀಯ ಮುದ್ರಣ), ಬೆಳ್ಳಿಚುಕ್ಕಿ ಪ್ರಕಾಶನ.

ರಹಮತ್ ತರೀಕೆರೆ(ಸಂ), ೨೦೦೦, **ಧರ್ಮ : ವಿಶ್ವಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಹಮತ್ ತರೀಕೆರೆ, ೨೦೦೧, **ಕರ್ನಾಟಕದ ಸೂಫಿಗಳು** (ದ್ವಿತೀಯ ಮುದ್ರಣ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಾಜರಾಮ್ ಹೆಗಡೆ, ೨೦೦೧, **ಲೌಕಿಕ-ಅಲೌಕಿಕ,** ಆನಂದಕಂದ ಪ್ರಕಾಶನ, ಮಲ್ಲಾಡಿಹಳ್ಳಿ.

ರುದ್ರಪ್ಪ ಕೆ., ೧೯೯೫, **ಮ್ಯಾಸ ನಾಯಕರು(ಒಂದು ಜನಾಂಗೀಯ ಅಧ್ಯಯನ),** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ರೇವಣ್ಣ ಕೆ.ಎಂ., ೧೯೯೫, ಶ್ರೀ ಗುರು ತಿಪ್ಪೇರುದ್ರಸ್ವಾಮಿ **ಅಷ್ಟೋತ್ತರ ಶತನಾಮಾವಳಿ,** ನಾಯಕನಟ್ಟಿ.

ಲಕ್ಷ್ಮಣ್ ತೆಲಗಾವಿ (ಸಂ), ೧೯೮೭, **ಹರತಿಸಿರಿ,** ವಾಲ್ಮಿಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ಚಿತ್ರದುರ್ಗ

ಲಿಂಗಾಯತ ವಿದ್ಯಾಸಂಸ್ಥೆ(ಸಂ), ೧೯೩೪, **ವಿರೂಪಾಕ್ಷ ಪಂಡಿತ ಚೆನ್ನಬಸವ ಪುರಾಣ**, ಬೆಳಗಾವಿ

ವಾಸುದೇವನ್ ಸಿ.ಎಸ್ ., ೨೦೦೧, **ಹಂಪಿ ಪರಿಸರದ ಕೆರೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾಶಂಕರ್ ಎಸ್ ., ೨೦೦೧, **ಸಂಕೀರ್ಣ-ವಚನ ಸಂಪುಟ-II**(ದ್ವಿತೀಯ ಮುದ್ರಣ), ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೦, **ಮಧ್ಯಕಾಲೀನ ಕನ್ನಡ ಕಾವ್ಯಗಳಲ್ಲಿ ನಿರೂಪಿತವಾಗಿರುವ ಬೇಟೆ ಮತ್ತು ಬೇಡರ ಸಂದರ್ಭಗಳು ಒಂದು ಚಾರಿತ್ರಿಕ ಅಧ್ಯಯನ** (ಅಪ್ರಕಟಿತ ಪಿಎಚ್.ಡಿ.ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿರೂಪಾಕ್ಷಿ ಪೂಜಾರಹಳ್ಳಿ ೨೦೦೨, **ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ವೆಂಕಟೇಶ್ ಇಂದ್ವಾಡಿ, ೧೯೯೯, **ಮಂಟೇಸ್ವಾಮಿ ಪರಂಪರೆ**, ಪ್ರಸರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವೆಂಕಟೇಶ್ ಇಂದ್ವಾಡಿ(ಸಂ), ೧೯೯೬, ಧರೆಗೆ ದೊಡ್ಡವರ ಕಥೆ ವಿಶ್ವಾಲಯ ಪ್ರಕಾಶನ, ಬೆಂಗಳೂರು

ಶಂಕರಯ್ಯ ಸ್ವಾಮಿ, ೧೯೯೫, **ಪವಾಡ ಪುರುಷ ಶ್ರೀ ಗುರು ತಿಪ್ಪೇರುದ್ರಸ್ವಾಮಿ ಚರಿತೆ**, ಲಾವಣಿ ಮತ್ತು ಭಕ್ತಿಗೀತೆಗಳು, ಚಳ್ಳಕೆರೆ.

ಶಂಕರನಾರಾಯಣ್‌ರಾವ್ ಎನ್.ಪಿ.(ಅನು), ಶರ್ಮಾ ಆರ್.ಎಸ್.(ಮೂಲ),೧೯೯೭, ನವಕರ್ನಾಟಕ, ಪಬ್ಲಿಕೇಷನ್, ಬೆಂಗಳೂರು.

ಶರಣಪ್ಪ ಎಂ., ೧೯೯೬, **ಕೊಟ್ಟೂರೇಶ್ವರ : ಒಂದು ಸಾಂಸ್ಕೃತಿಕ ಅಧ್ಯಯನ**(ಎಂ.ಫಿಲ್ ಅಪ್ರಕಟಿತ ಪ್ರಬಂಧ), ಧಾರವಾಡ ವಿಶ್ವವಿದ್ಯಾಲಯ.

ಶಶಿಕಲಾ ಮರಿಬಾಶೆಟ್ಟಿ, ೧೯೯೨, **ದ್ಯಾಂಪುರ ಚೆನ್ನಕವಿಗಳು ಜೀವನ ಹಾಗೂ ಕೃತಿಗಳ ವಿವೇಚನೆ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಶಾಂತರಸ, ೧೯೭೫, **ಬಳ್ಳಾರಿ ಜಿಲ್ಲೆಯ ಶಿವಶರಣರು**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಶಿರೂರು.ಬಿ.ವಿ, ೧೯೯೨, **ಸಂಶೋಧನ ಸ್ವರೂಪ**, ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ

ಶಿವಣ್ಣ ಮೀರಸಾಬಿಹಳ್ಳಿ, ೧೯೯೯, **ಗೊಲ್ಲಕಡಗ**, ಸಿ.ವಿ.ಜಿ.ಪಬ್ಲಿಕೇಷನ್ಸ್, ಬೆಂಗಳೂರು

ಶಿವಪ್ರಕಾಶ್ ಎಚ್.ಎಸ್., ೧೯೯೬, **ಮೊದಲಕಟ್ಟಿನ ಗದ್ಯ**, ಅಭಿನವ ಪ್ರಕಾಶನ, ಬೆಂಗಳೂರು

ಶಿವಾನಂದ ವಿರಕ್ತಮಠ, ೧೯೭೮, **ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಶಿವಾನಂದ ಎಸ್.ವಿರಕ್ತಮಠ, ೨೦೦೦, **ಕೊಡೇಕಲ್ ವಚನಕಾವ್ಯ ಸಂಪುಟ ೩**, ವಚನ-ಸ್ವರವಚನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಶಿವಾನಂದ ಎಸ್.ವಿರಕ್ತಮಠ, ೨೦೦೧, **ರಾಚಪ್ಪಯ್ಯ ಒಂದು ಅಧ್ಯಯನ**(ಅಪ್ರಕಟಿತ ಪಿ.ಎಚ್ .ಡಿ. ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶ್ರೀನಿವಾಸ.ಎಂ.ವಿ., ಲಕ್ಷ್ಮಣ್ ತೆಲಗಾವಿ(ಸಂ), ೧೯೭೬, **ಚಂದ್ರವಳ್ಳಿ**, ಜಿಲ್ಲಾ ಇತಿಹಾಸ ಸಂಶೋಧನಾ ಮಂಡಳಿ, ಚಿತ್ರದುರ್ಗ.

ಶ್ರೀಮತಿ ಎಚ್.ಎಸ್.(ಅನು) ೧೯೯೮, **ಭಾರತದ ಪ್ರಾಚೀನ ಚರಿತ್ರೆ : ಡಿ.ಡಿ.ಕೋಸಾಂಬಿಯವರ ಚಿಂತನೆಗಳು**, ಬೆಳ್ಳಿಚುಕ್ಕಿ ಪ್ರಕಾಶನ, ಬೆಂಗಳೂರು.

ಷಡಕ್ಷರಿ ಶಿವಾಚಾರ್ಯಸ್ವಾಮಿ, ೧೯೭೭, **ಕೊಟ್ಟುರು ಶ್ರೀ ಗುರುಬಸವರಾಜೇಂದ್ರನ ನೀತಿ ಗದ್ಯ**, ಮಸಿಗಿ

ಷಡಕ್ಷರಯ್ಯ ಆರ್.ಎಂ., ೨೦೦೩, **ಉಜ್ಜಯಿನಿ ಸದ್ಧರ್ಮ ಪೀಠದ ಸಾಂಸ್ಕೃತಿಕ ಅಧ್ಯಯನ**, ಜ್ಞಾನಗುರು ವಿದ್ಯಾಪೀಠ, ಉಜ್ಜಿನಿ

ಷಣ್ಮುಖಯ್ಯ ಅಕ್ಕೂರಮಠ, ೨೦೦೦, **ಭಾರತೀಯ ಭಕ್ತಿ ಚಳುವಳಿಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಷೇಕ ಅಲಿ ಬಿ.(ಪ್ರ.ಸಂ), ೧೯೯೭, **ಕರ್ನಾಟಕ ಚರಿತ್ರೆ ಸಂಪುಟ ೩**, ಶಿವಣ್ಣ ಕೆ.ಎಸ್.(ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಷೇಕ ಅಲಿ ಬಿ.(ಪ್ರ.ಸಂ), ೧೯೯೭, **ಕರ್ನಾಟಕ ಚರಿತ್ರೆ ಸಂಪುಟ ೩,೪, ೫**, ಶಿವಣ್ಣ ಕೆ.ಎಸ್.(ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸತೀಶ್ ಪಿ., ೧೯೯೭, ಮಲೆಮಾದೇಶ್ವರ ಕಾವ್ಯ ಒಂದು ಅಧ್ಯಯನ (ಅಪ್ರಕಟಿತ ಪಿಎಚ್.ಡಿ.ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸಣ್ಣಯ್ಯ ಬಿ.ಎಸ್.(ಸಂ), ೧೯೭೦, **ಕೋಲಶಾಂತಯ್ಯ ಮತ್ತು ಮಧುವಯ್ಯಗಳ ವಚನಗಳು**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ

ಸವುಕಾರ ಎಸ್.ಕಾಂಬಳೆ, ೨೦೦೩, **ಲಿಂಗಾಯತ ಅಸ್ಪೃಶ್ಯರು : ಒಂದು ಅಧ್ಯಯನ,** ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ

ಸ್ವಾಮಿ ಬಿ.ಎಸ್., ೧೯೯೩, **ಮಲೆಯ ಮಾದೇಶ್ವರ : ಒಂದು ಅಧ್ಯಯನ,** ನವೀನ ಪ್ರಕಾಶನ, ಬೆಂಗಳೂರು

ಸಿದ್ದಯ್ಯ ಪುರಾಣಿಕ, ೧೯೬೪, **ಶರಣಚರಿತಾಮೃತ,** ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು

ಸಿದ್ದಲಿಂಗಯ್ಯ, ೧೯೯೭, **ಗ್ರಾಮದೇವತೆಗಳು,** ಮೂಲಭಾರತಿ ಪ್ರಕಾಶನ, ಬೆಂಗಳೂರು

ಸೋಮಶೇಖರ ಎಸ್.ವೈ., ೨೦೦೦, **ವಿಜಯನಗರ ಕಾಲದ ಸೈನಿಕ ಆಡಳಿತ ವ್ಯವಸ್ಥೆ** (ಅಪ್ರಕಟಿತ ಪಿಎಚ್.ಡಿ.ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ

ಹರ್ತಿಕೋಟೆ ವೀರೇಂದ್ರಸಿಂಹ, ಡಾ.ತೇಜಸ್ವೀ ಕಟ್ಟಿಮನಿ(ಸಂ), ೨೦೦೨, **ಘಟ್ಟಿಹೊಸಹಳ್ಳಿ ಘಟ್ಟಿಗ,** ಹರ್ತಿಕೋಟೆ, ಚಿತ್ರದುರ್ಗ

ಹರಿದಾಸ ಭಟ್ಟಾಚಾರ್ಯ(ಸಂ), ೧೯೮೮, **ಯುಗಯಾತ್ರಿ ಭಾರತೀಯ ಸಂಸ್ಕೃತಿ ೪,** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಹಳಕಟ್ಟಿ ಫ.ಗು., ೧೯೩೯, **ಮಡಿವಾಳ ಮಾಚಿದೇವನ ವಚನಗಳು,** ವಿಜಾಪುರ.

ಹಿರೇಮಠ ಆರ್.ಸಿ., ೧೯೭೨(ದ್ವಿತೀಯ ಮುದ್ರಣ), **ಷಟ್ಸ್ಥಲ ಪ್ರಭೆ,** ಕನ್ನಡ ಅಧ್ಯಯನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಹಿರೇಮಠ ಎಸ್.ಎಸ್., ೧೯೯೭, **ಪಂಚಗಣಾಧೀಶ್ವರರು ಒಂದು ಅವಲೋಕನ,** ಶ್ರೀ ಸಿದ್ಧವೀರ ಶಿವಾಚಾರ್ಯ ಜ್ಞಾನ ಪ್ರಕಾಶನ ಪುರ, ಬಳ್ಳಾರಿ(ಜಿ)

ಹಿರೇಮಠ ಎಸ್.ಎಸ್., ೧೯೯೩, **ಜಾತ್ರೆಗಳು,** ಸಮತಾ ಪ್ರಕಾಶನ, ಹೊಸಪೇಟೆ.

ಹಿರೇಮಠ ಎಸ್.ಎಸ್., ೨೦೦೩, **ಪಾಶುಪತ ದರ್ಶನ,** ಸಮತ ಪ್ರಕಾಶನ, ಹರಪನಹಳ್ಳಿ

ಹಿರೇಮಠ ಎಸ್.ಎಸ್., ೨೦೦೩, **ಸಂಖ್ಯಾದರ್ಶನ,** ಸಮತಾ ಪ್ರಕಾಶನ, ಹರಪನಹಳ್ಳಿ

ಹೀರೇಮಠ ಆರ್.ಸಿ., ಎಂ.ಎಸ್.ಸುಂಕಾಪುರ (ಸಂ), **ಶ್ಯೂಮಮೂರುತಿ ಅಲ್ಲಮಪ್ರಭುದೇವರ ವಚನಗಳು,** ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಹಿರೇಮಲ್ಲೂರ್ ಈಶ್ವರನ್, ೧೯೯೭, **ಬಸವಣ್ಣ ಹಾಗು ಲಿಂಗಾಯತ ಧರ್ಮ,** ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

ಹಿರೇಮಲ್ಲೂರ್ ಈಶ್ವರನ್, ೧೯೯೭, **ಲಿಂಗಾಯತ ಧರ್ಮ ಒಂದು ಅಧ್ಯಯನ,** ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.(ದ್ವಿತೀಯ ಮುದ್ರಣ)

ಹಿರೇಮಠ ಆರ್.ಸಿ.(ಸಂ), ೧೯೬೫, **ಚನ್ನಬಸವಣ್ಣನವರ ವಚನಗಳು,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಹಿರೇಮಠ ಆರ್.ಸಿ.(ಸಂ), ೧೯೮೩, **ಷಟ್‌ಸ್ಥಲ ಜ್ಞಾನಸಾರಾಮೃತ,** ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ.

ಹಿರೇಮಠ ಆರ್ [illegible]ಸಂ), ೨೦೦೧, **ಬಸವಲಿಂಗ ಕವಿ ವಿ[illegible]ಚಿತ ಕೊಟ್ಟೂರು ಬಸವೇಶ್ವರ ಚಾರಿತ್ರ್ಯ**(ದ್ವಿತೀಯ ಮುದ್ರಣ), ಕೊಟ್ಟೂರು.

ಹೂಲಿಕುಂಟೆ ಮೂರ್ತಿ ಆರ್.ಸಿ., ೨೦೦೧, **ಚರಿತ್ರ ವೆಲಗುಲೊ ರಾಯದುರ್ಗಮು**(ತೆಲುಗು), ಲಕ್ಷ್ಮಿ ಬಜಾರ್, ರಾಯದುರ್ಗ.

ಹೆರೆಂಜೆ ಕೃಷ್ಣಭಟ್ಟ, ಮುರುಳೀಧರ ಉಪಾಧ್ಯ ಹಿರಿಯಡ್ಕ(ಸಂ), ೧೯೯೫, **ಗೋವಿಂದ ಪೈ ಸಂಶೋಧನಾ ಸಂಪುಟ,** ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ.

ಇಂಗ್ಲಿಶ್ ಗ್ರಂಥಗಳು

Abhishankar K.(Ed), 1972, **Karnataka Gazetteer,** Bellary District, Government Press, Bangalore

Ananthakrishna Iyer K., **The Mysore Tribes and Castes,** Mittal Publication Delhi

Dikshit G.S., 1964, **The Local Self Government in Medivel Karnataka,** Karnataka University, Dharwar

Edward Thurston & Rangachar K., 1987, **Caste and Tribes of South India,** Asain Educational Services, New Delhi

George Weston Briggs, 1989, **Gorakhanath and the Kanphata Yogis,** Motilal Banarasi Dass, Delhi

Gururajachar S., 1974, **Some Aspects of Economic and Social Life of Karnataka**

Nandimath S.C., 1942, **A Hand book of Virashivism,** Dharwar

Raichur District Gazetter, 1970, **Karnataka State Gazetter,** Bangalore

Ramendranth Nandi, 1973, **Religous Institutions and Colts,** The Decan, Delhi

Saki, 1998, **Making History I,** Vimukthi Publications, Bangalore

Srisathyan B.N.(Ed), 1967, **Chitradurga District Gazetteer,** Mysore State Gazetter, Bangalore

Shishibousan Gupath, 1946, **Obsevre Religious Colts,** Calcutta University, Calcutta

**ಪತ್ರಿಕೆಗಳು**

೧. ಸಂಕ್ರಮಣ

೨. ಕನ್ನಡ ಅಧ್ಯಯನ

೩. ಬಸವಪಥ

೪. ಬುಡಕಟ್ಟು ಅಧ್ಯಯನ

೫. ಜನಪದ ಅಧ್ಯಯನ

೬. ಸಂವಾದ

೭. ಸತ್ಯಶುದ್ಧ ಕಾಯಕ

